# ಸರ್ವಜ್ಞನ ವಚನಗಳು : ಒಂದು ಜಾನಪದೀಯ ಅಧ್ಯಯನ

ಜಾನಪದದಲ್ಲಿ ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ರಾಜಶೇಖರ ಜಮದಂಡಿ
ಎಂ.ಎ., ಎಂ.ಫಿಲ್.

ಮಾರ್ಗದರ್ಶಕರು

ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ
ಪ್ರಾಚಾರ್ಯರು
ಎಸ್.ಇ.ಎಸ್. ಮಹಾವಿದ್ಯಾಲಯ,
ಸಂಡೂರು - ೫೮೩ ೧೧೯.





ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ - ೫೮೩ ೨೭೬

೨೦೦೨

83

# ಸರ್ವಜ್ಞನ ವಚನಗಳು : ಒಂದು ಜಾನಪದೀಯ ಅಧ್ಯಯನ

ಜಾನಪದದಲ್ಲಿ ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ರಾಜಶೇಖರ ಜಮದಂಡಿ
ಎಂ.ಎ., ಎಂ.ಫಿಲ್.

ಮಾರ್ಗದರ್ಶಕರು
ಡಾ॥ ವೃಷಭೇಂದ್ರಾಚಾರ್ ಅರ್ಕಸಾಲಿ
ಪ್ರಾಚಾರ್ಯರು
ಎಸ್.ಇ.ಎಸ್. ಮಹಾವಿದ್ಯಾಲಯ,
ಸಂಡೂರು - ೫೮೩ ೧೧೯.







ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ಹಂಪಿ - ೫೮೩ ೨೭೬

೨೦೦೨

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ರಾಜಶೇಖರ ಜಮದಂಡಿ ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಯಿಸಿ **''ಸರ್ವಜ್ಞನ ವಚನಗಳು: ಒಂದು ಜಾನಪದೀಯ ಅಧ್ಯಯನ''** ಎಂಬ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದಾರೆ. ಈ ಮಹಾ ಪ್ರಬಂಧವನ್ನು ಭಾಗಶಃ ಆಗಲಿ, ಪೂರ್ಣ ಪ್ರಮಾಣದಲ್ಲಾಗಲಿ, ಬೇರಾವುದೇ ಪದವಿ, ಡಿಪ್ಲೊಮೋ ಅಥವಾ ತತ್ಸಮಾನ ಪದವಿಗಾಗಿ ಈ ಹಿಂದೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



ದಿನಾಂಕ : ೧೬-೫-೦೨

ಸ್ಥಳ: ಸಂಡೂರು

ಮಾರ್ಗದರ್ಶಕರು

(ಡಾ|| ವೃಷಬೇಂದ್ರಾಚಾರ್ ಅರ್ಕಸಾಲಿ)

# ಪ್ರಮಾಣ ಪತ್ರ

ಸಂಡೂರಿನ ಎಸ್.ಇ.ಎಸ್. ಪದವಿ ಮಹಾವಿದ್ಯಾಲಯದ ಪ್ರಾಚಾರ್ಯರಾದ ಡಾ॥ ವೃಷಭೇಂದ್ರಾಚಾರ್ ಅರ್ಕಸಾಲಿಯವರ ಮಾರ್ಗದರ್ಶನದಲ್ಲಿ **''ಸರ್ವಜ್ಞನ ವಚನಗಳು : ಒಂದು ಜಾನಪದೀಯ ಅಧ್ಯಯನ''** ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದಲ್ಲಿರುವ ಯಾವುದೇ ಭಾಗದ ವಿಷಯವನ್ನು ಇತರೆ ಯಾವುದೇ ವಿಶ್ವವಿದ್ಯಾಲಯದ ಪದವಿ, ಡಿಪ್ಲೊಮೋ ಅಥವಾ ತತ್ಸಮಾನ ಪದಪಿಗಾಗಿ ಬಳಸಿಕೊಂಡಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಹೊಸಪೇಟೆ.
ದಿನಾಂಕ : ೧೮. ೫. ೨೦೦೭

ರಾಜಶೇಖರ ಜಮದಂಡಿ
ಸಂಶೋಧಕರು.

# ಕೃತಜ್ಞತೆಗಳು

''ಸರ್ವಜ್ಞನ ವಚನಗಳು - ಒಂದು ಜಾನಪದೀಯ ಅಧ್ಯಯನ'' ಎಂಬ ಮಹಾಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತದೆ.

ಸದಾ ನನ್ನ ಬೆಳವಣಿಗೆಗೆ ತುಂಬು ಹೃದಯದಿಂದ ಆಶೀರ್ವದಿಸಿ ಪ್ರೋತ್ಸಾಹಿಸುತ್ತಿರುವ ಶ್ರೀಜಗದ್ಗುರು ಸಂಗನಬಸವ ಮಹಾಸ್ವಾಮಿಗಳವರಿಗೆ ನನ್ನ ಮೊದಲ ಅನಂತ ಕೃತಜ್ಞತೆಗಳು.

ಅಂದಿನ ಕುಲಪತಿಗಳಾದ ಡಾ॥ ಎಂ.ಎಂ. ಕಲಬುರ್ಗಿಯವರನ್ನು ಅವರ ನಿವಾಸದಲ್ಲಿ ನನ್ನ ವಿಷಯ ಕುರಿತು ಮಾತನಾಡಲು ಭೇಟಿಯಾಗಿದ್ದೆನು. ಆಗ ಅನೇಕ ಮಹತ್ವದ ಸಲಹೆ ಸೂಚನೆಗಳನ್ನು ನೀಡಿ, ಬೆನ್ನುತಟ್ಟಿ ಪ್ರೋತ್ಸಾಹಿಸಿ, ಈ ಮಹಾಪ್ರಬಂಧ ಬರೆಯಲು ಅನುವು ಮಾಡಿಕೊಟ್ಟರು. ಅವರಿಗೆ ಅನಂತ ಕೃತಜ್ಞತೆಗಳು.

ಈ ಮಹಾಪ್ರಬಂಧ ಬರೆಯಲು ಅವಕಾಶ ಮಾಡಿಕೊಟ್ಟ ಇಂದಿನ ಕುಲಪತಿಗಳಾದ ಡಾ॥ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ಜಾನಪದ ವಿಭಾಗದ ಮುಖ್ಯಸ್ಥರಾದ ಡಾ॥ ಮಂಜುನಾಥ ಬೇವಿನಕಟ್ಟಿಯವರಿಗೆ,

ಪ್ರತಿ ಹೆಜ್ಜೆಗೂ ಅತ್ಯಂತ ಕಾಳಜಿಪೂರ್ವಕವಾಗಿ ವಿಚಾರಿಸಿ, ಈ ಮಹಾಪ್ರಬಂಧದ ಎಲ್ಲ ಭಾಗಗಳನ್ನು ಓದಿ, ತಿದ್ದಿತೀಡಿ ಇದಕ್ಕೆ ಒಂದು ಸ್ವರೂಪವನ್ನು ನೀಡಿ, ನನ್ನೊಂದಿಗೆ ಶ್ರಮಿಸಿದುದಲ್ಲದೆ, ಇದರ ಇತಿಮಿತಿಗಳನ್ನು ತಿಳಿಸಿ ಮಾರ್ಗದರ್ಶನ ಮಾಡಿದ, ಸಂಡೂರಿನ ಎಸ್.ಇ.ಎಸ್. ಮಹಾವಿದ್ಯಾಲಯ ಪ್ರಾಚಾರ್ಯರಾದ ಡಾ॥ ವೃಷಭೇಂದ್ರಾಚಾರ್ ಅರ್ಕಸಾಲಿಯವರಿಗೆ,

ನನ್ನ ಅಧ್ಯಯನಕ್ಕೆ ಸರ್ವರೀತಿಯಿಂದಲೂ ಪ್ರೋತ್ಸಾಹಿಸುತ್ತಿರುವ ಹಾಗೂ ಮಗನ ಶ್ರೇಯೋಭಿಲಾಷೆಯೇ ತಮ್ಮ ಗುರಿಯೆಂದು ಭಾವಿಸಿರುವ ನನ್ನ ತಂದೆ ಶ್ರೀ ಬಸವರಾಜ ಜಮದಂಡಿ, ತಾಯಿ ಶ್ರೀಮತಿ ಅನ್ನಪೂರ್ಣ ಜಮದಂಡಿಯವರಿಗೆ, ಈ ಮಹಾಪ್ರಬಂಧದ ಬರವಣಿಗೆಯಲ್ಲಿ ಸಕಲ ರೀತಿಯಿಂದ ಸಹಾಯಹಸ್ತ ನೀಡಿದ ಸಹಧರ್ಮಿಣಿ ರೇಖಾಳಿಗೆ, ಪ್ರಬಂಧ ಬರೆಯಲು ಆಶೀರ್ವದಿಸಿದ ಮಾವನವರಾದ ಶ್ರೀ ಮಹಾಂತಪ್ಪ ಕುರ್ಲಿ, ಡಾ॥ ಶಿವಯೋಗಪ್ಪ ಗಡಾದ್,ಅತ್ತೆಯವರಾದ ಶ್ರೀಮತಿ ಗುರುಶಾಂತಮ್ಮ, ಶ್ರೀಮತಿ ಮಂಗಳಗೌರಮ್ಮ ಇವರಿಗೆ,ಮಾವಂದಿರಾದ ಕುರ್ಲಿ ಸಹೋದರರಿಗೆ , ನನ್ನ ಎಲ್ಲಾ ಚಿಕ್ಕಪ್ಪ- ಚಿಕ್ಕಮ್ಮಂದಿರಿಗೆ ಹಾಗೂ ಶ್ರೀ ಜೆ.ಮಂಜುನಾಥ ಅಣ್ಣನವರಿಗೆ,

ಅಧ್ಯಯನಕ್ಕೆ ನೆರವಾದ ಸಹೋದರ ಶಿವಕುಮಾರ ಜಮದಂಡಿ, ಸೊಸೆ ಶೋಭ ಜಮದಂಡಿ, ಅಳಿಯ ಭರತ್ ಕುಮಾರ್ ಮತ್ತು ನನ್ನ ತಮ್ಮ-ತಂಗಿಯವರನ್ನು, ನನ್ನ ವ್ಯಾಸಂಗದ ಸಮಯದಲ್ಲಿ ಬೇಸರ ನೀಗಿಸಲು 'ಪಪ್ಪಾ','ಬಪ್ಪಾ' ಇತ್ಯಾದಿ ಕೋಮಲ ನುಡಿಗಳಿಂದ ನನಗೆ ದುಂಬಾಲು ಬಿದ್ದು, ತಮ್ಮ ಆಟದ ಕಡೆಗೆ ನನ್ನ ಗಮನಸೆಳೆಯುತ್ತಿದ್ದ ಮಕ್ಕಳಾದ ಕುಮುದ ರಾಣಿ ಹಾಗೂ ಕೃತಿ ಇವರೆಲ್ಲರನ್ನು ನೆನೆಯದೇ ಇರಲಾರೆ.

ಪ್ರತ್ಯಕ್ಷವಾಗಿ ಸರ್ವರೀತಿಯಿಂದಲೂ ಈ ಮಹಾಪ್ರಬಂಧ ರಚಿಸಲು ಹೆಚ್ಚು ನೆರವಾದ ಹಿರಿಯ ಸಹೋದರಿ ಶ್ರೀಮತಿ ವನಮಾಲ ಕಟ್ಟೇಗೌಡರ ಹಾಗೂ ಅವರ ಮನೆಯ ಸದಸ್ಯರಿಗೆ,

ನನ್ನ ಅಧ್ಯಯನದ ಚಿಂತನೆಗೆ ಇನ್ನಷ್ಟು ಪುಷ್ಟೀಕರಿಸಿ, ಅಗತ್ಯವಾದ ಪುಸ್ತಕಗಳನ್ನು ಹಾಗೂ ಸಲಹೆಗಳನ್ನು ನೀಡಿದ ಗುರುಗಳಾದ ಡಾ॥ ಬಸವರಾಜ ಮಲಶೆಟ್ಟಿ, ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ॥ ಮೀನಾಕ್ಷಿ ಜಂಗಮನಿ, ಡಾ॥ ಮೃತ್ಯುಂಜಯ ರುಮಾಲೆ, ಡಾ॥ ಕೆ. ರವೀಂದ್ರನಾಥ ಹಾಗೂ ಮಿತ್ರರಾದ ಶ್ರೀಯುತರಾದ ಎಂ.ಉಮಾಮಹೇಶ್ವರ, ಕಾನಗೋವಿ ಶ್ಯಾಮಸುಂದರರಾವ್, ಸೋ.ದ.ವಿರೂಪಾಕ್ಷಗೌಡ ಇವರಿಗೆ,

ಅದೇರೀತಿಯಾಗಿ ಡಾ॥ ಜಿ.ನಾಗಯ್ಯನವರಿಗೆ, ಗುರುಗಳಾದ ಶ್ರೀ ಮುದೇಗೌಡ, ಪ್ರೊ.ರಾಮಮೂರ್ತಿ, ಶ್ರೀಯುತರಾದ ಭೂಪಾಳ್ ರಾಘವೇಂದ್ರ ಶೆಟ್ಟಿ, ಜಿ.ನಾಗಲಿಂಗಪ್ಪ, ಜಿ. ಬಸಪ್ಪ, ಚೆಲುವರಾಜು, ಡಾ॥ ಎಫ್.ಟಿ. ಹಳ್ಳೀಕೇರಿ, ಡಾ॥ ಪರಮಶಿವಮೂರ್ತಿ, ಡಾ॥ ವಿಠ್ಠಲರಾವ್ ಗಾಯಕ್ವಾಡ್, ಡಾ॥ ವಿರುಪಾಕ್ಷಿ ಪೂಜಾರಳ್ಳಿ ಮೊದಲಾದವರಿಗೆ, ನನ್ನ ಅಧ್ಯಯನದ ಬಗ್ಗೆ ಆಗಾಗ ವಿಚಾರಿಸುತ್ತಿದ್ದ ಥಿಯೋಸಾಫಿಕಲ್ ಮಹಿಳಾ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀಮತಿ ಉಷಾರಾಣಿಶರ್ಮ ಹಾಗೂ ಹಿರಿಯ ಸಹೋದ್ಯೋಗಿಗಳಾದ ಶ್ರೀಮತಿ ಸುಜಾತ, ಶ್ರೀಮತಿ ಬಿ. ಮಂಜುಳ, ಪ್ರೊ. ಯು.ರಾಘವೇಂದ್ರರಾವ್, ಪ್ರೊ. ವಿಜಯಕುಮಾರ್‌ವೈದ್ಯ ಮತ್ತು ಸಿಬ್ಬಂದಿ ವರ್ಗದವರಿಗೆ ಮತ್ತು ನ್ಯಾಷನಲ್ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಕೆ.ಶ್ರೀನಿವಾಸಮೂರ್ತಿ ಹಾಗೂ ಅಲ್ಲಿನ ಎಲ್ಲಾ ಸಹೋದ್ಯೋಗಿಗಳಿಗೆ ಅಲ್ಲದೆ, ಮಿತ್ರರಾದ ಹೆಚ್.ಪಿ. ಕಲ್ಲಂಭಟ್,ಶ್ರೀ ಎಂ.ಶಿವಯೋಗಿ ಹಾಗೂ ಶ್ರೀಮತಿ ಶಾರದ ಉಳುವೆ ಮೊದಲಾದವರಿಗೆ,

ನಿಧಾನವಾಗಿ ಅತ್ಯಂತ ವಿಶೇಷ ಕಾಳಜಿವಹಿಸಿಕೊಂಡು ಅಂದವಾಗಿ ಗಣಕಯಂತ್ರದಲ್ಲಿ ನನ್ನ ಮಹಾಪ್ರಬಂಧದ ಅಕ್ಷರ ಜೋಡಣೆ ಮಾಡಿಕೊಟ್ಟ ಶಶಿ ಕಂಪ್ಯೂಟರ್ ಮತ್ತು ಜೆರಾಕ್ಸ ಅಂಗಡಿಯ ಮಾಲಕರಾದ ಸಹೃದಯ ಗೆಳೆಯರಾದ ಶ್ರೀಯುತರಾದ ಹೆಚ್.ಎಂ. ಜಂಬುನಾಥ, ಸಿ. ಖಾದರ್‌ಬಾಷ, ಪ್ರಭು, ಕು. ರೇಷ್ಮ ಇವರಿಗೂ,

**ಊರೆಲ್ಲಾ ನೆಂಟರು ಕೇರಿಯಲ್ಲವೂ ಬಳಗ**
**ಧಾರುಣಿಯೇ ಎಲ್ಲ ಕುಲ ದೈವವಾಗಿರಲು**
**ಯಾರನ್ನು ಬಿಡಲಿ ಸರ್ವಜ್ಞ.**

ಎಂಬಂತೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲ ಆತ್ಮೀಯರಿಗೆ,

ಸ್ಥಳ : ಹೊಸಪೇಟೆ

ದಿನಾಂಕ :

**- ರಾಜಶೇಖರ ಜಮದಂಡಿ.**

# ಪರಿವಿಡಿ

ಅಧ್ಯಾಯ - ೪

## ಜಾನಪದ ವೃತ್ತಿಗಳು : 65-117

ಅಧ್ಯಾಯ - ೫

## ಜಾನಪದ ಸಾಂಸ್ಕೃತಿಕ ಚಿತ್ರಣಗಳು : 118-164

ಅಧ್ಯಾಯ - ೬



ಅಧ್ಯಾಯ - ೭

* * * * * *

# ಅಧ್ಯಾಯ - ೧

## ಪೀ ಠಿ ಕೆ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಸ್ವರೂಪ

೧.೪. ಈವರೆಗಿನ ಕೃತಿಗಳು

## ೧.೧. ಪ್ರಸ್ತಾವನೆ :

ಭಾರತೀಯ ಸಂಸ್ಕೃತಿಯನ್ನು ರೂಪಿಸುವಲ್ಲಿ ಕವಿಗಳ, ಸಂತರ, ಮಹಾತ್ಮರ ಪಾತ್ರ ಅಪಾರವಾದುದು. ಈ ನಿಟ್ಟಿನಲ್ಲಿ ಸರ್ವಜ್ಞನೂ ಒಬ್ಬ. ಸುಮಾರು ನಾಲ್ಕುನೂರು ವರ್ಷಗಳ ಹಿಂದೆ ಸಾಮಾನ್ಯವಾದ ರೀತಿಯಲ್ಲಿ ಬದುಕಿದ್ದ ಆತನಿಗೆ ಕಾಡಿದ ಪ್ರಶ್ನೆಗಳು ಹಲವಾರು. ಧರ್ಮದ ಅವನತಿ, ಜಾತಿ, ಮೋಸ, ವಂಚನೆ ಮುಂತಾದ ಮನುಷ್ಯ ಸ್ವಭಾವದ ವಿರೋಧಿ ಚಟುವಟಿಕೆಗಳ ಗುಣಗಳು ಇಂದಿನಂತೆ ಆತನ ಕಾಲದಲ್ಲಿಯೂ ಇದ್ದವು. ಈತನು ಇವುಗಳಿಗೆಲ್ಲಾ ಬುದ್ಧನಂತೆ ತಪಸ್ಸನ್ನು ಮಾಡಿ ವೈರಾಗ್ಯಪಡೆದು ಉಪದೇಶ ಮಾಡಿದವನಲ್ಲ ಹಾಗೂ ರಾಜರಂತೆ ಆಜ್ಞೆ ಮಾಡಿ ಅಧಿಕಾರ ನಡೆಸಿದವನಲ್ಲ. ಇದರ ಬದಲಾಗಿ ಸರಿ ಎನಿಸಿದ್ದನ್ನು ಹೊಗಳುತ್ತಾ, ತಪ್ಪುಗಳನ್ನು ಖಂಡಿಸಿ, ಟೀಕಿಸಿ, ತಿಳಿಹೇಳಿ ತಿದ್ದುವ ಮಹಾತ್ಕಾರ್ಯ ಮಾಡಿದೆನು.

ಜನರ ಬದುಕಿನಲ್ಲಿ ಮತ್ತು ಭಾಷೆಯಲ್ಲಿ ಉತ್ತರ ಹುಡುಕಿಕೊಳ್ಳುವ ಜಾಣ್ಮೆಯ ನುಡಿಗಳು ಈತನವು. ಆದ್ದರಿಂದ ಈತನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಜನಪದ ಭಾಷೆಯಲ್ಲಿರುವ ವಿಷಯ ಮತ್ತು ಸಂದೇಶಗಳು ಎಲ್ಲ ಕಾಲವನ್ನು, ಎಲ್ಲ ದೇಶವನ್ನು ಮೀರಿ ನಿಲ್ಲಬಲ್ಲ ಚೈತನ್ಯ ಪಡೆದಿವೆ. ಚಿಕ್ಕ ಚಿಕ್ಕ ಶಬ್ದಗಳಿಂದ ಕೂಡಿದ ಈತನ ತ್ರಿಪದಿಗಳಲ್ಲಿ ಪರಿಪಕ್ವ ಅನುಭವವನ್ನು, ಅತೀಂದ್ರಿಯವಾದ ಅನುಭಾವವನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲಿ ೧೨ನೇ ಶತಮಾನದ ಶರಣರ ಬಹುತೇಕ ವಚನಗಳು ಹಾಗೂ ಅವರ ಜೀವನ ಕ್ರಮದ ಪ್ರಭಾವವು ಸರ್ವಜ್ಞನಿಗಾಗಿರುವುದನ್ನು ಆತನ ವಚನಗಳಿಂದ ತಿಳಿದುಬರುತ್ತದೆ. ಶರಣರಂತೆ ಈತನೂ ತನ್ನ ಸಮಾಜದ ಸ್ಥಿತಿ-ಗತಿಗಳನ್ನು ತಿರುಗಾಡುತ್ತಾ ವೀಕ್ಷಿಸಿ, ಕೆಲವೊಮ್ಮೆ ಅನಿವಾರ್ಯವಾಗಿಯೋ ಅಥವಾ ಉದ್ದೇಶಪೂರ್ವಕವಾಗಿಯೋ ಖಂಡಿಸಿದ್ದಾನೆ. ತನ್ನ ಅಭಿವ್ಯಕ್ತಿಯ ಪ್ರಭಾವವನ್ನು ಹೆಚ್ಚಾಗಿ ಸಾಮಾನ್ಯರ ಮೇಲೆ ಮಾಡಬೇಕಿದ್ದುದರಿಂದ ಅವರಿಗೆ ತಿಳಿಯುವ ಭಾಷೆಯಲ್ಲಿಯೇ ತ್ರಿಪದಿಗಳ ಮೂಲಕ ಉಸುರಿಸಿದ್ದಾನೆ.

ಸುಮಾರು ೧೬ನೇ ಶತಮಾನದಲ್ಲಿ ಬಾಳಿದ ಸರ್ವಜ್ಞನ ಕಾಲವು ರಾಜಪ್ರಭುತ್ವದಿಂದ ಚಿಕ್ಕ ಚಿಕ್ಕ ರಾಜ್ಯಗಳು ಪೈಪೋಟಿ ಮಾಡುತ್ತಾ ಮೆರೆದ ಪರಿಸ್ಥಿತಿಯಿಂದ ಕೂಡಿತ್ತು. ಸಾಮಾನ್ಯವಾಗಿ ಅರಸರ ಪ್ರಭುತ್ವ, ಅಧಿಕಾರ ನಿರಂಕುಶವಾಗಿದ್ದಿತು. ರಾಜರ ದರ್ಬಾರ, ಕಾರುಬಾರುಗಳ, ಇಷ್ಟಾನಿಷ್ಟಗಳ

ಪರಿಣಾಮ ಸಾಮನ್ಯರ ಮೇಲೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನಡೆದಿತ್ತು. ಇಂತಹ ಸಂಧಿಗ್ದ ಸ್ಥಿತಿಯಲ್ಲಿ ರಾಜರನ್ನು ಓಲೈಸದೇ ಸಾಮಾನ್ಯ ಜನರ ಜೀವನವನ್ನೇ ಸ್ವೀಕರಿಸಿದ ಧೀರೋದ್ಧಾತನೀತ. ಜನಸಾಮಾನ್ಯರ ನಡುವೆ ಬಾಳಿ ಅವರಿಗಾಗಿ ಸರ್ವಜ್ಞ ಅವರಿಗೆ ತಿಳಿಯುವ ತಿಳಿಭಾಷೆಯಲ್ಲಿ ವಚನಗಳನ್ನು ಹೇಳಿದ್ದಾನೆ.

''ಸರ್ವಜ್ಞನ ವಚನಗಳೆಂದರೆ ಒಂದು ಚಿಕ್ಕ ವಿಶ್ವಕೋಶ. ಪ್ರಾಚೀನವಾದ ನಮ್ಮ ಸಂಸ್ಕೃತಿಯ ಪ್ರತಿಬಿಂಬವಾಗಿ ಜಗತ್ತಿಗೆ ಸಂಬಂಧಪಟ್ಟ ಎಲ್ಲಾ ವಿಚಾರಗಳು ಅವುಗಳಲ್ಲಿ ಅಡಕವಾಗಿವೆ. ಇಂದಿನ ನಾನಾ ಸಮಸ್ಯೆಗಳಿಗೆ ಸರ್ವಜ್ಞ ವಚನಗಳ ಅಧ್ಯಯನದಿಂದ ಪರಿಹಾರ ಮಾರ್ಗ ತೋರಬಹುದು'' (ಸರ್ವಜ್ಞ, ರೇಣುಕಮ್ಮ ಆರ್. ಪು. ೧೯). ಹೀಗೆ ನಾನಾ ಕಾರಣಗಳಿಂದ ಸರ್ವಜ್ಞ ಮತ್ತು ಆತನ ವಚನಗಳ ಬಗೆಗೆ ಹೊಗಳಿಕೆ, ಪ್ರಸಂಶೆಗಳು ವ್ಯಕ್ತವಾಗಿವೆ. ಪರಿಚಯದ ದೃಷ್ಟಿಯಿಂದ ಇದು ತಪ್ಪಲ್ಲ. ಜನಪ್ರಿಯ ವ್ಯಾಖ್ಯಾನಗಳ ಮೂಲಕ ಅನೇಕ ಆವೃತ್ತಿಗಳು ಈತನ ಬಗೆಗೆ ಬೆಳಕು ಕಂಡಿವೆ ನಿಜ. ಅಂದು ಬರೆದಿರುವ ಆತನ ವಚನಗಳು ಇಂದಿಗೂ, ಮುಂದೆಯೂ ಪ್ರಸ್ತುತವಾಗಿರುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು. ''ಅರಮನೆಗೆ, ಗುರುಮನೆಗೆ ಸೇವೆ ಸಲ್ಲಿಸಿದವರು ಅನೇಕ ಮಂದಿ ಆಗಿ ಹೋಗಿದ್ದಾರೆ. ಆದರೆ ಸಾಮಾನ್ಯ ಜನತೆಯ ಸೇವೆಯನ್ನು ಪರಿಣಾಮಕಾರಿಯಾಗಿ ಮಾಡಿದವರು ಬಹಳ ಮಂದಿ ಇಲ್ಲ. ಸಾಹಿತ್ಯವು ಜನ ಜೀವನದ ಪ್ರತಿಬಿಂಬವೆಂಬುದನ್ನು ಸರ್ವಜ್ಞನು ಸಾರ್ಥಕಪಡಿಸಿದವನು'' (ಸರ್ವಜ್ಞ, ರೇಣುಕಮ್ಮ ಆರ್., ಪು.೪).

ಅಂದಿನ ಜೀವನ ಮೌಲ್ಯಗಳಿಗೆ ಹೊಸ ಅರ್ಥವನ್ನು ಸ್ವ-ಅನುಭವದ ಮೂಲಕ ಒದಗಿಸಲು ಮುಂದಾದ ಆತನ ಉದ್ದೇಶ ಜನಪದ ಸಮ್ಮುಖವಾದುದು. ಸರ್ವಜ್ಞ ಸಾಮಾನ್ಯ ಜನಾಂಗದಲ್ಲಿ ಜನಿಸಿದ್ದುದರಿಂದ ಜನಪದರ ಜೀವನ ಬಹಳ ಹತ್ತಿರವಾಗಿತ್ತು. ಆಡುನುಡಿ, ಮನದಮಾತು, ಮುಟ್ಟುವ ಗುರಿ ಮುಖ್ಯವಾದುದರಿಂದ ಸಹಜವಾಗಿಯೇ ಆತನ ಸಾಮಾಜಿಕ ವಿಮರ್ಶೆಯಲ್ಲಿ ಪರಿಪಕ್ವತೆ ಕಂಡುಬರುತ್ತದೆ. ಸಾರ್ವಕಾಲಿಕವಾದ, ಸರ್ವಸಮ್ಮತವಾದ, ಯುಗಧರ್ಮದ ಭಾವನೆಗಳನ್ನು ಗರ್ಭೀಕರಿಸಿ ಕೊಂಡು ಅಭಿವ್ಯಕ್ತವಾಗುವ ಕಾವ್ಯ ದೀರ್ಘಕಾಲ ಬಾಳುತ್ತದೆ; ಜನರ ಮನವನ್ನು ಮುಟ್ಟುತ್ತದೆ. ಈ ಅಭಿವ್ಯಕ್ತಿಗೆ ಜನಸಾಮಾನ್ಯರ ಆಡುಮಾತು ಸೇರಿದರೆ, ಅದು ಇನ್ನೂ ಹೆಚ್ಚು ಸೂಕ್ತ. ಅಂತಹ ಅರ್ಥಪೂರ್ಣ ವಚನಸೃಷ್ಟಿ ಸರ್ವಜ್ಞನದು. ಕನ್ನಡ ಜನಪದ ಕಾವ್ಯದಲ್ಲಿ ಜನಪದರ ಅಭಿವ್ಯಕ್ತಿ ಮಾಧ್ಯಮವಾಗಿ ಮೆರೆದಿರುವ ತ್ರಿಪದಿ ಪ್ರಕಾರವು ಸರ್ವಜ್ಞನ ಕೈಯಲ್ಲಿ ಉನ್ನತ ಸಿದ್ಧಿಯನ್ನು ಪಡೆದಿದೆ.

ಶಿಷ್ಟ ಸಾಹಿತ್ಯದ ಸಾಲಿನಲ್ಲಿ ಪಂಪರನ್ನಾದಿಗಳ ಪರಂಪರೆ ಒಂದೆಡೆಯಾದರೆ, ಜನ ಸಾಮಾನ್ಯರ ಆಡು ಮಾತಿನ ಲಯವನ್ನು ತಮ್ಮ ಕೃತಿಯಲ್ಲಿ ಬಳಸಿಕೊಂಡ ಅವರ ಏಳಿಗೆಗಾಗಿ ಶ್ರಮಿಸಿದ ವಿಶಿಷ್ಟ ಪರಂಪರೆ ಕನ್ನಡ ಸಾಹಿತ್ಯದಲ್ಲಿದೆ. ಬಹುಶಃ ಈ ಎರಡನೇ ದಾರಿಯಲ್ಲಿ ವಚನಕಾರರು, ದಾಸರು, ತತ್ವಪದಕಾರರು (ಉದಾ: ನಿಜಗುಣ ಶಿವಯೋಗಿ, ಪುರಂದರ ದಾಸರು, ಶಿಶುನಾಳಷರೀಫರು) ಮೊದಲಾದವರು ಸಾಗಿ ಬಂದಿದ್ದಾರೆ. ಹೀಗೆ ಶಿಷ್ಟ ಕವಿಯಾಗಿದ್ದೂ ಅತ್ಯಂತ ಜನಪ್ರಿಯ ತ್ರಿಪದಿಗಳನ್ನು

ರಚಿಸಿದ ಸರ್ವಜ್ಞನೂ ಸಹ ಇಂತಹ ಪರಂಪರೆಯಲ್ಲಿ ನಿಲ್ಲುತ್ತಾನೆ. ಕನ್ನಡ ಸಾಹಿತ್ಯದಲ್ಲಿ ಈತನನ್ನು ಮೆಚ್ಚುವುದಕ್ಕೆ ಹಲವು ಕಾರಣಗಳಿವೆ. ಸರ್ವಜ್ಞ ಕನ್ನಡ ಸಾಹಿತ್ಯ ಕಂಡ ಮಿಂಚಿನ ಮರಿ, ಕ್ರಾಂತಿಯ ಕಿಡಿ, ನವ ಸಮಾಜ ನಿರ್ಮಾಣಕಾರ, ಸಮರ್ಥ ವಚನಕಾರರ ಉತ್ತರಾಧಿಕಾರಿ ಎಂದು ಹೇಳಬಹುದು. ಸಾಮಾಜಿಕರಲ್ಲಿ ಹಬ್ಬಿದ ಹಲವು ರೀತಿಯ ಮೌಢ್ಯ, ಕಪಟ, ಕೊಂಕು, ಸ್ವಾರ್ಥಪರತೆ, ಅಹಂಭಾವ, ವಿದ್ರೋಹಕಾರಕ ಮನೋವೃತ್ತಿ, ಒಡೆದು ಬಾಳುವ ಕುಹಕತನ ಇವೆಲ್ಲವುಗಳನ್ನು ಪರಿಭಾವಿಸುತ್ತಾ ಹೋದಂತೆ ಸರ್ವಜ್ಞನಲ್ಲಿ ಜನತೆಯ ಬಗ್ಗೆ ಮರುಕ ಉಂಟಾಗಿರಬಹುದು. ಅಂತಹ ಅಸಹಜ ಪ್ರವೃತ್ತಿ ಗುಣಗಳನ್ನು ಕಂಡು ನಗು,ತಿರಸ್ಕಾರ, ಸಿಟ್ಟು, ವ್ಯಂಗ್ಯ, ಸಂತಾಪಗಳು ಸಿಡಿದೆದ್ದಿರಬಹುದು. ತಾನು ಕಂಡ ಸಮಾಜ ಹೇಗಿತ್ತು ಎಂಬುದನ್ನು ಹೇಳಿರುವುದಲ್ಲದೆ, ತಾನು ಬಯಸುವ ಸಮಾಜ ಹೇಗಿರಬೇಕೆಂಬುದನ್ನು ಸೂಚಿಸುವುದು ಸರ್ವಜ್ಞನ ಕಳಕಳಿಯಾಗಿತ್ತು.

ಸರ್ವಜ್ಞನನ್ನು ಎಷ್ಟು ವರ್ಣಿಸಿದರೂ ಸಾಲದು. ಅಲ್ಲದೆ ಸಾಗರವನ್ನು ಬೊಗಸೆಯಲ್ಲಿ ಹಿಡಿದಿಡುವುದು ಹೇಗೆ ಅಸಾಧ್ಯವೋ ಹಾಗೆಯೇ ಆತನ ವಚನಗಳನ್ನು ಒಂದು ದೃಷ್ಟಿಕೋನಕ್ಕೆ ತಂದು ಅಭಿಪ್ರಾಯವನ್ನು ವಿಸ್ತರಿಸುವುದು ಸಹ ಕಷ್ಟ. ಆದ್ದರಿಂದ ಸಾಗರದ ನೀರನ್ನು ನಮಗೆ ಬೇಕಾದಷ್ಟು ತುಂಬಿಕೊಳ್ಳುವಂತೆ, ಆತನ ವಚನಗಳನ್ನು ಅವಲೋಕಿಸಿ ಬೇಕಾದವುಗಳನ್ನು ಮಾತ್ರ ಇಲ್ಲಿಯ ಅಧ್ಯಯನಕ್ಕೆ ಅನುಕೂಲವಾಗುವಂತೆ ಬಳಸಿಕೊಳ್ಳಲಾಗಿದೆ. ''ಶ್ರೇಷ್ಠ ಅನುಭವಿ'' ಎಂದು ಅನೇಕ ವಿದ್ವಾಂಸರಿಂದ ಹೊಗಳಿಸಿಕೊಂಡ ಸರ್ವಜ್ಞ ಕವಿಯ ವಚನಗಳು ದೇಶ ಕಾಲಗಳನ್ನು ಮೀರಿವೆ. ವೇಮನ, ಕಬೀರ ಹಾಗೂ ತಿರುವಳ್ಳುವರ್ ಮುಂತಾದ ಮಹಾ ಪುರುಷರಂತೆ ಬಡತನದ ಮಡಿಲಲ್ಲಿ ಬೆಳೆದು, ಅನೇಕ ಕಹಿ ಪ್ರಸಂಗಗಳನ್ನು ಸಮಾಜದಲ್ಲಿ ಎದುರಿಸಿ, ಜೀವನಾನುಭವವನ್ನು ವಿಪುಲವಾಗಿ ಪಡೆದು, ಒಬ್ಬ ಯೋಗಿಯಾಗಿ ಬೆಳೆದು, ಕವಿಯಾಗಿ ನುಡಿದು ಸಮಾಜವನ್ನು ತಿದ್ದಿದ ಮಹಾನುಭಾವ.

ಈತ ಕರ್ನಾಟಕವನ್ನೆಲ್ಲಾ ಸಂಚರಿಸಿ ಎಲ್ಲ ತರಹದ ಮತ-ಪಂಥದ ಜನರೊಡನೆ ನಿಕಟ ಸಂಬಂಧವನ್ನು ಬೆಳೆಯಿಸಿಕೊಂಡು, ಸೂಕ್ಷ್ಮವಾಗಿ ಲೋಕಶಿಕ್ಷಣವನ್ನು ಪಡೆದುಕೊಂಡವನಾಗಿದ್ದಾನೆ. ತನ್ನ ಅನುಭವಕ್ಕೆ ಬಂದಂತಹ ವಿವಿಧ ಸನ್ನಿವೇಶಗಳ, ವಿವಿಧ ಜನರ ನಡೆ-ನುಡಿಗಳನ್ನು ಕಂಡು ಕೆಲವೊಮ್ಮೆ ನಕ್ಕು ಹಾಸ್ಯ ವ್ಯಕ್ತಪಡಿಸಿದ್ದಾನೆ. ಈತನು ಸುಮಾರು ವಚನಗಳನ್ನು ಬರೆದಿರಬಹುದು. ಈವರೆಗೆ ಅನೇಕ ವಿದ್ವಾಂಸರು ಸಂಪಾದನೆ ಮಾಡಿದ್ದರೂ,ಅವುಗಳ ಸಂಖ್ಯಾ ನಿರ್ಣಯ ಅಪೂರ್ಣವಾಗಿ ಕಂಡುಬರುತ್ತವೆ.

ಏಳು ಕೋಟಿಯೇ ಕೋಟಿ, ಏಳು ಲಕ್ಷವೇ ಲಕ್ಷ
ಏಳು ಸಾವಿರದ ಎಪ್ಪತ್ತು ವಚನಗಳ
ಹೇಳಿದನು ಕೇಳೋ ಸರ್ವಜ್ಞ.

ಎಂದು ಹೇಳುವ ಒಂದು ವಚನವಿದೆ . ಆದರೆ ಇದು ಆತನ ವಚನಗಳ ಸಂಖ್ಯಾ ನಿರ್ಣಯಕ್ಕೆ ಸಹಾಯವಾಗುವುದಿಲ್ಲ. ಇನ್ನು ಗಮನಕ್ಕೆ ಬಾರದ ಆತನ ಎಷ್ಟೋ ವಚನಗಳು ಕಾಲದಲ್ಲಿ ಹೂತು ಹೋಗಿರಬಹುದು. ಹಲವಾರು ವಚನಗಳು ಪ್ರಕ್ಷಿಪ್ತವಾದಂಥವು ಎಂಬುದನ್ನೂ ವಿದ್ವಾಂಸರು ಗುರುತಿಸಿದ್ದಾರೆ.

ಸರ್ವಜ್ಞನು ಬರೆದ ವಚನಗಳೆಲ್ಲಾ ಮತೀಯ ಗೌರವದಿಂದಾಗಲಿ, ವೇದ ವಾಕ್ಯವೆಂಬ ಭಾವನಾ ಪರವಶತೆಯಿಂದಾಗಲಿ ನೋಡಿದರೆ ಸಾಲದು, ಒಂದು ಲೋಕಾನುಭವ ಹೊಂದಿದ ಒಂದು ಜೀವವು ತನ್ನ ಅಭಿವ್ಯಕ್ತಿ ಹೇಗೆ ಮಾಡಿದೆ ? ಅದರಲ್ಲಿ ತನ್ನ ಅನುಭವ ಸಂಪತ್ತು ಎಷ್ಟು ಬಿಂಬಿಸಿದೆ ? ಅಭಿವ್ಯಕ್ತಿಯ ಪ್ರಕ್ರಿಯೆಯಲ್ಲಿ ಅದು ಸಾಧಿಸಿದ ಸಾಹಿತ್ಯ ಸೌಂದರ್ಯವೆಷ್ಟು? ಎಂಬುದನ್ನು ಅತ್ಯಂತ ತಾಳ್ಮೆಯಿಂದ ಅರಿತು ನೋಡಬೇಕಾಗುತ್ತದೆ.

ಸರ್ವಜ್ಞ ಹೇಳಿರುವ ಅನೇಕ ವಚನಗಳಲ್ಲಿ ಸಾರ್ವಕಾಲಿಕ ಅಂಶಗಳು ಕಂಡುಬರುತ್ತವೆ. ಉದಾಹರಣೆಗೆ ;

ತಾಗದ ಬಿಲ್ಲು ಹೊಲ್ಲ । ಆಗದ ಮಗ ಹೊಲ್ಲ ।
ಆಗೀಗಲೆಂಬ ನುಡಿ ಹೊಲ್ಲ । ರಣಕೆ ಇದಿ
ರಾಗದವ ಹೊಲ್ಲ ಸರ್ವಜ್ಞ.

ಅಂದರೆ 'ಗುರಿಯಿಟ್ಟು ಹೊಡೆದರೂ, ಗುರಿಗೆ ತಾಗದ ಬಿಲ್ಲು ಇರಬಾರದು'. ಕಷ್ಟ ಕಾಲದಲ್ಲಿ ಸಹಕರಿಸದ ಮಗನಿದ್ದರೆ ಅಪ್ರಯೋಜಕರವು. ಆಗ ಮಾಡುವೆ, ಈಗ ಮಾಡುವೆ ಎನ್ನುವ ಮಾತಿನಿಂದ ಸರ್ವವೂ ಹಾಳಾಗುವುದು. ಅದೇರೀತಿ ಯುದ್ಧ ಭೂಮಿಯಲ್ಲಿ ವೈರಿಗೆ ಇದಿರು ನಿಲ್ಲದವನು ಸಹ ಹೇಡಿಯಾಗಿರುತ್ತಾನೆ ಎಂಬಂತಹ ಸಾಲುಗಳು ಎಲ್ಲ ಜನಾಂಗ ಹಾಗೂ ಧರ್ಮದವರಿಗೆ ಅನ್ವಯವಾಗುತ್ತವೆ ಮತ್ತು ಎಲ್ಲಾ ಕಾಲಕ್ಕೂ ಸಲ್ಲುತ್ತವೆ.

ಜನರ ಆಚಾರ-ವಿಚಾರ, ಭಾವ-ಭಾಷೆಗಳನ್ನು ಜನಪದ ಶೈಲಿಯಲ್ಲಿ ನಿರೂಪಿಸಿ, ಜನಪರ ಸಾಹಿತ್ಯ ಪ್ರಪಂಚಕ್ಕೆ ತುಂಬಾ ಮಹತ್ತರವಾದ ಕೊಡುಗೆಯನ್ನು ನೀಡಿದ ಯಶಸ್ಸು ಸರ್ವಜ್ಞನಿಗಿರುವುದರಿಂದ ಇಂತಹ ಅಧ್ಯಯನ ಕ್ಷೇತ್ರವನ್ನು ಆಯ್ದುಕೊಳ್ಳಲು ತುಂಬಾ ಪ್ರಸ್ತುತವೆನಿಸುತ್ತದೆ.

ತನ್ನ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಹರಡಿ, ಜನತೆಯ ಮೇಲ್ಮೆಗಾಗಿ ಮನೆ ಮನೆಯಲ್ಲೂ ಜ್ಞಾನದೀಪ್ತಿಯನ್ನು ಬೆಳಗಿಸಿದ ಕೀರ್ತಿ ಆತನಿಗೆ ಸಲ್ಲುತ್ತದೆ. ಸಾಹಿತ್ಯವು ಕೇವಲ ಕೆಲವಾರು ಪಂಡಿತರ ರಚನೆಗಾಗಿ ಅಲ್ಲದೆ, ಸಾಮಾನ್ಯ ಜನರ ಜೀವನವನ್ನೂ ಅರಳಿಸುವುದಕ್ಕೆ ನೆರವಾಗಬಲ್ಲದೆಂಬುದನ್ನು ಸರ್ವಜ್ಞನ ವಚನಗಳು ತೋರಿಸಿಕೊಟ್ಟಿವೆ (ಸರ್ವಜ್ಞ, ಆರ್. ರೇಣುಕಮ್ಮ, ಪು.೪). ಸರ್ವಜ್ಞ ಜನತೆಯ

ಕವಿ. ಅವನ ಪದ್ಯಗಳು ಜಾನಪದದ ಸತ್ವದಿಂದ ತುಂಬಿವೆ. ಅವನು ಬದುಕಿನಲ್ಲಿ ಜನತೆಗಾಗಿ ಆಡುಭಾಷೆಯಲ್ಲಿ ಸಮಯ ಸ್ಫೂರ್ತಿಯಿಂದ ಪದ್ಯಗಳನ್ನು ಕಟ್ಟಿಕೊಟ್ಟ ಸಹಜ ಕವಿ (ಸರ್ವಜ್ಞನ ವಚನಗಳು, ಪ್ರ.ಸಂ: ಪ್ರೊ. ಎಂ.ವ್ಹಿ.ಸೀ., ಪು.೧೧).

ಇಂದಿನ ಸಂಕ್ರಮಣಾವಸ್ಥೆಯಲ್ಲಿ ಹಾಗೂ ವೈಜ್ಞಾನಿಕವಾಗಿ ಪ್ರಬಲವಾಗಿಯೂ, ಮಾನಸಿಕವಾಗಿ ನಾವು ದುರ್ಬಲವಾಗುತ್ತಿರುವ ಸಂದರ್ಭದಲ್ಲಿ ನಮ್ಮ ಮಾನವೀಯ ಮೌಲ್ಯಗಳು ಕಣ್ಮರೆಯಾಗುತ್ತಿವೆ. ಮತ್ತೆ ಅಂತಃ ಮೌಲ್ಯಗಳನ್ನು ಸರ್ವಜ್ಞನಲ್ಲಿ ನಾನಾ ದೃಷ್ಟಿಕೋನಗಳಿಂದ ಹುಡುಕುವುದು ಪ್ರಸ್ತುತವಾಗುತ್ತವೆ. ಸರ್ವಜ್ಞನ ಒಟ್ಟು ನೋಟ-ಧೋರಣೆಗಳು ಸಾಗರದಷ್ಟು ಆಳವಾಗಿವೆ, ವ್ಯಾಪಕವಾಗಿವೆ. ಆತನ ವಚನಗಳನ್ನು ತೆಗೆದುಕೊಂಡು ನಾನಾ ಮಗ್ಗಲುಗಳಿಂದ ವಿಶ್ಲೇಷಿಸುತ್ತಾ ಹೋದಾಗ ಅನೇಕ ಅಂಶಗಳು, ಹೊಸ ವಿಷಯಗಳು ಬೆಳಕಿಗೆ ಬರುತ್ತವೆ.

ಸರ್ವಜ್ಞ ಈ ಮಣ್ಣಿನ ಮಾತೆಯ ಮೆಚ್ಚಿನ ಮಗ. ನಾಡಿನೆಲ್ಲೆಡೆ ಸಂಚರಿಸಿ, ಅನುಭವಾಮೃತ ಉಂಡವನು. ಕಂಡದ್ದನ್ನು ಹೇಳಿ, ಹಲವರ ಕೋಪಕ್ಕೆ ಗುರಿಯಾದವನು. ಸ್ವಾತಂತ್ರ್ಯಪ್ರಿಯನಾಗಿದ್ದರೂ, ಸ್ವೇಚ್ಛಾಚಾರಿಯಲ್ಲ. ಕ್ರಾಂತಿಕಾರಿಯಾಗಿದ್ದರೂ ಶಾಂತಿಪ್ರಿಯನು. ಜಾತಿಯಿಂದ ವೀರಶೈವನೆಂದು ಕರೆಯಬಹುದಾದರೂ ಅನ್ಯ ಧರ್ಮ-ಜಾತಿಗಳನ್ನು ಮೆಚ್ಚಿದವನು. ಜನಪದರ ಮುಂದಾಳು; ಅವರಿಗಾಗಿ ಬಾಳಿದವನು. ಜನಸಾಮಾನ್ಯರ ಕನ್ನಡದ ಕಸ್ತೂರಿಯನ್ನು ಬಳಸಿದವನು ಎಂಬುದನ್ನು ಈ ಮಹಾ ಪ್ರಬಂಧದುದ್ದಕ್ಕೂ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

## ೧.೨. ಅಧ್ಯಯನದ ಉದ್ದೇಶ :

ಕನ್ನಡಿಗರ ಸಂಸ್ಕೃತಿಯನ್ನು ರೂಪಿಸುವಲ್ಲಿ ಸರ್ವಜ್ಞನ ಕೊಡುಗೆ ಅಪಾರವಾದುದು. ವಿಶೇಷವಾಗಿ ಜನಪದರ ಮಧ್ಯದಲ್ಲಿ ಬದುಕುತ್ತಾ, ಅಂದಿನ ಆಳುವ ವರ್ಗವನ್ನೇ ತಿರಸ್ಕರಿಸಿ ವಿವಿಧ ರೀತಿಯ ವಿಚಾರಗಳಿಗೆ ಸಂಬಂಧಿಸಿದಂತೆ ವಚನಗಳನ್ನು ಉಸುರಿದ ಯಶಸ್ಸು ಆತನದು. ಪಾಮರರಿಂದ ಪಂಡಿತ ವರ್ಗದವರೆಗೂ ಸೆಡ್ಡು ಹೊಡೆದು ನಿಂತಿರುವ ಆತನ ವಚನಗಳು ಇಂದಿಗೂ, ಮುಂದೆಯೂ ಪ್ರಸ್ತುತವೆನಿಸುತ್ತಿವೆ. ವ್ಯಕ್ತಿತ್ವ ವಿಕಾಸಕ್ಕೆ, ತಿಳುವಳಿಕೆಗೆ, ರಾಷ್ಟ್ರದ ಪ್ರಗತಿಗೆ, ಆರೋಗ್ಯದಾಯಕವಾಗಬಲ್ಲ ತಾತ್ವಿಕ ವಿಚಾರಗಳು ಇಂದಿನ ಜೀವನದ ಮೇಲೆ ಎಷ್ಟೊಂದು ಪ್ರಭಾವ ಬೀರಿವೆ ಮತ್ತು ಪರಿವರ್ತನೆಗೆ ದಾರಿ ದೀಪಗಳಾಗಿವೆ ಎಂಬುದನ್ನು ಸರ್ವಜ್ಞನ ವಚನಗಳಲ್ಲಿ ನೋಡಬಹುದು.

ಸರ್ವಜ್ಞನ ವಚನಗಳನ್ನು ತ್ರಿಪದಿಗಳೆಂದು ಕರೆಯುತ್ತಾರೆ. ದಿನನಿತ್ಯ ಜೀವನದಲ್ಲಿ ಕೆಲವರು ಸಮಯ ಸಂದರ್ಭಗಳಲ್ಲಿ ಗಾದೆಯ ಮಾತುಗಳಂತೆ ಈತನ ವಚನಗಳನ್ನು ಬಳಸುವ ಪ್ರಕ್ರಿಯೆ ತುಂಬಾ ಆನಂದ ವನ್ನುಂಟು ಮಾಡುತ್ತದೆ. ಈ ಸರ್ವಜ್ಞ ಕವಿ ಬಹಳ ವಿಚಿತ್ರ ಸ್ವಭಾವದವನು. ಯಾರ ಜಾಯಮಾನಕ್ಕೂ ಒಳಗಾಗದೇ ನೇರವಾಗಿ, ನಿಷ್ಠೂರವಾಗಿ ಬಾಳಿದವನು. ''ಕಸ ತಿನ್ನುವುದಕ್ಕಿಂತ ತುಸು ತಿನ್ನು'' ಎಂಬ ಗಾದೆ ಮಾತಿನಂತೆ, ಅಂದಿನ ಸಮಾಜದಲ್ಲಿ ತಾನು ಕಂಡುಂಡ ಪ್ರತಿಯೊಂದು ಸಂಗತಿಯನ್ನು ಕೇವಲ ಮೂರು ವಾಕ್ಯದಲ್ಲಿ ಹಿಡಿದಿಡುವ ಜಾಣ್ಮೆಯನ್ನು ನೋಡಿದಾಗ ನಿಜಕ್ಕೂ ಆಶ್ಚರ್ಯವಾಗದೇ ಇರಲಾರದು.

ಸರ್ವಜ್ಞನಂತಹ ಯುಗಕವಿಗಳ ಬಗೆಗೆ ಕಾಲಕಾಲಕ್ಕೆ ಪರ್ಯಾಲೋಚನೆ, ಸಮಾಲೋಚನೆಗಳು ನಡೆಯಬೇಕು. ಇಂತಹ ಪ್ರಾಚೀನ ಕವಿಗಳು ನಿತ್ಯನೂತನರೂ, ಅತ್ಯಾಧುನಿಕರು. ಎರಡು ಕಾರಣಗಳಿಂದ ಈ ಕವಿಯನ್ನು ನಾವು ಮತ್ತೆ ಮತ್ತೆ ಸಮೀಕ್ಷಿಸಬೇಕಾಗುತ್ತದೆ. ಒಂದು: ಕೆಲ ಕಾಲ ಗತಿಸಿದ ನಂತರ ಈತನ ಬಗೆಗೆ ಹೊಸ ಹೊಸ ವಿವರಗಳು ದೊರೆಯುತ್ತಿರುವುದು, ಇನ್ನೊಂದು: ದೇಶ, ಕಾಲ, ಪರಿಸ್ಥಿತಿಯ ಹೊಸ ಸಂದರ್ಭಕ್ಕೆ ಆಧುನಿಕ ಜೀವನ ದರ್ಶನದ ಹೊಸ ದೃಷ್ಟಿಗೆ ಈತನ ವಚನಗಳು ಮತ್ತೆ ಮತ್ತೆ ವಾಸ್ತವಿಕ ಸತ್ಯವಾಗಲ್ಲವು. ಇದಕ್ಕಾಗಿ ಕಾಲಕಾಲಕ್ಕೆ ಇಂತಹ ಕವಿಗಳ ವ್ಯಕ್ತಿತ್ವ ಕಾವ್ಯದಲ್ಲಿನ ನಾನಾ ದೃಷ್ಟಿಕೋನಗಳ ಮೂಲಕ ಗುರುತಿಸುವುದರೊಂದಿಗೆ ಪುನರ್ ಮೌಲ್ಯಮಾಪನ ನಡೆಸಬೇಕಾಗುತ್ತದೆ (ಕನ್ನಡ ಸಾಹಿತ್ಯದಲ್ಲಿ ಕರ್ಣ, ಪು.೧).

ಸರ್ವಜ್ಞ ಜನಪದ ಸಂಸ್ಕೃತಿಯಿಂದಲೇ ಉದಿಸಿ ಬಂದಿದ್ದರೂ, ಶಿಷ್ಟ ಪರಂಪರೆಯನ್ನು ಮೈಗೂಡಿಸಿಕೊಂಡವನು. ಅವನು ಕೆಳವರ್ಗದ ಒಕ್ಕಲಿಗ, ಕುಂಬಾರ, ಕಂಬಾರ, ಡೊಂಬರವ, ಬಡಿಗ, ಬಣಜಿಗ, ಸುಂಕಿಗ ಮುಂತಾದ ಕಾಯಕದಲ್ಲಿದ್ದವರ ಸಂಸ್ಕೃತಿ, ವಿಚಾರಗಳನ್ನು ತನ್ನ ವಚನಗಳಲ್ಲಿ ಪ್ರತಿ ಕ್ರಿಯಿಸಿದ್ದಾನೆ. ಹೀಗಾಗಿ ಜನಪದರ ದಟ್ಟ ಪ್ರಭಾವ ಸರ್ವಜ್ಞನಲ್ಲಿ ಬೆಳಕು ಚೆಲ್ಲಿದೆ. ಅಂತೆಯೇ ವಚನ ಗಳಲ್ಲಿ ಕೆನೆಗಟ್ಟಿನಿಂತಿದೆ ಎಂಬ ಅಂಶಗಳನ್ನು ಹೆಕ್ಕಿ ತೆಗೆದು ಮತ್ತು ತೌಲನಿಕ ಅಧ್ಯಯನದಿಂದ ಇಲ್ಲಿ ವಿಶ್ಲೇಷಿಸಲಾಗಿದೆ.

ಸರ್ವಜ್ಞ ಜನಪದ ಜನಾಂಗದವರೊಡನೆ ಬಾಳಿ ಬೆಳಗಿದವನು. ಅವರ ಸಿಹಿ-ಕಹಿ ಪ್ರಸಂಗಗಳನ್ನು ಕಣ್ಣಾರೆ ಕಂಡವನು. ಅವರ ರೀತಿ-ನೀತಿ, ರೂಢಿ-ಸಂಪ್ರದಾಯ, ಧರ್ಮ-ನಂಬಿಕೆ ಮೊದಲಾದವುಗಳನ್ನು ಕೇಳಿ ಆನಂದಿಸಿದವನು. ಈ ವಿಷಯಗಳನ್ನೆಲ್ಲಾ ತನ್ನ ವಚನಗಳಲ್ಲಿ ಕಂಡರಿಸಿದ್ದಾನೆ. ಹೀಗಿರುವುದರಿಂದ ಸರ್ವಜ್ಞನ ಯಾವುದೇ ವಚನವನ್ನು ಆಯ್ದುಕೊಂಡು ಜಾನಪದದ ಹಿನ್ನೆಲೆಯಲ್ಲಿ ಗಮನಿಸಿದಾಗ ಅಲ್ಲಿ ಆ ಅಂಶಗಳು ಒಂದಿಲ್ಲ ಒಂದು ರೀತಿಯಲ್ಲಿ ಸೂಕ್ಷ್ಮವಾಗಿ ಅರಿಯಬಹುದಾಗಿದೆ. ಇಂತಹ ಜಾನಪದ ಅಂಶಗಳು ಇಲ್ಲಿ ನೇರವಾಗಿ ಅಥವಾ ಅಲ್ಪ ಸ್ವಲ್ಪ ಬದಲಾವಣೆ ಹೊಂದಿರುವ ಸಂಗತಿಗಳು ಸಹ ಕಂಡುಬರುತ್ತವೆ.

ಸುಮಾರು ೧೬ನೇ ಶತಮಾನದಲ್ಲಿದ್ದ ಸರ್ವಜ್ಞನ ವಚನಗಳಲ್ಲಿ ಕಂಡುಬರುವ ಜಾನಪದೀಯ ಅಂಶಗಳನ್ನು ಸಾಧ್ಯವಾದಷ್ಟು ಗುರುತಿಸಿ, ಸಂಗ್ರಹಿಸಿ ಕೆಲವೆಡೆಗಳಲ್ಲಿ ತೌಲನಿಕವಾಗಿ ವಿವೇಚಿಸುವ, ವಿಶ್ಲೇಷಿಸುವ ಕೆಲಸ ಈ ಮಹಾಪ್ರಬಂಧದ ಪ್ರಮುಖ ಉದ್ದೇಶವಾಗಿದೆ. ಕುಮಾರವ್ಯಾಸ, ರತ್ನಾಕರವರ್ಣಿ, ಲಕ್ಷ್ಮೀಶ ಮುಂತಾದ ಮಹಾಕವಿಗಳು ಶಿಷ್ಟ ಪರಂಪರೆಯಲ್ಲಿ ಬಂದಿದ್ದರೂ ಅಲ್ಲಲ್ಲಿ ಜಾನಪದ ಅಂಶಗಳನ್ನು ಬಳಸಿದ್ದಾರೆ. ಅವರೆಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ಸಮಾಜದ ಚಿತ್ರಣವನ್ನು ವಚನಗಳ ಮೂಲಕ ಜನಸಾಮಾನ್ಯರ ಭಾಷೆಯಲ್ಲಿ ಸರ್ವಜ್ಞನು ವ್ಯಕ್ತಪಡಿಸಿ ದ್ದಾನೆಂಬುದು ಅಕ್ಷರಶಃ ಸತ್ಯ.

ಈ ರೀತಿಯಾದ ಅಧ್ಯಯನ ಸರ್ವಜ್ಞನನ್ನು ಕುರಿತಾಗಿರುವುದು ಇದೇ ಮೊದಲು ಎಂಬ ಸ್ಪಷ್ಟ ಅಂಶವನ್ನು ತುಂಬಾ ಅಭಿಮಾನ ಪೂರ್ವಕವಾಗಿ ಹಾಗೂ ಸೌಜನ್ಯಪೂರಿತನಾಗಿ ಹೇಳಬಯಸುತ್ತೇನೆ. ''ವಿಶ್ವವೇ ಭಿನ್ನತೆಗಳ ಪ್ರಯೋಗಶಾಲೆ, ವೈರುಧ್ಯಗಳ ಸರಮಾಲೆಗಳ ಮಡುವಾಗಿದೆ. ಈ ನಡುವೆ ಶ್ರೇಷ್ಠತೆಯ ಅಹಮಿಕೆಯನ್ನು ಮರೆತು ಮನುಕುಲವನ್ನೇ ನಿರ್ಮಲ ಅಂತಃಕರಣದಿಂದ ಪ್ರೀತಿಸಿ, ತಾನು ಪಡೆದ ಅನುಭವವನ್ನು ಎಲ್ಲರಿಗೂ ಹಂಚಿ ಅನುಭವಿಸುವ ಉದಾರ ಮನೋಭಾವ ಮಹಾ ಪುರುಷರದ್ದಾಗಿರುತ್ತದೆ'' (ಶಿಶುನಾಳಷರೀಫ ಮತ್ತು ಸಂತ ಕಬೀರ-ಒಂದು ತೌಲನಿಕ ಅಧ್ಯಯನ, ಪು.೧೩). ಹಾಗೆಯೇ ದೇಶ ಕಾಲಗಳನ್ನು ಮೀರಿನಿಂತ ಅನೇಕ ಸಂತರು, ಸಜ್ಜನರು, ಮಹಾತ್ಮರೂ ಉದಯಿಸುತ್ತಿದ್ದಾರೆ. ಅಂಥವರಲ್ಲಿ ಸರ್ವಜ್ಞನೂ ಒಬ್ಬ.

ಇನ್ನು ಜನಪದ ಸಾಹಿತ್ಯವೆಂಬುದು ತನ್ನ ಮುಂದಿನ ಎಲ್ಲ ಬಗೆಯ ಶಿಷ್ಠ ಸಾಹಿತ್ಯದ ನೆಲೆ-ಸೆಲೆಯಾ ದಂತೆ, ವಚನ ಸಾಹಿತ್ಯದ ನೆಲೆಯೂ ಆಗಿದೆ. ವಚನ ಹಾಗೂ ಜಾನಪದ ಬೇರ್ಪಡಿಸಲಾರದಷ್ಟು ಒಂದರೊಡ ನೊಂದು ಬೆಸೆದುಕೊಂಡಿವೆ. ಈ ಬಗೆಯ ಸಮಗ್ರ ಅಧ್ಯಯನ ಇದುವರೆಗೆ ನಡೆದಿರಲಿಲ್ಲ. ಜಾನಪದ ಜೀವನದ ಆವರಣದಲ್ಲಿ, ಸರ್ವಜ್ಞನಿಂದ ಅನಾವರಣಗೊಂಡ ವಚನಗಳು ಜಾನಪದೀಯ ಸತ್ವದಿಂದ ಹೊರಹೊಮ್ಮಿವೆ. ಅವುಗಳಲ್ಲಿ ವೈವಿಧ್ಯಪೂರ್ಣ, ಮಹತ್ವಪೂರ್ಣ ಹಾಗೂ ಅರ್ಥಪೂರ್ಣವಾದ ವಿಶಿಷ್ಟ ಜಾನಪದೀಯ ಅಂಶಗಳನ್ನು ಸಾಧ್ಯವಾದಷ್ಟರಮಟ್ಟಿಗೆ ಕಲೆಹಾಕಿ, ತೌಲನಿಕವಾಗಿ ವಿಶ್ಲೇಷಿಸುವುದರ ಮೂಲಕ 'ಸರ್ವಜ್ಞನ ವಚನಗಳ ಜಾನಪದೀಯ ಸತ್ವ'ವನ್ನು ಅರಿಯುವ ಪ್ರಯತ್ನವನ್ನು ಮಾಡುವುದೇ ಈ ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

## ೧.೩. ಅಧ್ಯಯನದ ಸ್ವರೂಪ :

ಸರ್ವಜ್ಞನ ವಚನಗಳು ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಜನಾಂಗಿಕವಾಗಿ ಮತ್ತು ಭಾಷಿಕವಾಗಿ ಭಿನ್ನರೀತಿಗಳಲ್ಲಿ ಹೇಗೆ ಜನಪದೀಯ ಅಂಶಗಳನ್ನು ಹೊಂದಿವೆ ಎಂಬುದನ್ನು ವಿವಿಧ ಆಯಾಮಗಳ ಮೂಲಕ ಅಧ್ಯಯನದಲ್ಲಿ ಕೈಗೊಳ್ಳುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಜನಪದರು ತಮ್ಮ ರೂಢಿಯಲ್ಲಿ ಬಳಸಿದ ಗಾದೆ, ಒಗಟು, ಐತಿಹ್ಯ, ಪುರಾಣ ಮುಂತಾದವುಗಳು ಸರ್ವಜ್ಞನ ವಚನಗಳಲ್ಲಿಹೇಗೆ ಅಭಿವ್ಯಕ್ತವಾಗಿವೆ ? ಕೆಲವೊಮ್ಮೆ ಸರ್ವಜ್ಞನ ವಚನಗಳೇ ಜನರ ಬಾಯಿಂದ ಬಾಯಿಗೆ ಹರಿದು, ಗಾದೆ, ಒಗಟುಗಳಾಗಿರಬಹುದು. ಸರ್ವಜ್ಞನು ತನ್ನ ವಚನಗಳಲ್ಲಿ ಅವುಗಳನ್ನು ಪ್ರಸ್ತಾಪಿಸಿರುವುದು ಕಂಡು ಬರುತ್ತದೆ.

ಸರ್ವಜ್ಞನಿದ್ದ ಕಾಲಘಟ್ಟ, ಪ್ರದೇಶ, ಪರಿಸರ, ಐತಿಹಾಸಿಕ ಸಂದರ್ಭ, ಆತನ ಮನೋಧರ್ಮ, ಆತನ ಹಿಂದಿನ ಕವಿಗಳ ಹಾಗೂ ವಚನಕಾರರ ದಟ್ಟ ಪ್ರಭಾವವನ್ನು ಚರ್ಚಿಸಲಾಗಿದೆ. ಆತನ ಪ್ರತಿಪಾದಿಸಿದ ವಿಚಾರಗಳು, ಬಳಸಿಕೊಂಡ ಕಾವ್ಯಮಾರ್ಗ, ಪ್ರೇರಣೆ, ಶೈಲಿ-ಭಾಷೆಗಳ ವಿಶೇಷತೆಗಳು ಬದುಕಿನ ಗ್ರಹಿಕೆಯಲ್ಲಿ ವಿಭಿನ್ನ, ಸಮಾನ ದೃಷ್ಟಿಗಳು, ಇತರೆ ಪ್ರಭಾವಗಳು, ಅದರ ಪರಿಣಾಮಗಳು ಈ ಎಲ್ಲವನ್ನು ಸಂಕ್ಷಿಪ್ತವಾಗಿ ಗುರುತಿಸಲಾಗಿದೆ.

ಜಾನಪದೀಯ ಅಧ್ಯಯನವೆಂಬುದು ಸಾಹಿತ್ಯಾಭ್ಯಾಸದ ಒಂದು ಶಾಖೆಯಾಗಿದೆ. ಅಧ್ಯಯನದ ಒಂದು ಶಿಸ್ತಾಗಿ ರೂಪುಗೊಂಡುದಾಗಿದೆ. ಇತ್ತೀಚಿನ ಶತಮಾನದಲ್ಲಿ ಇದರ ಕ್ಷೇತ್ರ ಬಹಳ ವಿಸ್ತಾರವಾಗುತ್ತಾ ಸಾಗಿದೆ. ಈ ರೀತಿಯಾದ ಜಾನಪದೀಯ ಅಧ್ಯಯನ ಭಾರತಕ್ಕೇನೂ ಹೊಸದಲ್ಲ. ಏಕೆಂದರೆ ಶಿಷ್ಟ-ನಾಗರೀಕತೆ ಇರುವಲ್ಲೆಲ್ಲಾ ಜಾನಪದ ಯಾವುದೋ ಮೂಲೆಯಲ್ಲಿ ಸೇರ್ಪಡೆಗೊಂಡಿರುತ್ತದೆ. ಅದರ ರೂಪ ಬದಲಾಗಿರುತ್ತದೆಯೇ ಹೊರತು ಅದರ ಸತ್ಯಾಂಶ ಮಾತ್ರ ಪರೋಕ್ಷವಾಗಿ ಎಲ್ಲೋ ಒಂದು ಕಡೆ ಅಡಗಿಕೊಂಡಿರುತ್ತದೆ.

ಇಂತಹ ಜಾನಪದೀಯ ಅಧ್ಯಯನದಲ್ಲಿ ಸರ್ವಜ್ಞನ ವಚನಗಳು ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಜನಾಂಗಿಕವಾಗಿ ಮತ್ತು ಭಾಷಿಕವಾಗಿ ಭಿನ್ನರೀತಿಯಲ್ಲಿ ಹೇಗೆ ಜಾನಪದೀಯವಾಗಿ ಪ್ರಭಾವಗೊಂಡಿವೆ ಎಂಬ ಅಂಶಗಳನ್ನು ವಿವಿಧ ಆಯಾಮಗಳ ಮೂಲಕ ಅಧ್ಯಯನ ಕೈಗೊಳ್ಳುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಜನಪದರು ರೂಢಿಯಲ್ಲಿ ಬಳಸುವ ಗಾದೆ, ಒಗಟು, ಐತಿಹ್ಯ, ಪುರಾಣ ಮುಂತಾದವುಗಳು ಸರ್ವಜ್ಞನ ವಚನಗಳಲ್ಲಿ ಹೇಗೆ ಅಭಿವ್ಯಕ್ತವಾಗಿವೆ ?, ಕೆಲವೊಮ್ಮೆ ಸರ್ವಜ್ಞನ ವಚನಗಳೇ ಜನರ ಬಾಯಿಂದ ಬಾಯಿಗೆ ಹರಿದು ಪಾಠಾಂತರಗಳಾಗಿರಬಹುದು ಎಂಬುದರ ಬಗೆಗೆ ಚರ್ಚಿಸಲಾಗಿದೆ. ಒಟ್ಟಿನಲ್ಲಿ ಜಾನಪದೀಯ ಅಂಶಗಳ ಅಧ್ಯಯನವೆಂದರೆ, ಪ್ರತಿಭೆ-ಪರಿಶ್ರಮ ಗಳಿಂದ ಅವುಗಳನ್ನು ಗುರುತಿಸುವುದಷ್ಟೇ ಅಲ್ಲ, ಇದೊಂದು ಸ್ವತಂತ್ರ , ಸೃಜನಶೀಲ ಸಂಶೋಧನಾಧ್ಯಯವಾಗಿಸುವಲ್ಲಿ ಪ್ರಯತ್ನಿಸಲಾಗಿದೆ.

ಈ ಮಹಾಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಮಾಡಿಕೊಳ್ಳಲಾಗಿದೆ. ಪ್ರತಿಯೊಂದು ಅಧ್ಯಾಯದ ಸ್ವರೂಪ ಈ ಕೆಳಗಿನಂತಿದೆ.

ಮೊದಲ ಪೀಠಿಕಾಧ್ಯಾಯದಲ್ಲಿ : ಸರ್ವಜ್ಞನನ್ನು ಕುರಿತಾಗಿ ಪ್ರಸ್ತಾವನೆಯ ಮಾತುಗಳನ್ನು ಹೇಳಲಾಗಿದೆ. ಸರ್ವಜ್ಞನನ್ನು ಕುರಿತಾಗಿ ಈವರೆಗೆ ಬಂದಿರುವ ಪುಸ್ತಕಗಳು, ಮಹಾಪ್ರಬಂಧಗಳು, ವಚನ ಸಂಗ್ರಹಗಳು ಮುಂತಾದವುಗಳ ಬಗ್ಗೆ ತಿಳಿಸಲಾಗಿದೆ. ಸರ್ವಜ್ಞನಿಂದ ಅನಾವರಣಗೊಂಡ ವಚನಗಳು ಜಾನಪದೀಯ ಸತ್ವದಿಂದ ಹೊರಹೊಮ್ಮಿವೆ. ಅವುಗಳ ವೈವಿಧ್ಯಪೂರ್ಣ, ಮಹತ್ವಪೂರ್ಣ ಹಾಗೂ ಅರ್ಥ ಪೂರ್ಣವಾದ ವಿಶಿಷ್ಟ ಜಾನಪದೀಯ ಅಂಶಗಳನ್ನು ಕಲೆಹಾಕಿ, ತೌಲನಿಕವಾಗಿ ವಿಶ್ಲೇಷಿಸುವುದರ ಮೂಲಕ "ಸರ್ವಜ್ಞನ ಜಾನಪದೀಯ ಸತ್ವ"ವನ್ನು ಅರಿಯುವ ಪ್ರಯತ್ನವನ್ನು ಮಾಡಿರುವುದೇ ಈ ಅಧ್ಯಯನದ ಉದ್ದೇಶವೆಂಬುದನ್ನು ಈ ಮಹಾಪ್ರಬಂಧದಲ್ಲಿ ಸ್ಪಷ್ಟಪಡಿಸಲಾಗಿದೆ.

ಅಧ್ಯಾಯ ಎರಡರಲ್ಲಿ: ಇದರಲ್ಲಿ 'ಜಾನಪದ ಅಂಶಗಳನ್ನೊಳಗೊಂಡ ಶಿಷ್ಟಕಾವ್ಯ' ಎಂಬ ಶೀರ್ಷಿಕೆಯ ಅಡಿಯಲ್ಲಿ ಜನಪದ-ಜಾನಪದದ ವಿಶ್ಲೇಷಣೆ ಮಾಡಲಾಗಿದೆ. ಜಾನಪದ ಮತ್ತು ಶಿಷ್ಟ ಎಂಬ ಅಂಶಗಳ ಬಗೆಗಿರುವ ಅರ್ಥ ಮತ್ತು ವ್ಯತ್ಯಾಸಗಳನ್ನು ಕುರಿತು ದೀರ್ಘವಾಗಿ ಚರ್ಚಿಸಲಾಗಿದೆ. ಪಂಪ, ರನ್ನಾದಿಗಳಾದ ಪಂಡಿತರ ಚಂಪೂ ಕಾವ್ಯದಲ್ಲಿ ಕಾಣಿಸಿಕೊಂಡ ದೇಶೀಯತೆ, ರಗಳೆ ಮತ್ತು ಷಟ್ಪದಿ ಕವಿಗಳಾದ ಹರಿಹರ, ರಾಘವಾಂಕ ಮತ್ತಿತರರಲ್ಲಿ ಕಂಡುಬಂದಿರುವ ದೇಶೀಯತೆ ನಂತರ ವಚನಕಾರರು,

ದಾಸರು, ತತ್ವಪದಕಾರರಲ್ಲಿ ಸಂಪೂರ್ಣ ದೇಶೀಯತೆಯನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಸಂಪೂರ್ಣ ದೇಶೀಯ ನೆಲೆಯಲ್ಲಿ ನಿಂತು, ಜನಸಾಮಾನ್ಯರ ಆಚಾರ-ವಿಚಾರಗಳನ್ನು ತನ್ನ ವಚನಗಳಲ್ಲಿ ಅಭಿವ್ಯಕ್ತಿಪಡಿಸಿದ ಸರ್ವಜ್ಞನ ಬಗ್ಗೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ : ಸರ್ವಜ್ಞನ ಜಾನಪದ ಭೂಮಿಕೆ ಎಂಬ ತಲೆಬರಹದಲ್ಲಿ, ಆತನು ಹುಟ್ಟಿಬೆಳೆದ ಪರಿಸರ ಹೇಗಿತ್ತು?, ಆತನ ಊರು ಯಾವುದು ?, ಆತನ ಬಗೆಗಿರುವ ದಂತ ಕಥೆಗಳ ಬಗೆಗೆ ತಿಳಿಸಲಾಗಿದೆ. ಸರ್ವಜ್ಞನು ನಿಷ್ಠೂರವಾಗಿಯಾಗಿದ್ದರೂ, ಜನರಲ್ಲಿದ್ದ ಉತ್ತಮಾಂಶಗಳಿಗೆ ಪ್ರೋತ್ಸಾಹದ ಮಾತುಗಳನ್ನು ಹೇಳಿದವನು ಮತ್ತು ಹೊಗಳಿದವನು. ತನಗೆ ಸರಿಕಾಣಿಸುದುದನ್ನು ನಿರ್ಭಯವಾಗಿ ಹೇಳುವುದರ ಮೂಲಕ ಅದನ್ನು ಸರಿಪಡಿಸಲು ಪ್ರಯತ್ನಿಸಿದವನು.

ಸರ್ವಜ್ಞನ ಕಾಲದ ವಿಚಾರವಾಗಿ ಇಲ್ಲಿಯವರೆಗೆ ಯಾವ ವಿದ್ವಾಂಸರಲ್ಲಿ ಒಮ್ಮತ ಕಂಡುಬರುವುದಿಲ್ಲ. ಸರ್ವಜ್ಞನ ಕಾಲವನ್ನು ಕನ್ನಡ ಸಾಹಿತ್ಯದಲ್ಲಿ ಸುಮಾರು ೧೪ನೆಯ ಶತಮಾನದ ೧೭ನೆಯ ಶತಮಾನದವರೆಗೆ ಗುರುತಿಸಲು ಅನೇಕರು ಪ್ರಯತ್ನಿಸಿದ್ದಾರೆ. ಇದಕ್ಕೆ ಅನೇಕ ಕಾರಣಗಳನ್ನು ನೀಡಿ, ಆತನ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳನ್ನು ಮೂಡಿಸಿದ್ದಾರೆ. ಒಟ್ಟಾರೆ ಎಲ್ಲ ವಿದ್ವಾಂಸರ ಹೇಳಿಕೆಗಳನ್ನಿಟ್ಟುಕೊಂಡು ಕೊನೆಯಲ್ಲಿ ಈ ಸರ್ವಜ್ಞನ ಕಾಲ ಸುಮಾರು ೧೬ನೆಯ ಶತಮಾನವೆಂದು ಹೇಳಲಾಗಿದೆ. ಇದಲ್ಲದೆ, ಸರ್ವಜ್ಞನ ಜನನದ ವಿಚಾರವಾಗಿಯೂ ಸಹ ವಿವಿಧ ದಂತಕಥೆಗಳು ಹುಟ್ಟಿಕೊಂಡಿವೆ. ಸಹಜವಾಗಿ ವ್ಯಕ್ತಿಯೊಬ್ಬ ಕೀರ್ತಿ ಶಿಖರ ಮುಟ್ಟಿದ ಮೇಲೆ ಕೆಲವರು ಆತನ ಜನನದ ಬಗೆಗೆ ಕಥೆ ಕಟ್ಟುವುದುಂಟು. ಇಲ್ಲಿ ಸರ್ವಜ್ಞ, ಬ್ರಾಹ್ಮಣ, ಕುಂಬಾರ ಮತ್ತು ವೀರಶೈವ ಈ ಮೂರು ಜಾತಿಯಲ್ಲಿ ನಿಲ್ಲುತ್ತಾನೆ. ಆದರೆ ತನ್ನ ವಚನಗಳಲ್ಲಿ ಹೇಳಿರುವಂತೆ ಕುಂಬಾರ ಜನಾಂಗದಲ್ಲಿ ಹುಟ್ಟಿದವನು. ಮತ್ತು ವೀರಶೈವನೆಂದೇ ಹೇಳಿಕೊಂಡಿದ್ದಾನೆ.

ಇನ್ನು ಸರ್ವಜ್ಞನು ಬಾಳಿ-ಬದುಕಿದ ಕಾಲದಲ್ಲಿ ಜನಪದ ಪರಿಸರ ಹೇಗಿತ್ತೆಂಬುದನ್ನು ಅವನ ಕಣ್ಣಿನ ಮೂಲಕ ಅರಿಯುವ ಪ್ರಯತ್ನ ಮಾಡಲಾಗಿದೆ. ಈ ಮುಂತಾದ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ : ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಜಾನಪದ ವೃತ್ತಿಗಳ ವಿಚಾರವನ್ನು ವಿವರಿಸಲಾಗಿದೆ. ಇದರಲ್ಲಿ ಗ್ರಾಮೀಣ ಕಸುಬುಗಳಾದ ಒಕ್ಕಲುತನದ ಬಗೆಗೆ ಹಾಗೂ ಅದರ ನಂಬಿಕೆಯ ವಿಷಯವಾಗಿ ಬರುವ ಮಳೆ, ರೀತಿ-ನೀತಿಗಳನ್ನು ಚರ್ಚಿಸಲಾಗಿದೆ. ರೈತನಿಗೆ ಜೊತೆಯಾಗಿ ಬಂದಿರುವ ಒಕ್ಕಲುತನದ ವೃತ್ತಿಗೆ ಬಹಳಷ್ಟು ಅವನು ಪ್ರಾಮುಖ್ಯತೆ ನೀಡಿ 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು' ಎಂಬ ಉತ್ತಮವಾದ ಮಾತನ್ನೇ ಆಡಿದ್ದಾನೆ.

ಒಕ್ಕಲುತನಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನೆರವಾಗುವ ಪರಿಕರಗಳ ಬಗೆಗೆ ಹಾಗೂ ಇತರೆ ವೃತ್ತಿಗಳಾದ ಬಡಿಗತನ, ಗಾಣಿಗ, ವ್ಯಾಪಾರಿ, ಕುಂಬಾರಿಕೆ ಮುಂತಾದವುಗಳ ಬಗೆಗೆ ವಿವರಿಸಲಾಗಿದೆ. ಇದಲ್ಲದೆ, ಇನ್ನುಳಿದ ವೃತ್ತಿಯವರಾದ ಸುಂಕಿಗ, ಡೊಂಬರ, ಸಿಂಪಿಗ, ಬೆಸ್ತರವ, ಅಕ್ಕಸಾಲಿಗೆ, ಬೇಟೆಗಾರ ಹಾಗೂ ವೇಶ್ಯಾಗಾರಿಕೆ ಬಗೆಗೆ ಅಧ್ಯಯನ ಮಾಡಲಾಗಿದೆ. ಸರ್ವಜ್ಞನ ಕಾಲದ ಸಮಾಜದಲ್ಲಿ ಈ ವೃತ್ತಿಯವರ ಪ್ರಾಮುಖ್ಯತೆ ಏನಿತ್ತು ?, ಇವರ ನಡೆ-ನುಡಿ,ನೀತಿ-ನಿಯಮಗಳು ಏನಾಗಿದ್ದವು ? ಎಂಬ ವಿಚಾರಗಳನ್ನು ಆತನ ವಚನಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಆಯಾ ವೃತ್ತಿಗಳವರಿಗೆ ಸಂಬಂಧಿಸಿದ ಗಾದೆ, ಒಗಟು, ನುಡಿಗಟ್ಟು, ಉಪಮೆ ಮುಂತಾದ ಅಂಶಗಳನ್ನು ಕಂಡುಕೊಳ್ಳಲಾಗಿದೆ.

(ಕೆಲವು ವೃತ್ತಿಗಳನ್ನು ಸರ್ವಜ್ಞ ಹೊಗಳಿದ್ದರೆ, ಇನ್ನೂ ಕೆಲ ವೃತ್ತಿಗಳಲ್ಲಿದ್ದ ಮೋಸ, ವಂಚನೆಗಳನ್ನು ತೆಗಳಿದ್ದಾನೆ. ಒಟ್ಟಾರೆ ಒಳಿತು, ಕೆಡಕುಗಳ ವಿಚಾರವನ್ನು ಆತನ ಸಮಾಜದ ಹಿನ್ನೆಲೆಯಲ್ಲಿ ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಸರ್ವಜ್ಞನ ವಚನಗಳಲ್ಲಿ ಕಂಡುಬರುವ ಸಾಂಸ್ಕೃತಿಕ ವಿಷಯಗಳನ್ನು ಜಾನಪದೀಯ ಅಂಶಗಳೊಂದಿಗೆ ವಿವರಿಸಲಾಗಿದೆ. ''ಸಂಸ್ಕೃತಿ'' ಎಂದರೇನು ? ಈ ಪದದ ವ್ಯುತ್ಪತ್ತಿಯ ಬಗೆಗೆ ವಿವಿಧ ವಿದ್ವಾಂಸರ ಹೇಳಿಕೆಗಳನ್ನು ಆನುಷಂಗಿಕವಾಗಿ ತಿಳಿಸಲಾಗಿದೆ. ಸಂಸ್ಕೃತಿಯ ವಿಚಾರವಾಗಿ ಅನೇಕ ವಿಷಯಗಳು ಒಳಗೊಳ್ಳುತ್ತವೆ. ಅದರಲ್ಲಿ ನಡೆ-ನುಡಿಗಳು, ಆಚರಣೆಗಳು, ನಂಬಿಕೆಗಳು, ಶಕುನಗಳು, ನಡಾವಳಿಕೆಗಳು, ಆರೋಗ್ಯ ಈ ಮುಂತಾದವುಗಳನ್ನು ವಿವಿಧ ರೀತಿಯಲ್ಲಿ ಅಧ್ಯಯನ ಮಾಡಲಾಗಿದೆ.

ಇದರಲ್ಲಿ ಆಹಾರ, ವೈದ್ಯ ಮತ್ತು ಆರೋಗ್ಯದ ವಿಷಯವಾಗಿ ನೋಡಿದಾಗ ಸರ್ವಜ್ಞ ತನ್ನ ವಚನಗಳಲ್ಲಿ ಆಹಾರ ಪದಾರ್ಥಗಳನ್ನು ಹೇಗೆ ಬಳಸಬೇಕು ?, ಎಷ್ಟು ಬಳಸಬೇಕು ? ಎಂಬುದರ ಬಗೆಗೆ ತಿಳಿಸಿದ್ದಾನೆ. ಅಲ್ಲದೆ, ಆರೋಗ್ಯವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಬೇಕಾದರೆ ಬಳಸುವ ಆಹಾರ ಹೇಗಿರಬೇಕೆಂಬುದನ್ನು ತಿಳಿಸಿದ್ದಾನೆ. ಅದೇರೀತಿ ಆಟಗಳ ಬಗೆಗೆ , ಉಡುಗೆ-ತೊಡುಗೆಗಳ ಬಗೆಗೆ ತನ್ನ ವಚನಗಳಲ್ಲಿ ಅಭಿವ್ಯಕ್ತಪಡಿಸಿರುವುದನ್ನು ಜಾನಪದದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ : ವಚನಗಳಲ್ಲಿನ ಜಾನಪದೀಯ ಮೌಲ್ಯಗಳನ್ನು ಕಂಡುಕೊಳ್ಳಲಾಗಿದೆ. ಮೌಲ್ಯದ ಬಗೆಗೆ ವಿವರಿಸುತ್ತಾ, ವಿವಿಧ ಅಂಶಗಳನ್ನು ತಿಳಿಸಲಾಗಿದೆ. ಸಾಮಾನ್ಯವಾಗಿ ಒಬ್ಬ ವ್ಯಕ್ತಿ ತನ್ನ ಉತ್ತಮ ನಡತೆಗಳಿಂದ, ಉತ್ತಮ ಮೌಲ್ಯಗಳನ್ನು ಪಡೆದುಕೊಳ್ಳುತ್ತಾನೆ ಎಂಬ ಅಂಶದ ಮೂಲಕ ಸರ್ವಜ್ಞನ ವಚನಗಳನ್ನು ನೋಡಲಾಗಿದೆ.

ಸರ್ವಜ್ಞನ ಕಾಲದಲ್ಲಿ ಹೆಣ್ಣಿನ ಬಗೆಗಿರುವ ಮೌಲ್ಯಗಳ ಬಗೆಗೆ ಹೇಳುವಾಗ ಜಾನಪದರಲ್ಲಿ ತಲೆತಲಾಂತರಗಳಿಂದ ಬಂದಿರುವ ಹೆಣ್ಣಿನ ವಿಚಾರಗಳನ್ನಿಟ್ಟುಕೊಂಡು ವಿವರಿಸಲಾಗಿದೆ. ಹೆಣ್ಣು ಸಾಮಾನ್ಯವಾಗಿ ಸಂಸಾರದಲ್ಲಿ ಹೇಗಿರಬೇಕು ?, ಮಕ್ಕಳನ್ನು ಪಡೆಯದಿದ್ದ ಮಹಿಳೆಗೆ ಅಂದಿನ ಸ್ಥಾನಮಾನಗಳು ಏನಾಗಿದ್ದವು ? ಎಂಬ ವಿಷಯಗಳ ಬಗೆಗೆ ಸರ್ವಜ್ಞ ಏನು ಹೇಳಿದ್ದಾನೆಂಬುದರ ಬಗೆಗೆ ಜನಪದರ ಹಿನ್ನೆಲೆಯಲ್ಲಿ ವಿಸ್ತರಿಸಲಾಗಿದೆ. ಅಲ್ಲದೆ ದಾನ-ಧರ್ಮ, ನೀತಿ-ನಿಯಮ ಮತ್ತು ದೈವೀ ಶ್ರದ್ಧೆಗಿರುವ ಮೌಲ್ಯಗಳ ಬಗೆಗೆ ಆತನ ವಚನಗಳ ಮೂಲಕ ತಿಳಿಸಲಾಗಿದೆ.

ಅಧ್ಯಾಯ ಏಳು : ಇದರಲ್ಲಿ ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಜಾನಪದೀಯ ಸಾಹಿತ್ಯಿಕ ಪ್ರಕಾರಗಳ ಬಗೆಗೆ ತಿಳಿಸಲಾಗಿದೆ. ಮುಖ್ಯವಾಗಿ ತ್ರಿಪದಿ ಬೆಳೆದು ಬಂದ ಬಗೆ ಹಾಗೂ ಸರ್ವಜ್ಞನು ತ್ರಿಪದಿಗಳ ಮೂಲಕ ಸಮಾಜವನ್ನು ತಿದ್ದಿದ ಬಗೆಗೆ ಚರ್ಚಿಸಲಾಗಿದೆ. ಅದೇರೀತಿಯಾಗಿ ಸರ್ವಜ್ಞನ ಭಾಷೆ ಎಂಥಹದು ?, ಆತನ ಭಾಷೆಯಲ್ಲಿ ಕಂಡುಬರುವ ದೇಶೀಯ ಪದಗಳು, ಜೋಡಿ ಪದಗಳು ಹಾಗೂ ಬೈಗುಳ ಪದಗಳು ಮುಂತಾದವುಗಳ ಬಗೆಗೆ ವಿವರಿಸಲಾಗಿದೆ.

ಜಾನಪದರಲ್ಲಿ ಸಹಜ ಹಸಿರಾಗಿ ಬಂದಿರುವ ಗಾದೆ, ಒಗಟುಗಳು ಸರ್ವಜ್ಞನ ವಚನಗಳಲ್ಲಿಯೂ ಹೇಗೆ ಮೂಡಿಬಂದಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಉದಾಹರಣೆಗೆ ; ''ಅಂಗಿ ಕೊಟ್ಟು ಭಂಗಿ ಸೇದಿ ಮಂಗನಾದ'' ಈ ಗಾದೆ ಸರ್ವಜ್ಞನ ವಚನದಲ್ಲಿ;

ಅಂಗಿ ಅರಿವೆಯ ಮಾರಿ ಭಂಗಿಯನು ತಾ ಸೇದಿ
ಮಂಗನಂದದಲಿ ಕುಣಿವಾತ ಭವಭವದಿ
ಭಂಗಗೊಳುತಿಹನು ಸರ್ವಜ್ಞ

ಅದೇರೀತಿ ಒಗಟನ್ನು ನೋಡಿದಾಗ '' ಎರಡು ಹಕ್ಕಿ ಗೂಡಿನ್ಯಾಗ ಕೂತುಕೊಂಡು ನಾಡೆಲ್ಲಾ ನೋಡುತಾವು''.

ಕಡೆಬಿಳಿದು ನಡುಗಪ್ಪು ಉಡುವ ವಸ್ತ್ರವಲ್ಲ
ಬಿಡದೆ ನೀರುಂಟು ಮಡುವಲ್ಲ ಕವಿಗಳೇ
ಬೆಡಗ ಪೇಳುವುದು ಸರ್ವಜ್ಞ.

ಹೀಗೆ ಗಾದೆ, ಒಗಟುಗಳಿಗೆ ಸಂಬಂಧಿಸಿದ ಸರ್ವಜ್ಞನ ವಚನಗಳನ್ನು ನೋಡಿದಾಗ ಅವು ಜಾನಪದರ ಒಗಟು , ಗಾದೆಗಳಿಗೆ ಸಾಮಿಪ್ಯವನ್ನು ಪಡೆದುಕೊಂಡಿವೆ. ಅದೇರೀತಿಯಾಗಿ ಐತಿಹ್ಯ ಹಾಗೂ ಪುರಾಣಗಳಿಗೆ ಸಂಬಂಧಪಟ್ಟ ವಿಷಯಗಳನ್ನು ನೋಡಿದಾಗ ವಿಜಯನಗರ ಸಾಮ್ರಾಜ್ಯದ ಬಗೆಗಿರುವ

ಐತಿಹ್ಯದ ವಿಚಾರ, ಸರ್ವಜ್ಞನಲ್ಲಿ ಹೇಗೆ ಕಂಡುಬಂದಿದೆ ಮತ್ತು ರಾಮಾಯಣ, ಮಹಾಭಾರತದಂತಹ ಪುರಾಣಗಳನ್ನು ಸರ್ವಜ್ಞನು ನಂಬಿದ ರೀತಿಯ ವಿಚಾರವಾಗಿ ಜಾನಪದದ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೆ ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾದ ಗಾದೆ ಮಾತುಗಳನ್ನು ಹಾಗೂ ನುಡಿಗಟ್ಟುಗಳನ್ನು 'ಅ'ಕಾರಾದಿಯಾಗಿ ಅಧ್ಯಾಯದ ಕೊನೆಯಲ್ಲಿ ನೀಡಲಾಗಿದೆ.

ಅಧ್ಯಾಯ ಎಂಟರಲ್ಲಿ : ಸಮಾರೋಪ ಹಾಗೂ ಗ್ರಂಥ ಋಣವನ್ನು ನೀಡಲಾಗಿದೆ.

ಈವರೆಗೆ ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಜೈನ ಸಾಹಿತ್ಯದಲ್ಲಿ ಜಾನಪದ ಅಂಶಗಳು ಮುಂತಾದ ಅಧ್ಯಯನಗಳು ನಡೆದಿವೆ. ಅಂದರೆ ಶಿಷ್ಟ ಸಾಹಿತ್ಯದಲ್ಲಿ ಜಾನಪದವನ್ನು ಹುಡುಕುವ ಪ್ರಯತ್ನ ನಡೆದಿದೆ ಎಂಬುದು ತಿಳಿದುಬರುತ್ತದೆ. ಈ ನಿಟ್ಟಿನಲ್ಲಿ ಸರ್ವಜ್ಞನ ವಚನಗಳನ್ನು ಜಾನಪದೀಯ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆದಿರಲಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಈ ಮಹಾ ಪ್ರಬಂಧವನ್ನು ರಚಿಸುವುದಕ್ಕಾಗಿ ಮೇಲಿನ ಕೃತಿಗಳ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

## ೧.೪. ಈವರೆಗಿನ ಕೃತಿಗಳು :

ಈಗಾಗಲೇ ಸರ್ವಜ್ಞನನ್ನು ಕುರಿತಾಗಿ ಹೇರಳವಾದ ಬರಹಳಗಳುಮೂಡಿಬಂದಿವೆ. ಅವುಗಳಲ್ಲಿ ಕೆಲವು ಕೃತಿಗಳನ್ನು ಇಲ್ಲಿ ನೋಡಬಹುದಾಗಿದೆ. ಡಾ॥ ಎಂ. ಅಕಬರ ಅಲಿ ಅವರ ಕೃತಿಯಾದ 'ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ' ಇದರಲ್ಲಿ ಏಳು ಅಧ್ಯಾಯಗಳಿವೆ. ಇಲ್ಲಿ ಸರ್ವಜ್ಞನ ಕಾಲ, ದೇಶದ ವಿಚಾರ, ಜನ್ಮ ವೃತ್ತಾಂತ, ಅಂಕಿತದ ಸಮಸ್ಯೆ, ಪ್ರಕ್ಷಿಪ್ತಗಳ ಪ್ರಶ್ನೆಯ ಬಗೆಗೆ ವಿವರಿಸಲಾಗಿದೆ. ಕವಿ ಬದುಕಿನ ಗುರು-ಗೆರೆ, ಆತನ ವ್ಯಕ್ತಿತ್ವದ ವಿಕಾಸವನ್ನು ತಿಳಿಸಲಾಗಿದೆ. ಸರ್ವಜ್ಞ ತನ್ನ ತಂದೆ-ತಾಯಿಯವರನ್ನು ತಿರಸ್ಕರಿಸಲು ಕಾರಣವೇನೆಂಬುದನ್ನು ಅವಲೋಕಿಸುತ್ತಾ ವೀರಶೈವ ಮತದ ಸಂಸ್ಕಾರದ ಬಗೆಗೆ ತಿಳಿಸಲಾಗಿದೆ. ಸರ್ವಜ್ಞನ ಸಮಾಜ ವಿಮರ್ಶೆಯ ಹಿನ್ನೆಲೆಯಲ್ಲಿ ಆತನ ಕಾಲದಲ್ಲಿದ್ದ ಜೈನ, ಮುಸ್ಲಿಂ ಮುಂತಾದ ವಿಚಾರಗಳ ಬಗೆಗೆ ಚರ್ಚಿಸಲಾಗಿದೆ.

ಆತನ ಜೀವನ ಜಿಜ್ಞಾಸೆಯಲ್ಲಿ ; ಜೀವ-ಜಗತ್ತು, ಇಹ-ಪರ, ವೈರಾಗ್ಯದ ವ್ರತ-ಸಂಸಾರದ ಪಥ ಮುಂತಾದ ಅಂಶಗಳನ್ನಿಟ್ಟುಕೊಂಡು ಸಂಕ್ಷಿಪ್ತವಾಗಿ ವಿವರಣೆ ನೀಡಲಾಗಿದೆ. ಆತನ ವಚನಗಳಲ್ಲಿ ಕಂಡು ಬರುವ ಉಪಮೆ, ರೂಪಕಗಳ ಬಗೆಗೆ ವಿವರಿಸಿರುವುದಲ್ಲದೆ, ವೇಮನ-ತಿರುವಳ್ಳುವರ್ ಅವರ ಬಗೆಗೆ ತೌಲನಿಕವಾಗಿ ವಿಮರ್ಶಿಸಲಾಗಿದೆ.

ಹಾಗೆಯೇ ಡಾ|| ಬಿ.ಕೆ. ಹೊಸಮಠ ಅವರ ಕೃತಿಯಾದ ''ಸರ್ವಜ್ಞ: ಜೀವನ ಕೃತಿಗಳು ಹಾಗೂ ಸಂದೇಶ''. ಇದರಲ್ಲಿ ಮೂರು ಭಾಗಗಳಿವೆ. ಮೊದಲ ಭಾಗದಲ್ಲಿ ಸರ್ವಜ್ಞನ ಜನ್ಮ ವೃತ್ತಾಂತದ ಬಗೆಗೆ ತಿಳಿಸಲಾಗಿದೆ. ಸರ್ವಜ್ಞರೆಷ್ಟು ಮಂದಿ ? ನಿಜವಾಗಿ ಸರ್ವಜ್ಞ ಎಂಬುದು ಆತನ ಹೆಸರೇ ? ಈ ಎಲ್ಲದರ ಜಿಜ್ಞಾಸೆಯನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ. ಆತನ ಗುರು, ಮತ, ರೂಪ, ವೇಷ, ಸ್ವಭಾವ ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ಎರಡನೆಯ ಭಾಗದಲ್ಲಿ ಸರ್ವಜ್ಞನಿಗೆ ಸಂಬಂಧಿಸಿದ ಹಸ್ತಪ್ರತಿಗಳು, ಮುದ್ರಣ ಪ್ರತಿಗಳಲ್ಲಿ ಇರುವ ವಿವಿಧ ವಿದ್ವಾಂಸರುಗಳೊಂದಿಗೆ ಕ್ರೋಢೀ ಕರಿಸಲಾಗಿದೆ. ಸರ್ವಜ್ಞನಿಗೆ ಸಂಬಂಧಿಸಿದ ಪಾರಮಾರ್ಥಿಕ ಪದ್ಯಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಜ್ಞಾನ ಹಾಗೂ ಯೋಗ ಪದ್ಧತಿಗಳನ್ನು ಗಮನಿಸಲಾಗಿದೆ. ಕೊನೆಯ ಭಾಗದಲ್ಲಿ ; ಜಗತ್ತು ತಲ್ಲಣಗೊಳ್ಳುತ್ತಿರುವ ಸಂದರ್ಭದಲ್ಲಿ ಆತನ ವಚನಗಳು ಎಷ್ಟು ಪ್ರಸ್ತುತವೆಂಬುದನ್ನು ತಿಳಿಯ ಪಡಿಸಲಾಗಿದೆ.

ಮೂಲ ವಚನ ಸಂಗ್ರಹಕಾರರಾದ ಶ್ರೀ ಉತ್ತಂಗಿ ಚನ್ನಪ್ಪನವರ ನಂತರ ಅನೇಕ ಮಹನೀಯರು ಸರ್ವಜ್ಞನ ವಚನಗಳನ್ನು ಕುರಿತು ನಾನಾ ವಿಷಯಗಳಿಗೆ ಸಂಬಂಧಿಸಿದಂತೆ ಕೃತಿಗಳನ್ನು ಪ್ರಕಟಿಸಿದ್ದಾರೆ. ಆ ಕೃತಿಗಳ ಶೀರ್ಷಿಕೆಗಳು ಈ ರೀತಿ ಇವೆ. ಸರ್ವಜ್ಞನ ವಚನಾದಿ, ಸರ್ವಜ್ಞ ಸಂಪದ, ಸರ್ವಜ್ಞನ ವಚನಗಳು, ಸಟೀಕಾ ಸರ್ವಜ್ಞನ ವಚನಗಳು, ಸರ್ವಜ್ಞಮೂರ್ತಿಯ ವಚನಗಳು, ಪರಮಾರ್ಥ ವಚನಗಳು ಮುಂತಾದವುಗಳ ವಚನ ಸಂಗ್ರಹಗಳನ್ನು ಹೆಸರಿಸಬಹುದು.

ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಅನೇಕ ವಿಷಯಗಳನ್ನಿಟ್ಟುಕೊಂಡು ಸವಿವರವಾಗಿ ಚರ್ಚಿಸಿರುವ ಅನೇಕ ಕೃತಿಗಳು ಈಗಾಗಲೇ ಪ್ರಕಟಗೊಂಡಿವೆ. ಉದಾಹರಣೆಗೆ; ಸರ್ವಜ್ಞನ ದೃಷ್ಟಿಯಲ್ಲಿ ಹೆಣ್ಣು ಹೆಣ್ಣು ಹೆಣ್ಣು, ಹೆಣ್ಣು ಸರ್ವಜ್ಞನ ದೃಷ್ಟಿಯಲ್ಲಿ, ಸರ್ವಜ್ಞನ ವಚನಗಳಲ್ಲಿ ರಾಜಕೀಯ ಪ್ರಜ್ಞೆ, ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ವೇಮನ ಮತ್ತು ಸರ್ವಜ್ಞ, ಸರ್ವಜ್ಞನ ಸಂದೇಶ, ಸರ್ವಜ್ಞ;ಜೀವನ ಹಾಗೂ ಕಾವ್ಯ ಮೊದಲಾದ ಚಿಕ್ಕ ಕೃತಿಗಳನ್ನು ಹೆಸರಿಸಬಹುದು.

ಈಗಾಗಲೇ ಸರ್ವಜ್ಞನ ವಚಗಳಲ್ಲಿ ಕಂಡುಬರುವ ಪ್ರೇರಣೆ-ಧೋರಣೆಗಳ ಬಗೆಗೆ ಬರೆದಿರುವ ಲೇಖನಗಳ ಶೀರ್ಷಿಕೆಗಳನ್ನು ಈ ಮುಂದಿನ ಕೆಲ ಸಂಚಿಕೆಗಳಲ್ಲಿ ನೋಡಲಾಗಿದೆ. ಉದಾಹರಣೆಗೆ; ಪ್ರಬುದ್ಧ ಕರ್ನಾಟಕ, ಬಸವ ಬೆಳಗು, ಶರಣ, ಶಿವಾನುಭವ, ಪರಂಜ್ಯೋತಿ, ಬಸವಪಥ, ಪ್ರಸಾದ, ಸಿದ್ಧಗಂಗ, ತರಳಬಾಳು ಮುಂತಾದ ಸಂಚಿಕೆಗಳಲ್ಲಿ ಅನೇಕ ಲೇಖನಗಳು ಪ್ರಕಟವಾಗಿವೆ.

ಸರ್ವಜ್ಞನ ಒಟ್ಟಾರೆ ವ್ಯಕ್ತಿತ್ವ ಕುರಿತಾಗಿ ಅನೇಕ ಜನ ಕವಿಗಳು ಕವನಗಳನ್ನು, ಚುಟುಕುಗಳನ್ನು ಬರೆದಿರುವುದು ಕಂಡುಬರುತ್ತದೆ. ಉದಾದಹರಣೆಗೆ ; ಡಾ.ಸಿ.ಪಿ.ಕೆ., ಡಾ. ಡಿ. ಎಸ್. ಕರ್ಕಿ, ಡಾ. ಬುದ್ಧಣ್ಣ ಹಿಂಗಮಿರೆ, ಡಾ. ಸೋಮಶೇಖರ್ ಇಮ್ರಾಪುರ್, ಡಾ. ಶೈಲಜಾ ಉಡಚಣ, ಕಲಾಶೇಖರ್, ಭುಜೇಂದ್ರ ಮಹೇಶ್ ವಾಡಿ, ಹೆಚ್. ಎಸ್. ಭೀಮನಗೌಡ ಮುಂತಾದವರನ್ನು ಹೆಸರಿಸಬಹುದು.

ಈ ಮೇಲಿನ ಕೃತಿಗಳನ್ನು ನೋಡಿದಾಗ ಸರ್ವಜ್ಞನನ್ನು ಜಾನಪದೀಯ ಹಿನ್ನೆಲೆಯಲ್ಲಿ ನೋಡಿರುವ ವಿಷಯ ಕಂಡುಬರುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ಈ ಕೊರತೆಯನ್ನು ನೀಗಿಸಲು ಸರ್ವಜ್ಞನ ವಚನಗಳನ್ನಿಟ್ಟುಕೊಂಡು ಜಾನಪದ ಅಂಶಗಳನ್ನು ಹುಡುಕುವ ಅಧ್ಯಯನ ಮಾಡುವುದರ ಮುಖಾಂತರ ಈ ಮಹಾಪ್ರಬಂಧವನ್ನು ಸಿದ್ಧಗೊಳಿಸಲು ಪ್ರಯತ್ನಿಸಲಾಗಿದೆ.

# ಅಧ್ಯಾಯ - ೨

# ಜಾನಪದ ಅಂಶಗಳನ್ನೊಳಗೊಂಡ ಶಿಷ್ಟ ಕಾವ್ಯ

## ೨.೧. ಪ್ರವೇಶ :

ಸಾವಿರಾರು ಜೀವ ಸಂಕುಲಗಳ ನಡುವೆ ಮನುಷ್ಯ ಸೃಷ್ಟಿಯಾದ. ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಜನಸಮುದಾಯವು ತಳವೂರಿದ್ದೇ ಜನಪದವೆನ್ನಬಹುದು. ಜನರಿಗೆ ಸಂಬಂಧಪಟ್ಟದ್ದೆಲ್ಲವೂ ಜನಪದ. ಈಗ English ನ 'FoLK' ಶಬ್ದಕ್ಕೆ ಸಮಾನಾರ್ಥಕವಾಗಿ ಕನ್ನಡದಲ್ಲಿ ಜನಪದ ಎಂಬುದು ಬಹಳ ವರ್ಷಗಳಿಂದ ಚಲಾವಣೆಗೆ ಬಂದಿದೆ. ಜನಪದ ಶಬ್ದ ಸರಳವೂ ಹೌದು, ಸಂಕೀರ್ಣವೂ ಹೌದು. ಇದರಲ್ಲಿ ಜನ, ಜನರ ಭಾಷೆ, ಅವರ ಸ್ಥಳ ಅಥಾವ ದೇಶ, ಜಾತಿ-ಪಂಗಡ, ಆಚಾರ-ವಿಚಾರ, ಕಲೆ-ಸಾಹಿತ್ಯ ಮೊದಲಾದವು ಅಡಕವಾಗಿವೆ. ಜನಪದ ನಿಂತ ನೀರಲ್ಲ. ಸ್ವಾರ್ಥಮೂಲವಾದದ್ದೂ ಅಲ್ಲ, ಸಂಚಲನೆ, ಪರಿವರ್ತನೆ , ಸ್ವೀಕಾರ, ಕೊಡುಕೊಡೆ ಅದರ ಮೂಲ ಮಂತ್ರವಾಗಿದೆ. ಜನಪದದ ವಿಕಾಸ ರೂಪವಾದ ಶಿಷ್ಟಪದ ವಿಜೃಂಭಿಸಿದಾಗ ಜಾನಪದ ಹಿಂದೆ ಸರಿದರೂ, ತನ್ನ ಸಂಪೂರ್ಣ ಅಸ್ಥಿತ್ವವನ್ನು ಅಳಿಸಿಕೊಳ್ಳುವುದಿಲ್ಲ. ಜನಪದ ಎಂಬ ಶಬ್ದಕ್ಕೆ ಹಳ್ಳಿಗಾಡು ಎಂದು ವಾಚ್ಯರ್ಥವಿದೆ. ಹಳ್ಳಿಗಾಡಿನ ಜನತೆ, ಪ್ರಾಂತದ ಜನಾಂಗ ಎಂಬ ಲಕ್ಷಾರ್ಥ ಪಡೆದರೂ, ಇದು ಪ್ರಾಚೀನ ಸಾಹಿತ್ಯದಲ್ಲಿ ಬಳಕೆಯಾಗಿದೆ. '' ಈ ಜನಪದ ತದ್ಧಿತ ವಿಶೇಷಣ ರೂಪವೇ ಜಾನಪದ '' (ಮಾರ್ಗ-೨- ಪು.೪೪೫)ಎಂದು ಹೇಳಬಹುದಾಗಿದೆ.

''ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಜಾನಪದ ಸಾಹಿತ್ಯವಿದೆ. ಆ ಸಾಹಿತ್ಯದ ಮೂಲಕ ಅಲ್ಲಿಯ ಜನರ ಸಂಸ್ಕೃತಿಯನ್ನರಿಯಬಹುದಾಗಿದೆ. ಅಲ್ಲದೆ ಜೀವನವು ಅರ್ಥ ಸೃಷ್ಟಿ, ಸಾಹಿತ್ಯವು ಶಬ್ದ ಸೃಷ್ಟಿ, ಜೀವನದ ಅರ್ಥವನ್ನು ಸಾಹಿತ್ಯವು ಶಬ್ದಗಳಲ್ಲಿ ಮೂಡಿಸುವುದು'' ಎಂಬ ಮಾತನ್ನು ಶಾಂತಾದೇವಿ ಮಾಳವಾಡರು ತುಂಬಾ ಮಾರ್ಮಿಕಾವಾಗಿ ಹೇಳಿದ್ದಾರೆ( ಜಾನಪದ ಸಾಹಿತ್ಯದಲ್ಲಿ ಶರಣರು, ಪು.೭).

ಪ್ರಪಂಚದ ಪ್ರತಿಯೊಂದು ದೇಶದಲ್ಲಿಯೂ ನಾಗರೀಕತೆಯ ಪ್ರಭಾವಕೊಳ್ಳಗಾಗದ, ಸಂಸ್ಕೃತರಾಗದ, ಅಶಿಕ್ಷಿತ ಜನಾಂಗಗಳಿರುತ್ತವೆ. ಅದಕ್ಕೆ ತನ್ನದೇ ಆದ ರೂಢಿ, ಸಂಪ್ರದಾಯಗಳಿರುತ್ತವೆ. ರೀತಿ-ನೀತಿ, ವಿಧಿ-ನಿಷೇಧಗಳಿರುತ್ತವೆ. ಕಥೆ, ಹಾಡು, ಒಡಪು, ಒಗಟು, ಗಾದೆ, ಯಕ್ಷಗಾನ, ಬಯಲಾಟ, ಸಣ್ಣಾಟ, ಹಗರಣಗಳಿರುತ್ತವೆ. ವೈದ್ಯ, ಮಾಟ, ಮಂತ್ರಗಳೂ ಇರುತ್ತವೆ. ಇವೆಲ್ಲ ಗ್ರಂಥಸ್ಥವಾಗದೇ ಉಳಿದಿರುವ ಬಾಯಿಂದ ಬಾಯಿಗೆ ಹರಿದು ಬರುವಂತಹ ಕ್ರಿಯೆಗೆ ಜಾನಪದವೆನ್ನಲಾಗಿದೆ. ಇದು ಜನಸಾಮಾನ್ಯರ ಸಮಸ್ತ ತಿಳುವಳಿಕೆಗಳನ್ನು ಒಳಗೊಂಡಿರುತ್ತದೆ (ಜಾನಪದ ಸಿಂಹಾವ ಲೋಕನ -ಪು.೧).

ಬಹುಪಾಲು ಅನಕ್ಷರಸ್ಥ ಜನ ಸಮೂಹದಿಂದಲೇ ತುಂಬಿರುತ್ತಿದ್ದ ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಜನತೆಯ ಸಮಗ್ರ ಅನುಭವ, ಆಲೋಚನೆಗಳ ಘನೀಭೂತ ಸ್ಥಿತಿಯ ಜಾನಪದವು- ನಿತ್ಯ ನಿರಂತರವಾಗಿ ತನ್ನ ಜೀವಂತಿಕೆಯನ್ನು ಕಂಠಸ್ಥ ಸಂಪ್ರದಾಯದ ಮೂಲಕ ಆಯಾಯ ಪ್ರದೇಶ, ಭಾಷೆ ಮತ್ತು ಜನಾಂಗದ ಜೀವಾಳದ ಹಿನ್ನೆಲೆಯಲ್ಲಿ ಉಳಿಸಿಕೊಳ್ಳುತ್ತಲೇ ಬರುತ್ತಿದೆ.

## ೨.೨. ಜಾನಪದ ಮತ್ತು ಶಿಷ್ಟ :

ಶಿಷ್ಟ ಸಾಹಿತ್ಯ ಅಕ್ಷರಸ್ಥರ ಸೃಷ್ಟಿಯಾದರೆ ಜಾನಪದ ಸಾಹಿತ್ಯ ಅನಕ್ಷರಸ್ಥರ ಸೃಜನಶೀಲ ಪ್ರತಿಭೆಯ ಅತೀ ಸಹಜವಾದ ಶಕ್ತ ಅಭಿವ್ಯಕ್ತಿ. ಶಿಷ್ಟ ಸಾಹಿತ್ಯ ಹುಟ್ಟುವ ಪೂರ್ವದಲ್ಲೇ ಆದಿಮಾನವರು ತಮ್ಮ ದೈನಂದಿನ ನೋವು ನಲಿವುಗಳನ್ನು, ಕ್ರಿಯೆ-ಪ್ರಕ್ರಿಯೆಗಳನ್ನು, ಅನಿಸಿಕೆ - ಅನುಭವಗಳನ್ನು, ಕನಸು-ಕಲ್ಪನೆಗಳನ್ನು ಮೌಖಿಕವಾಗಿ ಹಾಡುಗಳ ಮೂಲಕ, ಕಥೆಗಳ, ಗಾದೆ, ಒಗಟು, ಒಡಪುಗಳ ಮೂಲಕ ಒಬ್ಬರು ಮತ್ತೊಬ್ಬರಲ್ಲಿ ಹೇಳಿಕೊಂಡರು.

ಇದೇ ವಿಷಯ ಬಾಯಿಂದ ಬಾಯಿಗೆ ಅನೇಕರಲ್ಲಿ ಹರಿಯಲಾರಂಭಿಸತು. ಅಂದರೆ ಜನಪದರ ಒಳಸುಳಿ ಮತ್ತು ಸ್ವಭಾವಗಳು ಇದ್ದಕ್ಕಿದಂತೆ ಪ್ರಕಟಗೊಳ್ಳುವುದಿಲ್ಲ. ಅವುಗಳಿಗೆ ಒಂದು ಒಳ ಒತ್ತಡ ಇರುತ್ತದೆ. ಒಳ ಒತ್ತಡವನ್ನು ಪ್ರಚೋದಿಸುವಂತೆ ಹೊರ ಒತ್ತಡಗಳೂ ಇರುತ್ತವೆ. ಹೀಗೆ ಒಳ-ಹೊರ ಒತ್ತಡಗಳು ಒಂದು ಇತಿಹಾಸ ಜಾನಪದರ ಸ್ವಭಾವ, ಲಕ್ಷಣಗಳನ್ನು ನಿರ್ಧಿಷ್ಟ ವಿನ್ಯಾಸವನ್ನಾಗಿ ಮೂಡಿಸುತ್ತವೆ. ಇಂತಹ ಜನಪದ ವಿನ್ಯಾಸ ಕೇವಲ ಒಬ್ಬ ವ್ಯಕ್ತಿಯಾದ ಸಮೂಹದ್ದಾಗಿರುತ್ತದೆ. ಜನಪದರು ತಾವು ಬದುಕುತ್ತಿರುವ ಸುತ್ತಲಿನ ಸಮಾಜ ಮತ್ತು ಸಂಸ್ಕೃತಿಯಿಂದ ಪ್ರೇರಿತರಾಗಿರುತ್ತಾರೆ. ಏಕೆಂದರೆ ''ವ್ಯಕ್ತಿ, ಸಮಾಜ ಮತ್ತು ಸಂಸ್ಕೃತಿಯಿಂದ ಈ ಸಂಬಂಧಗಳು ಒಂದಕ್ಕೊಂದು ತುಂಬಾ ಗಾಢವಾದುದಾಗಿರುತ್ತವೆ''ಎಂದು ಹೇಳುವ ಬರಗೂರು ರಾಮಚಂದ್ರಪ್ಪನವರ ಮಾತು ಇಲ್ಲಿ ಪ್ರಸ್ತುತವೆನಿಸುತ್ತದೆ(ಸಂಸ್ಕೃತಿ- ಉಪ ಸಂಸ್ಕೃತಿ - ಪು. ೧೪೬).

ಭಾರತ ಜನಪದದ ತವರು. ಈ ದೇಶದಲ್ಲಿರುವಷ್ಟು ವೈವಿಧ್ಯಮಯ ಜಾನಪದ ಸಂಪತ್ತು ಬೇರೆ ಯಾವುದೇ ದೇಶದಲ್ಲಿಯೂ ಇಲ್ಲ. ಇದಕ್ಕೆ ಕಾರಣ: ಭಾರತವು ಹಲವು ಭೌಗೋಳಿಕ ಪರಿಸರಗಳ, ಹಲವು ಮತಗಳ, ಹಲವಾರು ಧರ್ಮಗಳ, ಅನೇಕ ಭಾಷೆ- ಉಪಭಾಷೆಗಳ ಸಂಗಮ ಸ್ಥಾನವೆನಿಸಿದೆ.

''ಹರಿಯ ಬಸುರಿನಲ್ಲಿ ಬ್ರಹ್ಮಾಂಡವಡಗಿರುವಂತೆ ಜಾನಪದ ಕುಕ್ಷಿಯಲ್ಲಿ ಜಗತ್ತೆಲ್ಲ ಹುದಿಗಿದೆ'' ಎಂದು ಜಾನಪದವನ್ನು ಕುರಿತು ದೇಜಗೌ ಅವರ ಅಭಿಪ್ರಾಯವನ್ನು ಮೆಚ್ಚತಕ್ಕದ್ದೆ (ಜಾನಪದ ಅಧ್ಯಯನ- ಪು. ೯). ಈ ಜಾನಪದ ಎಂಬುದು ಹೇಗೆ ಉತ್ಪತ್ತಿಯಾಯಿತು ? ಇದರ ಮೂಲ ಕರ್ತೃ ಯಾರೆಂಬುದಕ್ಕೆ ಒಂದು ಕುತೂಹಲಕರವಾದ ಕಥೆಯೊಂದನ್ನು ಡಾ.ಎನ್.ಆರ್. ನಾಯಕ್ ಅವರು ತಮ್ಮ ಜಾನಪದ ಸಿಂಹಾವಲೋಕನದಲ್ಲಿ ಹೀಗೆ ಹೇಳಿದ್ದಾರೆ ; '' ಬೃಹತ್ ಕಥೆಯ ಗುಣಾಢ್ಯನು ವಿಂಧ್ಯದಲ್ಲಿ ಸಂಪರ್ಕಿಸಿದ ಮಾನವೇತರ ಯಕ್ಷ, ರಾಕ್ಷಸ, ಪಿಶಾಚಿಗಳು ಇನ್ನಾರು ಆಗಿರದೇ ಸಂಸ್ಕಾರ ಹೀನ ಕಾಡಾಡಿಗಳಾಗಿದ್ದರಂತೆ. ಗುಣಾಢ್ಯನು ಈ ಕಾಡಾಡಿಗಳ ಪೈಶಾಚಿಕ ಭಾಷೆಯನ್ನು ಕಲಿತನಂತೆ, ಕಾಣಭೂತಿಯೆಂಬ(ನಿರಕ್ಷರಿ?) ಪಿಶಾಚಿಯಿಂದ ವರರುಚಿಯ ಕಥಾ ಸಮೂಹವನ್ನು ಇನ್ನಿತರ ವಿಂಧ್ಯವಾಸಿ ಕಾಡಾಡಿಗಳ ನಾಲಿಗೆಯ ಮೇಲಿದ್ದ ಲಕ್ಷಾಂತರ ಕಥೆಗಳನ್ನು ಸಂಗ್ರಹಿಸಿ, ಬೃಹತ್ ಕಥಾ ಸಂಹಿತೆಯನ್ನು ಸಿದ್ಧ ಪಡಿಸಿದನಂತೆ. ಏಳು ಲಕ್ಷ ಶ್ಲೋಕಗಳಿಂದ, ಏಳು ಸಂಪುಟದ ಗಾತ್ರ ಹಾಗೂ ವ್ಯಾಪ್ತಿಯನ್ನು ಪಡೆದ

ಗ್ರಂಥ ಇದಾಗಿತ್ತಂತೆ. ಸಂಸ್ಕಾರಹೀನ ಪೈಶಾಚಿಕ ಭಾಷೆಯಲ್ಲಿದ್ದುದರಿಂದ ಶಾತವಾಹನ ದೊರೆ ಈ ಗ್ರಂಥಕ್ಕೆ ಗೌರವ ನೀಡಲಿಲ್ಲವಂತೆ. ರಾಜ ಮಾನ್ಯತೆ ದೊರಕದ ಕಾರಣ ವಿಹ್ವಲಗೊಂಡ ಮನಸ್ಸಿನವನಾಗಿ ಎಲ್ಲಾ ಕಥೆಗಳನ್ನು ಒಂದೊಂದಾಗಿ ತನ್ನ ಶಿಷ್ಯರಿಗೆ ಓದಿ,ಹೇಳಿ ಇವುಗಳನ್ನು ಮತ್ತೊಬ್ಬರಿಗೆ ತಿಳಿಸಿರೆಂದು ಹೇಳಿದನಂತೆ. ಈ ಗುಣಾಢ್ಯನ ಕಥೆಯೇ ಭಾರತದ ಪ್ರಪ್ರಥಮ ಜಾನಪದ ಕಥೆಗಳ ಸಂಕಲನ. ಈತನೇ ಪ್ರಥಮ ಜಾನಪದ ಸಂಕಲನಕಾರ ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ.

ನಾಗರಿಕತೆಯ ಕಾಲದಲ್ಲಿ ಇತಿಹಾಸ ಪುರಾಣಗಳ ಸಾರವನ್ನು ಜನರ ಮಟ್ಟಕ್ಕಿಳಿಸುವುದು ಚರಿತ್ರೆಯಲ್ಲಿ ನಡೆದ, ಮರೆಯಲಾಗದ ಸಂಗತಿಗಳನ್ನು ಜನರ ನೆನಪಿನಲ್ಲಿ ನಿಲ್ಲಿಸುವುದು,ಬದುಕಿನ ಮೌಲ್ಯಗಳನ್ನು ತಲೆತಲಾಂತರವಾಗಿ ಸಾಗಿಸುವುದು ಜಾನಪದ ಸಾಹಿತ್ಯದ ಕೆಲಸವಾಗಿದೆ.

ಜನರಿಂದ ಹುಟ್ಟಿ, ಜನರಲ್ಲಿಯೇ ಪಳಗಿ, ಜನರ ಪ್ರೇಮವನ್ನು ಸೂರೆಗೊಂಡ , ಜನರ ಜೀವನದ ಸಾರವನ್ನು ಹೆಂಗಸರ ಮಧುರ ಕಂಠದ ಗಾನವನ್ನೂ ಸುರಿಸುವ ಈ ಸಾಹಿತ್ಯವನ್ನೂ ಕೆಲ ಒಣ ಕವಿಗಳು, ಅಹಂಕಾರ ಮುಗ್ಧರಾದ ಪಂಡಿತರೂ ಅಲ್ಲಗಳೆಯಬಹುದೇ ಹೊರತು ನಿಸರ್ಗ ಕವಿಗಳು ರಸಜ್ಞರು, ಜನತಾವಾತ್ಸಲ್ಯರೂ ಎಂದಿಗೂ ತಿರಸ್ಕರಿಸಲಾರರು ಎಂಬುದಾಗಿ ಶ್ರೀಯವರು ನುಡಿದಿದ್ದಾರೆ (ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಪು. ೨೩)

ಶಿಷ್ಟ ಸಾಹಿತ್ಯದಲ್ಲಿ ಬಳಕೆಯಾಗಿರುವ ಜಾನಪದ ಅಂಶಗಳನ್ನು ಅನ್ವೇಷಿಸುವ , ವಿಶ್ಲೇಷಿಸುವ , ಸ್ಪಷ್ಟ ಪಡಿಸುವ, ಸಂಗ್ರಹಿಸುವ ಹಾಗೂ ಸಂಯೋಜಿಸುವ ಕಾರ್ಯ ಅನಿವಾರ್ಯವಾಗಿ ನಡೆಯಬೇಕಿದೆ. ಇದಕ್ಕೆ ಕಾರಣವೇನೆಂದರೆ, '' ಇತಿಹಾಸ ಬರೆಯುವ ಪ್ರಸಂಗದಲ್ಲಿ ಲಿಖಿತ ಸಾಮಾಗ್ರಿಗಳಾದ ಶಾಸನಾದಿಗಳಿಗೆ ಪ್ರಧಾನ ಸ್ಥಾನವನ್ನೂ , ಕಾವ್ಯಾದಿಗಳಿಗೆ ಗೌಣಸ್ಥಾನವನ್ನು ಕೊಡುತ್ತಿರುವ ಕೆಲ ಭಾರತೀಯ ಇತಿಹಾಸಕಾರರು ಅಲಿಖಿತವಾದ ಜಾನಪದವನ್ನು ತೀರ ಉಪೇಕ್ಷಿಸುತ್ತಾ ಬಂದಿದ್ದಾರೆ. ನಿರಕ್ಷರಿಗಳ ಸಂತಾನವಾದ ಭಾರತದಲ್ಲಿ ಲಿಖಿತರೂಪದಲ್ಲಿ ಉಳಿದು ಬಂದಿರುವ ಆಧಾರವಾದ ಅನೇಕ ಸಾಮಾಗ್ರಿಗಳು ನೂರಕ್ಕೆ ಐದರಷ್ಟು ; ಅಲಿಖಿತ ರೂಪದಲ್ಲಿ ಉಳಿದು ಬಂದಿರುವ ಆಧಾರ ಸಾಮಾಗ್ರಿಗಳು ತೊಂಭತ್ತೈದರಷ್ಟು ಇದೆ. ಹೀಗಿರುವಾಗ ಇತಿಹಾಸ ರಚನಾಕಾರ್ಯದಲ್ಲಿ ಅಲಿಖಿತ ಸಾಮಾಗ್ರಿಯಾದ ಜಾನಪದವನ್ನು ಅಲಕ್ಷಿಸುವುದು ಪ್ರಮಾದವಾಗುತ್ತದೆ. ಇದನ್ನು ಮನಗಂಡು ಇತಿಹಾಸಕಾರರ ರಚನಾಶಾಸ್ತ್ರವು ಇಂದು ಲಿಖಿತದೊಂದಿಗೆ ಅಲಿಖಿತ ಸಾಮಾಗ್ರಿಯನ್ನು ಬಳಸಿಕೊಂಡು, ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಲಿರುವುದು ಸರಿಯಾದ ಕ್ರಮವೆಂದು ಹೇಳಬೇಕು (ಮಾರ್ಗ: - ೨ ಪು. ೩೨೯).

ಗ್ರಾಮಾಂತರ ಪ್ರದೇಶಗಳನ್ನು ಪ್ರವೇಶಿಸಿದ ವಿದ್ಯೆಯು ಹಾಗೂ ಆಧುನಿಕ ನಾಗಿರಿಕತೆಯು ತನ್ನ ತೋಳನ್ನು ಕ್ರಮಕ್ರಮವಾಗಿ ಚಾಚ ತೊಡಗುವಾಗ ಜಾನಪದ ತನ್ನ ಬಲವನ್ನು ಕಳೆದುಕೊಳ್ಳುವ ಸಾಧ್ಯತೆಗಳಿದ್ದರೂ ಇನ್ನು ಸ್ಪಷ್ಟವಾದ ರೀತಿಯಲ್ಲಿಯೇ ಸಂಪ್ರದಾಯಗಳು , ನಂಬಿಕೆಗಳು, ಲಾವಣಿ, ವೈದ್ಯ ಮಾಟ-ಮಂತ್ರಗಳು ಜೀವಂತವಾಗಿಯೇ ಉಳಿದಿವೆ. ಎನ್ನಬಹುದು. (ದಕ್ಷಿಣ ಕರ್ನಾಟಕದ ಜಾನಪದ

ಕಾವ್ಯ ಪ್ರಕಾರಗಳು : - ಪು. ೫) ನಿಜವಾಗಿಯೂ ಜಾನಪದವು ನಮ್ಮ ಬದುಕಿನಿಂದ ಬೇರೆಯಾಗಿ ನಿಂತಿಲ್ಲ, ಅದು ಜೀವನ ವಿರೋಧಿಯಾಗಿಲ್ಲ, ಯಾಕೆಂದರೆ ನಿಜವಾದ ಬದುಕಿನ ದಾರಿಯನ್ನು ಮತ್ತು ಅದರ ನಿಲುವನ್ನು ನಿಚ್ಚಳಗೊಳಿಸುವುದೇ ಅದರ ಕೆಲಸ. ಜಾನಪದದ ಕಲೆ, ಸಾಹಿತ್ಯ, ಹಾಡು, ಕಥೆ ಮುಂತಾದವುಗಳು ವ್ಯಕ್ತಿಯ ಒಳ ಅರಳುವಿಕೆಯ ಮೂಲಕ ಅವನ ಹೊರವಲಯವನ್ನು ಹಿಗ್ಗಿಸುತ್ತಿವೆ. ಮನುಷ್ಯ ಮನುಷ್ಯ ಸಂಬಂಧಗಳ ನಡುವಿರುವ ಬೇಲಿಯನ್ನು ಕಿತ್ತೆಸೆದು ಬಾಂಧವ್ಯವನ್ನು ಬೆಸೆಯುವ ಕೆಲಸವೇ ಇದರದು.

ಇಂಗ್ಲೀಷಿನ Folk literature ಎಂಬ ಶಬ್ದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಜನಪದ ಸಾಹಿತ್ಯ ಎಂದು ಹಾಗೂ Folk ಎಂದರೆ ಜನಪದ ಮತ್ತು Folklore ಎಂದರೆ ಜಾನಪದ ಎಂದು ವಿದ್ವಾಂಸರ ಗಮನಕ್ಕೆ ತಂದುಕೊಟ್ಟ ಶ್ರೇಯಸ್ಸು ಡಾ. ಹಾಮಾನಾರವರದು. ಜಾನಪದ ತಜ್ಞರಾಗಿದ್ದ ಇವರು ಜನಪದ ಅಧ್ಯಯನಕ್ಕೆ ಹೊಸ ತಿರುವು ಕೊಟ್ಟಿರುವರು. ಜಾನಪದ ಎಂದರೆ ಜನಪದ ಸಾಹಿತ್ಯವಷ್ಟೇ ಅಲ್ಲ. ಅದರ ಮಹತ್ವ ಇನ್ನು ದೊಡ್ಡದು ಎಂಬುದನ್ನು ವೈಜ್ಞಾನಿಕವಾಗಿ ತೋರಿಸಿಕೊಟ್ಟ ಕೀರ್ತಿ ಹಾಮಾನಾ ಅವರದು. (ಜಾನಪದ ಸ್ವರೂಪ :ಪು. ೭೭) ಜಾನಪದ ಸಮವಸ್ತ್ರ ಬೌದ್ಧಿಕ ಹಾಗೂ ಭೌತಿಕ ಜೀವನ ವಿಧಾನವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ತೋರುವುದೇ ಜಾನಪದ ವಿಜ್ಞಾನ (Science litreture) ಎನ್ನಬಹುದು. ಪಾಟರ್ ಎಂಬಾತ ಜಾನಪದದ ಬಗೆಗೆ ಹೀಗೆ ಹೇಳುತ್ತಾನೆ. '' ಇದು ಒಬ್ಬ ವ್ಯಕ್ತಿಯ ಬದುಕು ಮತ್ತು ಅವನ ಸುತ್ತಲಿನ ಸಮಾಜವನ್ನು ಒಳಗೊಂಡಿರುತ್ತದೆ. ಗತಕಾಲದ ನೆನಪುಗಳ ಜೀವನದಲ್ಲಿ ಮನುಷ್ಯರಿಗಿಲ್ಲದಿದ್ದರೆ ಆತನ ವರ್ತಮಾನ ಪರಿಪೂರ್ಣವಾಗಲಾರದು.

ಅದೇ ನಾಗರಿಕತೆ ಎಂಬ ಏಣಿಯ ಮೆಟ್ಟಿಲನ್ನು ಹತ್ತಿ ಮಾನವ ಜಾನಪದ ಸಂಪ್ರದಾಯವೆಂಬ ಕೆಳಗಿನ ನೆಲವನ್ನು ಒಮ್ಮೆ ತಿರುಗಿ ನೋಡಿದಾಗ ಅದರ ಗಟ್ಟಿಯಾದ ಪಳೆಯುಳಿಕೆಯ ಬಗ್ಗೆ ಅರ್ಥವಾಗುತ್ತದೆ'' ಎಂದಿದ್ದಾನೆ. ಒಂದು ಜನಾಂಗ ಅಥವಾ ಜನಸಮೂಹವನ್ನು 'ಜಾನಪದ' ಎಂದು ಕರೆಯಲಾಗುತ್ತದೆ. ಆಯಾ ದೇಶದಲ್ಲಿನ ಜನಾಂಗಗಳಿಗೆ ನಾಗರಿಕತೆಯ ಸಂಪರ್ಕವಿಲ್ಲದ್ದರಿಂದ ಅದರ ಪ್ರಭಾವವಿಲ್ಲದ್ದರಿಂದ ಅಜಗಜಾಂತರ ವ್ಯತ್ಯಾಸವುಂಟಾಯ್ತು. ಇಂತಹ ಜನಾಂಗಗಳಲ್ಲಿರುವ ಸಾಹಿತ್ಯವನ್ನು ಅಧ್ಯಯನ ಮಾಡುವುದೇ 'ಜಾನಪದ' ಎಂದಾಗುತ್ತದೆ. ಅಂದರೆ 'ಜನಪದ' ಒಂದು ಜನಾಂಗವನ್ನು ಸೂಚಿಸುವ ನಾಮಪದವಾದರೆ 'ಜಾನಪದ' ಅಂತಹ ಜನಾಂಗದ ಜೀವನ ವಿಧಾನವನ್ನು ಹೇಳುವ ಸಂಸ್ಕೃತಿಯಾಗಿದೆ. (ಹೊಸದಿಕ್ಕು :ಪು.೧೧) ಎಂದು ಹೇಳಬಹುದು.

ಒಬ್ಬ ವ್ಯಕ್ತಿ ಅಕ್ಷರದ ಅರಿವಿನಿಂದ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಾ ಸಾಗುತ್ತಾನೆ. ಹೀಗೆ ಅವನ ಜ್ಞಾನದ ಹಸಿವು ಹೆಚ್ಚಾದಂತೆ ನಾಗರಿಕನಾಗಿ ಪರಿವರ್ತನೆಗೊಳ್ಳತೊಡಗುತ್ತಾನೆ. ಆದರೆ ಪ್ರತಿಯೊಬ್ಬ ನಾಗರಿಕ(ಶಿಷ್ಟ)ವ್ಯಕ್ತಿಯ ಹಿಂದೆ ಜನಪದ ಸಂಸ್ಕೃತಿಯೆಂಬುದು ಅವನ ಜೀವನದಲ್ಲಿ ಹಾಸು ಹೊಕ್ಕಾಗಿರುತ್ತದೆ. ಜಾನಪದ ಅಧ್ಯಯನವನ್ನು ಬ್ರಿಟಿಷರು ಹುಟ್ಟು ಹಾಕಿದರು. ಅಮೆರಿಕದವರು ಅದನ್ನು ಬೆಳೆಸಿದರು. ೧೮೪೬ರಲ್ಲಿ ಡಬ್ಲ್ಯು.ಜೆ. ಥಾಮ್ಸ್ ಎಂಬ ವಿದ್ವಾಂಸ ವಿಶಾಲವಾದ ಅರ್ಥದಲ್ಲಿ

"Folklore" ಶಬ್ದವನ್ನು ಸೃಷ್ಟಿಸಿದ ಮೇಲೆ ಜಗತ್ತಿನ ವಿದ್ವಾಂಸರು ಈ ಶಬ್ದದ ಸೂತ್ರಪ್ರಾಯವಾದ ವ್ಯಾಖ್ಯೆಗೆ ಪ್ರಯತ್ನಿಸಿದರು. ಪ್ರಾತಿನಿಧಿಕವಾಗಿ ಕೆಲವು ವಿದ್ವಾಂಸರ ಕೆಲವು ವ್ಯಾಖ್ಯೆಗಳನ್ನು ಪರಿಭಾವಿಸಲಾಗಿದೆ.

ಜೋನಾಸ್ ಬೇಲೀಸ್ ಎಂಬ ವಿದ್ವಾಂಸರು "Folklore is not a Science about a folk, but the traditional folk Science and folk poetry" (ಜಾನಪದ, ಜನಪದವನ್ನು ಕುರಿತ ಜ್ಞಾನವಲ್ಲ, ಅದು ಪರಂಪರಾಗತ ಜನಪದ ವಿಜ್ಞಾನ ಮತ್ತು ಜನಪದ ಕಾವ್ಯ). (Standard Dictionary of folklre Mythalogy and Legend 1949 volume-1 (Edited) Maria leach: page 403).

ಮೇರಿಯಸ್ ಬಾರ್ಬೇ ಅವರು "ಗ್ರಂಥಸ್ಥ ಮೂಲಕ್ಕೆ , ಮುದ್ರಣಕ್ಕೆ, ಶಾಲಾ ಉಪಾಧ್ಯಾಯರಿಗೆ ಸಂಬಂಧ ಪಡದೇ ತಲೆಮಾರಿನಿಂದ ತಲೆಮಾರಿಗೆ, ಹಿರಿಯರಿಂದ ಕಿರಿಯರಿಗೆ, ನಿದರ್ಶನಗಳ ಮೂಲಕ ಅಥವಾ ಮಾತಿನ ಮೂಲಕ ಸಾಗಿಬರುವ ಹಿಂದಿನ ಜ್ಞಾನ, ಅನುಭವ ಜಾಣ್ಮೆ, ಕೌಶಲ, ಹವ್ಯಾಸ ಹಾಗೂ ಆಚರಣೆಗಳೆಲ್ಲಾ ಜಾನಪದ" ಎಂದು ಹೇಳಿದ್ದಾರೆ(ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು. ೫).

ಅದೇರೀತಿ ರಿಜರ್ಡ್ ಎಂ. ಡಾರ್ಸನ್‌ರವರು "ಜಾನಪದ ಭೂತಕಾಲದ ಪ್ರತಿಧ್ವನಿಯಾಗಿರುವಂತೆ, ವರ್ತಮಾನದ ಕಾಲದ ಕಸುವುಳ್ಳ ಧ್ವನಿಯೂ ಆಗಿದೆ". ಜಾನಪದ ಪರಿಕಲ್ಪನೆಯ ಬಗೆಗೆ ಸ್ಪಷ್ಟವಾಗಿ ತಿಳಿದುಕೊಂಡಿದ್ದ ಇವರ ಪ್ರಕಾರ ಜಾನಪದ ಜೀವಂತವಾದ, ಸ್ವತಂತ್ರವಾದ, ಪರಿಷ್ಕೃತವಾದ, ಅಧ್ಯಯನಕ್ಕೆ ಯೋಗ್ಯವಾದ, ಅತ್ಯಾಧುನಿಕವಾದ ಜ್ಞಾನದ ಕ್ಷೇತ್ರವಾಗಿದೆ ಎಂದಿದ್ದಾರೆ.

ಮತ್ತೊಬ್ಬ ವಿದ್ವಾಂಸರಾದ ಜಾರ್ಜ್ ಎಂ.ಫಾಸ್ಟರ್ ಅವರು "ಅಲಿಖಿತ ರೂಪದ ಸಾಹಿತ್ಯ ಶಿಕ್ಷಿತ ಜನಾಂಗದಲ್ಲಿರಲಿ, ಅಶಿಕ್ಷಿತ ಜನಾಂಗದಲ್ಲಿರಲಿ ಅದು ಅರ್ಥವಾದುದೇ" ಎಂದು ಹೇಳುತ್ತಾ, ಅದೇ ಜಾನಪದವೆಂದು ವ್ಯಕ್ತಪಡಿಸಿದ್ದಾರೆ (ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು. ೮).

ದೇ.ಜ.ಗೌ. ಅವರು ಜಾನಪದದ ಸಮಗ್ರ ಸ್ವರೂಪದ ಬಗೆಗೆ ಈ ರೀತಿ ತಿಳಿಸುತ್ತಾ; " ಜಾನಪದ ಸಂಪ್ರದಾಯ ಒಂದು ಜನಸಮುದಾಯದ ಸಮಷ್ಟಿ - ಸೃಷ್ಟಿ. ಸಾಮಾಜಿಕ ಜೀವನದ ಸಂಕೇತ, ರಾಷ್ಟ್ರೀಯ ಸಂಸ್ಕೃತಿಯ ತಾಯಿಬೇರು. ಅದು ಜನ ಸಾಮಾನ್ಯರ ಸ್ಮೃತಿಯೂ ಹೌದು, ಶೃತಿಯೂ ಹೌದು. ಅದು ಬಾಯಿಂದ ಬಾಯಿಗೆ, ಊರಿಂದೂರಿಗೆ, ಯುಗದಿಂದ ಯುಗಕ್ಕೆ ಹರಿದು ಬರುತ್ತದೆ(ಜಾನಪದ ಸಾಹಿತ್ಯ ಸಮೀಕ್ಷೆ) ಎಂದು ಜೀ.ಶಂಪ ವಿವರಿಸಿದ್ದಾರೆ. "ಜಾನಪದವು ಜನಪದರದ್ದಾಗಿದ್ದ ಜನಪದರಿಂದಲೇ ಜನಪದರಿಗಾಗಿ ಸೃಷ್ಟಿಯಾದಂತಹುದು" ಎಂದು ಡಾ. ಅಂಬಳಿಕೆ ಹಿರಿಯಣ್ಣ ಅವರು ಹೇಳಿದ್ದಾರೆ (ಜಾನಪದ ಕೆಲವು ವಿಚಾರಗಳು, ಪು. ೧೯).

ಜಾನಪದವೆಂಬುದುಕೇವಲ ಭೌತಿಕವಾದುದಲ್ಲ. ಆಂತರಂಗಿಕವಾದದ್ದು. ಅದು ಬದುಕಿನ ರೀತಿ-ನೀತಿಯನ್ನು ತಿಳಿಸುವ ಸಾಹಿತ್ಯ. ಕೇವಲ ಶಿಷ್ಟದಂತೆ ಪುಸ್ತಕದ ಬದನೆಕಾಯಿಯಲ್ಲ. ಬಾಯಿಂದ ಬಾಯಿಗೆ ನದಿಯ ನೀರಂತೆ ಹರಿದು ಬಂದಿರುವ-ಬರುತ್ತಿರುವ ಜೀವನದಿ. ದೈನಂದಿನ ಜೀವನದಲ್ಲಿ ಅಡಗಿ ಹಾಸುಹೊಕ್ಕಾಗಿದೆ. ಆದರೆ ಈಚೆಗೆ ಅಕ್ಷರ ಪರಂಪರೆ ಬೆಳೆದ ನಂತರ ಶಿಷ್ಟ ನಾಗರಿಕತೆ ಎಂಬ ಮಾತುಗಳು ಕೇಳಿಬರುತ್ತವೆ. ಅಂದರೆ ಅಕ್ಷರ ಪರಂಪರೆಗೆ ಸೇರದ ಈ ಜಾನಪದವು ತನ್ನದೇ ಆದ ಗಟ್ಟಿ ನಿಲುವನ್ನು ಈಗಾಗಲೇ ಕಂಡುಕೊಂಡಿದೆ.

ಮಾನವನಿಗೆ ಅಕ್ಷರ ಜ್ಞಾನ ಬರುವುದಕ್ಕಿಂತ ಮೊದಲೆ ಈ ಜಾನಪದವು ಜನ್ಮತಾಳಿದೆ (ಜಾನಪದ ಸಾಹಿತ್ಯದಲ್ಲಿ ಶರಣರು : ಪು-೨). ಈ ಜಾನಪದ ಸಾಹಿತ್ಯ ಎಲ್ಲ ಬಗೆಯ ಸಾಹಿತ್ಯಕ್ಕೆ ತಾಯಿಬೇರಾಗಿದೆ. ಹಳೆ ಬೇರು-ಹೊಸ ಚಿಗುರು ಪ್ರಕೃತಿಯ ನಿಯಮದಂತೆ ಜನಪದವೂ ನಿತ್ಯ ಕಾಲಚಕ್ರದಲ್ಲಿ ಚಲಿಸುತ್ತಿದೆ. '' ಜಾನಪದ ಸಾಹಿತ್ಯ ಏಳಂತಸ್ತಿನ ರಂಗ ಮಹಲಿನಲ್ಲಿ ಮಹಾರಾಣಿಯಂತೆ, ಉಯ್ಯಾಲೆಯನ್ನು ಆಡದೆ, ಕೇರಿ-ಕೇರಿಗಳಿಗೂ, ಮನೆ-ಮನೆಗೂ ಲಭ್ಯವಾಗಿರುವ ಗಂಗೆಯಂತೆ, ತಿಳಿಯಾಗಿರುವ ಸುಲಭ ಸಾಹಿತ್ಯ'' ಎಂದು ಪ್ರಸಿದ್ಧ ಜಾನಪದ ಸಾಹಿತಿ ಸಿಂಪಿ ಲಿಂಗಣ್ಣನವರ ಅಭಿಪ್ರಾಯವಾಗಿದೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ಜನಾಂಗಕ್ಕೆ ಒಂದೊಂದು ರೀತಿಯ 'ಜಾನಪದ' ಇರಲು ಸಾದ್ಯ. ಒಟ್ಟಾರೆ ಮನುಷ್ಯ ಎಲ್ಲೆಲ್ಲಿ ಇದ್ದಾನೆಯೋ ಅಲ್ಲಲ್ಲಿ ಜನಪದ ಇದ್ದೇ ಇರುತ್ತದೆ. ಇಂತಹ ಜನಪದ ಹುಟ್ಟುವುದಕ್ಕೆ ಮೂಲ ಕಾರಣ ಶ್ರಮ. ''ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿ ವಿಕಾಸವಾಗುತ್ತದೆ. (ಸಂಸ್ಕೃತಿ-ಉಪಸಂಸ್ಕೃತಿ :ಪು-೧೪೮) ಆ ಮೂಲಕ ಜಾನಪದವು ವಿಸ್ತಾರವಾಗುತ್ತಾ ಸಾಗುತ್ತದೆ.

ಎಷ್ಟೋಸಲ ಈ ಶಿಷ್ಟ ಮತ್ತು ಜಾನಪದ ಸಂಸ್ಕೃತಿಗಳ ನಡುವಣ ಗೆರೆಗಳನ್ನು ಕರಾರುವಕ್ಕಾಗಿ ಗುರುತಿಸಲು ಆಗುವುದಿಲ್ಲ. ಜನಪದ ಸಂಸ್ಕೃತಿಯ ಆವರಣದಲ್ಲಿಯೇ ಹುಟ್ಟಿ ಬೆಳೆದು, ಶಿಷ್ಟ ಸಂಸ್ಕೃತಿಯ ಪ್ರಬಲ ಸೆಳೆತಕ್ಕೆ ಒಳಗಾಗಿದ್ದು, ಅನೇಕರು ತಮ್ಮ ಬದುಕಿನಲ್ಲಿ ಹೊಸ ಸಾಮರಸ್ಯವೊಂದರ ಮೂಲಕ ಸಂಮಿಶ್ರ ಸಂಸ್ಕೃತಿಯನ್ನು ಸೃಷ್ಟಿಸಬಲ್ಲರು.(ಕಾಡುಗೊಲ್ಲರು ಜಾನಪದ ಒಂದು ಅಧ್ಯಯನ : ಪು.೨೦) ಯಾವ ಆಸ್ಥಾನದ ಕವಿಗಳಿಗೂ ಕಡಿಮೆ ಇಲ್ಲದ ಈ ಜನಪದರು ತಮ್ಮ ಹೆಸರನ್ನು ಎಲ್ಲಿಯೂ ಹೇಳಿಕೊಳ್ಳದೆ ಕಾಡು ಕುಸುಮದಂತೆ ಅರಳಿ ಪರಿಮಳವನ್ನು ಸೂಸಿದ್ದಾರೆ. ಇವರು ಯಾರನ್ನೂ ವೈಯಕ್ತಿಕವಾಗಿ ಹೊಗಳದೆ ದೇವರ, ಶರಣರ ಮೇಲೆ ಶ್ರದ್ಧಾ-ಭಕ್ತಿಗಳನ್ನಿರಿಸಿ ಸಹಜವಾಗಿ ಕಾವ್ಯವನ್ನು ಕಟ್ಟಿದ್ದಾರೆ. ಆದ್ದರಿಂದ ಅವರ ಸಾಹಿತ್ಯದಲ್ಲಿ ನಿಜವಾದ ಮಣ್ಣಿನ ವಾಸನೆ ಅಡಗಿದೆ.

''ಜಾನಪದ ಸಾಹಿತ್ಯವು ನಿರಾಭರಣ ಸುಂದರಿ. ಅದಕ್ಕೆ ಅಲಂಕಾರದ ಭಾರವಿಲ್ಲ, ಪರಂಪರೆಯ ಗುಲಾಮತನವಿಲ್ಲ, ಸಮಯಾದಿಗಳ ಜಂಜಾಟವಿಲ್ಲ, ಅನುಕರಣಗಳ ಮುರವತ್ತಿಲ್ಲ, ನಿತ್ಯ ನಿಸರ್ಗಕ್ಕೆ ಅದು ಸದಾ ಕಣ್ಣು ತೆರೆದಿದೆ. ಅದರಲ್ಲಿ ಸುಳಿದಾಡುತ್ತಿರುವ ಜನವಾಣಿ, ಕುಣಿದಾಡುತ್ತಿರುವ ಜನಜೀವನ, ಉಸಿರಾಡುತ್ತಿರುವುದು ನಮ್ಮ ಸಂಸ್ಕೃತಿ'' ಎಂದು ಗದ್ದಗಿಮಠರು ತಮ್ಮ ಜಾನಪದ ಗೀತೆಗಳ ಪುಸ್ತಕದಲ್ಲಿ ಹೇಳಿದ್ದಾರೆ.

ಶಿಷ್ಟ ಸಂಸ್ಕೃತಿಯಲ್ಲಿನ ಪ್ರತಿಯೊಂದು ಸಾಂಸ್ಕೃತಿಕ ಸೃಷ್ಟಿಯೂ ಸಹ ಮೇಲಿನಿಂದ ಹೇರಲ್ಪಟ್ಟದ್ದಾಗಿರುತ್ತದೆ. ರಾಜ,ಪುರೋಹಿತ,ರಾಜನೀತಿಜ್ಞಗಳಿಂದ ಈ ಶಿಷ್ಟ ಸಂಸ್ಕೃತಿಯೂ ನಿಯಂತ್ರಿಸಲ್ಪಟ್ಟು ವ್ಯಕ್ತಿಗಳನ್ನು ತನ್ನ ಆವರಣಕ್ಕೆ ಸೆಳೆದುಕೊಳ್ಳುತ್ತಿರುತ್ತದೆ. ಆದರೆ ಜನಪದ ಸಂಸ್ಕೃತಿಯೂ ತನ್ನ ಒಟ್ಟು ಸಮುದಾಯದ ಮೂಲಕ ಸ್ವೀಕರಿಸಿದ ಸಂಪ್ರದಾಯ, ನಂಬಿಕೆ, ಹಾಡು, ಕುಶಲಕೈಗಾರಿಕೆ ಮುಂತಾದ ಅರಿವಿನ ವ್ಯಾಪ್ತಿಯಲ್ಲಿ ವ್ಯಕ್ತಿಯನ್ನು ಪಳಗಿಸುತ್ತಿರುತ್ತದೆ. ಎಷ್ಟೋವೇಳೆ ನಮಗೆ ಶಿಷ್ಟ ರಚನೆಗಳು, ಅಭಿವ್ಯಕ್ತಿಗಳು ಮತ್ತು ಜನಪದ ಕಲಾತ್ಮಕ ಅಭಿವ್ಯಕ್ತಿಗಳ ನಡುವೆ ಸ್ಪಷ್ಟಗೆರೆ ಎಳೆಯಲು ಆಗುವುದೇ ಇಲ್ಲ. ''ಜಾನಪದದ ಸಾಹಿತ್ಯ ರೂಪಕಗಳು ಶಿಷ್ಟ ಸಾಹಿತ್ಯ ರೂಪಕಗಳಿಗಿಂತ ಕಳಪೆಯವು ಎಂದು ಬಗೆಯಬಾರದು. ಅಷ್ಟೇ ಅಲ್ಲ ಮಾನವೀಯ ಚಟುವಟಿಕೆಗಳಲ್ಲಿಯ ಅದರ ಮೇಲ್ಮೈಯನ್ನು ಅನಕರ್ಷಿಸಿ ದಂತಾಗುತ್ತದೆ'' (ಸೈದ್ಧಾಂತಿಕ ಜಾನಪದ :ಪು.೫೩).

ದೇವರೇ ತಂದೆ-ತಾಯಿ ಎಂಬ ಅಲೌಕಿಕತೆಯನ್ನು ಶಿಷ್ಟಪದ ಸಾರಿದರೆ ತಾಯಿ-ತಂದೆಗಳೇ ಪ್ರತ್ಯಕ್ಷ್ಯ ದೇವರು ಎಂಬಂತಹ ಮೂಲವನ್ನು ಜಾನಪದ ತಿಳಿಹೇಳುತ್ತದೆ. ಶಿಷ್ಟ ಸಂಸ್ಕೃತಿಯೆಂದರೆ ಸಿದ್ಧ ಸಂಸ್ಕೃತಿಯಾಗಿದೆ. (ಹೊಸದಿಕ್ಕು: ಪು.೧೧) ಶಿಷ್ಟ ಸಾಹಿತ್ಯ ಕಟ್ಟಿದವನ ಕೃತಿಯಾಗಿ ನಿಂತರೆ, ಜನಪದ ಸಾಹಿತ್ಯ ಎತ್ತಿಕೊಂಡವನ ಕೃತಿಯಾಗಿ ನಿಲ್ಲುತ್ತದೆ. (ಮಾರ್ಗ-೨: ಪು.೪೪೧) ಜಾನಪದದ ನಡೆ-ನುಡಿಗಳಲ್ಲಿ ಪಾರದರ್ಶಿಕತೆ ಇರುವುದರಿಂದ ಅಲ್ಲಿ ಕವಿ ಕೃತಿಗಳ ಮದ್ಯ ಕಂದರ ಕಡಿಮೆ; ಶಿಷ್ಟ ಪದದಲ್ಲಿ ಈ ಕಂದರ ಜಾಸ್ತಿ. ಜಾನಪದ ಸಾಹಿತ್ಯ ಸೌಂದರ್ಯಕ್ಕಿಂತ ಸಂದೇಶಕ್ಕೆ, ಬಾಹ್ಯವೇಶಕ್ಕಿಂತ ಭಾವಾವೇಶಕ್ಕೆ ಪ್ರಾಧಾನ್ಯತೆ ನೀಡುತ್ತದೆ.

ಇಂಗ್ಲೀಷಿನ **Booklore** ಪದಕ್ಕೆ ಕನ್ನಡದಲ್ಲಿ ಶಿಷ್ಟಪದ ಅಥವಾ ಗ್ರಂಥಪದ ಎಂಬ ಶಬ್ದವನ್ನು ಸಂವಾದಿಯಾಗಿ ಕರೆಯಲಾಗುವುದು. ಅಕ್ಷರದಿಂದಾದ ವೈಯಕ್ತಿಕ ರಚನೆಗಳನ್ನು ಶಿಷ್ಟಪದವೆಂದು ಕರೆಯಲಾಗುತ್ತಿದೆ. ಶಿಷ್ಟ ಎಂದರೆ ಸಜ್ಜನ, ಸಂಪ್ರದಾಯ ಎಂದು ಕನ್ನಡ ರತ್ನಕೋಶದಲ್ಲಿ ಕರೆಯಲಾಗಿದೆ. ಶಿಷ್ಟ ಎಂದರೆ ಒಂದು ಪರಂಪರೆಯ ಪಳೆಯುಳಿಕೆಯಲ್ಲಿ ಸ್ವಲ್ಪ ಬದಲಾವಣೆ ಪಡೆದದ್ದು ಎಂದರ್ಥ. ಹಿಂದಿನ ಕಾಲದಲ್ಲಿ ಆರ್ಯರು, ಪಂಡಿತರು, ವೈದಿಕರು ತಮ್ಮದೇ ಆದ ನಿತಿ-ನಿಯಮಗಳನ್ನು ಲೆಕ್ಕಾಚಾರದಡಿಯಲ್ಲಿ ರೂಢೀಗತಗೊಳಿಸಿ ಅವುಗಳಿಗೆ ಒಂದು ಚೌಕಟ್ಟನ್ನು ನಿರ್ಮಿಸಿದ್ದರು. ಅದರಂತೆ ''ಸಾಹಿತ್ಯ, ಕಲೆ, ನೃತ್ಯ, ಸಂಗೀತ, ಹಾಡು ಮುಂತಾದವುಗಳೆಲ್ಲ ಶಿಷ್ಟ ಸಂಸ್ಕೃತಿಯ ತಳಹದಿಯ ಮೇಲೆ ನಿರ್ಮಾಣಗೊಂಡಿವೆ. 'ಕಲೆಗಾಗಿ ಕಲೆ' ಎಂಬ ಮಾತು ಕಲೆ, ಸಾಹಿತ್ಯ, ಸಂಗೀತದ ಸಾಧ್ಯತೆಗಳನ್ನು ಮೊಟಕುಗೊಳಿಸುವುದೇ ಆಗಿದೆ. ಇಂತಹ ಸಾಹಿತ್ಯ, ಕಲೆ, ಸಂಗೀತ, ನೃತ್ಯ ಮುಂತಾದವುಗಳೆಲ್ಲಾ ಶಿಷ್ಟ ಸಂಸ್ಕೃತಿಯ ಚೌಕಟ್ಟಿನೊಳಗೆ ನರಳಿ ಅನೇಕ ಇತಿ-ಮಿತಿಗಳನ್ನು ಪಡೆದುಕೊಂಡಿವೆ''. (ಹೊಸದಿಕ್ಕು : ಪು.೧೧) ''ಅಕ್ಷರ-ಅನಕ್ಷರ ಪರಂಪರೆಯನ್ನು ನಾವು ಶಿಷ್ಟ-ಜಾನಪದ ಎಂದು ಗುರುತಿಸುತ್ತೇವೆ. ಇದರಲ್ಲಿ ಮೊದಲನೆಯದಾದ ಶಿಷ್ಟಪದವು ಸ್ವಲ್ಪ ಅಪಾಯಕಾರಿಯಾಗಿದೆ. ಮಾತ್ರವಲ್ಲ ತನ್ನ ನೆಲೆಯಲ್ಲಿ ನಿಂತೇ ಅದು ಜಾನಪದವನ್ನು ವ್ಯಾಖ್ಯಾನಿಸುತ್ತದೆ. ಇದು ಅಕ್ಷರ ಪದವಾಗಿರುವಂತವರ ತರ್ಕ''. ( ಕೂಡು ಕಟ್ಟು : ಪು.೯೧)

ಬರವಣಿಗೆಯುಳ್ಳ ಒಂದು ಭಾಷೆಯಲ್ಲಿ ಜನಪದ ಸಾಹಿತ್ಯವು ಆ ಭಾಷೆಯಷ್ಟು ಪ್ರಾಚೀನ; ಶಿಷ್ಟಪದ ಸಾಹಿತ್ಯವು ಅದರ ಬರಹದಷ್ಟು ಪ್ರಾಚೀನವೆಂದು ಹೇಳಬೇಕಾಗುತ್ತದೆ. ಯಾವುದೇ ಗ್ರಂಥಸ್ಥ ಭಾಷೆಯಲ್ಲಿ ಜನಪದ ಸಾಹಿತ್ಯ ಹುಟ್ಟಿ ಎಷ್ಟೋ ವರ್ಷಗಳು ಕಳೆದ ಬಳಿಕ ಶಿಷ್ಟಪದ ಸಾಹಿತ್ಯ ಹುಟ್ಟಿದೆ. ಓಂದೆ ಮಾರ್ಗ ಸಂಪ್ರದಾಯವು ಸಾಹಿತ್ಯದಲ್ಲಿ ಸಮಗ್ರತೆಯನ್ನು ತರಬೇಕೆಂದೇ ಅಷ್ಟಾದಶ ವರ್ಣನೆಗಳ ಹರಹನ್ನು ಹಾಕಿಕೊಂಡಿತು. ಆದರೆ ಮಾರ್ಗೀಯರ ಆಯ್ಕೆ ಈ ಮನೋಭಾವ, ಈ ಕಡ್ಡಾಯ ವರ್ಣನೆಗಳಲ್ಲಿ ಸೋತುಹೋಯಿತು. ನಮ್ಮ ಶಿಷ್ಟ ಕಾವ್ಯಗಳ ಸೂಳೆಗೇರಿಗಳು ಅರ್ಥವಿಲ್ಲದೆ ವರ್ಣನೆಗಳಾಗಿ, ಗ್ರಂಥ ಭಾರವಾಗಿದ್ದು, ಇದಕ್ಕೆ ಉದಾಹರಣೆ: ಹೇಳಿಕೊಳ್ಳುವ ಒಂದು ಉತ್ತಮ ಪದ್ಯ ಸೂಳೆಗೇರಿ ವರ್ಣನೆಯಲ್ಲಿ ಬರೆಯಲು ನಮ್ಮ ಶಿಷ್ಟಕವಿಗಳಿಗೆ ಸಾಧ್ಯವಿಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಈ ಶಿಷ್ಟ ಕವಿಗಳಿಗೆ ಸಾಹಿತ್ಯದ ವಿರುದ್ಧವಾಗಿ ಜನಪದ ಸಾಹಿತ್ಯ ಮಾತ್ರ ಯಾವುದೇ ವಸ್ತುವಿನ ಕೂಡ ಮುಕ್ತವಾದ, ಮುಕ್ತಸಂವಾದ ನಡೆಸಿದೆ, ನಡೆಸಬಲ್ಲದು(ಮಾರ್ಗ-೨: ಪು.೪೫೯).

ಶಿಷ್ಟಸಾಹಿತ್ಯ ವಿದ್ವಜ್ಜನ ಸಮೂಹದಲ್ಲಿ, ಜನಪದ ಸಾಹಿತ್ಯ ಜನಸಮೂಹದಲ್ಲಿ ಪ್ರಸಾರ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ದುಡಿಮೆ-ವಿರಾಮ, ಹಬ್ಬ-ಹುಣ್ಣಿಮೆಗಳ ನೆಪದಿಂದ ವೇಗವಾಗಿ, ವ್ಯಾಪಕವಾಗಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ನಿರ್ವಹಿಸುವ ಜನಪದ ಸಾಹಿತ್ಯ ಪ್ರಬಲ ಸಮೂಹ ಮಾದ್ಯಮವಾಗಿದೆ. (ಮಾರ್ಗ-೨:ಪು.೪೪೦) ಶಿಷ್ಟ ಸಾಹಿತ್ಯದಲ್ಲಿ ಆಯಾ ಕೃತಿಯ ಭೌಗೋಳಿಕ ಪರಿಸರ ತಿಳಿದಿರುವುದರಿಂದ ಪಾಠಾಂತರಗಳನ್ನು ಗುರುತಿಸುವ ಸಾಧ್ಯತೆಗಳು ಹೆಚ್ಚಾಗಿ ಕಂಡುಬರುತ್ತವೆ. ಆದರೆ ಜನಪದ ಸಾಹಿತ್ಯಕ್ಕೆ ಅದರ ಭೌಗೋಳಿಕ ಪರಿಸರ ಹಾಗೂ ಕವಿ ಅನಾಮಧೇಯನಾದ್ದರಿಂದ ಪ್ರತಿಯೊಂದು ಪಾಠವನ್ನೂ ಭಿನ್ನ ಪಾಠವೆಂದು ಅರಿಯಬೇಕಾಗುತ್ತದೆ.

ಶಿಷ್ಟ ಸಾಹಿತ್ಯದಲ್ಲಿ ಕವಿಯೇ ಬೇರೆ, ಹಾಡುಗಾರನೇ ಬೇರೆ. ಆದರೆ ಜಾನಪದ ಸಾಹಿತ್ಯದಲ್ಲಿ ಈ ಎರಡೂ ಅವಸ್ಥೆಗಳಲ್ಲಿ ಒಬ್ಬನೇ ವ್ಯಕ್ತಿ ಇರುತ್ತಾನೆ. (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೧೫) ಜಾನಪದ ಗಾಯಕ ಏಕ ಕಾಲಕ್ಕೆ ರಚನೆಗೈದು, ಹಾಡುವುದರ ಮೂಲಕ ಪ್ರದರ್ಶನಕ್ಕೆ ಪ್ರವೃತ್ತನಾಗುವ ಪ್ರಕ್ರಿಯೆಯೇ ತುಂಬಾ ವಿಚಿತ್ರವಾಗಿರುತ್ತದೆ. ಶಿಷ್ಟ ಸಾಹಿತ್ಯದಲ್ಲಿ ಪರಂಪರೆಯ ವಸ್ತುವನ್ನು ತೆಗೆದುಕೊಂಡು ಕಾವ್ಯ ರಚನೆಯಾಗಿರುವುದನ್ನು ಕಾಣುತ್ತೇವೆ. ಅಲ್ಲಿ ಸಮಷ್ಟಿ ಸೃಷ್ಟಿಯಾಗದೇ ವ್ಯಷ್ಟಿ ಸೃಷ್ಟಿಯಾಗಿರುವುದನ್ನು ಕಾಣಬಹುದು. ಆದರೆ ಜನಪದ ಸಾಹಿತ್ಯದಲ್ಲಿ ಹೀಗಾಗಲಾರದು. ಒಬ್ಬ ಸಾಮಾನ್ಯ ವ್ಯಕ್ತಿ ತನ್ನ ಸಮಕಾಲೀನತೆಯೊಂದಿಗೆ ತನಗೆ ಕಂಡು ಬಂದ ವಸ್ತುವನ್ನು ಕುರಿತು ತಕ್ಷಣ ಹಾಡಾಗಿ ಪರಿವರ್ತಿಸಿ ಅದನ್ನು ಅಭಿವ್ಯಕ್ತಿಸುವಲ್ಲಿ ಸಫಲನಾಗುತ್ತಾನೆ. ಆದ್ದರಿಂದ ಪರಂಪರಾನುಗತವಾಗಿ ಬಂದಿರುವ ವಸ್ತುವನ್ನು ನೋಡುವ ಶಿಷ್ಟಕವಿಗೂ ತಕ್ಷಣ ಪ್ರತಿಕ್ರಿಯಿಸುವ ಜಾನಪದ ಕವಿಗೂ ತುಂಬಾ ವ್ಯತ್ಯಾಸವನ್ನು ಕಂಡುಕೊಳ್ಳಬಹುದಾಗಿದೆ. ಆದರೆ ಶಿಷ್ಟರಲ್ಲಿ ಬಳಕೆಯಾಗುವ ತಂತ್ರವಾಗಲೀ, ಅಭಿವ್ಯಕ್ತಿಯ ಕ್ರಮವಾಗಲಿ ಜಾನಪದರಲ್ಲಿ ತುಂಬಾ ಭಿನ್ನವಾಗಿರುತ್ತದೆ.

ಶಿಷ್ಟರು ಜನಪದರಿಂದ ಪ್ರೇರಣೆ ಪಡೆದಿರುವಂತೆ ಶಿಷ್ಟರಿಂದಲೂ ಜನಪದೀಯರೂ ಅನೇಕ ವಿಷಯಗಳನ್ನು ಪಡೆದಿರುವರು. ಉದಾಹರಣೆಗೆ : ಜನಪದರು ಆಡುವ ಯಕ್ಷಗಾನ, ಬಯಲಾಟ, ರೂಪಕಗಳು ಶಿಷ್ಟರ ಸಂಗೀತ, ನೃತ್ಯಗಳಿಂದ ಪ್ರಭಾವಿತವಾಗಿದೆ. ಇದಲ್ಲದೆ ಇಂದು ಜನಪದರಲ್ಲಿ ಕಂಡುಬರುವ ವ್ರತಗಳು, ವಾರದ ಕಲ್ಪನೆಗಳು ಮತ್ತು ಶಿಷ್ಟ ದೇವತೆಗಳ ಪೂಜೆಯ ರೀತಿಗಳನ್ನು ನಾವು ನೋಡಬಹುದು. ಶಿಷ್ಟ ವ್ಯಕ್ತಿಗಳನ್ನು ತಮ್ಮ ಕತೆಗಳ ನಾಯಕರನ್ನಾಗಿಸಿಕೊಂಡಿದ್ದಾರೆ. ಇದಲ್ಲದೆ, ವೈದಿಕರಿಂದ ರೂಪಿಸಲ್ಪಟ್ಟ ಕರ್ಮಸಿದ್ಧಾಂತ ಇವರ ಜೀವನ ರೀತಿಯಲ್ಲಿ ಬಹಳ ಮುಖ್ಯ ಪಾತ್ರವಹಿಸಿದೆ. (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೧೯)

ಶಿಷ್ಟಪದ ಬರವಣಿಗೆಯುಳ್ಳ ಭಾಷೆಯಲ್ಲಿ ಪುಸ್ತಕಗಳ ಹಾಗೂ ಸಮೂಹ ಮಾಧ್ಯಮಗಳ ಮುಖಾಂತರ ಕಲಿತವರಿಂದ ರೂಪುಗೊಳ್ಳುತ್ತದೆ ಮತ್ತು ಶಾಶ್ವತವೆಂದು ವ್ಯಾಖ್ಯಾನಿಸಲಾಗುತ್ತದೆ. ಆದರೆ ವಾಸ್ತವವಾಗಿ " ಶಿಷ್ಟಸಾಹಿತ್ಯಕ್ಕೆ ಕರ್ತೃ ಇರುವಂತೆ ಜನಪದ ಅಥವಾ ಅನಕ್ಷರಸ್ಥರಲ್ಲೂ ಮೌಖಿಕ ರೂಪದಲ್ಲಿ ಅವರ ಪರಿಸರ, ಕಾಲ, ದೇಶವನ್ನು ಪತ್ತೆ ಮಾಡಬಹುದು"(ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೧೩) ಹಾಗೂ ಇದು ಅಶಾಶ್ವತವೇನೂ ಆಗಿರುವುದಿಲ್ಲ. ಕಂಠಸ್ಥ ರೂಪದಲ್ಲಿ ಬಹುಕಾಲ ಉಳಿದಿರುತ್ತದೆ. ಸಮಕಾಲೀನತೆಯೊಂದಿಗೆ ತನ್ನ ಹೆಜ್ಜೆ ಹಾಕುತ್ತಾ ಸಮಷ್ಟಿಯಲ್ಲಿ ಬೆರೆಯುತ್ತಿದೆ. "ಜಾನಪದ ಮೂಲ ಸತ್ವವನ್ನು ಅಕ್ಷರ ಲೋಕದ ಚಟುವಟಿಕೆಗಳೆಲ್ಲ ಅತ್ಯಗತ್ಯವಾದ ಜೀವಧಾತು ಎಂಬಂತೆ ಸ್ವೀಕರಿಸಿವೆ"(ಕಾಡುಗೊಲ್ಲರ ಜಾನಪದ - ಒಂದು ಅಧ್ಯಯನ :ಪು.೧೧) ಶಿಷ್ಟಸಾಹಿತ್ಯಕ್ಕೂ-ಜನಪದಸಾಹಿತ್ಯಕ್ಕೂ ಅನೇಕ ವಿಷಯಗಳಲ್ಲಿ ಅಂತರವಿದೆ. ಆದರೆ ಇವು ಒಂದಕ್ಕೊಂದು ಪ್ರಭಾವ ಬೀರುತ್ತಾ, ಪ್ರೇರಣೆಯನ್ನೊದಗಿಸುತ್ತಾ ಬಂದಿವೆ. ಆದರೆ ಶಿಷ್ಟ ಸಾಹಿತ್ಯ ಬರವಣಿಗೆಯ ಸೌಲಭ್ಯದ ಮೂಲಕ ಅವಸ್ಥಾ ಭೇದಗಳನ್ನು ಉಳಿಸಿಕೊಂಡು ಪ್ರಾಂತ ಭೇದಗಳನ್ನು ಅಳಿಸಿಕೊಳ್ಳುತ್ತಿದ್ದರೆ, ಜನಪದ ಸಾಹಿತ್ಯ ಬರವಣಿಗೆಯ ಭೇದಗಳನ್ನು ಉಳಿಸಿಕೊಳ್ಳುತ್ತದೆ ಎನ್ನುವ ಡಾ|| ಎಂ.ಎಂ. ಕಲ್ಬುರ್ಗಿಯವರ ವಿಚಾರ ಹೆಚ್ಚು ಸೂಕ್ತವೆನಿಸುತ್ತದೆ. (ಜಾನಪದ : ೧೯೯೧ ಸಂ.ಜಿ.ಎಸ್.ಭಟ್ಟ- ಕಲ್ಯಾಣ ಕರ್ನಾಟಕ ಜನಪದ ಸಾಹಿತ್ಯ-ಡಾ|| ಬಸವರಾಜ ಸಬರದ, ಪು.೧೩೧) ಶಿಷ್ಟ ಸಾಹಿತ್ಯ ಬಿಡುವಿನ ವೇಳೆಯಲ್ಲಿ ಹುಟ್ಟಿದರೆ ಜನಪದ ಸಾಹಿತ್ಯ ದುಡಿವ ವೇಳೆಯಲ್ಲಿ ಹುಟ್ಟಿದೆ. ಶಿಷ್ಟಸಾಹಿತ್ಯ ಸಿದ್ಧ ಸಾಹಿತ್ಯ- ಶುದ್ಧ ಸಾಹಿತ್ಯವಾದರೆ, ಜನಪದ ಸಾಹಿತ್ಯ ಬದುಕಿಗೆ ಬದ್ಧವಾದ ಸಾಹಿತ್ಯವಾಗಿದೆ(ಹೊಸದಿಕ್ಕು : ಪು.೧೩).

ಶಿಷ್ಟ ಸಂಪ್ರದಾಯವು ಸಾಹಿತ್ಯದಲ್ಲಿ ಜೀವನ ಸಮಗ್ರತೆಯನ್ನು ತರಬೇಕೆಂದೇ ಅಷ್ಟಾದಶ ವರ್ಣನೆಗಳ ಹರಹನ್ನು ಹಾಕಿಕೊಂಡಿತು. ಆದರೆ ಈ ಆಯ್ಕೆ ಈ ಮನೋಭಾವ, ಈ ಕಡ್ಡಾಯವು ವರ್ಣನೆಗಳಲ್ಲಿ ಸೋತುಹೋಯಿತು. ಕುಮಾರರಾಮನ ಕಥೆ ಮೂಲತಃ ಜನಪದ ಮೂಲದ್ದು. ಆದರೆ ನಂಜುಂಡಕವಿ ಈ ವಸ್ತುವನ್ನು ಕುರಿತು ಕಾವ್ಯರಚನೆ ಮಾಡಿರುವುದರಿಂದ ಈ ವಸ್ತುವನ್ನು ನಂಜುಂಡ ಕವಿಯ ಕಾಲದಷ್ಟು ಹಳೆಯದು ಎಂದು ಮಾತ್ರ ಹೇಳಬಹುದು.

ಜನಪದರು ತಮ್ಮ ದುಡಿಮೆ ಹಾಗೂ ದುಡಿಮೆಗೆ ಸಂಬಂಧಿಸಿದ ನೆಲ, ಜಲ, ಪಶು, ಪಕ್ಷಿ, ಮರ-ಗಿಡಗಳ ಸಂಪರ್ಕ ಮಾತ್ರ ಇತ್ತು. ಹೀಗಾಗಿ ಇವರಿಗೆ ಕಲ್ಪನಾವಿಲಾಸದ ಹಿನ್ನೆಲೆಯಲ್ಲಿ ಸೃಷ್ಟಿಸಿದ ಪುರಾಣಗಳು, ಅಷ್ಟಾದಶ ವರ್ಣನೆಗಳು, ಗಣ, ಮಾತ್ರೆ, ವೃತ್ತ ಮುಂತಾದ ತಾಂತ್ರಿಕ ಅಂಶಗಳು ಬದುಕಿನ ಅಂಶಗಳಾಗಲೇ ಇಲ್ಲ. ಹಾಗಂತ ಇವರ ಸೃಷ್ಟಿ ಕ್ರಿಯೆ ಎನೂ ನಿಲ್ಲಲಿಲ್ಲ. ತಾವು ಪ್ರತಿನಿತ್ಯ ಕಾಣುವ ಪ್ರಕೃತಿಯೊಂದಿಗಿನ ಸಂಬಂಧದಿಂದಲೇ ಸಾಹಿತ್ಯ ಸೃಷ್ಟಿಗೆ ತೊಡಗಿದರು. ಇದು ಪ್ರಜ್ಞಾಪೂರ್ವಕವಾದ ತೊಡಗುವಿಕೆಯಾಗಿರದೆ, ತಮ್ಮ ದುಡಿಮೆಯ ಸಹಜವಾಗಿ ಹಾಗೂ ಒಂದು ಅಂಶವಾಗಿ ನಡೆಯುವಂತಹ ಕ್ರಿಯೆಯಾಯಿತು. ಹೊಲಗದ್ದೆಗಳಲ್ಲಿ, ಕಾಡುಮೇಡುಗಳಲ್ಲಿ ಕೆಲಸ ಮಾಡುತ್ತಲೇ ರಾಮಾಯಣ, ಮಹಾಭಾರತದ ಕಥೆಗಳನ್ನು ಹಾಡಿನ ರೂಪದಲ್ಲಿ ಹೇಳತೊಡಗಿದರು. ಇಂತ ಹಾಡುಗಳನ್ನೇನು ಅವರು ಸ್ವತಃ ಬರೆದಿಡದೆ, ಕೇವಲ ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸಿಕೊಂಡು ಬಂದರು(ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ: ಪು.೪೮-೪೯).

ಮುಂದೆ ಶಿಷ್ಟ ಸಾಹಿತ್ಯ ರಚನೆ ಪ್ರಾರಂಭವಾಗುವುದಕ್ಕಿಂತ ಮುಂಚಿನಿಂದಲೂ ರಾಮಾಯಣ ಮಹಾಭಾರತದ ಕಥೆಯನ್ನೊಳಗೊಂಡ ಹಲವಾರು ಜಾನಪದ ಹಾಡು, ಲಾವಣಿಗಳು ಜನಪದರ ಬಾಯಿಯಲ್ಲಿ ಪ್ರಚಾರದಲ್ಲಿದ್ದವು. ಇಲ್ಲಿ ಈಗ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ, ಜನಪದ ರಾಮಾಯಣ, ಮಹಾಭಾರತದಂತಹ ಕಥೆಗಳಲ್ಲಿ ಸೀತೆಗೆ ಹೆಚ್ಚಿನ ಸ್ಥಾನ-ಮಾನಗಳನ್ನು ಕೊಟ್ಟಿರುವುದು. ಸೀತೆಯ ಜನ್ಮ, ಸ್ವಯಂವರ, ಸೀತಾಪಹರಣ, ಅಗ್ನಿ ಪರೀಕ್ಷೆ, ಸೀತಾಪರಿತ್ಯಾಗ ಮತ್ತು ಲವಕುಶರ ಕಾಳಗ ಮುಂತಾದ ಪ್ರಸಂಗಗಳು ಜನತೆಯ ಅಭಿರುಚಿಗೆ ಮತ್ತು ಅಭೀಪ್ಸೆಗಳಂತೆ ವಿವಿಧ ರೀತಿಯಲ್ಲಿ ನಿರೂಪಿಸಲ್ಪಟ್ಟಿವೆ. ಯಕ್ಷಗಾನ, ಬಯಲಾಟಗಳಲ್ಲಿ ರಾಮಾಯಣದ ಕಥೆಗಳನ್ನು ಬಳಸಿಕೊಂಡಿರುವುದನ್ನು ಬೇರೆ-ಬೇರೆ ವಿದ್ವಾಂಸರ ಪುಸ್ತಕಗಳಲ್ಲಿ ತಿಳಿದುಬರುತ್ತದೆ. ''ಕಣ್ಣಾ ಮುಚ್ಚೆ ಕಾಡೇ ಗೂಡೆ ಉದ್ದಿನ ಮೂಟೆ ಉರುಳೇ ಹೋಯ್ತು'' ಎಂಬ ಸರಾಗವಾದ ಜಾನಪದದ ಹಾಡಿನ ಆಟವಂತೂ ರಾಮಾಯಣದ ಕಥೆಯನ್ನೇ ಹೇಳುತ್ತದೆಂದು ಡಿವಿಜಿಯವರು ಹೇಳುತ್ತಾರೆ(ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ : ಪು.೧೮).

ಯಾವ ದೇಶ ಭಾಷಾಸಾಹಿತ್ಯವಾದರೂ, ಜನಪದದ ಸತ್ವ-ಸಾರ, ಸಹಾಯ, ಸಹಕಾರ, ಸ್ಫೂರ್ತಿ, ಪ್ರಭಾವ ಪ್ರೇರಣೆಗಳಿಂದಲೇ ಪೋಷಿತಗೊಂಡು ಬೆಳೆದು ಬಂದಿದೆ. ಕಾರಣ, ಯಾವುದೇ ದೇಶದ ಮೊದಲ ಸಾಹಿತ್ಯ ಆ ದೇಶದ ಜನಪದ ಸಾಹಿತ್ಯವಾಗಿದೆ. ಆದ್ದರಿಂದ ಶಿಷ್ಟ ಸಾಹಿತ್ಯ ಎನ್ನುವುದೆಲ್ಲವೂ ಜನಪದದ ಸಾಹಿತ್ಯದ ನೆರಳಿನಲ್ಲಿ ಆಶ್ರಯಿಸುತ್ತಾ ಬಂದಿದೆ. ''ಹೋಮರ್,ವಾಲ್ಮೀಕಿ,ವ್ಯಾಸಾದಿ ಕವಿಗಳೆಲ್ಲರೂ ಅಜ್ಞಾತ ಜನಪದ ಕವಿಗಳಿಗೆ ನಾನಾ ರೀತಿಯಲ್ಲಿ ಋಣಿಗಳಾಗಿದ್ದಾರೆಂಬುದು ಅತ್ಯಂತ ಮುಖ್ಯಸಂಗತಿ ಎನ್ನಬಹುದು. ಕೆಲವೊಂದು ಸಂದರ್ಭದಲ್ಲಿ ಶಿಷ್ಟ ನಿಂತ ನೀರಾದಾಗ ಅದಕ್ಕೆ ಜನಪದ ಸಾಹಿತ್ಯ ಅದರ ಮೇಲೆ ಹರಿದು ಮತ್ತೆ ಹೊಸತನ ತುಂಬುವ ಪ್ರಯತ್ನ ಮಾಡಿದೆ. ವರ್ಡ್ಸ್‌ವರ್ಥ್, ಬರ್ನ್ಸ್, ಸ್ಕಾಟ್, ಶೆಲ್ಲಿ, ಕುಮಾರವ್ಯಾಸ, ಲಕ್ಷ್ಮೀಶ, ವಚನಕಾರರು, ದಾಸರು ಈ ಮಾತಿಗೆ ಸಾಕ್ಷಿಗಳಾಗಿದ್ದಾರೆ'' (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೫೭).

ನಮ್ಮ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತವಾಗಲೀ, ಗ್ರೀಸಿನ ಇಲಿಯಡ್ ಮತ್ತು ಒಡಿಸ್ಸಿಗಳಾಗಲೀ ಮೂಲತಹ ಜಾನಪದ ಕಾವ್ಯಗಳಾಗಿವೆ. ಇವುಗಳ ಕರ್ತೃ ವಾಲ್ಮೀಕಿ, ವ್ಯಾಸ ಮತ್ತು ಹೋಮರ್ ಆಗಿದ್ದರೂ, ಮೊದಲು ಈ ಕಾವ್ಯಗಳನ್ನು ಜನಪದರು ತಮ್ಮದೆ ಹಾಡಿನ ದಾಟಿಯಲ್ಲಿ ಹಾಡುತಿದ್ದಾಗ ಬಾಯಿಂದ ಬಾಯಿಗೆ ತೇಲಿಬರುತ್ತಿದ್ದವು. ಕಾಲಾನುಕ್ರಮದಲ್ಲಿ ಶಿಷ್ಟಕವಿಗಳು ಅವುಗಳನ್ನು ಪರಿಶೋಧಿಸಿ ಗ್ರಾಂಥಿಕ ಶಬ್ದಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದರು. ವ್ಯಾಸವೆಂದರೆ ಸುದೀರ್ಘವಾದುದು ಎಂದರ್ಥ. ಅದೇ ರಿತಿ ಹೋಮರ್ ಎಂಬ ಪದ ಹೋಮರಾಯ್ಡ್ ಎಂಬುದರಿಂದ ನಿಷ್ಪತ್ತಿಯಾಗಿದೆ. ಆದರೆ 'ಅಂಧ ಗಾಯಕರ ಗುಂಪು' ಎಂದೂ ಸಂಶೋಧಕರ ಅಭಿಪ್ರಾಯ (ಜೈನ ಕಥಾಸಾಹಿತ್ಯ ಮತ್ತು ಜಾನಪದ :ಪು.VIII ). ಆದ್ದರಿಂದ ಗ್ರೀಸ್ ದೇಶದಲ್ಲಿನ ಜನರ ಬಾಯಿಯಲ್ಲಿದ್ದ ವೀರರ ನೆನಪುಗಳನ್ನು ಕಥೆ ಹಾಡಿನ ಮೂಲಕ ಹೊರಹೊಮ್ಮಿಸಲಾಯಿತು.

## ೨.೩. ದೇಸಿ ನಡೆದುಬಂದ ದಾರಿ :

ಹಳೆಗನ್ನಡ ಕಾವ್ಯಗಳಲ್ಲಿ ಮಾರ್ಗ ಮತ್ತು ದೇಸಿ ಎಂಬೆರೆಡು ಮಾತನ್ನು ಮೇಲಿಂದ ಮೇಲೆ ಕೇಳಿಬರುತ್ತವೆ. ಮಾರ್ಗ ಎಂದರೆ ಯಾವ ಬರವಣಿಗೆ ಅತ್ಯಂತ ಪ್ರೌಢವೂ, ಗಂಭೀರವೂ ಪಂಡಿತ ಸಮೂದಾಯಕ್ಕೆ ಒಪ್ಪಿತವಾಗುವಂತೆ ಆಗಿರುತ್ತದೆಯೋ ಅದು ; 'ದೇಸಿ' ಎಂದರೆ-ಯಾವ ಬರವಣಿಗೆ ಸರಳವೂ, ಸಹಜವೂ ಸಾಮಾನ್ಯ ಜನರಿಗೆ ಸಮೀಪವೂ ಆಗಿರುತ್ತದೆಯೋ ಅದು ಎನ್ನಬಹುದು. ಕಾವ್ಯ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಉದ್ದೇಶಪೂರ್ವಕವಾಗಿಯೇ ತಂದ ಭಾಷಿಕ ವ್ಯತ್ಯಾಸವೇ ದೇಸಿ ಎಂಬ ಹೆಸರನ್ನು ಪಡೆಯುತ್ತದೆ. ದೇಸಿ ಕಾವ್ಯದ ಒಂದು ಅಂಗ; ಅದು ಇತರ ಅಂಗಗಳ ನಡುವೆ ಕಲ್ಪಿಸಿಕೊಳ್ಳುವ ಸಂಬಂಧದ ಮೇಲೆ ಆ ಕಾವ್ಯದಲ್ಲಿ ಅದರ ಮೇಲ್ಮೈ, ಔಚಿತ್ಯ ಇತ್ಯಾದಿಗಳನ್ನು ನಿರ್ಣಯಿಸಬಹುದು. ಚಂಪುವಿನ ಎಲ್ಲ ಸಾಧ್ಯತೆಗಳನ್ನು ಸೂರೆಗೊಂಡ ಪ್ರತಿಭಾವಂತ ಮಹಾಕವಿ ಪಂಪನಿಗೂ ಕೂಡ ದೇಶೀಯನ್ನು ಬಿಟ್ಟು ಬರೆಯಲು ಸಾಧ್ಯವಾಗಲಿಲ್ಲ. ಅನಿವಾರ್ಯವಾಗಿ ದೇಸೀ ಸೊಬಗಿಗೆ ಸೋಲಲೇ ಬೇಕಾಯಿತು. (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೫೮) ಅನೇಕ ಪಂಡಿತ ಕವಿಗಳು ಜನಪದ ಕಾವ್ಯ ಸಂಪ್ರದಾಯವನ್ನು ಕುರಿತು ಹೀಯಾಳಿಸಿದ ಪ್ರಸಂಗಗಳೂ ಇವೆ. ಮಧುರ ಕವಿಯು ತನ್ನ ಕಾವ್ಯವಾದ 'ಧರ್ಮಾಮೃತ'ದಲ್ಲಿ ಈ ಬಗ್ಗೆ ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ.

ಪಂಡಿತರುಂ ವಿವಿಧ ಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರೆ ಕೇಳ್ವೊಡೆ ಗೊರವರ
ದುಂಡುಚಿಯೇ? ಬೀದಿವರೆಯೇ? ಬೀರನ ಕಥೆಯೇ?

ಎಂಬುದರ ಮುಖಾಂತರ ಜನಪದ ಮತ್ತು ಶಿಷ್ಟಪದದ ಕಾವ್ಯಗಳ ವಸ್ತುವಿನ ಬಗ್ಗೆ ಪ್ರಸ್ತಾಪಿಸಿದ್ದಾನೆ. ಜನಪದರ ಕಾವ್ಯಗಳಿಗಿಂತ ಶಿಷ್ಟ ಕಾವ್ಯ ಶ್ರೇಷ್ಠವೆಂಬ ಧೋರಣೆ ಇಲ್ಲಿ ಎದ್ದು ಕಾಣುತ್ತದೆ(ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು.೧೭) ಅದೇ ರೀತಿ ಕಾವ್ಯಕ್ಕೆ ವಸ್ತುವನ್ನು ಆರಿಸುವಾಗಲೂ ತಮ್ಮ ಕತೆ ಗೊರವರು ಹೇಳುವ ಬೀರನ ಕಥೆಯಲ್ಲಿ ಎಂಬ ಮಾತಿನ ಮೂಲಕ ಜನಪದರ ವಸ್ತುವಿನ ಬಗೆಗೆ ಹಿಯಾಳಿಸಿದ್ದಾನೆ.

ಸುಮಾರು ೮ ನೇ ಶತಮಾನದಲ್ಲಿದ್ದ ಸೈಗೊಟ್ಟ ಶಿವಮಾರ ಎಂಬ ಗಂಗರಾಜನು ಗಜಶಾಸ್ತ್ರದ ಮೇಲೆ 'ಗಜಾಷ್ಟಕ' ಎಂಬ ಗ್ರಂಥವನ್ನು ಕನ್ನಡದಲ್ಲಿ ಬರೆದಿದಬೇಕೆಂದು ಶಾಸನದಿಂದ ತಿಳಿಯುತ್ತದೆ. ಉದ್ಧೃತ: ಕನ್ನಡ ಸಾಹಿತ್ಯ ಚರಿತ್ರೆ) ಈ ಪ್ರೌಢ ಕೃತಿಯಲ್ಲಿ ಓವನಿಗೆ, ಒನಕೆವಾಡುವಿನಿಂದ ಇನ್ನಷ್ಟು ಜನಪ್ರಿಯವಾಯಿತು. ಈ ಕೃತಿ ಎಂಟು ಅಧ್ಯಾಯಗಳಿಂದ ಕೂಡಿದುದು. ಜಾನಪದ ಸಾಹಿತ್ಯದಲ್ಲಿ ಬರುವ ಒನಕೆವಾಡು (ಭತ್ತ ಕುಟ್ಟುವಾಗ ಅಥವಾ ಬೀಸುವಾಗ ಹೇಳುವ ಹಾಡು) ಈ ಗಜಾಷ್ಟಕ ಕೃತಿಯಲ್ಲಿ ಕಂಡು ಬರುತ್ತವೆ. ಇಂದರಿಂದ ಜನಪದರ ಜೀವನಕ್ಕೆ ಸಂಬಂಧಿಸಿದ ಇಂತಹ ಹಾಡುಗಳ ಬಗೆಗೆ ಕವಿ ತನ್ನ ಗ್ರಂಥದಲ್ಲಿ ಸೇರಿಸಿರುವುದನ್ನು ನೋಡಿದಾಗ ದೇಶೀಯತೆ ಎಂಬುದು ಆರಂಭ ಕವಿಗಳಿಂದಲೂ ಕಂಡುಬರುತ್ತದೆ.

ಕನ್ನಡ ನಾಡು-ನುಡಿಗಳ ಸ್ವರೂಪ, ಸಾಹಿತ್ಯ ಸ್ಥಿತಿಯನ್ನು ಕವಿಗಳಿಗೆ ರಾಜಮಾರ್ಗವನ್ನು ತೋರುವ ವಿಮರ್ಶಾತ್ಮಕ ವಿಚಾರ ಪ್ರಣಾಲಿ ಎಂಬಿವುಗಳಿಂದ ಸ್ವತಂತ್ರವಾದ ಮತ್ತು ಬೆಲೆಯುಳ್ಳ ಪ್ರಮಾಣ ಗ್ರಂಥ 'ಕವಿರಾಜಮಾರ್ಗ'. ಇದು ಪಂಡಿತ-ಪಾಮರರಿಬ್ಬರಿಗೂ ಅನ್ವಯವಾಗುವ ಮಾರ್ಗದೇಶಿಯಿಂದೊಡಗೂಡಿದೆ. ಇದರ ರಚನೆಕಾರನಾದ ಶ್ರೀವಿಜಯ ಅಥವಾ ನೃಪತುಂಗ ಕವಿಯು ಈ ಗ್ರಂಥದಲ್ಲಿ ಕನ್ನಡ ನಾಡಿನ ವಿಸ್ತಾರವ ನ್ನು ಹೇಳುತ್ತಾ, ನಾಡಿನ ಜನರ ಚಿತ್ರಣವನ್ನು ಹೇಳಿದ್ದಾನೆ. ನಾಡಿನ ಜನರು ''ಚದುರರು ಕುರಿತೋದದಯೇ ಕಾವ್ಯ ಪ್ರಯೋಗ ಪರಿಣತಿಮತಿಗಳ್'' ಎಂದು ಹೊಗಳಿದ್ದಾನೆ. ಅಂದರೆ ಸಾಮಾನ್ಯವಾಗಿ ಜನಪದರು ನಿತ್ಯ ಜೀವನದಲ್ಲಿ ಅನುಭವಕ್ಕೆ ಬಂದ ವಿಷಯಗಳನ್ನೇ ಹಾಡಿನ, ಕಥೆಯ ರೂಪದಲ್ಲಿ ಹೊರ ಹಾಕುತ್ತಿದ್ದರು. ಅವರು ಪುಸ್ತಕ ಓದಿ ರಚನೆ ಮಾಡಿದವರಲ್ಲ. ಸುಮಾರು ೯ನೇ ಶತಮಾನದಲ್ಲಿ ಕವಿರಾಜಮಾರ್ಗವು ಪ್ರೌಢವಾದ ಗದ್ಯಪದ್ಯಕ್ಕೆ ಮಾರ್ಗದರ್ಶಿಯಾಗಿರುವಂತೆ ದೇಸಿ ಮಾರ್ಗಗಳ ಪೂರ್ವ ಪರಂಪರೆಗೆ ಸಾಕ್ಷಿಯೂ ಆಗುತ್ತವೆ

ಎಂಬ ರಂ.ಶ್ರೀ.ಮುಗಳಿಯವರ ಅಭಿಪ್ರಾಯ ಇಲ್ಲಿ ಉಲ್ಲೇಖನೀಯ (ಕನ್ನಡ ಸಾಹಿತ್ಯ ಚರಿತ್ರೆ: ಪು. ೪೧ ).

ಆ ಕಾಲದಲ್ಲಿದ್ದ ಅಪಂಡಿತರೂ ಅಂದರೆ ಜನಸಾಮಾನ್ಯರೂ ಸಹ ಸಹಜ ಕವಿಗಳಾಗಿದ್ದರೆಂಬ ಅಭಿಪ್ರಾಯ ಕಂಡುಬರುತ್ತದೆ. ಕನ್ನಡ ಕಾವ್ಯ ಪರಂಪರೆ ಸಮೃದ್ಧವೂ ಅವ್ಯಾಹತವೂ ಸಾಗಿಬರಲು ಜನಸಾಮಾನ್ಯರಲ್ಲಿದ್ದ ಕಾವ್ಯತ್ವದ ಪ್ರತಿಭೆ, ಚಿಂತನೆಗಳೇ ಕಾರಣ. ರಾಜಾಶ್ರಯ, ಆಸ್ಥಾನ ಗೌರವವೂ ದೊರೆಯತೊಡಗಿದ್ದ ಸಾಂಪ್ರದಾಯಿಕ ಜಡವಾದ ಅನೇಕ ಪಂಡಿತರು ಮಾರ್ಗದೊಡನೆ ದೇಸಿಯತೆಯನ್ನು

ಬೆರೆಸಿದರು. ಜನಭಾಷೆಯಲ್ಲಿ ಸಾಹಿತ್ಯ ಬರೆಯಬೇಕೆಂಬ ಹೊಸದೃಷ್ಟಿ ಅವರಲ್ಲಿ ಗುರುತಿಸಬಹುದು. ಜನಪದರಲ್ಲಿದ್ದ ಕಾವ್ಯ ಪ್ರಯೋಗ ಪರಿಣತಿ, ಸಹಜವಿವೇಕ, ದೋಷ ಖಂಡನೆಯ ಶಕ್ತಿ ಇವನ್ನೆಲ್ಲ ಇದರಲ್ಲಿ ವರ್ಣಿಸಲಾಗಿದೆ.

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳ್ ಭಿಜನರ್ಕಳ್ ಗುಣಿಗಳ್
ಅಭಿಮಾನಿಗಳ್ ತ್ಯುಗ್ರರ್
ಗಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್

ಜನಪದ ಸಂಸ್ಕೃತಿಯ ಸದ್ಗುಣಗಳನ್ನು ಈ ಪದ್ಯವು ಸಮರ್ಪಕವಾಗಿ ನಿರೂಪಿಸುತ್ತದೆ. ನಂತರ ಬಂದ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ ' ೧೯ಕಥೆಗಳನೊಳಗೊಂಡ ಗ್ರಂಥ. ಇದರಲ್ಲಿ ಕಥೆಗಳಲ್ಲಾ ಸಾಂಪ್ರದಾಯಿಕವಾಗಿವೆ. ಕನ್ನಡ ದೇಸಿಗೆ ಇಲ್ಲಿ ವಿಶೇಷ ಪ್ರಾಧಾನ್ಯ ನೀಡಲಾಗಿದೆ. ಇಲ್ಲಿ ಕಥೆಗಳಲ್ಲಿ ಬರುವ ಪಾತ್ರಗಳ ಸಂವಾದದಲ್ಲಿ ಅಚ್ಚ ದೇಸಿಯಂತೆ ದಿಗ್ವಿಜಯಗೊಂಡಿದೆ. ಉದಾಹರಣೆಗೆ: ಬ್ರಾಹ್ಮಣನೊಬ್ಬ ಸವಣನೆಡೆಗೆ ಹೋಗಿ ''ನಮ್ಮ ಮಗಳಿಗೆ ನಿಮ್ಮ ವ್ರತಗಳನ್ನೇಕೆ ಕೊಟ್ಟಿರಿ? '' ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಅವನು ''ನಿಮ್ಮ ಮಗಳಿಗೆ ಏಕೆ ನಮ್ಮ ಮಗಳಿಗೆ ವ್ರತಗಳನ್ನು ಕೊಟ್ಟರೆ ನಿನಗೆ ಬೇನೆ ಮೂಡಿತ್ತೆ ' ಎಂದುತ್ತರಿಸುತ್ತಾನೆ. ಇಲ್ಲಿ 'ಬೇನೆ ಮೂಡಿತ್ತೆ' ಎಂಬ ದೇಸಿಯ ಜನಪದರ ಮಾತಿನ ಬಳಕೆ ಎಷ್ಟು ಸಹಜವಾಗಿ ಬಂದಿದೆ(ಕ. ಸಾ. ಚ., ಪು.೯೩).

ಇಂದಿಗೂ ಅದು 'ಬೇನೆಯಾಯಿತೆ ' , ಬ್ಯಾನಿ ಆತೇ ಅಥವಾ ಸ್ವಲ್ಪವೂ ಬ್ಯಾನಿ ಬ್ಯಾಸರಿಕಿ ಇಲ್ಲವೆ' ; ಎಂಬಿತ್ಯಾದಿ ಆಡುನುಡಿಗಳನ್ನು ನಾವು ಪ್ರಯೋಗಿಸುತ್ತೇವೆ.

ವಡ್ಡಾರಾಧನೆ ಕವಿಗೆ ಸಹಜತೆ ಒಂದು ಕಣ್ಣು, ಸರಳತೆ ಇನ್ನೊಂದು ಕಣ್ಣು ; ಇಲ್ಲಿ ಎಲ್ಲವೂ ಸಾಚಾ, ಸೀದಾ. ಎರಡೂ ಸುಸಮ್ಮಿಳನದಿಂದ ಕೂಡಿಕೊಂಡು ದೃಷ್ಟಿ ಒಂದೇ ಆಗಿರುವುದರಿಂದ ಅವನ ವಿಶಿಷ್ಟ ಗುಣವನ್ನು ಸರಳ ಸಹಜತೆಯೆಂದು ಹೆಸರಿಸಬಹುದು (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,ಪು.೫೩). ''ಬಹುಶಃ ಕವಿವರ್ಗದ ಅಭಿಪ್ರಾಯದಲ್ಲಿ ಪದ್ಯರಚನೆ ಅಜಟಿಲವಾದರೆ ಅದರ ಘನತೆಗೆ ಕುಂದುಂಟಾಗಬಹುದೇನೋ ಎಂಬಂತಹ ಅಳುಕು ಶಿವಕೋಟ್ಯಚಾರ್ಯನಿಗಿಲ್ಲ. ಅವನ ಕಾವ್ಯೋದ್ದೇಶ ಹತ್ತು ಜನರ ನಿತ್ಯ ಜೀವನಕ್ಕೆ ಅತ್ಯಾವಶ್ಯಕವಾದ ನೀತಿಧರ್ಮದ ಸೃಷ್ಟಿಯೂ ,ಸುಲಭವೂ ಆದ ಉಪದೇಶ (ಅದೇ ಪು.೫೩) ಇದರಿಂದ ಕೆಲ ಶಿಷ್ಟ ಕವಿಗಳೂ ಸಹ ಜನಪದದ ನಿರೀಕ್ಷೆಗನುಗುಣವಾಗಿ ಕಥೆ ಹೇಳುವ ತಂತ್ರ ಅನುಸರಿಸಿರುವುದನ್ನು ಕಾಣುತ್ತೇವೆ. 'ದಂಡ ನೋಡಲಾಕ ಬಂದರೆ ದಂಡಿಗೆ ಹೊರಸಿದುದು','ಹೆಸರ ಹೆಗಡೆಗೆ ಮೊಸರು ಕುಲಕರ್ಣಿಗೆ' ಎಂಬ ದೇಶಿ ಗಾದೆಗಳು , 'ಪಡನೋಡಲ್ ಬಂದವರಂ ಗುಡಿವೊರಿಸದವೊಲಾಯ್ತು', 'ಪೆಸರ್ ಎನಗೆ ಮೊಸರ್ ಪೆರರ್ಗೆ'ಎಂದು ಮಾರ್ಗಕ್ಕೆ ತಿರುಗಿದುದುನ್ನು ಕಾಣಬಹುದು.

''ಜನಪದ ಸಾಹಿತ್ಯ ಪಂಡಿತ ವರ್ಗದಿಂದ ತಿರಸ್ಕೃತವಾದರೂ, ಪಂಡಿತಾಭಿಮಾನಿಯಾದ ಸಾಹಿತ್ಯ ಪ್ರಜಾಭಿಮುಖಿಯಾದಾಗ ಸಂವೇದನೆಗೆ ಹತ್ತಿರವಾದ ಜಾನಪದ ಸಾಹಿತ್ಯವನ್ನೇ ಬಳಸಿದರು''. ''ಮಾರ್ಗ ಪ್ರಭಾವಕ್ಕೆ ಸಿಕ್ಕ ಶಿಷ್ಟಪದ ಕಾವ್ಯ ಲಿಖಿತದ ನಿರ್ದಿಷ್ಟ ರೂಪವನ್ನು ಪಡೆಯುತ್ತಾ ಹೋದರೆ, ಮೌಖಿಕ ಚಲಾವಣೆಯಿಂದಾಗಿ ಪ್ರಸರಣ ಗುಣದಿಂದಾಗಿ ಜನಪದ ಸಾಹಿತ್ಯ ನಿರಂತರ ಪರಿವರ್ತನೆಗೆ ಒಳಗಾಗುತ್ತಲೇ ಹೋಗುತ್ತದೆ(ಜಾನಪದ ಸಾಹಿತ್ಯದ ಮೂಲಭೂತ ತತ್ವಗಳು, ಪು. ೪೯).

೧೦ನೇ ಶತಮಾನದ ಪ್ರಮುಖ ಕವಿಯಾದ ಪಂಪ ತನ್ನ ಕಾವ್ಯದ ಧೋರಣೆಯ ಬಗೆಗೆ ಹೇಳುತ್ತಾ, ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಸಿಯಾಳ್। ಪುಗುವುದು ಪೊಕ್ಕು ಮಾರ್ಗದೊಳ್ ತಳ್ಪುದು ತಳ್ತೊಡೆ ಕಾವ್ಯ ಬಂಧವೊ ॥(ಪಂಪ- ಒಂದು ಅಧ್ಯಯನ, ಪು.೧೯).

ದೇಸಿಯೊಳ್ ಎಂದರೆ ತನ್ನ ಪರಿಸರದ ಅಚ್ಚಗನ್ನಡದ ಶೈಲಿಯಲ್ಲಿ ಪುಗುವುದು-ಪ್ರವೇಶ ಮಾಡಬೇಕು. ಪೊಕ್ಕು-ಹಾಗೆ ಪ್ರವೇಶಿಸಿ, ಮಾರ್ಗದೊಳೆ-ಮಾರ್ಗೀ ಶೈಲಿಯಲ್ಲಿಯೇ ಎಂದರೆ ಸಂಸ್ಕೃತ ಶೈಲಿಯಲ್ಲಿಯೇ ತಳ್ಪುದು-ಸೇರಿ ಹೊಂದಿಕೊಳ್ಳಬೇಕು. ಏಕೆಂದರೆ ತನ್ನ ಮಾರ್ಗವು ರಾಜಸ್ಥಾನದ ಪಂಡಿತರಿಗೂ, ದೇಸಿಯಿಂದ ಜನಪದರಿಗೆ ಪ್ರಿಯವಾಗಬೇಕೆನ್ನುವುದು ಅವನ ಉದ್ದೇಶ.

ಪ್ರತಿಭಾವಂತನಾದ ಪಂಪ ಶ್ರಮವಿಲ್ಲದೆ ಅನಾಯಸವಾಗಿ ಬರೆದ ತನ್ನ ಮಹಾಕಾವ್ಯವಾದ 'ವಿಕ್ರಮಾರ್ಜುನವಿಜಯ'ದಲ್ಲಿ ಜನಪದರಲ್ಲಿ ಪ್ರಚಲಿತವಿರುವ ಗಾದೆಗಳನ್ನು,ನಾಣ್ಣುಡಿಗಳನ್ನು ಸಂದರ್ಭೋಚಿತವಾಗಿ ಬಳಸಿರುವುದು ದೇಶಿಯತೆಯ ಸೊಬಗನ್ನು ಹೆಚ್ಚಿಸಿದಂತಿದೆ. ಭೀಮನ್ನು ಹಿಡಿದು ತಿನ್ನಲು ಬಂದು, ತಾನೇ ಮನ್ಮಥನಿಗೆ ಆಹಾರವಾದಾಗ ಆ ಹಿಡಂಬೆಯ ಸ್ಥಿತಿ 'ಪಡೆನೋಡಲ್ ಬಂದವರಂ ಗುಡಿವೋರಿಸಿದರೆಂಬುದಾಯ್ತು' ಅರಣ್ಯದಲ್ಲಿ ಪಾಂಡವರನ್ನು ಏಡಿಸಲು (ಅವಹೇಳನ ಮಾಡಲು) ಬಂದಿದ್ದ ದುರ್ಯೋಧನ ದುಶ್ಯಾಸನರನ್ನು ಗಂಧರ್ವರು ಹಿಡಿದು ಹೊತ್ತುಕೊಂಡು ಹೋದಾಗ 'ಪಗೆಯಿರಿಯ ಬಂದರ್ ಮೂಗನಿರಿದರ್' ಎಂಬಂತಾಯಿತು. ಈ ರೀತಿಯ ಮಾತುಗಳ ಸಾಲುಗಳನ್ನು ಓದುತ್ತಾ ಹೋದಂತೆ ಮನಸ್ಸಿಗೆ ಮುದ ನೀಡುತ್ತವೆ. ಇಲ್ಲಿ ದೇಶೀಯತೆಯನ್ನು ಮಾರ್ಗದ ಜೊತೆಯಲ್ಲಿ ಚೆನ್ನಾಗಿ ಬಳಸಿಕೊಂಡಿದ್ದಾನೆ.

ಶಿಷ್ಟಕವಿಯಾದ ಪಂಪನು ರಾಜಾಶ್ರಯದಲ್ಲಿ ಪಂಡಿತ ಮಂಡಳಿಯ ಕಾವ್ಯ ಬರೆಯ ಬೇಕಾದಲೂ ಅವನ ಮನಸ್ಸು ತನ್ನ ಪರಿಸರದ ಜಾನಪದಕ್ಕೆ ಸ್ಪಂದಿಸಿದ್ದು ಗಮನಾರ್ಹ. ಆದಕ್ಕೆಂದೇ ಪಂಪ ತಾನು 'ಸಾಜದ ಪುಲಿಗೆರೆಯ ತಿರುಳ್ಗನ್ನಡದಲ್ಲಿ ಬರೆಯುವುದಾಗಿ ಹೇಳಿಕೊಂಡಿದ್ದಾನೆ(ಕನ್ನಡ ಶಿಷ್ಟಸಾಹಿತ್ಯದಲ್ಲಿ ಜಾನಪದ : ಪು.೫).

ರನ್ನ ಕವಿ ಆ ಕಾಲದ ಜನಪದರ ಸಹಜ ವೀರಮನೋಭಾವ ಹೇಗಿತ್ತೆಂಬುದನ್ನು ತನ್ನ ಕೃತಿಯಲ್ಲಿ ಸೊಗಸಾಗಿ ತಿಳಿಸಿದ್ದಾನೆ. 'ತುರುಗೋಳೊಳ್ ಪೆಣ್ಬುಯ್ಯಲೊಳೆರವೆಸದೊಳ್ ನೆಂಟ ನೆಡರೊಳ್ ಊರಳಿಂ ವಿನೊಳಂ ತರಿಸಂದು ಗಂಡು ತನಮನೆ ನೆರಪದವಂ ಗಂಡನಲ್ಲನೆಂತುಂ ಷಂಡಂ'' (ಗದಾಯುದ್ಧ : ೨-೨೪) ಪುರುಷರು ತಮಗೆ ಕೊಡುವ ಮಣಿಕನಕಾದಿಗಳನ್ನು ಸ್ತ್ರೀಯರು ಆಪೇಕ್ಷಿಸುವುದಿಲ್ಲ. ಅವರು ಮೆಚ್ಚುವುದು ವೀರ ಗುಣವನ್ನು ಮತ್ತು ಶಸ್ತ್ರವ್ರಣವನ್ನು ಎಂದು ರನ್ನನ ದ್ರೌಪದಿ ಹೇಳುತ್ತಾಳೆ. ಎಂಬುದು ಆಗಿನ ಕಾಲದ ಜನಪದ ಸ್ತ್ರೀಯರ ವಿಚಾರವಿದಾಗಿತ್ತೆಂದು ತಿಳಿದುಬರುತ್ತದೆ(ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ: ಸಂಪುಟ-೨ : ಪು.೧೫೫).

ಬಹು ಪ್ರಸಿದ್ಧ ಗಾದೆ ಮಾತಾದ '' ಅತ್ತ ಹುಲಿ ಇತ್ತ ದರಿ'' ಎಂಬುದನ್ನು ರನ್ನನ ಕಾವ್ಯದಲ್ಲಿ ನೋಡಿದಾಗ ಮರಣೋನ್ಮುಖನಾದ ದುರ್ಯೋಧನನನ್ನು ತೊರೆದು ಪಾಂಡವರ ಕಡೆಗೆ ಹೊರಡಬೇಕೆಂದು ಕೃಷ್ಣನು ರಾಜಲಕ್ಷ್ಮಿಗೆ ಆಜ್ಞೆಮಾಡಿದ. ಅದರಂತೆ ಆಕೆ ಹೊರಟು ನಿಂತರೆ ಅಶ್ವತ್ಥಾಮ ಅವಳನ್ನು ಸಂಧಿಸಿ ಕೋಪದಿಂದ ತಡೆದು ನಿಲ್ಲಿಸಿದ. ಆಗ ದಿಗ್ಭ್ರಮೆಗೊಂಡ ರಾಜಲಕ್ಷ್ಮಿಯ ಸ್ಥಿತಿಯನ್ನು ರನ್ನ ಹೀಗೆ ಬಣ್ಣಿಸಿದ್ದಾನೆ:

ಅತ್ತಲ್ ಅಸುರಾರಿ ಬೆಸಸಿದ
ನಾ ಇತ್ತಲ್ ರುದ್ರಾವತಾರಂ ಎಳೆದೊಯ್ದಪಂ + ಎಂ
ದತ್ತ ಪುಲಿ, ಇತ್ತ ದರಿಯೆಂ
ದತ್ತಿತ್ತ ಅಡಿಯಿಡದೇ ಲಕ್ಷ್ಮಿ ತಳವೆಳಗಾದಳ್

ದಿಗ್ಭ್ರಮೆಗೊಂಡ ರಾಜಲಕ್ಷ್ಮಿಯ ಪರಿಸ್ಥಿತಿಯನ್ನು ರನ್ನನು ಜಾನಪದರ ಗಾದೆಯ ಮಾತನ್ನು ಬಹಳ ಸಹಜವಾಗಿ, ನೇರವಾಗಿ, ಪರಿಣಾಮಕಾರಿಯಾಗಿ ತನ್ನ ಕಾವ್ಯದಲ್ಲಿ ನಿರೂಪಿಸಿದ್ದಾನೆ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ-೨ : ಪು. ೧೯೦).

ದುರ್ಗಸಿಂಹ ನ ''ಪಂಚತಂತ್ರ'' ದ ಕಥೆಗಳಂತೂ ಜಾನಪದದ ಕಥೆಗಳಂತೆಯೇ ಮೂಡಿಬಂದಿವೆ. ಈ ''ಪಂಚತಂತ್ರ''ವು ಗದ್ಯ-ಪದ್ಯ ಮಿಶ್ರವಾಗಿದ್ದರೂ ಸರಳತೆಗೆ ಹೆಚ್ಚು ಒತ್ತುಕೊಡ ಲಾಗಿದೆ. ಪಶು-ಪಕ್ಷಿ ಕತೆಗಳಂತೆ ಸಹಜವಾಗಿ ಮೂಡಿಬಂದಿವೆ. ಕನ್ನಡ ಸಾಹಿತ್ಯದ ಪರಂಪರೆಯಲ್ಲಿ ಜನಪದ ಕಥೆಗಳ ಮಾದರಿಯಲ್ಲಿಯೇ ರಚಿತವಾದ ಈ ಪಂಚತಂತ್ರ ಕಾವ್ಯಕ್ಕೆ ವಿಶೇಷತೆ ಇದೆ. ಇಲ್ಲಿಯ ಎಲ್ಲ ಕಥೆಗಳು ನೀತಿಬೋಧಕವಾದ ಅಂಶಗಳಿಂದ ಕೂಡಿವೆ. ಮಧ್ಯಮ ತರಗತಿಯವರಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದವನು ಈ ದುರ್ಗಸಿಂಹನೆ. ಪಂಪನ ನಂತರ ಒಂದೂವರೆ ಶತಮಾನವಾದ ಮೇಲೆ ನಯಸೇನ ಕಾಣಿಸಿಕೊಂಡ. ತನ್ನ ಹಿಂದಿನ ಕವಿಗಳು ಮಾರ್ಗ ಮತ್ತು ದೇಸಿಯತೆಯನ್ನು ಬೆರೆಸಿ ಬರೆದ ಕಾವ್ಯಗಳ ಬಗೆಗೆ ಹಾಗೂ ಕವಿಯ ಬಗೆಗೆ ಮೂದಲಿಸಿದ್ದಾನೆ. ತಿರಸ್ಕಾರದಿಂದ:

ಸಕ್ಕದಮಂ ಪೇಳ್ವೊಡೆ ನೆರೆ
ಸಕ್ಕದಮಂ ಪೇಳ್ಗೆ, ಸುದ್ದಗನ್ನಡದೊಳ್ ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೇ ಬೆರಸಲ್ಕೆ ಘೃತಮುಮಂ ತೈಲಮುಮಂ?

(ಧರ್ಮಾಮೃತ : ೧-೪೮)

ಎಂದು ಪ್ರಶ್ನಿಸಿದ್ದಾನೆ. ಸಂಸ್ಕೃತದಲ್ಲಿ ಹೇಳುವುದಾದರೆ ಸಂಪೂರ್ಣವಾಗಿ ಸಂಸ್ಕೃತದಲ್ಲಿಯೇ ಹೇಳಲಿ. ಅದು ಬಿಟ್ಟು ಶುದ್ಧಗನ್ನಡದಲ್ಲಿ ಜನ ಸಾಮಾನ್ಯರ ಭಾಷೆಯಲ್ಲಿ ತಂದಿಕ್ಕಬಹುದೇ? ಕನ್ನಡವು ತುಪ್ಪದಂತೆ ಶ್ರೇಷ್ಠವೆಂಬ ಪ್ರಶಂಸೆಯನ್ನು, ಸಂಸ್ಕೃತ ಎಣ್ಣೆಯಂತೆ ಮೂದಲಿಕೆಯನ್ನು ಒಟ್ಟಿಗೆ ಪ್ರಕಟಿಸಿದ್ದಾನೆ. ಹೀಗಾಗಿ ಈತನಲ್ಲಿ ಕಂಡುಬರುವ ದೇಸಿಯತೆ ಅಂದರೆ ಜನಸಾಮಾನ್ಯರ ಭಾಷೆಯ ಬಗೆಗಿರುವ ಕಳಕಳಿಯನ್ನು ಈತನ ಕಾವ್ಯದಲ್ಲಿ ಗುರುತಿಸಬಹುದು.

ಹರಿಹರ ಒಬ್ಬ ರಗಳೆ ಕವಿ. ರಗಳೆಗಳಲ್ಲಿ ದೇಶೀ ಛಂದಸ್ಸು ಬಳಕೆಯಾಗಿರುವುದಲ್ಲದೆ, ಇಲ್ಲಿ ಬರುವ ಜಾನಪದ ಆಶೆಯವನ್ನಿಟ್ಟುಕೊಂಡ ಕಥಾನಾಯಕರು ಕಂಡುಬರುತ್ತಾರೆ. ಹರಿಹರನ 'ಬಸವರಾಜ ದೇವರ ರಗಳೆ'ಯಲ್ಲಿ ಬರುವ ಬಸವಣ್ಣನ ಪಾತ್ರವು ಜಾನಪದದ ಆತಿಮಾನುಷ ಕಥೆಗೆ ಹತ್ತಿರವಾಗಿ ಕಾಣುತ್ತದೆ. ಬಸವಣ್ಣನ ಮನೆಗೆ, ಶಿವಶರಣರು ಕೊರಳಲ್ಲಿ ಬದನೆಕಾಯಿಯನ್ನು ಕಟ್ಟಿಕೊಂಡು ಬಂದಾಗ ಅದು ಇದ್ದಕ್ಕಿಂತೆ ಪರಿವರ್ತನೆಯಾಗಿ ಲಿಂಗವಾಗುವುದು ಹೀಗೆ ಮುಂತಾದ ಸನ್ನಿವೇಶಗಳು ಜನಪದದ ಅತಿಮಾನುಷ ಕಥೆಗಳಂತೆ ಕಂಡುಬರುತ್ತವೆ. ಇನ್ನೊಂದು ಮುಖ್ಯ ಅಂಶವೆಂದರೆ; ರಗಳೆಯ ನಾಯಕರೆಲ್ಲಾ ಸಮಾಜದ ಕೆಳಸ್ತರದಿಂದ ಬಂದವರು. ಉದಾಹರಣೆಗೆ ತಿರುನೀಲಕಂಠ, ಮಾದಾರ ಚನ್ನಯ್ಯ, ಇಳೆಯಾಂಡ ಗುಡಿಮಾರ, ತುರುಗಾಹಿ ರಾಮಣ್ಣ ಮುಂತಾದವರು.

ಈತನ ರಗಳೆಯಲ್ಲಿ ಒಕ್ಕಲುತನದ ವಿಚಾರವನ್ನು ನೋಡಿದಾಗ;

ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ
ನಡೆದು ಭವನ ಭಕ್ತಿರಸದ ಹೊಳೆಯ ತಡಿಯ ಬಳಿಗೆ ಬಂದು
ಮೃಡನೆ ಕರುಣಿಸುತ್ತ ದೇಹವೆಂಬ ಕಲ್ಲ ಬಳಿಗೆ ಬಂದು.

(ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ: ಪು. ೬೨).

ಈ ಮೇಲಿನ ವಿವರಗಳನ್ನು ನೋಡಿದಾಗ ಯಾವುದೋ ಜನಪದ ಸಾಹಿತ್ಯದ ಆಧ್ಯಾತ್ಮಿಕ ಗೀತೆಯನ್ನು ಕೇಳಿದಂತಾಗುತ್ತದೆ. ಹೀಗೆ ಹರಿಹರ ಜನಪದರ ಕುಲಕಸುಬಿಗೆ ಮಹತ್ವ ನೀಡಿದ್ದಾನೆ. ಷಟ್ಪದಿ ಎಂಬ ದೇಶೀ ಛಂದಸ್ಸನ್ನು ಅತ್ಯಂತ ಸಮರ್ಪಕವಾಗಿ ಬಳಸಿಕೊಂಡ ರಾಘವಾಂಕ ಒಬ್ಬ ವೀರಶೈವ ಕವಿ. ಈತ ನೇರವಾಗಿ ಜನಪದ ಕಾವ್ಯಗಳ ಪ್ರಭಾವಕ್ಕೊಳಗಾಗಿ 'ಮೈದುನ ರಾಮಣ್ಣ' ಎಂಬ ಜನಪದ ಕಾವ್ಯದ ಮಾದರಿಯಲ್ಲೇ 'ಸಿದ್ಧರಾಮ ಚರಿತೆ' ಹಾಗೂ 'ಸೋಮನಾಥ ಚರಿತೆ'ಗಳನ್ನು ಬರೆದಿದ್ದಾನೆ.

ಜಾನಪದ ಕಥೆಯಂತೆಯೇ ಚಿತ್ರಿಸಿದ 'ಯಶೋಧರ ಚರಿತೆ' ಎಂಬ ಮಹಾಕಾವ್ಯ ರಚಿಸಿದ ಜನ್ನ ಅಚ್ಚ ಜಾನಪದ ಆಶಯಗಳನ್ನೇ ತುಂಬಲು ಯತ್ನಿಸಿದ್ದಾನೆ. ಯಶೋಧರ ರಾಜನ ಹೆಂಡತಿ ಅಮೃತಮತಿ ಅರಮನೆಯ ಮಾವುತನ ಹಾಡು ಕೇಳಿ ಮನಸೋತು, ಅವನ ನಲ್ಲೆಯಾದುದು ಈ ಕಥೆಯ ವಿಷಬೀಜ. ಇದು ಹೆಮ್ಮರವಾಗಿ ಬೆಳೆದು ಸಂಕಲ್ಪ ಹಿಂಸೆಯಾಗಿ ಅದರ ಫಲವಾಗಿ ಯಶೋಧರ ಮತ್ತು ಅವನ ತಾಯಿ ಚಂದ್ರಮತಿಯರು ಅನೇಕ ಜನ್ಮಗಳಲ್ಲಿ ಪಶುಪಕ್ಷಿಗಳಾಗುತ್ತಾರೆ. ಕೊನೆಯ ಜನ್ಮದಲ್ಲಿ ಅಹಿಂಸೆಯ ವ್ರತತೊಟ್ಟು, ಯಶೋಧರನ ಮಗನಾದ ಯಶೋಮತಿಯ ಹೊಟ್ಟೆಯಲ್ಲಿ ಅಭಯರುಚಿ, ಅಭಯಮತಿಗಳಾಗಿ ಹುಟ್ಟಿ , ಬಾಲ್ಯದಲ್ಲಿಯೇ ಜೈನದೀಕ್ಷೆವಹಿಸುತ್ತಾರೆ. ಅಮೃತಮತಿಯು ನರಕ ಸೇರುತ್ತಾಳೆ. ಚಂಡಸಮಾರಿಗೆ ಪ್ರಾಣಿಬಲಿಯನ್ನು ಕೊಡುತ್ತಿದ್ದ ಮಾರಿದತ್ತ ರಾಜನು ಬಲಿಗೆಂದೋಡಿದ್ದ ಅಭಯರುಚಿ, ಅಭಯಮತಿಯರು ಹೇಳಿದ ಕಥೆಯಿಂದ ಮನಸ್ಸು ತಿರುಗಿ ಹಿಂಸೆಯನ್ನು ತೊರೆದು ದೀಕ್ಷೆ ವಹಿಸುತ್ತಾನೆ (ಕನ್ನಡ ಸಾಹಿತ್ಯ ಚರಿತ್ರೆ: ಪು. ೨೨೦).

ಈ ಯಶೋಧರ ಕಥೆ ಹೆಣ್ಣಿನ ದ್ರೋಹವನ್ನು ಚಿತ್ರಿಸುವ ಜನಪದ ಕಥೆಯಾಗಿ ಮೂಡಿಬಂದಿದೆ. ರನ್ನಕವಿ 'ಹಿಂಸೆಯ ದುಷ್ಫಲ, ಅಹಿಂಸೆಯ ಸತ್ಫಲವನ್ನು' ಎತ್ತಿತೋರಿ ಜೀವದಯೆಯ ಮಹತ್ವವನ್ನು ತಿಳಿಸಿಕೊಡುವುದರ ಮೂಲಕ ಅಸಾಧಾರಣ ವ್ಯಕ್ತಿತ್ವವನ್ನು ಮೆರೆದಿದ್ದಾನೆ. 'ಬೇವಂ ಮೆಚ್ಚಿದ ಕಾಗೆಗೆ ಮಾವು ಇಳಿದಪ್ಪಂತೆ', 'ಮರುಳೆ ಪೊಲ್ಲಮೆಯೆ ಲೇಸು, ನಲ್ಲರ ಮೈಯೊಳ್', 'ನಿಯತಿಯನಾರ್ ಮೀರಿದಪರ್' ಎಂಬಂತಹ ಮಾತುಗಳಲ್ಲಿ ಈಗಾಗಲೇ ರೂಢಿಯಲ್ಲಿರುವ ಜಾನಪದರ ನುಡಿಗಟ್ಟುಗಳನ್ನು ತಿಳಿಸಿದ್ದಾನೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು. ೬೪).

ಜನಭಾಷೆಯನ್ನೇ ತನ್ನ ಕಾವ್ಯ ಭಾಷೆಯನ್ನಾಗಿ ಮಾಡಿಕೊಂಡ ಕುಮಾರವ್ಯಾಸ ಶುದ್ಧ ದೇಶೀಯತೆಯನ್ನು ತನ್ನ ಕಾವ್ಯದಲ್ಲಿ ಕಂಡರಿಸಿದ್ದಾನೆ. ತನ್ನ ಕಾವ್ಯದಲ್ಲಿ ಮೂಢನಂಬಿಕೆಗಳನ್ನಂತೂ ಕಣ್ಣಿಗೆ ಕಟ್ಟುವಂತೆ ಬರೆದಿದ್ದಾನೆ. ಧರ್ಮರಾಯ ಜೂಜಿಗೆಂದು ಹೊರಟ ಸಮಯದಲ್ಲಿ ದ್ರೌಪದಿಯ ದಕ್ಷಿಣಾಕ್ಷಿ ಅದುರುತ್ತದೆ. ದ್ರೌಪದಿಯ ವಸ್ತ್ರಾಪರಹರಣದ ನಂತರ ಭೀಮಾರ್ಜುನರು ಪ್ರತಿಜ್ಞೆ ಮಾಡುವ ಕಾಲದಲ್ಲಿ ಗಜಾಪುರದ ನೆಲಬಾಯಿ ಬಿಡುತ್ತದೆ. ಪುರದ ನಡುವೆ ರಕ್ತದ ಮಳೆ ಸುರಿಯುತ್ತದೆ. ಒಟ್ಟಿನಲ್ಲಿ ಜನಪದರಲ್ಲಿ ಕಂಡುಬರುವ ನಂಬಿಕೆಗಳ ದಾಟಿಯನ್ನೇ ಇಲ್ಲಿ ಕಾಣಬಹುದು. ಜೂಜಿನಲ್ಲಿ ಪಾಂಡವರು ತಮ್ಮ ಹೆಂಡತಿಯಾದ ದ್ರೌಪದಿಯನ್ನು ಪಣಕ್ಕಿಟ್ಟು ಸೋಲುತ್ತಾರೆ. ಆಗ ದುರ್ಯೋಧನ ದ್ರೌಪದಿಯನ್ನು ದುಶ್ಯಾಸನನಿಗೆ ಅವಳ ಅಂತಃಪುರದಿಂದ ಹೊರಗೆ ಕರೆತರಲು ಹೇಳುತ್ತಾನೆ. ದುಶ್ಯಾಸನ ಬಂದು ಅವಳ ಕೈಹಿಡಿದು ಎಳೆಯುವಾಗ ಆಕೆ "ನಾನು ಪುಷ್ಪವತಿಯೆಂದು" ಹೇಳುತ್ತಾಳೆ. ಅದಕ್ಕೆ ದುಶ್ಯಾಸನ "ಪುಷ್ಪವತಿಯಾಗಿರಲಿ, ಈಗ ಫಲವತಿಯಾಗುವಂತೆ ನಡೆ, ಕುರುರಾಜನ ಭವನದಲ್ಲಿ" ಎಂದು ತುಂಬಾ ಅಸಭ್ಯವಾಗಿ ಪ್ರತ್ಯುತ್ತರ ಕೊಡುತ್ತಾನೆ. ಇದಲ್ಲದೆ ಅವನ ಕಾವ್ಯದಲ್ಲಿ ಗ್ರಾಮ್ಯವೆನ್ನಬಹುದಾದ ಅನೇಕ ರೂಪಗಳು ಕಂಡುಬರುತ್ತವೆ.

ಜಾನಪದ ಕಥೆಯಂತೆಯೇ ಚಿತ್ರಿಸಿದ 'ಯಶೋಧರ ಚರಿತೆ' ಎಂಬ ಮಹಾಕಾವ್ಯ ರಚಿಸಿದ ಜನ್ನ ಅಚ್ಚ ಜಾನಪದ ಆಶಯಗಳನ್ನೇ ತುಂಬಲು ಯತ್ನಿಸಿದ್ದಾನೆ. ಯಶೋಧರ ರಾಜನ ಹೆಂಡತಿ ಅಮೃತಮತಿ ಅರಮನೆಯ ಮಾವುತನ ಹಾಡು ಕೇಳಿ ಮನಸೋತು, ಅವನ ನಲ್ಲೆಯಾದುದು ಈ ಕಥೆಯ ವಿಷಬೀಜ. ಇದು ಹೆಮ್ಮರವಾಗಿ ಬೆಳೆದು ಸಂಕಲ್ಪ ಹಿಂಸೆಯಾಗಿ ಅದರ ಫಲವಾಗಿ ಯಶೋಧರ ಮತ್ತು ಅವನ ತಾಯಿ ಚಂದ್ರಮತಿಯರು ಅನೇಕ ಜನ್ಮಗಳಲ್ಲಿ ಪಶುಪಕ್ಷಿಗಳಾಗುತ್ತಾರೆ. ಕೊನೆಯ ಜನ್ಮದಲ್ಲಿ ಅಹಿಂಸೆಯ ವ್ರತತೊಟ್ಟು, ಯಶೋಧರನ ಮಗನಾದ ಯಶೋಮತಿಯ ಹೊಟ್ಟೆಯಲ್ಲಿ ಅಭಯರುಚಿ, ಅಭಯಮತಿಗಳಾಗಿ ಹುಟ್ಟಿ , ಬಾಲ್ಯದಲ್ಲಿಯೇ ಜೈನದೀಕ್ಷೆವಹಿಸುತ್ತಾರೆ. ಅಮೃತಮತಿಯು ನರಕ ಸೇರುತ್ತಾಳೆ. ಚಂಡಸಮಾರಿಗೆ ಪ್ರಾಣಿಬಲಿಯನ್ನು ಕೊಡುತ್ತಿದ್ದ ಮಾರಿದತ್ತ ರಾಜನು ಬಲಿಗೆಂದೋಡಿದ್ದ ಅಭಯರುಚಿ, ಅಭಯಮತಿಯರು ಹೇಳಿದ ಕಥೆಯಿಂದ ಮನಸ್ಸು ತಿರುಗಿ ಹಿಂಸೆಯನ್ನು ತೊರೆದು ದೀಕ್ಷೆ ವಹಿಸುತ್ತಾನೆ (ಕನ್ನಡ ಸಾಹಿತ್ಯ ಚರಿತ್ರೆ : ಪು. ೨೨೦).

ಈ ಯಶೋಧರ ಕಥೆ ಹೆಣ್ಣಿನ ದ್ರೋಹವನ್ನು ಚಿತ್ರಿಸುವ ಜನಪದ ಕಥೆಯಾಗಿ ಮೂಡಿಬಂದಿದೆ. ರನ್ನಕವಿ 'ಹಿಂಸೆಯ ದುಷ್ಫಲ, ಅಹಿಂಸೆಯ ಸತ್ಫಲವನ್ನು' ಎತ್ತಿತೋರಿ ಜೀವದಯೆಯ ಮಹತ್ವವನ್ನು ತಿಳಿಸಿಕೊಡುವುದರ ಮೂಲಕ ಅಸಾಧಾರಣ ವ್ಯಕ್ತಿತ್ವವನ್ನು ಮೆರೆದಿದ್ದಾನೆ. 'ಬೇವಂ ಮೆಚ್ಚಿದ ಕಾಗೆಗೆ ಮಾವು ಇಳಿದಪ್ಪಂತೆ', 'ಮರುಳೆ ಪೊಲ್ಲಮೆಯೆ ಲೇಸು, ನಲ್ಲರ ಮೈಯೊಳ್', 'ನಿಯತಿಯನಾರ್ ಮೀರಿದಪರ್' ಎಂಬಂತಹ ಮಾತುಗಳಲ್ಲಿ ಈಗಾಗಲೇ ರೂಢಿಯಲ್ಲಿರುವ ಜಾನಪದರ ನುಡಿಗಟ್ಟುಗಳನ್ನು ತಿಳಿಸಿದ್ದಾನೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು. ೬೪).

ಜನಭಾಷೆಯನ್ನೇ ತನ್ನ ಕಾವ್ಯ ಭಾಷೆಯನ್ನಾಗಿ ಮಾಡಿಕೊಂಡ ಕುಮಾರವ್ಯಾಸ ಶುದ್ಧ ದೇಶೀಯತೆಯನ್ನು ತನ್ನ ಕಾವ್ಯದಲ್ಲಿ ಕಂಡರಿಸಿದ್ದಾನೆ. ತನ್ನ ಕಾವ್ಯದಲ್ಲಿ ಮೂಢನಂಬಿಕೆಗಳನ್ನಂತೂ ಕಣ್ಣಿಗೆ ಕಟ್ಟುವಂತೆ ಬರೆದಿದ್ದಾನೆ. ಧರ್ಮರಾಯ ಜೂಜಿಗೆಂದು ಹೊರಟ ಸಮಯದಲ್ಲಿ ದ್ರೌಪದಿಯ ದಕ್ಷಿಣಾಕ್ಷಿ ಅದುರುತ್ತದೆ. ದ್ರೌಪದಿಯ ವಸ್ತ್ರಾಪರಹರಣದ ನಂತರ ಭೀಮಾರ್ಜುನರು ಪ್ರತಿಜ್ಞೆ ಮಾಡುವ ಕಾಲದಲ್ಲಿ ಗಜಾಪುರದ ನೆಲಬಾಯಿ ಬಿಡುತ್ತದೆ. ಪುರದ ನಡುವೆ ರಕ್ತದ ಮಳೆ ಸುರಿಯುತ್ತದೆ. ಒಟ್ಟಿನಲ್ಲಿ ಜನಪದರಲ್ಲಿ ಕಂಡುಬರುವ ನಂಬಿಕೆಗಳ ದಾಟಿಯನ್ನೇ ಇಲ್ಲಿ ಕಾಣಬಹುದು. ಜೂಜಿನಲ್ಲಿ ಪಾಂಡವರು ತಮ್ಮ ಹೆಂಡತಿಯಾದ ದ್ರೌಪದಿಯನ್ನು ಪಣಕ್ಕಿಟ್ಟು ಸೋಲುತ್ತಾರೆ. ಆಗ ದುರ್ಯೋಧನ ದ್ರೌಪದಿಯನ್ನು ದುಶ್ಯಾಸನನಿಗೆ ಅವಳ ಅಂತಃಪುರದಿಂದ ಹೊರಗೆ ಕರೆತರಲು ಹೇಳುತ್ತಾನೆ. ದುಶ್ಯಾಸನ ಬಂದು ಅವಳ ಕೈಹಿಡಿದು ಎಳೆಯುವಾಗ ಆಕೆ ''ನಾನು ಪುಷ್ಪವತಿಯೆಂದು'' ಹೇಳುತ್ತಾಳೆ. ಅದಕ್ಕೆ ದುಶ್ಯಾಸನ ''ಪುಷ್ಪವತಿಯಾಗಿರಲಿ, ಈಗ ಫಲವತಿಯಾಗುವಂತಿ ನಡೆ, ಕುರುರಾಜನ ಭವನದಲ್ಲಿ'' ಎಂದು ತುಂಬಾ ಅಸಭ್ಯವಾಗಿ ಪ್ರತ್ಯುತ್ತರ ಕೊಡುತ್ತಾನೆ. ಇದಲ್ಲದೆ ಅವನ ಕಾವ್ಯದಲ್ಲಿ ಗ್ರಾಮ್ಯವೆನ್ನಬಹುದಾದ ಅನೇಕ ರೂಪಗಳು ಕಂಡುಬರುತ್ತವೆ.

ಅದೇರೀತಿ ಚಾಮರಸನ 'ಪ್ರಭುಲಿಂಗಲೀಲೆ'ಯೂ ಸಹ ಜನಪದ ಕಥೆಯ ಆಶಯವನ್ನು ಹೊಂದಿದೆ. ಅಲ್ಲಮಪ್ರಭುವಿನ ಚರಿತ್ರೆಯು ಜನಸಾಮಾನ್ಯರ ಇತಿ-ಮಿತಿಗೊಳಪಟ್ಟಿದೆ. ಕಾವ್ಯದ ದೃಷ್ಟಿಯಿಂದ ಪರೀಕ್ಷಿಸಲಾಗಿ, ಅವನ ಕಲ್ಪನಾ ಸಂಪತ್ತು ಮತ್ತು ಶಬ್ಧಶಕ್ತಿಯ ಸಹಜ ವಿಲಾಸವು ಹೆಜ್ಜೆ-ಹೆಜ್ಜೆಗೆ ಗೋಚರವಾಗುತ್ತದೆ. ಚಾಮರಸನ ಆಂತರಿಕ ಶಕ್ತಿಯ ಜೊತೆಗೆ ಅಲ್ಲಮನಲ್ಲಿ ಅವನು ಹೊಂದಿದ ತಾದಾತ್ಮ್ಯ, ಪಡೆದ ಸೂಕ್ಷ್ಮ ಜ್ಞಾನ ಇವು ಅವನ ಜನಪದ ಶಬ್ಧಗಳ ಬಳಕೆಯ ಕಲ್ಪನಾ ವಿಲಾಸವನ್ನು ನೆನಪಿಗೆ ತರುತ್ತವೆ. ಮಾಯೆಯ ಸೌಂದರ್ಯವರ್ಣನೆ, ಶೃಂಗಾರ ವರ್ಣನೆ ಈ ಮುಂತಾದವು ಇದಕ್ಕೆ ನಿದರ್ಶನವಾಗಿವೆ. ಅವನ ಅಚ್ಚಗನ್ನಡ ದೇಸಿ ಅಪ್ರಯತ್ನ ಸಮೃದ್ಧಿಯಾಗಿ ಬಂದು ಕಲ್ಪನೆಯ ಸ್ಪಷ್ಟತೆಯನ್ನು ಇನ್ನಷ್ಟು ನಿಚ್ಚಳವಾಗಿಸಿದೆ. ''ಅಣ್ಣ ಕೇಳುದಕದಲಿ ಮುಳುಗಿದ ಸುಣ್ಣಕಲ್ಲಂತಾಗಿ ಕುದಿವುತ ಬನ್ನಬಟ್ಟಳು ಮಾಯೆ ಕಾಣುತ ನಿನ್ನ ಬೇಟದಲಿ''. ಸಹಜವಾಗಿ ಕೊಂಡೊಯ್ದರೂ ದೇಶೀ ಮಾರ್ಗಗಳ ಸಂಮಿಲನವನ್ನು ಗುರುತಿಸಬಹುದಾಗಿದೆ. ದೇಶೀಯ ಛಂದಸ್ಸಿನಲ್ಲಿ ಮಾರ್ಗದ ಪ್ರೌಢಿಮೆಯನ್ನು ತುಂಬಿದ ಮಹತ್ವದ ಕವಿ ಎನಿಸಿಕೊಂಡಿದ್ದಾನೆ.

ಪ್ರಜಾಪ್ರಭುತ್ವದಲ್ಲಿ ಪಲ್ಲಟವಾದಂತೆಯೇ ಭಾಷೆಯಲ್ಲಿ ಬದಲಾವಣೆಯಾಗುವುದು ಸಹಜ. ಹೀಗೆ ಬದಲಾದ ಭಾಷೆಯಲ್ಲಿ ಸಾಮಾನ್ಯ ಜನರ ಆಶೋತ್ತರಗಳು ಪ್ರತಿಬಿಂಬಿತವಾಗುತ್ತವೆ. ಕೇಂದ್ರೀಕರಣ ಬಿಗಿಯಿದ್ದಾಗ ಇರುವ ಭಾಷೆಗೂ, ಅದೇ ಬಿಗಿತಪ್ಪಿದಾಗ ಪ್ರಚಲಿತಕ್ಕೆ ಬರುವ ಭಾಷೆಗಳಲ್ಲಿ ತುಂಬಾ ವ್ಯತ್ಯಾಸವನ್ನು ಗುರುತಿಸಬಹುದು. ಇಂತಹ ಸೂಕ್ಷ್ಮ ವ್ಯತ್ಯಾಸವನ್ನು ಲಕ್ಷ್ಮೀಶನ ಈ ಪದ್ಯದಲ್ಲಿ ಕಾಣಬಹುದು.

ಕೊಡೆಯೆಂಬರಾತ ಪತ್ರವನುದರ ದೇಶಮಂ
ಪೊಡೆಯೆಂಬ ರೊಲಿದು ಮಂಥನ ಮನೆಸಗೆಂಬುದಂ
ಕಡೆಯೆಂಬರಾರಡಿಯ ನಳಿಯೆಂಬರುದಕ ಪ್ರವಾಹಮಂ
ತೊರೆಯೆಂಬರು......

ಧರ್ಮರಾಜನು ಮೊದಲಿನಿಂದಲೂ ಅಧಿಕಾರದ ಕೇಂದ್ರೀಕರಣದ ಆಮಿಷಕ್ಕೆ ಒಳಗಾದವನಲ್ಲ. ಐದು ಗ್ರಾಮಕ್ಕೆ ತೃಪ್ತಿಪಟ್ಟುಕೊಳ್ಳುವವನು. ಇಂಥ ಉದಾರವಾದಿ ವ್ಯಕ್ತಿ ಪ್ರಭುವಾದಾಗ ಸಹಜವಾಗಿಯೇ ಆಡಳಿತವೆಲ್ಲಾ ಸಡಿಲವಾಗುತ್ತದೆ. ಆಗ ಜನರ ಭಾಷೆಯಲ್ಲಿಯೂ ಗಂಭೀರತೆ ಮಾಯವಾಗುತ್ತದೆ. ಇದಕ್ಕೆ ಈ ಮೇಲಿನ ಪದ್ಯವೇ ಸಾಕ್ಷಿ. ಧರ್ಮರಾಜನ ಆಳ್ವಿಕೆಯಲ್ಲಿ ಆತ'ಪತ್ರ'ವನ್ನು 'ಕೊಡೆ' ಎಂದು, ಉದರ ದೇಶವೆಂಬುದನ್ನು 'ಹೊಟ್ಟೆ' ಮಂಥನವನೆಸಗು ಎಂಬುದನ್ನು 'ಕಡೆ' ಎಂದೂ, ಉದಕ ಪ್ರವಾಹವನ್ನು 'ತೊರೆ' ಎಂದೂ ಕರೆಯುವ ಜನಪದರ ಭಾಷೆ ಬಳಕೆಗೆ ಬಂದುದನ್ನು ಈ ಪದ್ಯ ಸೂಚಿಸುತ್ತದೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು. ೫೯).

ಸ್ವಮತ ನಿರೂಪಣೆ, ಪರಮತ ಖಂಡನೆ, ದೂಷಣೆಗಳಿಗೆ ಹೆಸರಾದ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯ ಮೇಲೆ ಜನಪದರ ದಟ್ಟಪ್ರಭಾವವಾಗಿರುವುದನ್ನು ಗಮನಿಸಬಹುದು. ಜನಪದೀಯ ಅಂಶಗಳಿಂದಲೇ ಈತನ ಕೃತಿ ಹೆಚ್ಚು ಪ್ರಸಿದ್ಧಿ ಪಡೆದಿರುವುದು. ದೇಸೀಯತೆ ಎಂಬ ಅಂಶ ಇಲ್ಲದೇ ಹೋದಲ್ಲಿ ಇದು ಕೇವಲ ಬೈಗಳ ಕೃತಿಯಾಗಿರುತ್ತಿತ್ತು. ತನ್ನ ಹಿಂದಿನ ಕನ್ನಡ ಕವಿಗಳ ಪ್ರಭಾವ ಪ್ರೇರಣೆಗೊಳಗಾಗಿರುವುದರಿಂದ ಬ್ರಹ್ಮಶಿವ ಬಹಳ ಆತ್ಮೀಯತೆಯಲ್ಲಿ ಬಳಸಿರುವ ದೇಸಿ ಪ್ರಜ್ಞೆಯನ್ನು ನೋಡಬಹುದು. ಜನಪದರ ಆಚಾರ-ವಿಚಾರ, ವ್ಯವಸಾಯದ ಸಾಮಾಗ್ರಿಗಳು ಮೊದಲಾದವುಗಳನ್ನು ತನ್ನ ಕಾವ್ಯದಲ್ಲಿ ಸಮರ್ಥಿಸಿದ್ದಾನೆ. (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು. ೫೯) ಅಷ್ಟೇ ಅಲ್ಲ ಗಾದೆಮಾತುಗಳನ್ನು ತನ್ನ ಕಾವ್ಯದಲ್ಲಿ ಸಂದರ್ಭಾನುಗುಣವಾಗಿ ಯಶಸ್ವಿಯಾಗಿ ಬಳಸಿದ್ದಾನೆ. 'ಅತಿಮೋಹಂ ಗತಿಗೆಡಿಸುಗುಂ','ಬೆಣೆಯಂ ನುಂಗಿದ ಬೆಕ್ಕಿನ ತೆರದಿ','ಬಿತ್ತಿದಂತೆ ಬೆಳೆ' ಮುಂತಾದವುಗಳು.

೧೨ ನೇ ಶತಮಾನವು ಕರ್ನಾಟಕದ ಸಾಮಾಜಿಕ ಹಾಗೂ ಧಾರ್ಮಿಕ ಇತಿಹಾಸದಲ್ಲಿ ಮಹತ್ವಪೂರ್ಣವಾದ ಘಟ್ಟ. ವೈದಿಕ ಹಾಗೂ ಜೈನಧರ್ಮಗಳು ಜನಸಾಮಾನ್ಯರಿಂದ ದೂರವಾಗಿ ಕೇವಲ ಮಠ-ಮಂದಿರಗಳಿಗೆ ಸೀಮಿತವಾಗಿಬಿಟ್ಟಾಗ ಜನಸಾಮಾನ್ಯರನ್ನು ಎತ್ತಿಹಿಡಿಯಲು ವೀರಶೈವ ಧರ್ಮ ಹುಟ್ಟಿಕೊಂಡಿತು. ಅನಕ್ಷರಸ್ಥರು, ಅವಿದ್ಯಾವಂತರೇ ತುಂಬಿದ್ದ ಸಮಾಜದಲ್ಲಿ ಸಾಹಿತ್ಯ ತನ್ನಷ್ಟಕ್ಕೆ ತಾನೇ ಪ್ರಚಾರವಾಗುವಂತಿರಲಿಲ್ಲ. ಆಗ ಆ ಧರ್ಮದ ಪ್ರವರ್ತಕರ ಜನಸಾಮಾನ್ಯರ ನುಡಿಗಟ್ಟುಗಳಲ್ಲಿ, ಅವರ ಪ್ರಕೃತಿ ಪ್ರಾಣರೂಪಕಗಳಲ್ಲಿ, ತಾವು ಕಟ್ಟಿದ ಧರ್ಮದ ಸಂದೇಶವನ್ನು ಹೇಳತೊಡಗಿದರು.

ಈ ವಚನ ಸಾಹಿತ್ಯ ಅಕ್ಷರ ರೂಪದಲ್ಲಿ ದಾಖಲಾಯಿತು. ಬಸವಾದಿ ಶಿವಶರಣರು ಧರ್ಮ ಪ್ರಚಾರ ಮಾಡುವ ಸಂದರ್ಭದಲ್ಲಿ ವಚನಗಳನ್ನು ಯಾವುದೋ ಒಂದು ರೂಪದಲ್ಲಿ ಹಾಡುತ್ತಿದ್ದಿರ ಬೇಕು. ಆದ್ದರಿಂದಲೇ ವಚನಗಳಲ್ಲಿ ತ್ರಿಪದಿಯ ಲಯ, ಷಟ್ಪದಿಯ ಲಯ, ಸಾಂಗತ್ಯದ ಲಯಗಳು ಕಂಡುಬರುತ್ತವೆ. ಸಮತೂಕದ ಭಾಗಗಳು ತಾವಾಗಿಯೇ ಉಂಟಾಗಿವೆ. ಅಂದರೆ ತನ್ನ ರೂಪದಲ್ಲಿ ಈ ವಚನ ಸಾಹಿತ್ಯ ಜನಪದ ಸಾಹಿತ್ಯವನ್ನೇ ಹೋಲುತ್ತದೆ. (ಕನ್ನಡ ಶಿಷ್ಟಸಾಹಿತ್ಯದಲ್ಲಿ ಜಾನಪದ : ಪು.೫೧) ವಚನಕಾರರು ಬೇಕೆಂತಲೇ ಜಾನಪದ ಅಂಶಗಳನ್ನು ತಮ್ಮ ವಚನಗಳಲ್ಲಿ ತಂದು ಹಾಕಿದವರಲ್ಲ(ವಚನಗಳಲ್ಲಿ ಜಾನಪದ ಅಂಶಗಳು : ಪು. ೧೬) ಅಂದಿನ ಸಾಮಾನ್ಯ ಜನಜೀವನದ ಸ್ಥಿತಿ ಗತಿಗಳನ್ನು ವೀಕ್ಷಿಸಿ, ಅವರ ಉದ್ಧಾರಕ್ಕಾಗಿ ಶಿವಶರಣರು ಅನಿವಾರ್ಯವಾಗಿ ಹೋರಾಡಲೇ ಬೇಕಾಯಿತು. ಹೋರಾಟ ಸಾಮಾನ್ಯರ ಸಲುವಾಗಿ ಮಾಡಬೇಕಾದುದರಿಂದ ಅವರಿಗೆ ತಿಳಿಯುವ ಭಾಷೆಯಲ್ಲಿ ಶರಣರು ಹೇಳಬೇಕಾಯಿತು. ತನ್ನತನವನ್ನು ಮರೆದು ಕನ್ನಡ ಸಾಹಿತ್ಯದಲ್ಲೊಂದು ವಿನೂತನ ಮಾರ್ಗವನ್ನು ತೆರೆದರು. (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು ; ಪು. ೯೦) ಜನಪದ ವೃತ್ತಿಗೆ ಸಂಬಂಧಿಸಿದ ಹಾವನ್ನು ಆಡಿಸುವುದರ ಬಗೆಗೆ ವಚನಕಾರರು ಬಳಸಿಕೊಂಡಿರುವ ರೀತಿ ಬಹಳ ವಿಶೇಷವಾಗಿದೆ.

ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸು ಕಂಡಯ್ಯ

ಎಂಬಂತಹ ವಾಕ್ಯಗಳನ್ನು ನೇರವಾಗಿ ಜನಪದರಿಗೆ ಸಂಬಂಧಿಸಿದಂತೆಯೇ ಬಳಸಿದ್ದಾರೆ. ವಚನಕಾರರ ದೃಷ್ಟಿಕೋನ ಜನಸಾಮಾನ್ಯರ ಮೇಲಿದ್ದದ್ದರಿಂದ ಅವರ ವಚನಗಳಲ್ಲಿ ಅಂತಹವರ ಅಂಶಗಳನ್ನೇ ಎತ್ತಿಹಿಡಿದಿದ್ದಾರೆ. ಸಾಹಿತ್ಯ ರಚನೆ ಮಾಡಲೇ ಬೇಕೆಂಬ ಉದ್ದೇಶ ಅವರದ್ದಲ್ಲ. ಜನಪದರು ಜೀವನದಲ್ಲಿ ದುಡಿಮೆಯ ಜೊತೆ-ಜೊತೆಗೆ ಸಹಜವಾಗಿ ಹೊರಹೊಮ್ಮುವ ಗೀತೆಗಳನ್ನೇ 'ವಚನ'ದ ಚೌಕಟ್ಟಿಗೆ ವಚನಕಾರರು ಅಳವಡಿಸಿದ್ದಾರೆ. ಪಂಪನ ಕಾಲದ ನಂತರ ಎರಡು ಶತಮಾನಗಳಾದ ಮೇಲೆ ವಚನಕಾರರ ಕಾಲ ಆರಂಭ. ಪಂಪನ ಕಾಲದಂತೆಯೇ ಇದೂ ಉತ್ಸಾಹ ತುಂಬಿತುಳುಕುತ್ತಿದ್ದ ಕಾಲ. ಆದರೆ ಇದರ ಉತ್ಸಾಹ ಸಾಮಾಜಿಕ, ಧಾರ್ಮಿಕ ಪ್ರತಿಭಟನೆಯ ಹಿನ್ನೆಲೆಯಲ್ಲಿ ಸಾಮಾನ್ಯರ (ಜನಪದರ) ಹಿತಾಸಕ್ತಿಗೆ ಹೆಚ್ಚು ಬೆಲೆ ನೀಡಿತು. ''ಬಹುಶಃ ೧೨ ನೇ ಶತಮಾನವು ಕಾವ್ಯಭಾಷೆಯಲ್ಲಿದ್ದ ಪರಂಪರಾಗತವಾದ ಛಂದೋರೂಪಗಳನ್ನು ವರ್ಜಿಸಿ, ಆಡುಮಾತಿಗೆ ಅತ್ಯಂತ ಸಮೀಪವಾಗಿ, ಅತ್ಯಂತ ಗಹನವಾದ ವಿಚಾರಗಳ ಅತ್ಯಂತ ಸಮೀಪವಾಗಿ, ಅತ್ಯಂತ ಗಹನವಾದ ವಿಚಾರಗಳ ಅತ್ಯಂತ ಸೂಕ್ಷ್ಮವಾದ ಸಂವೇದನೆಗಳ ಅಭಿವ್ಯಕ್ತಿಗೆ 'ವಚನ'ವೆಂಬುದು ಸಮರ್ಥವಾದ (ಸಾಧನೆ: ಸಂಪುಟ-೯: ಜಿ.ಎಸ್.ಎಸ್ : ಪು.೧೬)ಮಾಧ್ಯಮವಾಗಿರುವುದನ್ನು ಕಾಣಬಹುದು.

ವಚನಕಾರರೆಲ್ಲರೂ ಜನಪದ ಸಂಸ್ಕೃತಿಯಿಂದಲೇ ಬಂದವರು. ಕುಂಬಾರ ಕಂಬಾರ, ಬಡಿಗ ಮುಂತಾದವರನ್ನು ಇಲ್ಲಿ ಹೆಸರಿಸಬಹುದು. ''ಶರಣರ ಯಾವುದೇ ವಚನ ಗಮನಿಸಿದರೂ ಅಲ್ಲಿ ಜಾನಪದ ಅಂಶಗಳು ಕಂಡುಬರುತ್ತವೆ. ಈ ಅಂಶಗಳನ್ನು ಇದ್ದಕ್ಕಿದ್ದಂತೆಯೇ ಅಥವಾ ಅದರ ರೂಪ ಬದಲಿಸಿಯೋ ವಚನಗಳಲ್ಲಿ ಬಳಸಿರುವುದನ್ನು ಕಾಣುತ್ತೇವೆ.(ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು : ಪು. ೧೭) ವಚನಕಾರರು ರಾಜಾಶ್ರಯವನ್ನು ತೊರೆದು ಬಂದವರು. ಶಿಷ್ಟ ವರ್ಗಗಳಿಗೆ ಮೀಸಲಾದ ಸಾಹಿತ್ಯವನ್ನು ಜನ ಸಮುದಾಯದೆಡೆಗೆ ತಂದವರು. ಸಾಮಾನ್ಯರಿಗೂ ಅರ್ಥ ವಾಗುವಂತೆ ಬಹಳ ಆತ್ಮೀಯ ನೆಲೆಯಲ್ಲಿ ಹಾಗೂ ಸಾದಾವಾಕ್ಯಗಾಳಲ್ಲಿ ಮೂಡಿಬಂದ ಬಸವಣ್ಣನವರ ವಚನವೊಂದನ್ನು ಗಮನಿಸಿದಾಗ:

ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ
ಕೂಡಲ ಸಂಗಮದೇವಾ ಎನಗಿದೇ ದಿಬ್ಯ.

ಆರಿಗಾರು ಇಲ್ಲ
ಕೆಟ್ಟವಗೆ ಕೆಳೆಯಿಲ್ಲ
ಆಯ್ಯಾ ಎಂದರೆ ಸ್ವರ್ಗ
ಎಲವೋ ಎಂದರೆ ನರಕ

ಈ ಮುಂತಾದ ವಚನಗಳು ಬದುಕಿನ ಹತ್ತಿರಕ್ಕೆ ತಂದು ವಾಸ್ತವಿಕ ನೆಲೆಯಲ್ಲಿ ವಿಚಾರಕ್ಕೆ ಗುರಿಮಾಡುವಂತಹವುಗಳಾಗಿವೆ. ಹೀಗೆ ಶರಣರು ಜಾನಪದದ ವಸ್ತು, ಕಲ್ಪನೆ, ಭಾವನೆ, ಆಲೋಚನೆಗಳನ್ನೆತ್ತಿ ಕೊಂಡೇ ವಚನಗಳನ್ನು ಕಟ್ಟಿದವರು 'ಬಸವಾದಿ ಪ್ರಮಥರಿಗೆ ಶ್ರೀ ಸಾಮಾನ್ಯನೇ ಕೂಡಲ ಸಂಗಮನಾಥ' ನೆನಿಸಿದನು( ವಚನ ಸಾಹಿತ್ಯ ಮತ್ತು ಜಾನಪದ : ಪು. ೨೦೫).

ಅಪ್ಪನು ನಮ್ಮ ಮಾದರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನೆಮ್ಮಯ್ಯ ಕಾಣಿರೋ

ಎಂದು ಸಾರಿ ಸಮಾಜದ ಅತೀ ಕೊನೆಯಲ್ಲಿರುವವರನ್ನು ಮೇಲಿಟ್ಟು ಕೊಂಡವರು. ಇದೊಂದು ಅದ್ಭುತ ಕ್ರಾಂತಿ. ಈ ಮೂಲಕ ಜಾನಪದ ಬದುಕು ಸಾಹಿತ್ಯದ ತುತ್ತ ತುದಿಗೇರಿತ್ತು. ವಚನ ಸಾಹತ್ಯದ ಮೂಲ ಪ್ರಣವ ಜಾನಪದದಲ್ಲಿದೆ(ವಚನ ಸಾಹಿತ್ಯ ಮತ್ತು ಜಾನಪದ : ಪು. ೨೦೬). ವಚನಕಾರರಲ್ಲಿ ಈ ಜೀವನಾ ನುಭವವನ್ನೇ ಜನತೆಗೆ ಹೇಳಬೇಕೆಂಬ ತುಡಿತ ಹೆಚ್ಚಾಗಿ ಕಂಡುಬರುತ್ತದೆ. ಅದಕ್ಕೆ ಕಸುವು ತುಂಬಿದ್ದು ಈ ಮಣ್ಣಿನ ಭಾಷೆ. ಇದನ್ನು ಬಸವಣ್ಣ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ ಮುಂತಾದ ವಚನಕಾರರು ಜನಪದದ ಆಡು ಮಾತನ್ನು ವ್ಯವಸ್ಥಿತ ರೀತಿಯಲ್ಲಿ ತಮ್ಮ ವಚನಗಳಲ್ಲಿ ಪ್ರಯೋಗಿಸಿದ್ದಾರೆ.

ವಚನಕಾರರು ಮೂಲತಃ ಭಕ್ತರು (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ : ಪು. ೫೪). ಆತ್ಮ ಶೋಧದ ಮೂಲಕ ತಮ್ಮೊಳಗೆ ತಾವೇ ಮಾತಾಡಿಕೊಳ್ಳುತ್ತಾ ಜನಗಳಲ್ಲಿ ಬೆರೆತವರು. ಆದರೆ ಕೀರ್ತನಕಾರರು ಅಂದರೆ ದಾಸರು ಹಾಡುತ್ತಲೇ ಸರ್ವಜ್ಞನಂತೆ ಊರೂರು ಸುತ್ತಿದವರು. ಭಕ್ತಿಯನ್ನು ಹೊರಗೆ ತೋರಿಸಿಕೊಂಡು ಜನರನ್ನು ಇದರೊಳಕ್ಕೆ ಸೆಳೆಯಲು ಪ್ರಯತ್ನಿಸಿದವರು. ವಚನಕಾರರಿಗೆ ಶಿವ ಮುಖ್ಯವೆನಿಸಿದರೆ, ದಾಸರಿಗೆ ವಿಷ್ಣು ಮುಖ್ಯವಾಗುತ್ತಾನಷ್ಟೆ. ಜನಸಾಮಾನ್ಯರ ನಡುವಳಿಕೆಗಳನ್ನು ಸಾಹಿತ್ಯದೊಳಕ್ಕೆ ತೆಗೆದುಕೊಂಡು ಆ ಮೂಲಕ ಕೀರ್ತನೆಗಳನ್ನು ಪ್ರಚಾರಮಾಡಿದ್ದಾರೆ. ಜನಸಾಮಾನ್ಯರನ್ನು ಮೇಲೆತ್ತುವುದಕ್ಕೆ ಪ್ರತಿಷ್ಠಿತವಾದ ಶಾಸ್ತ್ರ ಸಂಪ್ರದಾಯಗಳನ್ನೆಲ್ಲಾ ಧಿಕ್ಕರಿಸಿ, ಜನಸಾಮಾನ್ಯರ ಸಂಗೀತ ಲಯಗಳನ್ನು ಇವರು ಬಳಸಿಕೊಂಡರು.

ಅವರ ರಚನೆಗಳಲ್ಲಿ ನಾವು ಜನಸಾಮಾನ್ಯರ ಪದ ಪ್ರಯೋಗಗಳನ್ನು ನೋಡಬಹುದು. ಶಿಷ್ಟ ದೇವತೆಗಳಾದ ಬ್ರಹ್ಮ, ಹನುಮಂತ, ಶಿವ ಮುಂತಾದ ದೇವತೆಗಳ ಹೆಸರನ್ನು ದಾಸರು ಜನಪದ ಶಬ್ದ ರೂಪವಾಗಿ ಪರಿವರ್ತಿಸಿರುವುದನ್ನು ಅವರ ಕೀರ್ತನೆಗಳಲ್ಲಿ ಕಾಣಬಹುದು. ಜನಪದ ಸಮಾಜದಲ್ಲಿ ಹಿರಿಯರಾದವರನ್ನು ಅಪ್ಪ, ಅಮ್ಮ, ಅಣ್ಣ ಮುಂತಾದ ಗೌರವ ಸೂಚಕ ಪದಗಳಿಂದ ಸಂಬೋಧಿಸಿರುವುದನ್ನು ಕೇಳುತ್ತೇವೆ. (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು ಒಂದು ಅಧ್ಯಯನ:

ಪು.೨೨೯) ಹನುಮ, ಶಿವ ಎಂಬ ಹೆಸರುಗಳಿದ್ದರೆ ಹನುಮಪ್ಪ, ಶಿವಪ್ಪ ಎಂದು ಕರೆಯುವುದು ವಾಡಿಕೆ. ಇಂತಹ ಉದಾಹರಣೆಗಳನ್ನು ದಾಸರು ತಮ್ಮ ಕೀರ್ತನೆಗಳಲ್ಲಿ ಬಳಸಿದ್ದಾರೆ.

ಡೊಳ್ಳಿನ ಮೇಲೆ ಕೈಯಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನು
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚಲುವ ಕನಕಪ್ಪ ಕುಣದ್ಯಾನು

(ಕನಕದಾಸರ ಭಕ್ತಿ ಗೀತೆಗಳು : ಪು.೮೭)

ಹೀಗೆ ಇಲ್ಲಿ ಬಳಕೆಗೊಂಡಿರುವ ಭರಮಪ್ಪ, ಶಿವನಪ್ಪ, ಹನುಮಪ್ಪ, ಕನಕಪ್ಪ ಹೆಸರುಗಳನ್ನು ಗೌರವ ಸೂಚಕವಾಗಿ ಸಂಬೊಧಿಸಲಾಗಿದೆ. ಇನ್ನು ಪುರಂದರದಾಸರು ದಶಾವತಾರದ ವರ್ಣನೆಯನ್ನು ಸಹಜವಾಗಿ ಬರೆದಿರುವ ಕೀರ್ತನೆಯನ್ನು ನೋಡಿದಾಗ;

ಏನಣ್ಣ ನಿನಗೇನಣ್ಣ
ಕಣ್ಣೇ ಕಣ್ಣ ಮುಚ್ಚವೊಲ್ಲ್ಯಣ್ಣ
ಏನಣ್ಣ ನಿನ್ನ ಗೋಳಣ್ಣ
ಕಣ್ಣಿಂದ ನೋಡವೊಲ್ಲ್ಯಣ್ಣ

(ಪುರಂದರ ಸಾಹಿತ್ಯ ದರ್ಶನ, ಭಾಗ-೨ : ಪು.೨೫೭)

ಇಲ್ಲಿ ಜನಪದರ ಭಾಷೆ ಎಷ್ಟೊಂದು ಸಹಜವಾಗಿ ಮೂಡಿಬಂದಿದೆ. ''ಕಣ್ಣನ್ನು ಏಕಣ್ಣ ಮುಚ್ಚುವುದಿಲ್ಲ ಅಣ್ಣ'' ಎಂಬುದು '' ಕಣ್ಣೇ ಕಣ್ಣ ಮುಚ್ಚು ವೊಲ್ಲ್ಯಣ್ಣ'' ಎಂದು ಬಳಸಿಕೊಳ್ಳಲಾಗಿದೆ. ವಚನಸಾಹಿತ್ಯದಿಂದ ಸ್ಫೂರ್ತಿಪಡೆದ ದಾಸಸಾಹಿತ್ಯದಲ್ಲಿಯೂ ಹೆಚ್ಚು ಜಾನಪದ ಅಂಶಗಳನ್ನು ಗುರುತಿಸಬಹುದು.

ಹಸಿವೆಯಾಗುತ್ತಿದೆ ಅಮ್ಮ ಕೇಳೆ
ಹಸನಾದ ಅವಲಕ್ಕಿ ಬೆಲ್ಲ ಕೊಡೆ
ಬಿಸಿ ಬಿಸಿ ಅನ್ನ ಕೈಸುಡುತ್ತಿದೆ ಬದಿಯಲ್ಲಿ ಕೂಡೆ
ಖಾರ ಸಾರು ಮಾಡಬೇಡ ಉಣ್ಣ ಬಾರನೆ ಎನಗೆ ಸೀ
ಸಾರು ಮಾಡಿದರೆ ಬೇಗ ನಂಬುವೆ........

ಈ ಮೇಲಿನ ಕೀರ್ತನೆಯಲ್ಲಿ ಮಗುವಿನ ಮನೋಧರ್ಮದ ಸಹಜ ಚಿತ್ರಣವಡಗಿದೆ. ಇಲ್ಲಿ ಶ್ರೀಕೃಷ್ಣನ ಲೀಲೆಯನ್ನು ಈ ರೀತಿ ಮಾನವೀಕರಿಸುವ ಕಲ್ಪನೆ ಜನಪದ ಮೂಲದ್ದು. ಮಕ್ಕಳು ಇಷ್ಟಪಡುವ ಊಟ ತಿಂಡಿಗಳ ವಿವರ ಕಾಣುತ್ತೇವೆ. ( ದಾಸಸಾಹಿತ್ಯದಲ್ಲಿ ಜಾನಪದ ಅಂಶಗಳು ಒಂದು

ಅಧ್ಯಯನ : ಪು.೨೬೪) ಜನಪದರು ತಮ್ಮ ತಂದೆ ,ತಾಯಿ, ಮಗು ಮುಂತಾದ ಹಿರಿಯ ಕಿರಿಯರಲ್ಲಿ ದೇವರನ್ನು ನೋಡುವ ಭಾವನೆ ಇಟ್ಟುಕೊಂಡಿರುತ್ತಾರೆ. ಮಾನವೀಯ ಮೌಲ್ಯಗಳಿಗೆ ಬೆಲೆ ನೀಡಿ ಬದುಕುವ ಪರಿ ಜಾನಪದರಲ್ಲಿ ಹೇರಳವಾಗಿ ಕಂಡುಬರುತ್ತವೆ.

ಕನಕದಾಸರು ರಚಿಸಿದ 'ರಾಮಧಾನ್ಯಚರಿತೆ' ಪುರಂದರ ದಾಸರ ನೂರಾರು ಕೀರ್ತನೆಗಳು ಮತ್ತು ನಂಜುಂಡ ಕವಿ ಬರೆದ ಕುಮಾರರಾಮ ಮುಂತಾದ ಕೃತಿಗಳಲ್ಲಿ ಶಿಷ್ಟತೆಯ ಬೆನ್ನಹಿಂದೆ ಜನಪದವನ್ನು ಗುರುತಿಸಬಹುದು. ಕನಕದಾಸರು '' ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ಎಂಬ ಕೀರ್ತನೆಯಲ್ಲಿ ಕುಲ ಕಸುಬುಗಳನ್ನು ಮಾಡುವವರ ಚಿತ್ರಗಳನ್ನು ತೆರೆದಿಟ್ಟಿದ್ದಾರೆ. ಅವರ 'ರಾಮಧ್ಯಾನ ಚರಿತೆ' ಕನ್ನಡ ಸಾಹಿತ್ಯದಲ್ಲಿಯೇ ಅಪರೂಪದ ಒಂದು ಖಂಡ ಕಾವ್ಯವಾಗಿದೆ. ಅದರಲ್ಲಿ ಬಳಸಿರುವ ರಾಗಿ ಮತ್ತು ಅಕ್ಕಿಗಳ ಜಗಳವಂತೂ ಕಣ್ಣಿಗೆ ಕಟ್ಟುವಂತಿದೆ. ರಾಗಿಯಂತೂ ಜನಪದರ ಅತಿ ಮುಖ್ಯವಾದ ಪದಾರ್ಥವಾಗಿದೆ. ಈ ಸಂಘರ್ಷಗಳ ಮೂಲಕ ಶಿಷ್ಟಮತ್ತು ಜಾನಪದ ಸಂಸ್ಕೃತಿಯ ಸಂಘರ್ಷವನ್ನು ಸೂಚಿಸಿದ್ದಾರೆ.

ಕನಕದಾಸರ ' ರಾಮಧ್ಯಾನ ಚರಿತೆ'ಯಲ್ಲಿ ಬರುವ ವರ್ಣನೆಗಳಲ್ಲಿ, ಸನ್ನಿವೇಶಗಳಲ್ಲಿ ಜನಪದ ಸಾಹಿತ್ಯದ ಸಂಸ್ಕೃತಿಯ ಎಳೆಗಳನ್ನು ಕಂಡರಿಸಲಾಗಿದೆ. ಇವರ 'ಮೋಹನ ತರಂಗಿಣಿ'ಯಲ್ಲಿ ಜನಪದ ಛಂದಸ್ಸಾದ ಸಾಂಗತ್ಯದಲ್ಲಿ ಅತಿ ದೀರ್ಘವಾಗಿ ಕೃಷ್ಣನ ಮಹಿಮೆ, ಪರಾಕ್ರಮಗಳನ್ನು ಹೇಳುತ್ತಲೇ ಜನಪದ ಕತೆಯ ಲಕ್ಷಣಗಳನ್ನು ಕನಕದಾಸರು ಅಲ್ಲಲ್ಲಿ ಅಳವಡಿಸಿಕೊಂಡಿದ್ದಾರೆ. ಮನ್ಮಥ ಇದ್ದಕ್ಕಿದ್ದಂತೆ ತೊಟ್ಟಿಲಿನಿಂದ ಮಾಯವಾಗುವುದು, ಅನಿರುದ್ಧ ಉಷೆಯರು ಕನಸಿನಲ್ಲಿ ಭೋಗಿಸುವುದು, ಶಂಬಾರಾಸುರ ಮನ್ಮಥನನ್ನು ಕೊಲ್ಲಿಸದೆ ನೀರಿನಲ್ಲಿ ಎಸೆದು ಬಂದಾಗ ಅವನು ಮೀನಿನ ಹೊಟ್ಟೆ ಸೇರುವುದು. ಆ ಮೀನನ್ನು ಕೊಯ್ದಾಗ ಹೊರಬರುವುದು. ಈಶ್ವರ ಬಾಣಾಸುರನ ಆಳಾಗಿ ನಿಲ್ಲುವುದು, ಇವೆಲ್ಲಾ ಸನ್ನಿವೇಶ ಚಿತ್ರಣವನ್ನು ಗಮನಿಸಿದಾಗ ಜನಪದ ಕಟ್ಟುಕತೆಗಳಲ್ಲಿ ಬರುವ ಅದ್ಭುತ, ರಮ್ಯ, ಅತಿಮಾನುಷ, ಮಾಯಾಜಾಲ ಮುಂತಾದವುಗಳು ನೆನಪಿಗೆ ಬರುತ್ತವೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ : ಪು.೫೫).

ಮಧ್ಯಕಾಲೀನ ಕನ್ನಡ ಸಾಹಿತ್ಯದ ದೃಷ್ಟಿ ಸಾಮಾನ್ಯರ ಕಡೆಗೆ ಇದ್ದುದರ ಫಲವಾಗಿ ಕಾವ್ಯ ಭಾಷೆ ಗ್ರಾಮಭಾಷೆಯಾಯ್ತು. ಹಿಂದೆ ೧೦ ನೇ ಶತಮಾನದಲ್ಲಿದ್ದ ರಾಜಾಶ್ರಯದ ಸಾಹಿತ್ಯ ಈ ಕಾಲದಲ್ಲಿ ಸಾಮಾನ್ಯರ ಸಾಹಿತ್ಯವಾಗಿ ಮಾರ್ಪಾಡಾಯ್ತು. ರಾಜಮಾತ್ರ ಕಾವ್ಯವನ್ನು ಅನುಭವಿಸುತ್ತಿದ್ದ ಕಾಲ ಬದಲಾಗಿ ಸಾಮಾನ್ಯರೂ ಸಹ ಆಸ್ವಾದಿಸುವಂತೆ ವಿಸ್ತರಿಸಿದ್ದು ವಚನಕಾರರು ಹಾಗೂ ದಾಸರು. ''ಪ್ರಮುಖವಾಗಿ ಎಲ್ಲಾ ದಾಸರಲ್ಲೂ ಧಾರ್ಮಿಕ ಆಚರಣೆಯ ನಿಷ್ಠೆಯನ್ನೇ ಪ್ರಬಲವಾಗಿ ಕಾಣುತ್ತೇವೆ. ಅವರ ಕೀರ್ತನೆಗಳಲ್ಲಿ ಆತಂಕ, ದ್ವಂದ್ವಗಳು ಇರದೆ ವಿಚಾರ ಸರಣಿಯೊಂದೇ ಪ್ರಧಾನವಾಗಿ ಕಂಡು ಬರುತ್ತದೆ. (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳ ಒಂದು ಅಧ್ಯಯನ : ಪು.೩೬) ದೇಸಿ ಸಾಹಿತ್ಯ ದಿಂದಲೇ ಪ್ರೇರಣೆಗೊಂಡು ಉಗಮವಾಗಿ ನಂತರ ದೇಸೀ ಪರಂಪರೆಯಲ್ಲಿ ಮುಂದುವರಿಯುತ್ತಿದೆ.

ಪಂಪಯುಗವು ಮಾರ್ಗ ಇಲ್ಲವೆ, ಪ್ರೌಢ ಕಾವ್ಯದಿಂದ ಪ್ರಚುರ ಪಡೆದಿದ್ದರೂ, ಅಲ್ಲಲ್ಲಿ ದೇಸಿಯನ್ನು ಗುರುತಿಸಲಾಗಿದೆ. ಪಂಪನಿಂದ ಬಸವೇಶ್ವರನವರೆಗೆ ಅಂದರೆ, ವಚನಕಾರರವರೆಗೆ ಈ ಯುಗದ ಹರಹನ್ನು ಇಟ್ಟುಕೊಂಡು ನೋಡಿದಾಗ ಪ್ರೌಢ ಸಾಹಿತ್ಯದ ಸಂಪ್ರದಾಯ ಸ್ಥಿರವಾಗಿ ಕಾಲೂರಿ ನಿಂತಿರುವುದನ್ನು ಕಾಣುತ್ತೇವೆ(ಕನ್ನಡ ಸಾಹಿತ್ಯ ಚರಿತ್ರೆ, ಪು. ೯೬). ಈ ಯುಗವು ರಾಜಕೀಯ ದೃಷ್ಟಿಯಿಂದ ಉಜ್ವಲವಾಗಿದ್ದರೂ ಅಸ್ಥಿರವಾದುದಾಗಿತ್ತು. ಅನೇಕ ಅರಸು ಮನೆತನಗಳ ಏಳು-ಬೀಳುಗಳಾಗಿ ಕಂಡು ಬರುತ್ತವೆ. ಆದರೂ ಮತ-ಧರ್ಮಗಳಿಗೆ ಉದಾರ ಆಶ್ರಯ ನೀಡಿದ್ದನ್ನು ಗುರುತಿಸಬಹುದು (ಕನ್ನಡ ಸಾಹಿತ್ಯ ಚರಿತ್ರೆ, ಪು. ೧೦೧). ಸಾಮಾಜಿಕ ಜೀವನ, ಧಾರ್ಮಿಕ ಸ್ಥಿತ್ಯಂತರಗಳು ಸ್ವಾಭಾವಿಕವಾಗಿ ಮೂಡಿ ಬಂದಿವೆ. ಮಧ್ಯಕಾಲೀನ ಸಾಹಿತ್ಯದಲ್ಲಿ ಜಾನಪದೀಯ ಲಯ, ಆಶಯ ಎಂಬ ನಿಟ್ಟಿನಲ್ಲಿ ಕೃತಿಗಳನ್ನು ನೋಡಿದಾಗ ಒಂದು ಅಂಶ ಪ್ರಮುಖವಾಗಿ ಮನದಟ್ಟಾಗುತ್ತದೆ. ಪ್ರಾಚೀನ ಸಾಹಿತ್ಯಕ್ಕಿಂತ ಈ ಮಧ್ಯ ಕಾಲೀನ ಸಾಹಿತ್ಯದಲ್ಲಿಯೇ ಜಾನಪದೀಯ ಲಯ, ಆಶಯ ಹೆಚ್ಚಾಗಿ ಬಳಸಲ್ಪಟ್ಟಿವೆ. ಕಾರಣವೇನೆಂದರೆ, ಅಂದಿನ ಸಾಹಿತ್ಯ ರಾಜಾಶ್ರಯವನ್ನು ಬಿಟ್ಟು ಮನುಷ್ಯರ ಬಳಿಗೆ ಬಂದಿದ್ದು ಹಾಗೂ ರಾಜಕೀಯ ಮತ್ತು ಧಾರ್ಮಿಕವಾಗಿ ಬದಲಾವಣೆಗೊಂಡಿದ್ದು.

## ೨.೪. ದೇಸಿಯ ದಿಗ್ವಿಜಯ :

ಸರ್ವಜ್ಞನು ಜನಪದ ಸಂಸ್ಕೃತಿಯಿಂದಲೇ ಉದಿಸಿ ಬಂದವನು. ಕೆಳವರ್ಗದ, ಸಾಮಾನ್ಯ ಜನರ ಮಧ್ಯದಲ್ಲಿಯೇ ಬದುಕಿ, ಸಹಜವಾಗಿ ಜನಪದ ಸಾಹಿತ್ಯವನ್ನು ಕಟ್ಟಿ ಬೆಳಸಿದವನು. ಕನ್ನಡ ಸಾಹಿತ್ಯದಲ್ಲಿ 'ತ್ರಿಪದಿ' ಪ್ರಕಾರಕ್ಕೆ ಈತನಷ್ಟು ಶಾಶ್ವತ ಸ್ಥಾನವನ್ನು ಕಲ್ಪಿಸಿದವರಿಲ್ಲವೆನ್ನಬಹುದು. ಎಲ್ಲ ವರ್ಗಗಳಲ್ಲಿರುವ ಕುಲ-ಕಸುಬು, ಜಾತಿ, ಮೂಢ ನಂಬಿಕೆ ವಿಧಿ-ಕರ್ಮ, ಜೋತಿಷ್ಯ, ಶಕುನ ಮುಂತಾದ ವಿಷಯಗಳ ಬಗೆಗೆ ನಿಷ್ಠೂರವಾಗಿ ಧ್ವನಿ ಎತ್ತಿ ವಚನಿಸಿದ್ದಾನೆ. ''ಅವನ ವಚನಗಳೆಲ್ಲಾ ಜನತೆಯ ಜ್ಞಾನ ಕೋಶವಾಗಿವೆ, ಸ್ಫೂರ್ತಿ ವಾಕ್ಯಗಳಾಗಿವೆ ಹಾಗೂ ಗಾದೆ ಮಾತುಗಳಾಗಿವೆ. ಇಡೀ ಕನ್ನಡ ಸಾಹಿತ್ಯದ ದೇಸೀ ತತ್ವವು ಸರ್ವಜ್ಞನಲ್ಲಿ ಸಾರ್ಥಕ್ಯವನ್ನು ಪಡೆದಿವೆ''(ಕಾವ್ಯಾನುಭವ, ಪು. ೩೫).

ಜನಪದರಲ್ಲಿದ್ದ ದೈವ ಹೇಗಿತ್ತೆಂಬುದಕ್ಕೆ ಈ ಕೆಳಗಿನ ತ್ರಿಪದಿಯೇ ಸಾಕ್ಷಿ ;

ಕುರಿಯ ಪಿಕ್ಕೆಯ ನಂಬಿ ಹರನೆಂದು ಪೂಜಿಸಿದ
ಕುರುಬ ಶಿವಭಕ್ತ ಗೊಲ್ಲಾಳ। ಹರಮೆಚ್ಚಿ
ಕರೆದೊಯ್ದನವನ ಶಿವಪುರಕೆ ॥.

ಇಲ್ಲಿ ಕುರುಬನೊಬ್ಬ ಕುರಿಗಳನ್ನು ಕಾಯುವಾಗ ಅವು ಹಾಕುವ 'ಪಿಕ್ಕೆ'ಗಳನ್ನೇ ಲಿಂಗವೆಂದು ಭಕ್ತಿಯಿಂದ ಪರಿಭಾವಿಸಿಕೊಳ್ಳುತ್ತಿದ್ದ ಪ್ರಕ್ರಿಯೆಯನ್ನು ನೋಡಿರಬಹುದು. ಅದಕ್ಕಾಗಿ ಈತನೂ ಸಹ;

ಕಲ್ಲಿನೊಳು ಕಂಬದೊಳು ಬಳ್ಳದೊಳು ಪಿಕ್ಕಿನೊಳು
ಎಲ್ಲಿ ಭಾವಿಸಿದೊಡಲಲ್ಲಿರ್ಪ ಭರಿತನು
ಬಲ್ಲೆ ನೇನಿದನು ಸರ್ವಜ್ಞ ॥

ಎಂದು ವಚನ ರಚಿಸಿದ್ದಾನೆ. ಹೀಗೆ ಸರ್ವಜ್ಞನು ಜಾನಪದದ ವಸ್ತು ಕಲ್ಪನೆ, ಭಾವನೆ, ಆಲೋಚನೆಗಳನ್ನೆತ್ತಿಕೊಂಡೇ ವಚನಗಳನ್ನು ನಿರ್ಮಿಸಿದವನು. ಆದ್ದರಿಂದ ವಚನಗಳ ಭಾವ-ಭಾಷೆ ಗಳಲ್ಲಿ ಜಾನಪದ ಜೀವ ತುಂಬಿಕೊಂಡಿದೆ. ಸರ್ವಜ್ಞನ ದೃಷ್ಟಿಯಲ್ಲಿ ಜೀವನ ಅಖಂಡವಾದುದು, ಪರಿ ಪೂರ್ಣವಾದುದು, ಲಿಂಗಾಭೇದವಾದುದು. ವಚನಕಾರರಂತೆ ಜನಸಾಮಾನ್ಯರ ಬದುಕನ್ನು ಸಾರ್ಥಕ ಗೊಳಿಸಲು ಹೆಣಗಿದವನು. ಜನಪದರ ಸಾಹಿತ್ಯ ಪ್ರಪಂಚಕ್ಕೆ ಮಹತ್ತರ ಕೊಡುಗೆಯನ್ನು ನೀಡಿದವನು.

ಆಡಿ ಹುಸಿಯಲು ಹೊಲ್ಲ ಕೂಡಿ ತಪ್ಪಲು ಹೊಲ್ಲ
ಕಾಡುವಾ ನೆಂಟ ಬರ ಹೊಲ್ಲ ಸಟೆಯು ತಾ
ನಾಡುವನೆ ಹೊಲ್ಲ ಸರ್ವಜ್ಞ.

ಈ ವಚನ ಜನರಾಡುವ ಗಾದೆಯ ಮಾತುಗಳನ್ನೇ ವಚನ ರೂಪಕ್ಕೆ ಅಳವಡಿಸಿದಂತಿದೆ. ಮಾತಿಗೆ ತಕ್ಕಂತೆ ಜೀವನದಲ್ಲಿ ಬಾಳಬೇಕು, ಒಮ್ಮೆ ಸ್ನೇಹ ಸಂಪಾದಿಸಿದರೆ ಮರಣ ಬರುವವರೆಗೆ ಕಾಪಾಡಿಕೊಳ್ಳಬೇಕು ಎಂಬಂತಹ ಆದರ್ಶದ ಮಾತುಗಳನ್ನು ಸರ್ವಜ್ಞ ತನ್ನ ವಚನದಲ್ಲಿ ಹಿಡಿದಿಟ್ಟಿ ದ್ದಾನೆ. ಮಾತಾಡಿದಂತೆ ನಡೆದುಕೊಳ್ಳದವನು ಮೂರ್ಖನು, ಒಮ್ಮೆ ಕೂಡಿದವನು, ಹೊಂದಿ ಕೊಂಡವನು ನಡುವೆ ಕೈಕೊಟ್ಟು ಹೋಗುವವನು, ವೃಥಾ ಕಾಲಹರಣ ಮಾಡುವವನನ್ನು ಎಂದಿಗೂ ಮನೆಗೆ ಕರೆಯಬಾರದೆಂದು ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾನೆ.

ಸತತಾಭ್ಯಾಸ ಪ್ರಯತ್ನದಿಂದ ತನ್ನ ಪೂರ್ವ ಕವಿಗಳ ಪರಿಚಯದಿಂದ ಲಕ್ಷಣಕ್ಕೆ ಕಟ್ಟುಬಿದ್ದು, ತಾನು ಕವಿಯಾಗಬೇಕೆಂದು ಬಯಸಿ ವಚನಗಳನ್ನು ಬರೆದವನಲ್ಲ. ಕವಿ ಗಜಾರಣ್ಯದಲ್ಲಿ ಹಿಂಡನಗ ಲಿದ ಒಂಟಿ ಸಲಗದಂತೆ ಸರ್ವಜ್ಞ ತಾನು ನಡೆದದ್ದೇ ದಾರಿ. ಇಡೀ ಲೋಕವೇ ಅವನ ಶಿಕ್ಷಣ ಶಾಲೆ.

'' ಸರ್ವಜ್ಞ ಪದಗಳನ್ನು ಬರೆಯಲಿಲ್ಲ. ಕೇವಲ ಕಟ್ಟಿಕೊಂಡು ಹೋದ. ಬರೆದಿಡುವುದರಲ್ಲಿ ನಂಬಿಕೆ ಇಲ್ಲ. ಈತ ಬರೆಯುವ ಗೋಜಿಗೆ ಹೋಗಿರಲಾರ'' (ಸರ್ವಜ್ಞನ ವಚನಗಳು : ಪ್ರ.ಸಂ: ಪ್ರೊ. ಎಂ.ವಿ.ಸಿ., ಪು. ೧೧).

ಹೇಳಲರಿಯನು ನಾನು ಹೇಳನೆ ಹೇಳಿದೆ
ಭಾಳಲೋಚನಾ ಶರಣರ ಆಳಾಗಿ
ಹೇಳಿದೆ ನೋಡಾ ಸರ್ವಜ್ಞ. ಎಂದಿದ್ದಾನೆ.

ಊರೂರು, ಕೇರಿಕೇರಿಗಳನ್ನು ಸುತ್ತುತ್ತಾ ಪದ್ಯಗಳನ್ನು ಹೇಳಿಕೊಂಡು ಅಥವಾ ಹಾಡಿಕೊಂಡು ಸರ್ವಜ್ಞ ಅಲೆದಾಡಿರಬಹುದು. ಅವನ ವ್ಯಕ್ತಿತ್ವಕ್ಕೆ ಮಾರುಹೋಗಿ ಕೆಲ ಶಿಷ್ಯರು ವಚನಗಳನ್ನು ಬರೆದಿಟ್ಟಿರಬಹುದು. ಹೀಗೆ ಬರೆದಿಟ್ಟ ಕೈ ಬರಹದಲ್ಲಿ ಒಬ್ಬರಿಂದೊಬ್ಬರಿಗೆ ವ್ಯತ್ಯಾಸಗಳಾಗಿವೆ. ಉದಾಹರಣೆಗೆ;

ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು ಎಳೆಯುವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ.

ಸಾಲವನು ತರುವಾಗ ಹಾಲು ಬೋನುಂಡಂತೆ
ಸಾಲಿಗನು ಬಂದು ಕೇಳಿದರೆ ಕುಂಡಿಗಂ
ಚೇಳು ಕಡಿದಂತೆ ಸರ್ವಜ್ಞ.

ಇಂತಹ ಅನೇಕ ವಚನಗಳನ್ನು ಗಮನಿಸಿದಾಗ ಕೆಲವು ಗೊಂದಲಗಳು ಬರುವುದು ಸಹಜ. ಕನ್ನಡ ನಾಡಿನಲ್ಲಿ ಸರ್ವಜ್ಞನಂತಹ ಕವಿ ಉದಯಿಸಿ ಜಾನಪದ ಸಾಹಿತ್ಯ ಭಂಡಾರಕ್ಕೆ ಅಮೂಲ್ಯವಾದ ತ್ರಿಪದಿ ಸಾಹಿತ್ಯದ ಕಾವ್ಯ ಕಾಣಿಕೆಯನ್ನರ್ಪಿಸಿ ಅಪಾರವಾದ ಸೇವೆಯನ್ನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಸಲ್ಲಿಸಿರುವನು. ಅವನು ಪುರಾಣದ ಕವಿಯಲ್ಲ, ಅವನ ಹೆಸರು ಮಹಾ ಕವಿ ಕುಲದಲ್ಲಿಲ್ಲ, ಕವಿ ಶಿಖಾಮಣಿಗಳ ಮಾಲೆಯಲ್ಲಿಲ್ಲ ಮತ್ತು ಕವಿ ಕುಲೋತ್ತಮರಾದ ರತ್ನತ್ರಯರಿಗೆ ಹೋಲಿಸಿಲ್ಲ. ಆದರೆ ಜನ ಸಾಮಾನ್ಯರ ಹೃದಯ ಬೇಧಿಸಿದ್ದು, ಪರಿವರ್ತನೆಯಾದದ್ದು ಮಾತ್ರ ಸರ್ವಜ್ಞ ನಿಂದಲೇ. ''ಮಹಾ ಕವಿಗಳು ಕೇವಲ ವಿದ್ವಜ್ಜನರ ಮನ್ನಣೆಗೆ, ಅವರ ಆದರಕ್ಕೆ ಬರೆದದ್ದು. ಆದರೆ ಸರ್ವಜ್ಞ ಉಚ್ಚ-ನೀಚ ವರ್ಗದವರಿಗೆ ತಿಳಿಯುವಂತೆ ಬರೆದು ಎಲ್ಲರ ಮೆಚ್ಚುಗೆಗೆ ಪಾತ್ರನಾದವನು'' (ಶಿವಾನುಭವ ಸಂಪುಟ-೨೨, ಸಂಚಿಕೆ-೬, ಪು.೧೫೫). ಸರ್ವಜ್ಞ ಇತರೆ ಕವಿಗಳಂತೆ ಒಂದು ಊರಿನಲ್ಲಿ ನಿಲ್ಲದೆ, ವೇಳೆಯನ್ನು ಹರಣ ಮಾಡದೇ ವಚನಗಳನ್ನು ಹಾಡಿದ್ದಿರಬಹುದು. ಇಲ್ಲಿ ಆತನ ನೈಜವಾದ ಕಾವ್ಯ ಪ್ರತಿಭೆಯನ್ನು, ಬಾಳಿನಲ್ಲಿ ಬೆಳಕನ್ನು ಜನಪದ ಸಾಹಿತ್ಯ ಪ್ರಪಂಚಕ್ಕೆ ದೇಣಿಗೆಯಾಗಿ ಕೊಟ್ಟಿರುವುದನ್ನು ಗಮನಿಸಬಹುದಾಗಿದೆ.

ಆದ್ದರಿಂದ ಇಷ್ಟೊಂದು ವರ್ಷಗಳಾಗಿದ್ದರೂ ಸರ್ವಜ್ಞನ ವಚನಗಳ ಅನುಭಾವಾಮೃತವನ್ನು ತೃಪ್ತಿಯಿಂದ ತಣಿದು ತೇಗಿದವರುಂಟು. ಮಾತನಾಡುವಾಗ , ನ್ಯಾಯ ತೀರಿಸುವಾಗ, ಇತರರೊಡನೆ ಮಾತನಾಡುವಾಗ, ಮತ್ತೊಂದನ್ನು ಹೋಲಿಸುವಾಗ ಸರ್ವಜ್ಞನ ವಚನಗಳಲ್ಲಿರುವ ಮಧುರ ಉಕ್ತಿಗಳನ್ನು ಇಂದಿಗೂ ಪಂಚಾಯತರು ನ್ಯಾಯ ತೀರಿಸುವ ಜಾಣ ಕುಶಲತೆಯಲ್ಲಿ ಉಪಯೋಗಿಸುವುದುಂಟು.

## ಅಧ್ಯಾಯ - ೩

# ಸರ್ವಜ್ಞನ ಜಾನಪದ ಭೂಮಿಕೆ

೩.೧. ಪ್ರವೇಶ

೩.೨. ಜನನ

೩.೩. ಕಾಲ

೩.೪. ವ್ಯಕ್ತಿತ್ವ

೩.೫. ಜಾನಪದ ಪರಿಸರ

## ೩.೧. ಪ್ರವೇಶ :

ಸರ್ವಜ್ಞನ ವ್ಯಕ್ತಿತ್ವ ಕುರಿತು ಈಗಾಗಲೇ ಅನೇಕ ಕೃತಿಗಳು ಬಂದಿದ್ದರೂ ಇಲ್ಲಿ ಪ್ರಾಸಂಗಿಕವಾಗಿ ಹಾಗೂ ಅಧ್ಯಯನದ ಅನುಕೂಲಕ್ಕಾಗಿ ಸರ್ವಜ್ಞನ ಪರಿಚಯ ಮಾಡಲಾಗಿದೆ. ಅವನ ವ್ಯಕ್ತಿತ್ವ, ಗುಣಗಳು ಪರಿಚಯವಾಗಬೇಕಾದರೆ; ಮೊದಲು ಆತನಿದ್ದ ಪರಿಸರ ಹೇಗಿತ್ತು?, ಆ ಕಾಲದ ಸ್ಥಿತಿ-ಗತಿಗಳು ಹೇಗಿದ್ದವು?, ಅವುಗಳ ಪರಿಣಾಮ ಈತನ ಮೇಲೆ ಹೇಗಾಯಿತು ? ಎಂಬಂತಹ ವಿಷಯಗಳನ್ನು ಮೊದಲು ತಿಳಿಯುವುದು ಅವಶ್ಯಕ.

ವಿಜಯನಗರ ಸಾಮ್ರಾಜ್ಯವು ಸಂಪೂರ್ಣವಾಗಿ ಪತನಗೊಂಡ ಸಂದರ್ಭದಲ್ಲಿ ಸರ್ವಜ್ಞ ಬಾಳಿದವನು ಎಂಬ ಪ್ರತೀತಿ ಇದೆ. ಅಂದರೆ ಸುಮಾರು ೧೬ನೇ ಶತಮಾನದ ಕೊನೆಯ ಹಂತದಲ್ಲಿ ಇದ್ದವನೆಂದು ತಿಳಿಯಬಹುದು. ಹಕ್ಕ-ಬುಕ್ಕರಿಂದ ವಿದ್ಯಾರಣ್ಯರ ಮೂಲಕ ಸ್ಥಾಪಿತವಾದ ಈ ವಿಜಯನಗರ ಸಾಮ್ರಾಜ್ಯ ಮುಂದೆ ಪ್ರೌಢದೇವರಾಯ ಮತ್ತು ಕೃಷ್ಣ ದೇವರಾಯರ ಕಾಲದಲ್ಲಿ ಸುವರ್ಣಯುಗದಲ್ಲಿ ತೇಲಾಡಿತು. ಅನೇಕ ಧರ್ಮ ಕಾರ್ಯಗಳು ನಡೆದವು. ಅನೇಕ ಭಾಷೆಗಳಿಗೆ, ಚಿತ್ರ ಕಲೆಗೆ, ಸಂಗೀತಕ್ಕೆ, ಸಾಹಿತ್ಯಕ್ಕೆ ವಿಶೇಷ ಮನ್ನಣೆಗಳು ಈ ಕಾಲದಲ್ಲಿ ದೊರೆತವು. ದೇಶದ ಇತಿಹಾಸದಲ್ಲಿಯೇ ಇಂತಹ ಒಂದು ಸಾಮ್ರಾಜ್ಯ ಬಹಳ ವೈಭವವಾಗಿ ಮೆರೆದಿತ್ತೆಂಬುದೇ ಆಶ್ಚರ್ಯದ ಸಂಗತಿಯಾಗಿದೆ. ಅಲ್ಲದೆ, ೧೫ ಮತ್ತು ೧೬ನೇ ಶತಮಾನಗಳು ಅತೀ ಮುಖ್ಯವಾದವುಗಳು. ಕಾರಣ ಈ ಸಾಮ್ರಾಜ್ಯದ ಕೀರ್ತಿ ಪತಾಕೆ ಪ್ರಪಂಚದ ಮೂಲೆ ಮೂಲೆಗೆ ಹರಡಿತ್ತು.

ಕೃಷ್ಣದೇವರಾಯನ ನಂತರ ಈ ಸಾಮ್ರಾಜ್ಯದ ಶ್ರೇಷ್ಠತೆ ನಿಧಾನವಾಗಿ ಕ್ಷೀಣಿಸ ತೊಡಗಿತು. ಬಹುಮನಿ ಸುಲ್ತಾನರು ಮೋಸದಿಂದ ಈ ಸಾಮ್ರಾಜ್ಯದೊಡನೆ ಹೋರಾಡಿದ್ದಲ್ಲದೆ, ಸಂಪತ್ತನ್ನು ಲೂಟಿ ಮಾಡಿದರು. ತಮ್ಮ ಅಸ್ಥಿತ್ವ ಸ್ಥಾಪಿಸಲು ಮುಂದಾದರು. ಆಗ ಇಲ್ಲಿನ ಜನರಲ್ಲಿದ್ದ ಶಾಂತಿ, ನೆಮ್ಮದಿಗಳೆಲ್ಲಾ ಅಲ್ಲೋಲ-ಕಲ್ಲೋಲವಾದವು. ಜನರು ಅನಿವಾರ್ಯವಾಗಿ ತಮ್ಮ ರಕ್ಷಣೆಗಾಗಿ ಕಳ್ಳತನ, ದರೋಡೆ, ದುಷ್ಟತನಗಳಿಗೆ ಕೈ ಹಾಕಿದರು. ದ್ವೇಷ-ಅಸೂಯೆಗಳು ಎಲ್ಲರಲ್ಲಿ ಕಾಣಿಸತೊಡಗಿದವು. ಇದರಿಂದ ಜನ ಸಾಮಾನ್ಯರು ಬಡತನ, ನೋವುಗಳಿಂದ ಇನ್ನಷ್ಟು ಕುಗ್ಗಿದರು. ಜನರು ಪಶುವಂತೆ ವರ್ತಿಸತೊಡಗಿದರು.

ಇಂತಹ ಘೋರವಾದ ಪರಿಸ್ಥಿತಿ ಹಾಗೂ ಸಂದಿಗ್ಧ ಸ್ಥಿತಿಯಲ್ಲಿ ಸರ್ವಜ್ಞ ಹುಟ್ಟಿ ಬಂದವನು. ಈತನಿಗೆ ಈ ಸಾಮ್ರಾಜ್ಯದ ಹಸಿಯಾದ ಚಿತ್ರಣ ಕಣ್ಣ ಮುಂದೆ ತೇಲಿ ಹೋಗಿರಬಹುದು. ತನ್ನ ಸುತ್ತಮುತ್ತಲಿದ್ದ ಜನ ಸಾಮಾನ್ಯರ ಬದುಕಿನ ಸ್ಥಿತಿ-ಗತಿಗಳನ್ನು ತಿದ್ದುವುದಕ್ಕಾಗಿ ಬರಗಾಲದಲ್ಲಿನ ಹಸಿರಂತಾಗಿ, ದಾರಿ ತಪ್ಪಿದವರಿಗೆ ಮಾರ್ಗದರ್ಶಕನಾಗಿ ಹಾಗೂ ಸಮಾಜದ ವೈದ್ಯನಾಗಿ, ಆ ಮೂಲಕ ತನ್ನ ವ್ಯಕ್ತಿತ್ವವನ್ನು ಬೆಳೆಯಿಸಿಕೊಂಡವನು. ಈತನಿಗಿಂತ ಹಿಂದಿನ ಕವಿಗಳು ಅರಮನೆಯ ಆಸ್ಥಾನದ ವೈಭವವನ್ನು ಅನುಭೋಗಿಸುತ್ತಾ ರಾಜ ಮಹಾರಾಜರನ್ನು ಹೊಗಳಿಯೋ ಅಥವಾ ತಮ್ಮ ಕಾವ್ಯಗಳಲ್ಲಿ

ಅವರನ್ನು ವರ್ಣಿಸುತ್ತಿದ್ದರು. ಇದಕ್ಕೆ ಪಂಪ ರನ್ನಾದಿಗಳೇ ಸಾಕ್ಷಿ. ನಂತರ ಬಂದ ಹರಿಹರ ತನ್ನ 'ಪಂಪಾಶತಕ'ದಲ್ಲಿ ರಾಜ ಸ್ಥಾನವನ್ನು ಧಿಕ್ಕರಿಸಿ ಸ್ವತಂತ್ರವಾಗಿ ಬದುಕುತ್ತಾ, 'ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯಮಂ,ತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ ಅನವರತಂ ಪೊಗಳ್ದು ಕೆಡಬೇಡಲೇ ಮಾನವ. ನಮ್ಮನಾಳ್ವ ಹಂಪೆಯ ಪಂಪಾಪತಿಯನ್ನು ಪೊಗಳ್'' ಎಂದು ಕವಿ ಮಹಾಶಯರಲ್ಲಿ ವಿನಂತಿಸಿಕೊಂಡಿರುವನು (ಸರ್ವಜ್ಞನ ಕೃತಿಗಳು, ಜೀವನ ಮತ್ತು ಸಂದೇಶ, ಪು.೧೦೦-೧೦೧). ಆದೇರೀತಿ ಸರ್ವಜ್ಞನು ಕೂಡ ಇದೇ ಸಂಪ್ರದಾಯ ಬದ್ಧನಾಗಿ ಬೆಳೆದವನು. ''......... ಯಂತ್ರ ವಾಹಕನ ದಯೆ ಲೇಸು, ಜಗದಿ ಸ್ವತಂತ್ರವೇ ಲೇಸು''. ಜಗತ್ತಿನಲ್ಲಿ ಆಯಾ ದೇಶಾದಿಗಳ ಜನರಿಗೆ ಸ್ವತಂತ್ರದಿಂದ ಜೀವನ ಮಾಡುವುದೇ ಲೇಸೆಂದು ಸರ್ವಜ್ಞ ಹೇಳಿದ್ದಾನೆ. ಒಬ್ಬರ ಹಂಗಿನಲ್ಲಿ ಬಾಳುವುದು ತರವಲ್ಲವೆಂಬ ನೇರ ಮಾತನ್ನು ಹೇಳುವ ಸ್ವಭಾವ ಈತನದು.

## ೩.೨. ಸರ್ವಜ್ಞನ ಜನನದ ಬಗೆಗಿರುವ ಕಥೆಗಳು :

ಸರ್ವಜ್ಞನ ಸಂಪದದ ಪುಟ ೧೬ರಲ್ಲಿ ಅವನ ಜನನದ ಬಗ್ಗೆ ಉಲ್ಲೇಖವಾಗಿರುವ ಕಥೆ ;

೧) ಕೈಲಾಸದಲ್ಲಿ ಹಿಂದೆ ಸರ್ವಜ್ಞನು ಮೇಳವನ್ನು ನುಡಿಸುವ ಒಬ್ಬ ಗಣನಾಥ. ಈತನ ಹೆಸರು ಪುಷ್ಪದತ್ತ ಎಂಬುದಾಗಿ ಅನೇಕ ಸಂಶೋಧಕರು ಹೇಳಿದ್ದಾರೆ. ಆದೇನೇ ಇರಲಿ ಈ ಗಣನಾಯಕನು ತನಗಿದ್ದ ಶಾಪ ಪರಿಹಾರಾರ್ಥವನ್ನು ಮಾಡಿಕೊಳ್ಳುವುದಕ್ಕಾಗಿಯೋ ಅಥವಾ ಮತ್ತಾವ ಕಾರಣಕ್ಕಾಗಿಯೋ ಭೂಲೋದಲ್ಲಿ ಮಾನವನಾಗಿ ಜನಿಸಿದ. ಈ ಶಾಪದ ಜನ್ಮವೇ ಈ ಭೂ-ಲೋಕಕ್ಕೆ ಒಂದು ಬೆಳಕಿಂಡಿಯಾಗಲಿ ಎಂಬ ಶಿವನ ಆಶೀರ್ವಚನ ಹೊತ್ತು ಮಾನವ ಜನ್ಮ ಪಡೆದನೆಂಬುದಾಗಿ ಈತನ ವಚನಗಳಿಂದ ತಿಳಿದುಬರುತ್ತದೆ.

ಮುನ್ನ ಕೈಲಾಸದಲಿ ಪನ್ನಗಧರನಾಳು
ಎನ್ನಯ ಹೆಸರು ಪುಷ್ಪದತ್ತನು ಎಂದು
ಮನ್ನಿಪದು ದಯದಿ ಸರ್ವಜ್ಞ.
ಅಂದಿನ ಪುಷ್ಪದತ್ತ ಬಂದ ವರರುಚಿಯಾಗಿ
ಮುಂದವ ಸಾಲೆ ಸರ್ವಜ್ಞನೆಂದೆನಿಸಿ
ನಿಂದವನು ನಾನೇ ಸರ್ವಜ್ಞ.

೨) ಇನ್ನೊಂದು ಕಥೆ :

ಧಾರವಾಡ ಜಿಲ್ಲೆಯ ಮಾಸೂರು ಗ್ರಾಮದಲ್ಲಿ ಬಸವರಸನೆಂಬ ಆರಾಧ್ಯ ಬ್ರಾಹ್ಮಣನು ವಾಸವಾಗಿದ್ದನು. ಇವನಿಗೆ ಮಲ್ಲರಸನೆಂತಲೂ ಹೆಸರಿತ್ತು. ಇವನ ಹೆಂಡತಿಯ ಹೆಸರು ಮಲ್ಲವ್ವ ಅಥವಾ ಮಲ್ಲವ್ವಕ್ಕ ಎಂಬುದಿತ್ತು.

ಮಕ್ಕಳಿಲ್ಲವು ಎಂದು ಅಕ್ಕ ಮಲ್ಲಮ್ಮನು
ದುಕ್ಕವ ಬಸವರಸಗರುಪಲು ಕಾಶಿಯ
ಮುಕ್ಕಣ್ಣನೊಲಿದ ಸರ್ವಜ್ಞ.

ಬಂಜೆಯಾಗಿದ್ದ ಈ ಮಲ್ಲವ್ವ ಒಂದು ದಿನ ತನ್ನ ಮನದಳಲನ್ನು ಗಂಡನಾದ ಬಸವರಸನಿಗೆ ಅರಿಕೆ ಮಾಡಲು ಅವನು ಕಾಶಿ ವಿಶ್ವನಾಥನಲ್ಲಿ ಬೇಡಿಕೊಳ್ಳಲು ಕಾಶಿಗೆ ಹೊರಟನು.

ಮಾಸೂರ ಬಸವರಸ ಕೂಸನೀಶನ ಕೇಳೆ
ಕಾಶಿಯಾ ಅಭವನೊಳು ಪಡೆದವರವದು
ಸೂಸಿತಿಂತೆನಲು ಸರ್ವಜ್ಞ.

(ಸರ್ವಜ್ಞನ ಸಚೇತನ ಸಂದೇಶ, ಮನೋಹರರಾವ್ ದೇಶಪಾಂಡೆ).

ಮಾಸೂರ ಬಸವರಸನಿಗೂ ಮಕ್ಕಳು ಬೇಕೆಂಬ ಅಭಿಲಾಷೆ ಉಂಟಾದಾಗ ಕಾಶಿ ವಿಶ್ವನಾಥನಲ್ಲಿ ಮೊರೆ ಇಟ್ಟನು. ನಂತರ ವಿಶ್ವನಾಥನ ವರಪ್ರಸಾದದಿಂದ ಅವನ ಮನೋನಿಷ್ಠೆ ಈಡೇರಿತು. ಡಾ|| ಅಕಬರ ಅಲಿಯವರು ತಮ್ಮ ಪುಸ್ತಕದಲ್ಲಿ ತಿಳಿಸಿದಂತೆ; ಬಸವರಸನ ಭಕ್ತಿ ಮೆಚ್ಚಿ ಪ್ರಸನ್ನನಾದ ಕಾಶೀವಿಶ್ವನಾಥನು ಒಂದು ಅನ್ನದ ಉಂಡೆಯನ್ನು ಕೊಟ್ಟನು. ಈ ಪ್ರಸಾದವನ್ನು ತಿಂದು ಮೊದಲು ಎಲ್ಲಿ ಗರ್ಭದಾನ ಮಾಡುವೆಯೋ ಅಲ್ಲಿ ನಿನಗೊಬ್ಬ ವಿಶೇಷ ಪುತ್ರನು ಹುಟ್ಟುವನೆಂದು ಆಶೀರ್ವದಿಸಿದನಂತೆ.

ಈ ಪ್ರಕಾರ ವರವನ್ನು ಪಡೆದ ಬಸವರಸನು ತೀರ್ಥಯಾತ್ರೆಯನ್ನು ಮುಗಿಸಿ, ಹಿಂದಿರುಗಿ ತನ್ನ ಊರಾದ ಮಾಸೂರಿಗೆ ಬರುವಾಗ ಹಾದಿಯಲ್ಲಿ ದಣಿವಾಗಿದ್ದರಿಂದ ಆಯಾಸ ಪರಿಹರಿಸಿಕೊಳ್ಳಲು ಅಂಬಲೂರು ಎಂಬ ಗ್ರಾಮದಲ್ಲಿ ಉಳಿದುಕೊಂಡನು. ಆಗ ಹಸಿವು, ನೀರಡಿಕೆ ಹೆಚ್ಚಾಗಿದ್ದರಿಂದ ಆ ಗ್ರಾಮದಲ್ಲಿದ್ದ ಕುಂಬಾರ ಸಾಲಿಯ ಮನೆಗೆ ಹೋಗಿ, ಬೇಕಾದ ಗಡಿಗೆಗಳನ್ನು ಕೊಂಡುಕೊಳ್ಳುವಾಗ ಅವನ ಮಗಳಾದ ಬಾಲ ವಿಧವೆ ಮಾಳಿ ಎಂಬುವವಳ ಪರಿಚಯವಾಯಿತು. ನಂತರ ಗಡಿಗೆಗಳನ್ನು ತೆಗೆದುಕೊಂಡು ಒಂದು ಬಾವಿಯ ಬದಿಯಲ್ಲಿ ಅಡುಗೆ ಮಾಡಿಕೊಳ್ಳಲು ಸನ್ನದ್ಧನಾದ. ಆಗ ಇದ್ದಕ್ಕಿದ್ದಂತೆ ಆಕಾಶವೆಲ್ಲಾ ಮೋಡದಿಂದ ಮುಸುಕಿ ಮಳೆ ಪ್ರಾರಂಭವಾಗತೊಡಗಿತು. ಆತ ಆ ಮಳೆಯಲ್ಲಿಯೇ ತೋಯಿಸಿಕೊಂಡ ಮತ್ತು ಈಗಾಗಲೇ ಬಸವರಸನು ಹಸಿದು ಕಂಗಾಲಾಗಿದ್ದ. ಮಳೆಯಿಂದ ರಕ್ಷಿಸಿಕೊಳ್ಳಲು ಕುಂಬಾರಸಾಲಿಯ ಮನೆಯ ಮುಂದೆ ಬಂದು ನಿಂತುಕೊಂಡನು.

ಗಡಿಗೆ, ಮಡಿಕೆ ಕೊಂಡು ಅಡುಗೆಯಾ ವೇಳೆಯೊಳು
ಬಿಡದೆ ಮಳೆ ಮೋಡ ಪೊಡೆಯಲು
ಈರ್ವರಿಗೆ ತಡಬಡಲಾಯ್ತು ಸರ್ವಜ್ಞ.

ಈಗಾಗಲೇ ಪರಿಚಿತಳಾಗಿದ್ದ ಮಾಳಿ ಎಂಬ ಆ ಕುಂಬಾರ ವಿಧವೆ ಇವನನ್ನು ಮನೆಯೊಳಗೆ ಕರೆದು ಶೈತ್ಯೋಪಚಾರ ಹಾಗೂ ಊಟೋಪಚಾರಗಳನ್ನು ನೆರವೇರಿಸಿದಳು. ಅವಳು ದಷ್ಟಪುಷ್ಟಳೂ, ಸುಂದರಿಯೂ ಆಗಿದ್ದುದರಿಂದ ಅವಳಲ್ಲಿ ಸಹಜವಾಗಿಯೇ ಬಸವರಸನು ಮೋಹಗೊಂಡನು. ಹೊರಗೆ ಭೋರ್ಗರೆಯುತ್ತ ಮಳೆ ಬೀಳುತ್ತಿರಲು ಆ ಕ್ಷಣದಲ್ಲಿ ಯಾರ ಅಭ್ಯಂತರವಿಲ್ಲದಿದ್ದಾಗ ಯಾರೂ ಬಾರದಿದ್ದಾಗ ಅವಳಿಗೂ ಸಹ ಮೋಹವುಂಟಾಯಿತು.

ಅಂಬಲೂರೊಳಗೆಸವ ಕುಂಬಾರ ಸಾಲೆಯಲಿ
ಇಂಬಿನ ಕಳೆಯ ಮಾಳಿಯೊಳು ಬಸವರಸ
ನಿಂಬಿಟ್ಟನೆನ್ನ ಸರ್ವಜ್ಞ.

ಆ ಸಂದರ್ಭದಲ್ಲಿ ಇಬ್ಬರಿಗೂ ಭೋಗೇಚ್ಛೆಗೆ ಅನುಕೂಲವಾಯಿತು. ಹೀಗೆ ಗರ್ಭವತಿಯಾದ ಮಾಳಿ ಹತ್ತು ತಿಂಗಳುಗಳಾದ ನಂತರ ಕಾಳಿ ಎಂಬ ಸೂಲಗಿತ್ತಿಯ ಸಹಾಯದಿಂದ ಒಬ್ಬ ಗಂಡು ಮಗುವಿಗೆ ಜನ್ಮ ನೀಡಿದಳು.

೩) ಸರ್ವಜ್ಞನ ಜನ್ಮ ವೃತ್ತಾಂತದ ಬಗ್ಗೆ ಮತ್ತೊಂದು ಕಥೆ ಹೀಗಿದೆ:-

ಬಸವರಸ ಕಾಶೀ ಕ್ಷೇತ್ರದಿಂದ ಹಿಂದಿರುಗಿ ಬರುವಾಗ ವಿಪರೀತ ಮಳೆ ಹಾಗೂ ರಾತ್ರಿಯಾಗಿದ್ದುದರಿಂದ ಸಮೀಪದ ಅಂಬಲೂರು ಎಂಬ ಗ್ರಾಮದಲ್ಲಿದ್ದ ಕುಂಬಾರನ ಮನೆಯಲ್ಲಿ ಆಶ್ರಯ ಪಡೆದನು. ಅಲ್ಲಿ ತಾನೇ ಸ್ವತಃ ಬೇರೆ ಅಡಿಗೆ ಮಾಡಿಕೊಂಡು ಊಟ ಮಾಡಿದನು . ರಾತ್ರಿಯಾಗಿದ್ದರೂ ಈತ ಮಳೆ ಮಾತ್ರ ನಿಲ್ಲದಿದ್ದದ್ದನ್ನು ಕಂಡು ಮನದಲ್ಲಿಯೇ ಚಿಂತಿಸತೊಡಗಿದ . ಈತನ ಚಿಂತೆಯನ್ನು ಕಂಡ ಆ ಕುಂಬಾರ ನಾನಾ ಬಗೆಯಲ್ಲಿ ಪ್ರಶ್ನಿಸಿದರೂ, ಬಸವರಸ ತನ್ನ ಮನದಲ್ಲಿದ್ದ ವಿಚಾರವನ್ನು ಹೇಳಲಿಲ್ಲ. ಆದರೂ ಆ ಕುಂಬಾರ ಬಹಳ ಒತ್ತಾಯ ಮಾಡಿದಾಗ ''ನಾನು ಕಾಶೀ ಕ್ಷೇತ್ರದ ವಿಶ್ವನಾಥನಿಂದ ಮಕ್ಕಳಾಗುವ ವರಪ್ರಸಾದವನ್ನು ತಂದಿರುವೆ, ಇದನ್ನು ಈ ದಿನವೇ ನನ್ನ ಹೆಂಡತಿಗೆ ಕೊಟ್ಟರೆ ಅವಳು ಗರ್ಭಧರಿಸಿ ಮಹಾಪುರುಷನಿಗೆ ಜನ್ಮ ನೀಡುವಳು'' ಎಂದು ನುಡಿದ .

ಇಂತಹ ಶುಭದಿನ ಇಂದು ಎಂದು ನಿಟ್ಟುಸಿರು ಬಿಡುವುದನ್ನು ಕಂಡ ಈ ಕುಂಬಾರ ಕ್ಷಣ ಹೊತ್ತು ಯೋಚಿಸಿ ತನ್ನ ಮಗಳನ್ನು ಕರೆದು ಅವನ ಮುಂದೆ ನಿಲ್ಲಿಸಿ, ''ಮೈನೆರೆದು ಕೆಲವೇ ದಿನಗಳಾಗಿವೆಯಷ್ಟೆ. ತಾವು ಆ ಶಿವನ ವರಪ್ರಸಾದವನ್ನು ನನ್ನ ಮಗಳಿಗೆ ನೀಡಿದರೆ ಇವಳು ಆನಂದದಿಂದ ಸ್ವೀಕರಿಸುವಳು'' ಎಂದನು . ಆ ಬಸವರಸ ವಿಪ್ರ ಉಭಯ ಸಂಕಟದಿಂದ ಕೊನೆಗೆ ಕುಂಬಾರನ ಭಿನ್ನಹವನ್ನು ಮನ್ನಿಸಿ, ಆತನ ಮಗಳಲ್ಲಿ ಅನುರಕ್ತನಾದನು.

ಬಿಂದುವನು ಬಿಟ್ಟು ಹೋದಂದು ಬಸಿರಾದಳವ
ಳೊಂದಾಗಿ ಹೊತ್ತ ದಶಮಾಸವುದರದಿ
ನಿಂದಾನು ಬೆಳೆದೆ ಸರ್ವಜ್ಞ.

ಹೀಗೆ ತಾನು ತಂದಿದ್ದ ಶಿವನ ಪ್ರಸಾದವನ್ನು ಅವಳಿಗೆ ನೀಡಿ , ಮರುದಿನ ಬೆಳಿಗ್ಗೆ ತನ್ನ ಊರಿಗೆ ಹೊರಟ. ಈ ಮಾಳಿ ಹತ್ತು ತಿಂಗಳ ನಂತರ ಸರ್ವಜ್ಞ ಎಂಬುವವನಿಗೆ ಜನ್ಮ ನೀಡಿದಳು. ಮುಂದೆ ಕೆಲದಿನಗಳಾದ ಬಳಿಕ :

ಮಾಳನು ಮಾಳಿಯೂ ಕೂಳ್ತಿಂದ ಹೆಮ್ಮೆಯಲಿ
ಕೇಳೆ ನೀನಾರ ಮಗನೆಂದು ನಾ ಶಿವನ
ಮೇಳದಣುಗೆಂಬೆ ಸರ್ವಜ್ಞ.

ಮನೆಯ ಯಜಮಾನ ಮಾಳನೂ, ಮಾಳಿಯೂ ಹೆಮ್ಮೆಯಿಂದ ನೀನಾರ ಮಗನು? ಎಂದು ಸರ್ವಜ್ಞನನ್ನು ಇನ್ನು ಚಿಕ್ಕವನಿರುವಾಗಲೇ ಕೇಳಿದಾಗ, ''ನಾನು ಶಿವಪ್ರಸಾದದಿಂದ ಹುಟ್ಟಿರುವುದ ರಿಂದ ಶಿವ-ಪಾರ್ವತಿಯರೇ ನನ್ನ ನಿಜವಾದ ತಂದೆ-ತಾಯಿಗಳೆಂದೂ ನನ್ನ ಮೊದಲ ಹೆಸರು ಕೈಲಾಸದಲ್ಲಿ ಪುಷ್ಪದತ್ತನೆಂದೂ'' ಹೇಳಿದನು. ಇದನ್ನು ಕೇಳಿದ ಮಾಳ ಮತ್ತು ಮಾಳಿಯರು ಕೋಪದಿಂದ ಸರ್ವಜ್ಞನನ್ನು ಮನೆಯಿಂದ ಹೊರಹಾಕಿದರು.

ನೂಕಿದರು ಅವರಾಗ । ಕೂಕತನದೊಳು ಬೇಗ ।
ಲೋಕದೊಳಗೆಲ್ಲ ಕಂಡುದನು ಮಡಿದು ತಾ ।
ನೇಕವಾಗಿಹನು ಸರ್ವಜ್ಞ ॥

ಈ ರೀತಿಯಾಗಿ ಸತ್ಯವನ್ನು ಸರ್ವಜ್ಞ ನುಡಿದಾಗ ಅತನ ತಂದೆ-ತಾಯಿಗಳು ಕೋಪಾವೇಶದಿಂದ ಅವನನ್ನು ಮನೆಯಿಂದ ಹೊರಗೆ ಹಾಕಿದರು . ಅಂದಿನಿಂದ ನಾನು ಯಾರಿಗೂ ಹೆದರದೆ ಕಂಡುಂಡ ಸತ್ಯವನ್ನು ಹೇಳುತ್ತಾ ಕನ್ನಡ ನಾಡಿನಲ್ಲೆಲ್ಲ ಒಬ್ಬಂಟಿಗನಾಗಿ ಸಂಚರಿಸಿದೆನೆಂದು ಹೇಳಿಕೊಂಡಿರುವನು.

ಸರ್ವಜ್ಞನ ಅಂಕಿತದಲ್ಲಿರುವ ಜನ್ಮ ವೃತ್ತಾಂತದ ಅಚ್ಚಾಗಿರುವ ಎಲ್ಲ ಗ್ರಂಥಗಳಲ್ಲಿಯೂ ಒಂದೇ ಪ್ರಕಾರವಾದ ಕಥೆ ಕಾಣಿಸಿಕೊಂಡಿದೆ. ಇದನ್ನು ಪರಿಭಾವಿಸಿದಲ್ಲಿ ಈ ವೃತ್ತಾಂತದಲ್ಲಿ ಉಕ್ತವಾದಂತಹ ಅಂಬಲೂರಿನಲ್ಲಿ ಜನಿಸಿದ ಸರ್ವಜ್ಞನನೇ 'ಕಾಲಜ್ಞಾನ' ಬರೆದಿರಬೇಕೆಂದೂ ಇತರ ತ್ರಿಪದಿಗಳನ್ನು ಬರೆದವನು ಬೇರೊಬ್ಬ ಸರ್ವಜ್ಞನಾಗಿರಬೇಕೆಂದೂ ಸಂದೇಹ ಬರಬಹುದಾಗಿದೆಂದು ಶ್ರೀ ಉತ್ತಂಗಿ ಚೆನ್ನಪ್ಪನವರು ಪ್ರಾಸ್ತವಿಕವಾಗಿ ನುಡಿದು ಕ್ರಿ.ಶ. ೧೯೨೪ರ ಸುಮಾರಿಗೆ ಪ್ರಚಲಿತವಿದ್ದ ಸರ್ವಜ್ಞನ ಜನ್ಮ ವೃತ್ತಾಂತದ ಬಗೆಗೆ ಈ ಕಳಗಿನ ಭಿನ್ನಾಭಿಪ್ರಾಯಗಳನ್ನು ಸಂಗ್ರಹಿಸಿದ್ದಾರೆ (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ: ಪು. ೭-೮).

''ಸರ್ವಜ್ಞನೆಂಬುವನು ಆರಾಧ್ಯ ಬ್ರಾಹ್ಮಣನಾದ ಬಸವರಸನ ಧರ್ಮಪುತ್ರನು. ಇವನು ಲಿಂಗಾಯತ ಮತವನ್ನು ಸ್ವೀಕರಿಸಿದ ಬಳಿಕ ಜಾತಿ-ಕುಲ,ಮೂರ್ತಿಪೂಜೆ,ಆಚಾರ-ವಿಚಾರ ಮೊದಲಾದವುಗಳನ್ನು ವಿಪರೀತವಾಗಿ ಖಂಡಿಸುತ್ತಾ ನಡೆದಿದ್ದರಿಂದ ಜನರಲ್ಲಿ ದ್ವೇಷವು ಹೆಚ್ಚಲು ಜಾತ್ಯಾಭಿಮಾನಿಯಾದ ಬ್ರಾಹ್ಮಣನೊಬ್ಬನು ಧರ್ಮಾಂತರ ಮಾಡಿದ ಸರ್ವಜ್ಞನ ಬಗ್ಗೆ ಜನರಲ್ಲಿ ತಿರಸ್ಕಾರ ಉಂಟಾಗಲೆಂದು ಹಾಗೂ ಅಬದ್ಧ ಕಥೆಯನ್ನು ಹುಟ್ಟಿಸಿರಬೇಕೆಂದು'' ಊಹೆಯ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಮಹಾಪುರುಷರು ಜ್ಞಾನಿಗಳು ಸಾಮಾನ್ಯವಾಗಿ ಜನಿಸುವ ಶುಭಯೋಗದಲ್ಲಿ ಈತನೂ ಜನಿಸಿರುವ ನೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಮೀನ ಲಗ್ನದಲ್ಲಿ ಲಗ್ನಾಧಿಪತಿಯ ಆ ಗುರುವು ಕೀರ್ತಿ ಸ್ಥಾನದಲ್ಲಿರುವಂತಹ ಶುಭ ಘಳಿಗೆಯಲ್ಲಿ ಸರ್ವಜ್ಞನ ಜನನವಾಗಿರುವುದರಲ್ಲಿ ಸಂದೇಹವಿಲ್ಲ ಎಂಬ ಮಾತನ್ನು 'ಸರ್ವಜ್ಞ ಸಂಪದ'ದಲ್ಲಿ ಮಾಗಡಿ ರಂಗನರಸಿಂಹಯ್ಯನವರು ತಿಳಿಸಿದ್ದಾರೆ. ಸರ್ವಜ್ಞ ತಾನು ಮಾಳಿಯ ಗರ್ಭದಿಂದ ಹೊರಗೆ ಬಂದ ಸಮಯದಲ್ಲಿನ ಹೆರಿಗೆಯ ವಿವರಗಳನ್ನೂ ಸಹ ಕಣ್ಣಿಗೆ ಕಟ್ಟುವಂತೆ ವರ್ಣಿಸಿರುವುದನ್ನು ಗಮನಿಸಿದಾಗ ಈತನು ತ್ರಿಕಾಲ ಜ್ಞಾನಿ ಎಂಬುದರಲ್ಲಿ ಯಾವ ಸಂದೇಹವಿಲ್ಲವೆನ್ನ ಬಹುದು.

ಈತನ ಅನೇಕ ವಚನಗಳು ಅದೆಷ್ಟೋ ಹೃದಯಗಳನ್ನು ತಣಿಸಿವೆ, ಮಣಿಸಿವೆ, ನಡುಗಿಸಿವೆ ಹಾಗೂ ಬುದ್ಧಿಗಳನ್ನು ಉಣಿಸಿವೆ. ಈತನೊಬ್ಬ ಜಾನಪದ ಸಾಹಿತ್ಯಾಚಾರ್ಯನೆಂದು ಹೇಳಬಹುದು. ಈತನ ವಚನಗಳಿಗೆ ರಾಜಾಶ್ರಯದ ಮನ್ನಣೆ ದೊರೆಯದಿದ್ದರೂ ಲೋಕಾಶ್ರಯದ ಗೌರವಾದರಗಳು ಸಂಪೂರ್ಣವಾಗಿ ಲಭಿಸಿವೆ.

## ೩.೩. ಸರ್ವಜ್ಞನ ಕಾಲ :

ನದಿ ಮೂಲ ಹಾಗೂ ಋಷಿ ಮೂಲ ಹುಡುಕಬಾರದೆಂಬ ಗಾದೆ ಸಾರ್ವಕಾಲಿಕ ಸತ್ಯ. ಆದರೂ ಅದನ್ನು ಪತ್ತೆ ಮಾಡುವ ತವಕ ಪ್ರತಿಯೊಬ್ಬ ಮನುಷ್ಯನಲ್ಲಿ ಸಹಜವಾಗಿರುತ್ತದೆ. ಯಾವ ಪುರುಷನೇ ಆಗಿರಲಿ ತನ್ನ ಸಾಧನೆ-ಸಿದ್ಧಿಗಳಿಂದ ಮೇಲಕ್ಕೇರಿ ಬಂದಾಗ ಅವನ ಮೂಲವನ್ನು ಕೆದಕುವುದೇ ಕುತೂಹಲವಾಗಿರುತ್ತದೆ. ಅನಂತರ ಮತ್ತೆ ಆತನ ಮಾತನ್ನು, ವಿಚಾರವನ್ನು ಅರಿಯಲು ಮುಂದಾಗುತ್ತೇವೆ. ಇಂತಹ ಜಿಜ್ಞಾಸೆಯನ್ನು ಮೂಲೆಗೊತ್ತಿ ಮುಂದುವರೆಯಲು ಸಾಧ್ಯವಾಗಿದ್ದರೂ ಮತ್ತೆ ಮತ್ತೆ ಪ್ರಶ್ನಿಸುವ ಹಂಬಲ ಹೆಚ್ಚಾಗಿರುತ್ತದೆ. ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಉನ್ನತ ಕೊಡುಗೆಗಳನ್ನು ನೀಡಿದ ಅನೇಕ ಮಹಾಪುರುಷರ ಬಗೆಗೆ ಚರಿತ್ರೆ ಮೌನತಾಳಿದೆ. ಸರ್ವಜ್ಞನ ಬಗೆಗೆ ಚರಿತ್ರೆಯನ್ನು ಸಂಗ್ರಹಿಸುವಲ್ಲಿ ಕೆಲವು ಖಚಿತವಲ್ಲದ, ಬರೀ ಊಹಾ ಪೊಹಗಳ ಆಧಾರಗಳು ಮಾತ್ರ ದೊರೆಯುತ್ತವೆ. ಇಂತಹ ವ್ಯಕ್ತಿಗಳ ಜೀವನ ಚರಿತ್ರೆಯನ್ನು ರೂಪಿಸುವಲ್ಲಿ ಸ್ವತಂತ್ರ ಕೃತಿಗಳು, ಅವರ ಸಮಕಾಲೀನ ಚರಿತ್ರೆ, ಇತರೆ ಕೃತಿಗಳು, ಐತಿಹ್ಯ, ಶಾಸನಗಳು ಪ್ರಮುಖವೆನಿಸುತ್ತವೆ.

ಸರ್ವಜ್ಞನ ವಚನಗಳಷ್ಟೇ ಆತನ ಆಂತರಿಕ ಪ್ರಮಾಣವೆಂದಿಟ್ಟುಕೊಂಡರೆ ಆತನ ಸಮಕಾಲೀನ ಕೃತಿಗಳನ್ನು ಬಾಹ್ಯ ಪ್ರಮಾಣವೆಂದಿಟ್ಟುಕೊಳ್ಳಬಹುದು. ಆದರೆ ಇಲ್ಲಿ ಸರ್ವಜ್ಞ ತನ್ನ ವೈಯಕ್ತಿಕ ಜೀವನದ ಬಗೆಗೆ ಸರಿಯಾದ ರೀತಿಯಲ್ಲಿ ಹೇಳಿಕೊಳ್ಳದಿರುವುದರಿಂದ ಆಂತರಿಕ ಪ್ರಮಾಣ ಖಚಿತವಾಗಿ ದೊರೆಯಲಾರದು. ಈತನ ನಂತರದ ಕವಿಗಳ ಕೃತಿಗಳಲ್ಲಿ ಕೆಲವು ಸಂಗತಿಗಳು ಈತನ ಜೀವನಚರಿತ್ರೆಗೆ, ಕಾಲದ ವಿವರದ ಬಗೆಗೆ, ಸಂಬಂಧಿಸಿದಂತೆ ಉಪಲಬ್ಧವಿರುವ ಆಧಾರಗಳ ಹಿನ್ನೆಲೆಯಲ್ಲಿಯೇ ಕೆಲ ಸಂಶೋಧಕರು ಜೀವನಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಆದರೆ ಇದು ಹೀಗೇ ಎಂದು ಹೇಳುವಂತಹ ಪೂರ್ಣ ಜೀವನ ಚರಿತ್ರೆ ಈತನ ಬಗೆಗೆ ದೊರೆತಿಲ್ಲವೆಂಬುದು ಬಹಳ ವಿಷಾದಕರ ಸಂಗತಿ ಎನಿಸುತ್ತದೆ. ಇದುವರೆಗೆ ದೊರೆತ ಮುಖ್ಯವಾದ ಆಧಾರಗಳನ್ನಿಟ್ಟುಕೊಂಡು, ಇದುವರೆಗೆ ಬಂದ ಸಂಶೋಧನೆಗಳನ್ನು ಗಮನಿಸಿ ಸರ್ವಜ್ಞನ ಜೀವನ ಚರಿತ್ರೆಯನ್ನು ಇಲ್ಲಿ ಅಧ್ಯಯನಕ್ಕೆ ಪೂರಕವಾಗುವಂತೆ ಹೇಳಲು ಪ್ರಯತ್ನಿಸಲಾಗಿದೆ.

ಸರ್ವಜ್ಞನಿಗಿದ್ದ ಕಾಲದ ವಿಷಯದಲ್ಲಿ ಪಂಡಿತರಲ್ಲಿ ಇನ್ನೂ ಐಕ್ಯಮತ್ಯವಿಲ್ಲದೇ ಭಿನ್ನಾಭಿಪ್ರಾಯಗಳು ಮುಂದುವರೆದಿವೆ. ಕೆಲವರ ಪ್ರಕಾರ ಈತ ೧೬ನೇ ಶತಮಾನದಲ್ಲಿದ್ದನೆಂದು ಹೇಳಬಹುದು. ಶ್ರೀಮಾನ್ ಉತ್ತಂಗಿ ಚೆನ್ನಪ್ಪನವರ ಅಭಿಪ್ರಾಯದಂತೆ ಈತ ೧೬ನೇ ಶತಮಾನದವನೆಂದು ಅನೇಕ ಪ್ರಮಾಣಗಳಿಂದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಆರ್.ನರಸಿಂಹಾಚಾರ್ ಅವರು ೧೭ನೇ ಶತಮಾನದವನೆಂದು ತಿಳಿಸುತ್ತಾರೆ.

''ಕಾಲ ಜ್ಞಾನ ಪದ್ಧತಿ''ಯ ವಚನಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ವಿಜಯನಗರದ ವಿನಾಶ (ಕ್ರಿ.ಶ. ೧೫೬೫), ಇಕ್ಕೇರಿ ಸಂಸ್ಥಾನದ ಪತನ (ಕ್ರಿ.ಶ. ೧೭೬೩), ಶ್ರೀರಂಗಪಟ್ಟಣವು ಇಂಗ್ಲೀಷರ ಕೈವಶವಾದುದು (ಕ್ರಿ.ಶ. ೧೭೯೯) ಇವೇ ಮೊದಲಾದ ಚಾರಿತ್ರಿಕ ಸಂಗತಿಗಳನ್ನು ಆಧರಿಸಿ ಸರ್ವಜ್ಞನ ಕಾಲ ಕ್ರಿ.ಶ. ೧೮೦೦ ಎಂದು ರೆವರೆಂಡ್ ಎಫ್. ಕಿಟೆಲ್‌ರವರು ನಿರ್ಧರಿಸಿದ್ದಾರೆ ( ಉದ್ಧೃತ: ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು.೩). ಇದಲ್ಲದೆ, ಭಾಷೆ, ಶೈಲಿಗಳ ಆಧಾರದ ಮೇಲೆ ಸ್ಥೂಲವಾಗಿ ಕವಿ ಬದುಕಿದ್ದ ಶತಮಾನವನ್ನು ಊಹಿಸಲು ಸಾಧ್ಯವಿದೆ. ಸರ್ವಜ್ಞನನ್ನು ಇತರೇ ಯಾವ ಕವಿಗಳು ಸ್ತುತಿಸಿರುವುದು ಅಷ್ಟಾಗಿ ತಿಳಿದು ಬಂದಿರುವುದಿಲ್ಲ. ಸರ್ವಜ್ಞನ ಭಾಷೆ ಕುಮಾರವ್ಯಾಸಾದಿಗಳ ನಡುಗನ್ನಡದ ಜಾಡಿಗಿಂತ ಮುಂದುವರೆದು, ಜನಾಭಿಮುಖವಾಗಿ ಬರೆಯುತ್ತಿದ್ದ ಪುರಂದರದಾಸರ ಭಾಷಾ ಶೈಲಿಯನ್ನು ಹೋಲುತ್ತದೆ. ಕಿಟೆಲ್‌ರವರು ಸರ್ವಜ್ಞನ ವಚನಗಳಲ್ಲಿ ಹಳಗನ್ನಡದ 'ಱ' ಕಾರವನ್ನೂ 'ೞ' ಕಾರವನ್ನು ಪ್ರಯೋಗಿಸಿದ್ದಾರೆಂದು ಮತ್ತು ಹಸ್ತಪ್ರತಿಗಳಲ್ಲಿ ಕಾರದ ಪ್ರಯೋಗವಿದೆ ಎಂದು ಹೇಳಿದ್ದಾರೆ. ಡಾ|| ಎಲ್. ಬಸವರಾಜು ಅವರು ಸಂಪಾದಿಸಿರುವ ಸರ್ವಜ್ಞನ ವಚನಗಳಲ್ಲೂ ಕೆಳದಿ ಮ್ಯೂಸಿಯಂನಲ್ಲಿ ದೊರೆತ ಹಸ್ತ ಪ್ರತಿಯಲ್ಲೂ 'ಱ' ಕಾರ ಪ್ರಯೋಗವಿದೆ. ಆದ್ದರಿಂದ ಕಿಟೆಲ್ ಅವರ ಅಭಿಪ್ರಾಯದಂತೆ ಲಿಖಿತ ಸಾಹಿತ್ಯ ಕೃತಿಗಳಲ್ಲಿ 'ೞ' ಕಾರ ಪ್ರಯೋಗವು ೧೭ನೆಯ ಶತಮಾನದಲ್ಲಿಯೂ ಇತ್ತೆಂದು ತಿಳಿದುಬರುತ್ತದೆ (ಸರ್ವಜ್ಞನ ವಚನಗಳು, ಪು.೨೬-೨೭).

ಸರ್ವಜ್ಞನು ತನ್ನ ವಚನಗಳಲ್ಲಿ ಬಸವಣ್ಣ ಹಾಗೂ ಇತರೇ ಶಿವ ಶರಣರ ವಚನಗಳ ಛಾಯೆಯನ್ನು ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಅಷ್ಟೇಅಲ್ಲ ಸಂಪಾದನೆಯ ಸಿದ್ಧವೀರಣ್ಣಾಚಾರ್ಯರು ಸಂಪಾದಿಸಿದ '' ಆಚರಣೆಯ ಸಂಬಂಧದ ೨೬೫ ತ್ರಿವಿಧಿ'ಗಳಲ್ಲಿ ನೇರವಾಗಿ ೨೬೧ರಿಂದ ೨೬೫ ವಚನಗಳಲ್ಲಿ ಬಸವಣ್ಣನವರನ್ನೇ ಸ್ತುತಿಸಿದ್ದಾನೆಂಬುದನ್ನು ಇಲ್ಲಿ ಕಾಣಬಹುದು.

ಬಸವ ಗುರುವಿನ ಹೆಸರ ಬಲ್ಲವರಾರಿಲ್ಲ
ಪುಸಿ ಮಾತನಾಡಿ ಕೆಡದಿರಿ । ಮೂಲೋಕಕ್ಕೆ
ಬಸವನೇ ಕರ್ತ ಸರ್ವಜ್ಞ.

ಹಸಿದೊಡಂಬಲಿಯ ಮುದ್ದು ಬಿಸಲಿಗೆ ಕೊಡೆ ಮುದ್ದು
ಬಸುರಲ್ಲಿ ಬಂದ ಶಿಶು ಮುದ್ದು ಲೋಕಕ್ಕೆ
ಬಸವಣ್ಣನೇ ಮುದ್ದು ಸರ್ವಜ್ಞ.
ಬಸವರಾಜನ ಚರಣ ಬಿಸುರುಹವ ಅನವರತ
ಒಸೆದು ನೆನೆಯಲ್ಕೆ ಬಸವೇಶ ಲಿಂಗೈ
ಕ್ಯ ಸುಖವನೊಲ್ದೀವ ಸರ್ವಜ್ಞ.

ಇಲ್ಲಿ ಬಸವಣ್ಣನವರ ಒಂದು ವಚನದ ಸಾಲುಗಳನ್ನು ನೋಡಿದಾಗ;

ಅರಸು ಮುನಿದರೆ ನಾಡಿನೊಳಗಿರಬಾರದಯ್ಯ
ಗಂಡ ಮುನಿದರೆ ಹೆಂಡತಿಯಾಗಿರಬಾರದಯ್ಯ
ಕೂಡಲಸಂಗಮದೇವ ನೀ ಮುನಿದರೆ ನಾನೆಂತು ಬದುಕುವೆನಯ್ಯ.

ಈ ಮೇಲಿನ ವಚನದ ಮೊದಲನೆಯ ಸಾಲನ್ನು ಸರ್ವಜ್ಞನು ಈ ರೀತಿ ಉಲ್ಲೇಖಿಸಿದ್ದಾನೆ;

ಅರಸು ಮುನಿದೂರೊಳಂ ಕುರಿಸಿರುವದತಿ ಕಷ್ಟ
ಸರಸವಿಲ್ಲದಾ ಠಾಣ್ಯದಿಂ ಬಾಣದ
ಬಿರಸು ಲೇಸೆಂದ ಸರ್ವಜ್ಞ.

(ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶ, ಪು.೫೪,೫೫,೫೬)

ಹೀಗೆ ಕೆಲವು ಸರ್ವಜ್ಞನ ವಚನಗಳಲ್ಲಿ ಶಿವಶರಣರ ಛಾಯೆಯನ್ನು ಗುರುತಿಸಬಹುದು. ಆದ್ದರಿಂದ ಈತನ ಕಾಲವನ್ನು ೧೨ನೇ ಶತಮಾನದ ನಂತರವೆಂದೇ ಹೇಳಬೇಕಾಗುತ್ತದೆ.

‘ವೇಮನ-ಸರ್ವಜ್ಞ ಸಂವಾದ’ ಎಂಬ ಗ್ರಂಥ ಶ್ರೀ ರಾಮಲಿಂಗ ಕವಿಗಳಿಂದ ಪರಿಶೋಧಿಸಲ್ಪಟ್ಟು, (ಶ್ರೀ ವೆಂಕಟೇಶ್ವರಪ್ರೆಸ್,ಬೆಂಗಳೂರಿನಲ್ಲಿ, ೧೯೧೨ರಲ್ಲಿ ಮುದ್ರಿತ) ಇಲ್ಲಿನ ಸರ್ವಜ್ಞ-ವೇಮನರ ಪದ್ಯಗಳಲ್ಲಿ ಬಸವಸ್ತುತಿ,ಲಿಂಗಪೂಜೆ,ಶಿವಯೋಗಮಹಿಮೆ,ಡಂಬಾಚಾರ ಖಂಡನೆ ಮೊದಲಾದ ವಿಷಯಗಳು ಏಕರೂಪ ವಾಗಿ ಕಂಡುಬರುತ್ತವೆಯಾದ್ದರಿಂದ ಇವರಿಬ್ಬರೂ ೧೫ನೇ ಶತಮಾನದಲ್ಲಿ ಒಬ್ಬರಿಗೊಬ್ಬರು ಪ್ರಭಾವಿತರಾಗಿರ ಬಹುದೆಂದು ತಿಳಿಯುತ್ತದೆ (ಶರಣ ಚರಿತಾಂಮೃತ,ಸಿದ್ಧಯ್ಯ ಪುರಾಣಿಕ, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು,೧೯೬೪).

ಶಾಸನ ಹಾಗೂ ವಚನ ಸಾಹಿತ್ಯವನ್ನು ಆಯ್ದುಕೊಂಡು ಇವುಗಳ ಪ್ರಭಾವ ಸರ್ವಜ್ಞನಿಗೆ ಹೇಗಾಗಿದೆ ಎಂಬುದು ವಿವೇಚಿಸಿದಾಗ ಈತನು ವೇವನನ ಸಮಕಾಲೀನ ಎನ್ನುವುದಾದರೆ, ಈತನ ಕಾಲ ಕ್ರಿ.ಶ.೧೪೫೦ ಎನ್ನಲಾಗಿದೆ ಎಂದು ಪ್ರೊ.ಉಮಾಪತಿಶಾಸ್ತ್ರಿಗಳು ಹೇಳಿದ್ದಾರೆ. ಅಂದರೆ ಸರ್ವಜ್ಞನು ಇದೇ ಕಾಲದಲ್ಲಿರ ಬಹುದೇ ಎಂದು ಊಹಿಸಬಹುದಾಗಿದೆ (ಸರ್ವಜ್ಞ-ಕವಿ,ಜೀವನ ಹಾಗೂ ಕಾವ್ಯ, ಪು.೨೪).

ಇಷ್ಟಲ್ಲದೇ ಇನ್ನುಳಿದ ವಿದ್ವಾಂಸರ ಅಭಿಪ್ರಾಯಗಳು ಈ ರೀತಿ ಇವೆ; ಸೋಮೇಶ್ವರಶತಕದ ಈ ಕೆಳಗಿನ ಪದ್ಯ ಸರ್ವಜ್ಞನಿಗೆ ಪ್ರಭಾವಿತವಾಗಿದೆ.

ಕೃತರಾಪಾನ್ವಿತನಾಹಿಮಾಂಶು ಗುರುವಿಂ, ಗೋತ್ರಾದಿ ಭಂಗಾಂಗ ದ್ರೌ-
ಪದಿಯಿಂ ಕೀಚಕನಂಬಕಾರಿ ಮುರಿದಂ ಸುಗ್ರೀವನಿಂ ವಾಲಿ ತಾಂ
ಹತನಾದಂ ದಶಕಂಠನಾ ಹರಿಶರಕ್ಕೀಡಾದನೇಂ ಪೇಳ್ವೆ ನಾ-
ನತಿ ಕಾಮರ್ಗತಿ ಹಾನಿಯೈ ಹರಹರ ಶ್ರೀ ಚೆನ್ನ ಸೋಮೇಶ್ವರ ॥

ಈ ಪದ್ಯದ ಕೆಲ ಸಾಲುಗಳನ್ನು ಅಥವಾ ಶಬ್ದಗಳನ್ನು ಅಥವಾ ಭಾವಾನುವಾದದ ರೀತಿಯಲ್ಲಿ ಸರ್ವಜ್ಞ ತನ್ನ ವಚನಗಳಲ್ಲಿ ಈ ರೀತಿ ಬಳಸಿಕೊಂಡಿದ್ದಾನೆ.

ಪರಸ್ತ್ರೀಯ ಗಮನದಿ ಪರಲೋಕವದು ಹಾನಿ
ಸಿರಿ ತಗ್ಗಿ ತಲೆಯು ತೊಲಗಿತು ರಾವಣಗೆ
ನರಲೋಕದಲ್ಲಿ ಸರ್ವಜ್ಞ.

ಒಂದು ಒಂಭತ್ತು ತಲೆ ಸಂದ ತೋಳಿಪ್ಪತ್ತು
ಬಂಧುಗಳನೆಲ್ಲ ಕೆಡಿಸಿತು ಪತಿವ್ರತೆಯ
ತಂದ ಕಾರಣದಿ ಸರ್ವಜ್ಞ.

ಈರೈದು ತಲೆವುಳ್ಳ ಧೀರ ರಾವಣ ಮಡಿದ
ವೀರ ಕೀಚಕನು ಗಡ ಸತ್ತ ಪರ ಸತಿಯ
ದಾರಿ ಬೇಡೆಂದ ಸರ್ವಜ್ಞ.

ಆಗಲೇಳು ಸಾಸಿರವು ಮುಗಿಲು ಮುಟ್ಟುವ ಕೋಟೆ
ಹಗಲೆದ್ದು ಹತ್ತು ತಲೆಯಾತ ಪರಸತಿಯ
ನೆಗೆದು ತಾ ಕೆಟ್ಟ ಸರ್ವಜ್ಞ.
ಎಂಟೆರೆಡು ತಲೆಯುಳ್ಳ ಬಂಟ ರಾವಣ ಕೆಟ್ಟ
ತುಂಟ ಕೀಚಕನು ಹೊರ ಹೊರಟ ಪರ ಸತಿಯ
ನಂಟು ಬೇಡೆಂದ ಸರ್ವಜ್ಞ.

ಈ ಸೋಮೇಶ್ವರ ಶತಕವನ್ನು ಸೋಮನಾಥನು ಸುಮಾರು ೧೩ನೆಯ ಶತಮಾನದ ಆದಿ ಭಾಗದಲ್ಲಿ ಬರೆದಿರಬಹುದೆಂದು ರಂ.ಶ್ರೀ. ಮುಗಳಿಯವರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವ್ಯಕ್ತಪಡಿಸಿದ್ದಾರೆ. ಆದ್ದರಿಂದ ಸರ್ವಜ್ಞನು ಈ ಸೋಮನಾಥನ ಈಚಿನವನೆಂದು ಹೇಳಲೇಬೇಕಾಗುತ್ತದೆ (ಕನ್ನಡ ಸಾಹಿತ್ಯ ಚರಿತ್ರೆ, ಪು. ೧೪೧ ಉದ್ಧೃತ: ಸರ್ವಜ್ಞನ ಸಾಹಿತ್ಯ ಮತ್ತು ದರ್ಶನ, ಬಿ.ಕೆ. ಹೊಸಮಠ, ಪು.೬೨-೬೩).

ರಾಘವಾಂಕ ಕವಿಯ ಹರಿಶ್ಚಂದ್ರ ಕಾವ್ಯದಲ್ಲಿ;
ಹೆತ್ತ ತಾಯನುಮಾರಿ ತೊತ್ತ ಕೊಂಬರೆ ಮೂಗ
ನಿತ್ತು ಕನ್ನಡಿಯ ನೋಡುವರೆ.

ಈ ಹಿಂದಿನ ಪದ್ಯದ ಸಾಲನ್ನು ಸರ್ವಜ್ಞನು ನೇರವಾಗಿ ತನ್ನ ವಚನದಲ್ಲಿ ಬಳಸಿರುವುದನ್ನು ಇಲ್ಲಿ ನೋಡಬಹುದು;

ಹೆತ್ತ ತಾಯನು ಮಾರಿ ತೊತ್ತ ಕೊಂಡವನಂತೆ
ತುತ್ತಿನಾತುರಕೆ ತತ್ವವನು ತೊರೆದಿಹನು
ಕತ್ತೆ ತಾನೆಂದ ಸರ್ವಜ್ಞ.
(ಸರ್ವಜ್ಞನ ಸಾಹಿತ್ಯ ಮತ್ತು ದರ್ಶನ, ಪು.೬೩).

ಅಂದರೆ ರಾಘವಾಂಕನ ಕಾಲ ೧೩ನೇ ಶತಮಾನ, ಈ ಕವಿಯ ಪದ್ಯವನ್ನು ಸರ್ವಜ್ಞ ಓದಿರಬಹುದು. ಆದ್ದರಿಂದ ನಿಶ್ಚಯವಾಗಿ ಹೇಳುವುದೇನೆಂದರೆ; ಸರ್ವಜ್ಞನು ಇತ್ತೀಚಿನವನೆಂದೇ ನಂಬಬಹುದು. ಕಿಟೆಲ್‌ರವರು ಉದಾಹರಿಸಿದ ಸರ್ವಜ್ಞನ ವಚನವೊಂದನ್ನು ನೋಡಿದಾಗ;

ಗಂಡಗಂಬಲಿಯಿಕ್ಕಿ ಗಂಡುಗರಣೆಯ ನುಂಗಿ
ಗಂಡ ಬಂದಾಗ ನರಳುವ ಹೆಣ್ಣಿಂಗೆ
ಗುಂಡಿಕ್ಕು ಬಿಡದೆ ಸರ್ವಜ್ಞ.

ಇಲ್ಲಿ ಬರುವ 'ಗುಂಡಿಕ್ಕು' ಶಬ್ದವನ್ನು ಸರ್ವಜ್ಞ ಪ್ರಯೋಗಿಸಿರುವುದನ್ನು ನೋಡಿದಾಗ ಈತನಿಗೆ ಈ ಕ್ರಿಯೆಯ ಬಗೆಗೆ ಮತ್ತು ಇದರ ಅರ್ಥದ ಬಗೆಗೆ ಗೊತ್ತಿರಲೇಬೇಕು. ಅಂದರೆ ಇದರ ಬಳಕೆಯನ್ನು ಚರಿತ್ರೆಯಲ್ಲಿ ಗಮನಿಸಿದಾಗ, ದಕ್ಷಿಣ ಭಾರತದಲ್ಲಿ ಮಹಮ್ಮದೀಯರ ದಾಳಿಯು ಸುಮಾರು ಕ್ರಿ.ಶ.೧೩೬೮ರ ಹೊತ್ತಿಗೆ ಇರಬಹುದು. ಇದಕ್ಕಿಂತಲೂ ಮೊದಲೇ ಕ್ರಿ.ಶ. ೧೧೧೭ರಲ್ಲಿ ಬೇಲೂರಿನ ಚೆನ್ನಕೇಶವ ದೇವಸ್ಥಾನ ಗೋಡೆಗಳ ಮೇಲೆ ಬಂದೂಕುಗಳಿಂದ ಹೊಡೆಯುತ್ತಿರುವ ಪುರುಷರ ವಿಗ್ರಹಗಳು ಕಂಡುಬಂದಿವೆ. ಆದುದರಿಂದ ಆಗಲೇ ಗುಂಡಿನ ಬಳಕೆ ಇದ್ದಿರಬಹುದು.



ಇನ್ನು ವಿಜಯನಗರ ಸಾಮ್ರಾಜ್ಯವನ್ನಾಳಿದ ಕೃಷ್ಣದೇವರಾಯನ (೧೫೦೯-೨೯) ಕಾಲದಲ್ಲಿನ ದಿನಚರಿಯ ಕೃತ್ಯಗಳ ವಿಸ್ತಾರ ನಿರೂಪಿಸುವ ಬಖೈರು ಮಾದರಿಯ ಓಲೆಗರಿಯ ಹಸ್ತ ಪ್ರತಿಯಲ್ಲಿ 'ಫಿರಂಗಿ' ಶಬ್ಧ ಕಂಡುಬರುತ್ತದೆಯಲ್ಲದೆ, ಈತನ ಆಳ್ವಿಕೆಗೂ ಹಿಂದೆ ಬಂದಿದ್ದ ನ್ಯೂನೀಜ್ ಎಂಬ ವಿದೇಶಿಯೊಬ್ಬನು ಈ ಸಾಮ್ರಾಜ್ಯದ ಬಗ್ಗೆ ಬರೆಯುತ್ತಾ, ಫಿರಂಗಿಗಳ ಉಲ್ಲೇಖ ಮಾಡಿದ್ದಾನೆ. ಹೀಗಾಗಿ ೧೩೬೮ರ ಸುಮಾರಿನಲ್ಲಿ ಸಿಡಿಮದ್ದು ಬಳಕೆಯಲ್ಲಿತ್ತೆಂಬುದು ತಿಳಿದುಬರುತ್ತದೆ. ಸರ್ವಜ್ಞನ ಕಾಲ ನಿರ್ಣಯ ಬಹು ಜಟಿಲವಾದ ವಿಷಯವಾಗಿದೆ. ಪ್ರಾಚೀನ ಕನ್ನಡ ಕವಿಗಳಾರೂ ಈತನನ್ನು ಸ್ಮರಿಸಿರುವುದು ಕಂಡು ಬರುವುದಿಲ್ಲ.

ಡಾ॥ ಆರ್. ನರಸಿಂಹಾಚಾರ್ಯರು ಸರ್ವಜ್ಞನ ಕಾಲವನ್ನು ಕುರಿತು ತಮ್ಮ 'ಕವಿಚರಿತೆ' ಯಲ್ಲಿ ಪ್ರಸ್ತಾಪಿಸುವಾಗ ಮೂರು ಊಹೆಗಳನ್ನು ಅಭಿವ್ಯಕ್ತಿಸಿದ್ದಾರೆ;



೧) ಸರ್ವಜ್ಞ ಗಣೇಶ್ವರನೆಂಬುವನು ಕಾಲಜ್ಞಾನ ಪದ್ಯಗಳನ್ನು ಬರೆದಿರುವನೆಂದು ಈ ಪದ್ಯಗಳಲ್ಲಿ ಸರ್ವಜ್ಞನು ಬಸವ,ಮಡಿವಾಳಯ್ಯ, ಸೊಡ್ಡಳ ಬಾಚರಸ ಮೊದಲಾದ ಶಿವಶರಣರ ಸಮಕಾಲೀನ ದಲ್ಲಿದ್ದಿರಬಹುದೆಂದಿದ್ದಾರೆ. ಆದರೆ ಅವುಗಳಲ್ಲಿ ಶ್ರೀ ರಂಗಪಟ್ಟಣ ಹೋದುದು, ಉಗಿ ಬಂಡಿ, ತಂತಿ ಮುಂತಾದ ಸಂಗತಿಗಳು ಕಂಡುಬರುತ್ತಿರುವುದರಿಂದ ಸರ್ವಜ್ಞನು ೧೭೯೯ಕ್ಕೆ ಈಚಿನವನೆಂದು ಹೇಳಬಹುದು (ಸರ್ವಜ್ಞ ತ್ರಿಪದಿ; ಸಂ.: ಉತ್ತಂಗಿ ಚೆನ್ನಪ್ಪ,೯೨೩).

೨) ೧೮೦೦ಕ್ಕೆ ಹಿಂದೆ ಬರೆದ ಈತನ ಗ್ರಂಥದ ಓಲೆಯ ಪ್ರತಿಗಳು ದೊರೆಯುವುದರಿಂದ ಈತನ ಕಾಲ ಸುಮಾರು ೧೭೦೦ಕ್ಕಿಂತ ಈಚೆಗೆ ಇರಲಾರದೆಂಬುದು ಊಹೆಯಾಗಿದೆ.

೩)	ಅಚ್ಚಾಗಿರುವ ಕೆಲವು ಪ್ರತಿಗಳು ಒಂದರ ಹಾಗೆ ಒಂದಿಲ್ಲ. ಹೊಸ ಪದ್ಯಗಳು ಸೇರಿರುವುದೆಂಬ ಸಂದೇಹವಿದೆ. ಒಂದು ಓಲೆಯ ಪುಸ್ತಕದಲ್ಲಿ 'ಸಂಪಾದನೆಯ ಸಿದ್ಧವೀರಣ್ಣಾಚಾರ್ಯರು ಸೇರಿಸಿದ ಸರ್ವಜ್ಞ ಮೂರ್ತಿ ನಿರೂಪಿಸಿದ ತ್ರಿವಿಧಿ' ಎಂದಿದೆ. ಈ ಸರ್ವಜ್ಞಮೂರ್ತಿ ಈ ಕವಿಯೇ ಆಗಿದ್ದ ಪಕ್ಷದಲ್ಲಿ ಇವನು ಸಂಪಾದನೆಯ ಸಿದ್ಧವೀರಣ್ಣಾಚಾರ್ಯನ (ಸುಮಾರು ೧೬೦೦) ಕಾಲಕ್ಕೆ ಹಿಂದೆ ಇದ್ದಿರಲೇಬೇಕು (ಕನ್ನಡ ಸಾಹಿತ್ಯ ಚರಿತೆ, ಆರ್. ನರಸಿಂಹಾಚಾರ್, ಪು.೫೩೩).

ಡಾ॥ ರಂ.ಶ್ರೀ. ಮುಗಳಿಯವರು ಸರ್ವಜ್ಞನನ್ನು ''ವ್ಯವಹಾರ ಜ್ಞಾನ ವಿವೇಕಗಳ ಮೂರ್ತಿ' ಎಂದು ನೆನೆದು ಅವನನ್ನು ೧೭ನೆಯ ಶತಮಾನದ ಉತ್ತಮ ದರ್ಶಕ ಕವಿಗಳ ಪರಂಪರೆಯನ್ನು ನಿರೂಪಿಸಿದ್ದಾರೆ (ಕನ್ನಡ ಸಾಹಿತ್ಯ ಚರಿತ್ರೆ, ಪು. ೩೬೧). ಬಿ. ಶಿವಮೂರ್ತಿ ಶಾಸ್ತ್ರಿಗಳವರು ತ್ರಿಪದಿಗಳನ್ನು ಬರೆದವನೊಬ್ಬ ಕಾಲಜ್ಞಾನವನ್ನು ಬರೆದ ಸರ್ವಜ್ಞ ಮುನಿ, 'ಪರಮಾರ್ಥ' ಅಂಕಿತದ ತ್ರಿಪದಿಗಳನ್ನು ಬರೆದವನೊಬ್ಬ, ಚೌಪದ ಹಾಡುಗಳ ಕರ್ತನೊಬ್ಬ.

ಹೀಗೆ ನಾಲ್ಕು ಸರ್ವಜ್ಞರು ಇರಬೇಕೆಂದು ಊಹಿಸಿ ತ್ರಿಪದಿ ವಚನಗಳನ್ನು ಬರೆದ ಸರ್ವಜ್ಞಮೂರ್ತಿಯ ಸಂಪಾದನೆಯ ಸಿದ್ಧವೀರಣ್ಣಾರ್ಯನಿಗೆ ಹಿಂದಿನವನಾಗಿರಬೇಕೆಂಬ ವಿಚಾರಕ್ಕೆ ಒಪ್ಪಿಗೆ ನೀಡಿರುವರು. ಇವರ ಈ ಊಹೆ ಸತ್ಯಕ್ಕೆ ಹತ್ತಿರವಾಗಿರಬಹುದೆಂಬುದು ನನ್ನ ಅಭಿಪ್ರಾಯ.

ಶ್ರೀ ಮಾಸ್ತಿಯವರು 'ಸರ್ವಜ್ಞನು ಮೂರು ಇಲ್ಲವೆ ನಾಲ್ಕು ವರ್ಷಗಳಲ್ಲಿ ವಿಕಾಸಗೊಂಡ ಕರ್ನಾಟಕ ಸಂಸ್ಕೃತಿಯ ಪ್ರತಿಮಾ ಮೂರ್ತಿಯಾದವನು' ಎಂಬ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. ಅಲ್ಲದೆ, ಸರ್ವಜ್ಞನು ೧೬ನೇ ಇಲ್ಲವೇ ೧೭ನೇ ಶತಮಾನದವನೆಂದು ಅಭಿಪ್ರಾಯಪಟ್ಟಿದ್ದಾರೆ. ಡಾ॥ಬಿ.ಕೆ. ಹೊಸಮಠರವರು ತಮ್ಮ ಅಭಿಪ್ರಾಯ ಹೀಗೆ ವ್ಯಕ್ತಪಡಿಸಿದ್ದಾರೆ; ಸರ್ವಜ್ಞನು ಬರೆದ 'ದಾನ ಪದ್ಧತಿ'ಗೆ ಸಂಬಂಧಿಸಿದ ಒಂದು ವಚನದಲ್ಲಿ ;

ಬಿದಿರಿ ಅಂದಣವಕ್ಕು ಬಿದಿರೆ ಸತ್ತಿಗೆಯಕ್ಕು
ಬಿದಿರಿಂದ ಸಕಲ ಪದವಕ್ಕು ಲೋಕದೊಳು
ಬಿದಿರದವ ಕೆಟ್ಟ ಸರ್ವಜ್ಞ.

ಇದು ಶ್ಲೇಷಾಲಂಕಾರದ ರಚನೆಯಾಗಿದೆ. ಇದು ಕೈಬರಹದಲ್ಲಿ ಮತ್ತು ಮುದ್ರಣಗಳಲ್ಲಿ ಒಂದೇ ರೀತಿಯಾಗಿ ಪ್ರಕಟವಾಗಿದೆ. ಈ ವಚನದಲ್ಲಿ ಸರ್ವಜ್ಞನು ಬಿದಿರಿನಿಂದ ಮಾಡಿದ ಕೊಡೆಗಳನ್ನು ಸೂಚಿಸಿದ್ದಾನೆ. ಇದರಿಂದ ಪರದೇಶದಲ್ಲಿ ತಯಾರಾದ ಈ ಬಗೆಯ ವಸ್ತುಗಳು ನಮ್ಮಲ್ಲಿ ಪ್ರಚಾರಕ್ಕೆ ಬರುವ ಪೂರ್ವದಲ್ಲಿ ಈ ಬಿದಿರಿನ ಸಾಮಾನುಗಳ ಬಳಕೆ ಇದ್ದಿರಬೇಕು. ಅದಕ್ಕಾಗಿ ಈ ಬಿದಿರನ್ನು ಉಪಯೋಗಿಸಿ ವಚನ ಬರೆದಿರಬಹುದೆಂಬುದು ಅವರು ಹೇಳಿರುವುದು ಸತ್ಯಕ್ಕೆ ಹತ್ತಿರವಾಗಿದೆ.

ಇವರದೇ ಇನ್ನೊಂದು ಅಭಿಪ್ರಾಯ; ೧೪೮೯ರಷ್ಟೊತ್ತಿಗೆ ಕನ್ನಡ ನಾಡಿನ ಉತ್ತರ ಭಾಗದಲ್ಲಿ ತುರುಕರು ಹಾಗೂ ಅವರ ನಡೆ-ನುಡಿಗಳು ಮನೆ ಮಾತಾಗಿದ್ದುದರಿಂದ ಅವರನ್ನು ಕುರಿತಾಗಿ ಸರ್ವಜ್ಞ ತನ್ನ ವಚನದಲ್ಲಿ ;

ತುರುಕನ ನೆರೆ ಹೊಲ್ಲ । ಹರದನ ಕೆಳೆ ಹೊಲ್ಲ
ತಿರಿಗೂಳನಟ್ಟು ಉಣ ಹೊಲ್ಲ । ಪರಸತಿಯ
ಸರಸವೇ ಹೊಲ್ಲ ಸರ್ವಜ್ಞ.

ತುಪ್ಪಾದ ತುರುಕನ । ಒಪ್ಪಾದ ಹಾರುವನ
ಸಪ್ಪಗಿರುತಿಪ್ಪ ಬೇಡನ ಮಾತಿಗೆ
ಒಪ್ಪಲೇಬೇಡ ಸರ್ವಜ್ಞ.

ಹೀಗೆ ತುರುಕರ ಬಗೆಗೆ ನಿರ್ದಾಕ್ಷಿಣ್ಯವಾಗಿ ಸರ್ವಜ್ಞನು ಹೇಳಿರುವುದು ನೋಡಿದರೆ, ಅವರ ಕಾರ್ಯ ವೈಖರಿ ಗೊತ್ತಾಗುತ್ತದೆ. ಆದ್ದರಿಂದ ಈತನ ಕಾಲವನ್ನು ಸುಮಾರು ೧೫ನೇ ಶತಮಾನದ ಮಧ್ಯಭಾಗವೆಂದು ಪರಿಗಣಿಸಬೇಕಾಗಿದೆ ಎಂದು ಅವರು ಹೇಳಿದ್ದಾರೆ.

ಸರ್ವಜ್ಞನು ತನ್ನ ವಚನಗಳಲ್ಲಿ ಜೈನ ಮತದ ಪ್ರಶಂಸೆ ಮಾಡಿದ್ದಾನೆ ಹೊರತು, ಭೌದ್ಧ ಧರ್ಮದ ಬಗೆಗೆ ಎಲ್ಲಿಯೂ ಚಕಾರ ಶಬ್ಧವನ್ನು ಬಳಸಿಲ್ಲ. ಆದ್ದರಿಂದ ಸರ್ವಜ್ಞನ ಕಾಲದಲ್ಲಿ ಭೌದ್ಧರು ಕರ್ನಾಟಕದಿಂದ ಸಂಪೂರ್ಣವಾಗಿ ಉಚ್ಛಾಟನೆ ಹೊಂದಿದ್ದರೆಂಬುದಕ್ಕೆ ಆತನ ವಚನಗಳಲ್ಲಿ ಪ್ರಸ್ತಾಪವಿಲ್ಲದಿರುವುದು ಕಾರಣವೆನ್ನಬಹುದು. ಒಂದು ವೇಳೆ ಭೌದ್ಧರು ಆತನ ಕಣ್ಣಿಗೆ ಕಂಡಿದ್ದೇ ಆದರೆ ಖಂಡಿತವಾಗಿಯೂ ತನ್ನ ಒಂದಾದರೂ ವಚನದಲ್ಲಿ ಹೇಳದೇ ಇರುತ್ತಿರಲಿಲ್ಲ. ಏಕೆಂದರೆ ಆತನ ವಚನಗಳಲ್ಲಿ ಬ್ರಾಹ್ಮಣ, ಜೈನ, ವೀರಶೈವ ಮುಂತಾದವರ ಗುಣಾವಗುಣಗಳ ಬಗೆಗೆ ತಿಳಿಸಿದ್ದಾನೆ.

ಸರ್ವಜ್ಞನು ೧೬ನೇ ಶತಮಾನಕ್ಕೂ ಹಿಂದಿನವನೆಂಬ ಸಂಗತಿಯನ್ನು ಇ.ಪಿ.ರೈಸ್‌ರವರು ಒಪ್ಪಿರುವರು ಹಾಗೆಯೇ ಉತ್ತಂಗಿ ಚೆನ್ನಪ್ಪನವರು ೧೬ನೇ ಶತಮಾನಕ್ಕೂ ಹಿಂದಿನವನು ಈ ಸರ್ವಜ್ಞ ಎಂಬ ಅಭಿಪ್ರಾಯವನ್ನು ೧೯೨೪ರಲ್ಲಿ ಪ್ರಕಟಿಸಿದ "ಸರ್ವಜ್ಞ ಮೂರ್ತಿಯ ವಚನಗಳು" ಎಂಬ ಪುಸ್ತಕದ ಪ್ರಸ್ತಾವನೆಯಲ್ಲಿ ಸಮರ್ಥಿಸಿದ್ದಾರೆ. ಕೆಲವರು ಸರ್ವಜ್ಞನನ್ನು ತೆಲುಗು ಕವಿ ವೇಮನನ ಸಮಕಾಲೀನನೆಂದು ಹೇಳುತ್ತಾರೆ. ವೇಮನ ಆಂಧ್ರದ ಕೊಂಡುವೀಡು ರಾಜ ಮನೆತನದ ಐತಿಹಾಸಿಕ ವ್ಯಕ್ತಿ. ಅವನು 'ವಿಶ್ವದಾಭಿರಾಮ ವಿನುರವೇಮ' ಎಂಬ ಅಂಕಿತನಾಮದಲ್ಲಿ ಸುಮಾರು ೪ ಸಾವಿರ ಪದ್ಯಗಳನ್ನು ಬರೆದಿರುವನೆಂಬ ಊಹೆ ಇದೆ. ಅಭಿರಾಮನೆಂಬುದು ವೇಮನನ ಗುರುವಿನ ಹೆಸರಾಗಿರಬಹುದೆಂಬುದು ವಿದ್ವಾಂಸರ ಅಭಿಪ್ರಾಯ. ಸರ್ವಜ್ಞ ಮತ್ತು ವೇಮನ ಈ ಇಬ್ಬರ ವಚನಗಳಲ್ಲಿ ಬಹು ಸಾಮ್ಯವಿದೆ. ಶಿವಯೋಗಿಯ ಲಕ್ಷಣಗಳನ್ನು ಇಬ್ಬರೂ ಏಕವಾಕ್ಯತೆಯಿಂದ ಹೇಳಿದ್ದಾರೆ.

ಉತ್ತುಂಗ ಮಾಣಿಕದ ಬಿತ್ತು ಮಂಟಪದೊಳಗೆ
ನಿತ್ಯ ನಿರ್ಮಲದ ನಿಜಗಂಡ ಶಿವಯೋಗಿ
ಗೆತ್ತಣದು ಸಾವು ಸರ್ವಜ್ಞ.

ವೇಮನನ ಕಂದ ಪದ್ಯ: ಶಿವಗೂರ್ಚಿ ದೀಪ ಮಿಡಿನನು
ಶಿವ ಮಂದಿರಮೆಲ್ಲ ವೆಲುಂಗ ಜೇಯು ನೆಕಾದೆ
ಶಿವಯೋಗಿ ಜ್ಞಾನ ದೀಪಮು
ಭುವನಂಬುಲು ವೆಲುಗಜೇಯು ಬಲುಪ್ಪುಗ ವೇಮಾ.

''ಶಿವನಿಗೆ ದೀಪವಿಟ್ಟರೆ ಶಿವ ಮಂದಿರವೆಲ್ಲವೂ ಬೆಳಕಿನಿಂದ ತುಂಬುವುದಲ್ಲವೆ?. ಶಿವಯೋಗಿಯ ಜ್ಞಾನ ದೀಪವು ಭುವನವನ್ನು ಬೆಳಗುವಂತೆ ಮಾಡುತ್ತದೆ''.

ಗೊಡ್ಡುಟಾವು ಪಿತುಕ ಕುಂಡ ಗೊಂಪೋಯಿನ
ಪಂಡು ಲೂಡದನ್ನು ಪಾಲು ಲೇವು
ಲೋಭಿಮಾನ ನಡುಗ ಲಾಭಂಬು ಲೇದಯಾ
ವಿಶ್ವದಾಭಿರಾಮ ವಿನುರ ವೇಮ.

ಗೊಡ್ಡಾಕಳ ಹಿಂಡಿಕೊಳ್ಳಲು ಹೋದರೆ, ಅದು ಹಲ್ಲು ಉದುರುವ ಹಾಗೆ ಒದೆಯುವುದೇ ವಿನಃ ಹಾಲು ಕೊಡುವುದಿಲ್ಲ. ಆದರಂತೆ ಜಿಪುಣರನ್ನು ಬೇಡಿದರೆ ಲಾಭವಿಲ್ಲವೆಂದು ವೇಮನನು ಹೇಳಿದ್ದಾನೆ. ಅದೇ ರೀತಿ;

ಎರೆಯಲೊಲ್ಲದ ಲೋಭಿ, ಕರೆಯಲೊಲ್ಲದ ಆವು
ಬರೆಗಾಲು ಪಯಣ ಇವು ಮೂರು ತನ್ನ ತಾ
ನಿರಿದುಕೊಂಡಂತೆ ಸರ್ವಜ್ಞ.

ಎಂದು ಸರ್ವಜ್ಞ ನುಡಿದಿರುವನು. ಇಲ್ಲಿ ಇಬ್ಬರೂ ಲೋಭಿಯ ಸ್ವಭಾವವನ್ನು ಒಂದೇ ರೀತಿಯಲ್ಲಿ ವರ್ಣಿಸಿದ್ದಾರೆ. ವೇಮನನ ಕಾಲವನ್ನು ಭಾರತ ಸರ್ಕಾರವು ಅನೇಕ ವಿದ್ವಾಂಸರ ಮತ್ತು ಪರಿಶೋಧಕರ ನಿರ್ಣಯದ ಮೇಲೆ ಕ್ರಿ.ಶ. ೧೬೭೨ ಎಂದು ಅಧಿಕಾರ ಮುದ್ರೆ ಹಾಕಿದೆ. ಅಲ್ಲದೆ ವೇಮನ ಮತ್ತು ಸರ್ವಜ್ಞರು ಒಬ್ಬರಿಂದೊಬ್ಬರು ಪ್ರಭಾವಿತರಾಗಿದ್ದರಿಂದ ಈತನ ಕಾಲವನ್ನು ೧೬ನೇ ಶತಮಾನದ ಮಧ್ಯಭಾಗವೆಂದು ನಿರ್ಣಯಿಸಬಹುದು.

ಒಟ್ಟಾರೆ ಸರ್ವಜ್ಞನ ಬಗೆಗೆ ಇಲ್ಲಿಯವರೆಗೆ ಯಾವ ವಿದ್ವಾಂಸರುಗಳು ಸರಿಯಾದ ಕಾಲವನ್ನು ತುಂಬಾ ನಿಶ್ಚಯವಾಗಿ ಸೂಚಿಸಿಲ್ಲವಾದ್ದರಿಂದ ಮತ್ತು ಸರ್ವಜ್ಞನು ಸಹ ಎಲ್ಲಿಯೂ ತನ್ನ ಬಗೆಗೆ ಸ್ವಲ್ಪವಾದರೂ, ಸರಿಯಾಗಿ ಹೇಳಿಕೊಳ್ಳದೇ ಇರುವುದರಿಂದ ನಾವು ಆತನ ಕಾಲವನ್ನು ಸುಮಾರು ೧೬೦೦ನೇ ಶತಮಾನವೆಂದಿಟ್ಟುಕೊಳ್ಳಬಹುದು.

## ೩.೪. ವ್ಯಕ್ತಿತ್ವ :

ಮನೆಯಿಂದ ಹೊರಬಿದ್ದ ಸರ್ವಜ್ಞ ಒಂದೇ ಸ್ಥಳದಲ್ಲಿ ನೆಲೆಯಾಗಿ ನಿಲ್ಲದೆ, ಊರೂರು ಸುತ್ತಿದವನು. ಯಾವ ಗುರುವಿನಲ್ಲಿ ವಿದ್ಯೆ ಕಲಿತವನೆಂಬುದರ ಸ್ಪಷ್ಟ ಮಾಹಿತಿ ದೊರೆಯುವುದಿಲ್ಲ. ''ಹಿಂಡನಗಲಿದ ಗಜದಂತೆ, ಪರಿಮಳವನ್ನು ಅರಸುತ್ತಾ ಹೊರಟ ದುಂಬಿಯಂತೆ''. ತನ್ನ ಜ್ಞಾನ ಹೆಚ್ಚಿಸಿ ಕೊಳ್ಳುವುದಕ್ಕೆ ಇಡೀ ಕರ್ನಾಟಕವನ್ನು ಸುತ್ತಾಡಿದವನು. ''ಹಸಿವೆಯಾದರೆ ಭಿಕ್ಷಾನ್ನಗಳುಂಟು, ತೃಷೆಯಾದರೆ ಕೆರೆ ಹಳ್ಳ ಬಾವಿಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು, ಸಂಗಾತಿ ನೀ ಎನಗುಂಟು ಚೆನ್ನಮಲ್ಲಿಕಾರ್ಜುನ''ಎಂದು ಹೇಳಿದ ಅಕ್ಕ ಮಹಾದೇವಿಯ ವಚನ ಸರ್ವಜ್ಞನಿಗೆ ಪ್ರಭಾವ ಬೀರಿರಬಹುದು. ಆದ್ದರಿಂದ ಈತನೂ ಸಹ ''ಕರದಿ ಕಪ್ಪರವುಂಟು, ಹಿರಿದಾದ ನಾಡುಂಟು, ಹರನೆಂಬ ದೈವ ನಮಗುಂಟು, ತಿರಿವರಿಂ ಸಿರಿವಂತರಾರು'' ಎಂದು ಹೇಳಿಕೊಂಡಿದ್ದಾನೆ. ಯಾರ ದಯಾ ದಾಕ್ಷಿಣ್ಯಕ್ಕೂ ಒಳಗಾಗದೇ '' ಜಗದಿ ಸ್ವತಂತ್ರವೇ ಲೇಸು'' ಎಂದು ಅರಿತುಕೊಂಡು ನಿತ್ಯ ಸಂಚಾರಿಯಾಗಿದ್ದವನು. ಭಿಕ್ಷೆ ಬೇಡುವಾಗಲೂ ಯಾರಲ್ಲೂ ಒತ್ತಾಯಿಸುವ ಸ್ವಭಾವದವನೆಂದು ಕಂಡುಬರುವುದಿಲ್ಲ. ಜನರು ತಾವಾಗಿಯೇ ನೀಡಿದರಷ್ಟೇ, ಇಲ್ಲದಿದ್ದರೆ ಇಲ್ಲ. ಯಾರಿಗೂ ದಾಸನಾಗಿರಬೇಕೆಂಬ ಮನೋಭಾವನೆ ಈತನದಲ್ಲ.

ಬಸವಾದಿ ಶರಣರ ಪ್ರಭಾವದಿಂದಾಗಿ ಜೀವನದ ಬಲವನ್ನು ವೀರಶೈವದತ್ತ ಹೊರಳಿಸಿದ್ದರೂ, ''ಕೊಲಲಾಗದೆಂಬ ಜೈನ ಮತವೆನ್ನ ತಲೆಯ ಮೇಲಿರಲಿ'' ಎನ್ನುವ ವಿಶಾಲ ಹೃದಯಿ. ಪರಮಸಹಿಷ್ಣು ಆಗಿದ್ದ ಈತನಿಗೆ '' ಊರೆಲ್ಲಾ ನೆಂಟರು, ಕೇರಿಯೆಲ್ಲಾ ಬಳಗವು '' ಆಗಿ ಕಂಡಿದೆ. ಗುರು, ಷಟ್ಸ್ಥಲ, ದೈವ, ಭಕ್ತಿ,ಜ್ಞಾನ, ಯೋಗ, ದಾನ, ವೈದ್ಯ, ಆರೋಗ್ಯ, ಆಹಾರ, ಜೋತಿಷ್ಯ, ಕಾಮಶಾಸ್ತ್ರ, ರಸ ಮುಂತಾದ ವೈವಿಧ್ಯಮಯ ವಿಷಯಗಳ ಆಳ ಅರಿತಿದ್ದ ಸರ್ವಜ್ಞನಿಗೆ ಲೋಕವೇ ಒಂದು ಪಾಠಶಾಲೆಯಾಗಿತ್ತು (ಸರ್ವಜ್ಞ ವಚನ ಸಂಗ್ರಹ, ಕೆ.ವಿದ್ಯಾಶಂಕರ್).

''ಸರ್ವಜ್ಞನ ಬದುಕು ದ್ವಿಮುಖವಾದುದು. ಒಂದು ಆತ ವಿವಾಹವಾಗದೇ ಇಂದ್ರಿಯ ಹಾಗೂ ಅರಿಷಡ್ವರ್ಗಗಳ ಜೊತೆಗೆ ನಡೆಸಿದ ಅಂತರಂಗದ ಹೋರಾಟವಾದರೆ, ಮತ್ತೊಂದು ಆತನ ಸಮಾಜ, ಪರಿಸರ ಮತ್ತು ಇಡೀ ಪ್ರಪಂಚದ ಜೊತೆಗೆ ನಡೆಸಿದ ಬಹಿರಂಗದ ಹೋರಾಟ. ಈ ಎರಡರೊಡನೆಯೂ ತನಗೆ ತಾನೇ ಕಂಡುಕೊಂಡಿದ್ದ ಬಂಡಾಯವನ್ನು ಧೈರ್ಯದಿಂದ ಎದುರಿಸಿದವನು. ಈ ರೀತಿಯಲ್ಲಿ ದಿಟ್ಟತನವನ್ನು ಹೊಂದಿ ಅದರಲ್ಲಿ ಗೆಲುವು ಸಾಧಿಸಿದವನು''(ವಚನ ಅಧ್ಯಯನ,ಪು.೧೪೬).

"ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಷ್ಟು ಮಟ್ಟಿಗಿನ ಸ್ವಾತಂತ್ರ್ಯ ಮನೋಧೈರ್ಯವು ಬೇರೆಯವರಲ್ಲಿ ಕಾಣವು"ಎಂಬ ಕನ್ನಡ ಸಾಹಿತ್ಯ ಚರಿತ್ರೆಕಾರರಾದ ಡಾ|| ರಂ.ಶ್ರೀ. ಮುಗಳಿ ಅವರ ನಿಷ್ಪಕ್ಷಪಾತ ಹೇಳಿಕೆ ಗಮನಾರ್ಹವಾದುದೆಂಬುದನ್ನು ಅಲ್ಲಗಳೆಯುವಂತಿಲ್ಲ(ಕನ್ನಡ ಸಾಹಿತ್ಯ ಚರಿತ್ರೆ, ಪು. ೧೦೨). ೧೨ನೇ ಶತಮಾನದ ವಚನಕಾರರಂತೆಯೇ ಸರ್ವಜ್ಞ ವಿಚಾರವಾದಿ. "ಕೇಡನೊಬ್ಬಗೆ ಬಗೆದು । ಕೇಡು ತಪ್ಪದು ತನಗೆ" ಎಂದು ಎಚ್ಚರಿಸಿ, ಸೋಮಾರಿಗಳನ್ನು ತೆಗಳುವುದು. "ಸಿರಿಯ ಸಂಸಾರವನ್ನು ಹಿರಿದೆಂದು ನಂಬದಿರು" ಎನ್ನುತ್ತಾ ನಿತ್ಯ ಕಾಯಕ ಮಾಡುವವವರಿಗೆ ಮನ್ನಣೆ ನೀಡಿದ್ದಾನೆ. "ಕಣ್ಣು ನಾಲಿಗೆ ಮನವು, ತನ್ನವೆಂದೆನಬೇಡ" ಕೇವಲ ಮೂಢ ನಂಬಿಕೆಗಳಿಗೆ ಜೋತು ಬೀಳದೇ ಸ್ವಾನುಭಾವಕ್ಕೆ ಪ್ರಾಶಸ್ತ್ಯ ನೀಡಿದ್ದಾನೆ. "ಜಾತಿ ವಿಜಾತಿ ಎನಬೇಡ, ದೇವನೊಲಿದಾತನೇ ಜಾತ" ಕುಲ ಬೇಧಗಳ ಸಂಕುಚಿತತೆ ಇರಬಾರದೆಂದು ಖಂಡಿಸುವ ಗಟ್ಟಿತನದ ವ್ಯಕ್ತಿತ್ವ ಈತನದು.

"ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು, ಹಿಂಡನಗಲಿದ ಗಜದಂತೆ" ಅನೇಕ ವಿಚಾರಗಳನ್ನು ತಿಳಿಯಲು ಈ ಮಾರ್ಗದಿಂದ ಲೋಕ ಸಂಚಾರ ಕೈಗೊಂಡವನು. ಈ ಬಗೆಗೆ ಏಕಾಂಗಿಯಾಗಿ ಹೊರಟವನಿಗೆ ಮುಂದೆ ಜೀವನ ಹೇಗೆ ? ಎಂಬ ಜನರ ಪ್ರಶ್ನೆಗಳಿಗೆ "ಕರದಿ ಕಪ್ಪರವುಂಟು, ಹಿರಿದೊಂದು ನಾಡುಂಟು ಹರನೆಂಬ ದೈವ ನನಗುಂಟು" ಎಂದು ಸುಲಭವಾಗಿ ಉತ್ತರಿಸಿದವನು.

ಜನಭಾಷೆಯನ್ನು ಗ್ರಾಂಥಿಕ ಭಾಷೆಯನ್ನಾಗಿಸಿ, ಜನರ ನುಡಿಗಳಲ್ಲಿ ವಿಷಯ ನಿರೂಪಿಸಿ, ಕನ್ನಡ ಭಾಷೆಗೆ ಉತ್ತಮೋತ್ತಮ ಸ್ಥಾನ ತಂದ ಕೀರ್ತಿ ಈತನದು. ಹೇಳಬೇಕಾದ ಮಾತುಗಳನ್ನು ಮನಮುಟ್ಟುವ ಹಾಗೆ 'ದೇಸಿ'ಯ ನುಡಿಗಳಲ್ಲಿ ಅರುಹುವ ವ್ಯಕ್ತಿತ್ವವು ಈತನ ವಚನಗಳಲ್ಲಿ ಕಂಡುಬರುತ್ತದೆ. ಜೀವನಾನುಭವ ಹಾಗೂ ಲೋಕಾನುಭವಗಳಲ್ಲಿ ಸರ್ವಜ್ಞನನ್ನು ಸರಿಗಟ್ಟುವವರು ವಿರಳವೆಂದೇ ಹೇಳಬಹುದು. ದೇಶಾತೀತನಾದ ಈತನ ಸ್ವಭಾವ 'ದೇಶ ತಿರುಗಬೇಕು,ಇಲ್ಲ ಕೋಶ ಓದಬೇಕು" ಎಂಬ ಗಾದೆಯಂತೆ ಜೀವಿಸಿದಾತ. ಅನುಭವವೇ ಎಲ್ಲಕ್ಕಿಂತ ವೇದವೆಂದು ಹೇಳುವ ತಾಕಿತ್ತು ಸ್ವಭಾವದವನು.

ಸಮಾಜದ ಸ್ಪರ್ಶವಿಲ್ಲದೆ, ನಾಲ್ಕು ಗೋಡೆ ಮಧ್ಯ ಇರುವ ಪುಸ್ತಕದ ಬದನೇ ಕಾಯಿಯನ್ನೇ ನಿತ್ಯದ ಊಟವಾಗಿಸಿಕೊಂಡ ವ್ಯಕ್ತಿಗೂ; ಸಮಾಜದ ಒಳ ಹೊರಗನ್ನೆಲ್ಲಾ ತೂರಾಡಿದ ವ್ಯಕ್ತಿಗೂ ಅಪಾರ ವ್ಯತ್ಯಾಸಗಳುಂಟು. ಬಹುಶಃ ಅದು ಕಟ್ಟಿಹಾಕಿ ಮೇಯಿಸಿದ ಗೂಳಿಗೂ,ಅಲೆದಾಡಿ ತಿಂದುಣ್ಣುವ ಗೂಳಿಗೂ ವ್ಯತ್ಯಾಸವೆನ್ನಬಹುದು. ಕಟ್ಟಿದಾ ಗೂಳಿಯು ಮುಂದಿನ ಗೋಂದಿಗೆಯಲ್ಲಿ ಎಸೆದ ಹಿಡಿ ಒಣಹುಲ್ಲನ್ನಷ್ಟೇ ತಿನ್ನುವ ಗೂಳಿ ಬರಬರುತ್ತಾ ಸೊರಗಿ ಎಲುಬಿನ ಗೂಡಾಗುತ್ತದೆ. ಆದರೆ ಬಿಟ್ಟು ಮೇದ ಗೂಳಿ ಕಣ್ಣಿಗೆ ಕಂಡಿದ್ದನ್ನೆಲ್ಲಾ ಚೆನ್ನಾಗಿ ಮೇಯ್ದು ಗಟ್ಟಿಮುಟ್ಟಾಗಿರುತ್ತದೆ. ಸರ್ವಜ್ಞನು ಹೀಗೆ ಬಿಟ್ಟ ಮೇದ ಗೂಳಿಯಂತೆ. ದೇಶ ಪರ್ಯಾಟನೆಯಲ್ಲಿ ವಿವಿಧಾನುಭಾವಗಳ ಸರಮಾಲೆಯನ್ನು ಹಾಕಿಕೊಂಡ ವ್ಯಕ್ತಿತ್ವದವನು.

ಸರ್ವಜ್ಞನ ಮಾತು ಒರಟು, ಮನಸ್ಸು ಮೃದು. ಸಾರ್ಥಕ ಬದುಕಿನ ಕಡೆಗೆ ಅವನ ಸಂಪೂರ್ಣ ಒಲವು. ಕೇಳುಗರಿಗೆ ಮನಮುಟ್ಟುವಂತೆ ಗಟ್ಟಿಸಿ ನುಡಿವುದೇ ಅವನ ಜಾಯಮಾನ. ಕತ್ತೆ ಒದ್ದಂತೆ, ತಮಟೆ ಬಾರಿಸಿದಂತೆ ಅವನ ಶಬ್ದಗಳು ಠೇಂಕರಿಸುತ್ತವೆ. ಶಬ್ದ ಸೃಷ್ಟಿಯಲ್ಲಿ ಪದ ಬಂಧದಲ್ಲಿ ಅನುಭವದ ಅಭಿವ್ಯಕ್ತಿಯಲ್ಲಿ ಸರ್ವಜ್ಞನದು ಸ್ವತಂತ್ರ ಅಭಿವ್ಯಕ್ತಿ. ಕೆಲವು ವೇಳೆ ಅವನ ವಿಚಾರಗಳು ಸ್ವೇಚ್ಛಾ ಪ್ರವೃತ್ತಿ ಎನ್ನಿಸಿದರೂ ಸಮಾಜದ ಡೊಂಕುಗಳನ್ನು ತನ್ನ ನೇರ ನುಡಿಗಳಲ್ಲಿ ತಿಳಿಯಪಡಿಸಿದ್ದಾನೆ. ಧರ್ಮ, ದೇವರು, ಧಾರ್ಮಿಕತನದ ಬಗೆಗೆ ಸರ್ವಜ್ಞ ದ್ರಷ್ಟಾರಂತೆ ಮಾತನಾಡುವನು.

ತಾನು ಪಟ್ಟ ಪಾಡು, ನಡೆದ ಜಾಡು ಕೊನೆಗೆ ತಾನುಂಡ ಆನಂದ, ಸತ್ಯ, ಸುಖ-ದುಃಖಗಳನ್ನೆಲ್ಲಾ ಹೊರ ಹಾಕಿದ್ದಾನೆ. ಹಡ್ಸನ್ ಹೇಳುವಂತೆ ''ಸಾಹಿತ್ಯವೆನ್ನುವುದು ಭಾಷೆಯ ಮೂಲಕ ಹೊರಹೊಮ್ಮಿದ ಜೀವನದ ಅಭಿವ್ಯಕ್ತಿ''(ಕನ್ನಡದಲ್ಲಿ ಅನುಭಾವ ಸಾಹಿತ್ಯ, ಪು. ೬) ಇಂತಹ ಒಂದು ಅಭಿವ್ಯಕ್ತಿಯನ್ನು ಸರ್ವಜ್ಞನ ಸ್ವಭಾವದಲ್ಲಿ ಕಾಣುತ್ತೇವೆ.

ಸರ್ವಜ್ಞ ವಿರಕ್ತಿಯಾದರೂ ವಿವೇಕಿ. ''ಹೊಲಬನರಿಯದ ಮಾತು ತಲೆ ಬೇನೆಯೆದ್ದಂತೆ, ಹೊಲಬನರಿತು ಒಂದ ನುಡಿದಿಹರೆ ಅದು ದಿವ್ಯ ಫಲಪಕ್ವದಂತೆ'' ಎಂಬುದೇ ಅವನ ಸಿದ್ಧಾಂತ (ಸರ್ವಜ್ಞ, ಆರ್. ರೇಣುಕಮ್ಮ, ಪು. ix) ''ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದೆಡೆ ಹಿಡಿದಿರ್ದ ಲಿಂಗ ಹೊಡೆಮರಳಿ ಕಚ್ಚುವ ಹೆಡೆನಾಗ ನೋಡಾ''(ಬಸವಣ್ಣನವರ ವಚನದ ಪ್ರಭಾವ ''ನುಡಿದಂತೆ ನಡೆಯದೇ ಇದ್ದರೆ ಕೈಯೊಳು ಹಿಡಿದಿರ್ದ ಲಿಂಗವು ಘಟಸರ್ಪವಾಗಿತ್ತಯ್ಯ'') ಎಂದು ಕಠೋರ ಸತ್ಯ ತಿಳಿಸುವ ಧೀರ. ಜನ ಸಾಮಾನ್ಯರ ಬದುಕನ್ನು ತಿದ್ದುವುದಕ್ಕಾಗಿ ಅಂದಿನ ದಾಸರ ಕೀರ್ತನೆಗಳಿಗಿಂತ ಸರ್ವಜ್ಞನ ವಚನಗಳು ಒಂದು ಪಾಲು ಹೆಚ್ಚು ಎಂದು ಹೇಳಬಹುದು.

ಜ್ಞಾನಿಗೆ ಗುಣ ಲೇಸು, ಮಾನಿನಿಗೆ ಪತಿಲೇಸು
ಸ್ವಾನುಭವಿಗಳ ನುಡಿಲೇಸು; ಎಲ್ಲಕ್ಕೂ
ನಿಧಾನಿಯೇ ಲೇಸು ಸರ್ವಜ್ಞ.

ಎಂದು ಜನಪದರಿಗೆ ಅರ್ಥವಾಗುವ ಉಪಮೆಗಳ ಮೂಲಕ ಬಳಸಿಕೊಳ್ಳುವ ಆತನ ಭಾಷೆಯ ಓಡಿತ ಅಮೋಘವಾದುದು.

ಕಂಡಂತೆ ಹೇಳಿದರೆ ಕೆಂಡವಾಗುವರು ಭೂ
ಮಂಡಲದೊಳಗೆ, ಕಂಡಿತನವನಾಡುವರ
ಕಂಡಿಹುದೇ ಕಷ್ಟ ಸರ್ವಜ್ಞ.

ಎನ್ನುವ ಇಂತಹ ನುಡಿಯ ಅಭಿವ್ಯಕ್ತಿಯಲ್ಲಿ ನಯಗಾರಿಕೆ ಕಡಿಮೆ.

ಹಂಗಿನರಮನೆಗಿಂತ ವಿಂಗಡದ ಗುಡಿ ಲೇಸು
ಭಂಗ ಭಟ್ಟುಂಬ ಬಿಸಿಯನ್ನಕ್ಕಿಂತಲೂ
ತಂಗುಳವೇ ಲೇಸು ಸರ್ವಜ್ಞ.

ಎನ್ನುವಲ್ಲಿ ನಿಚ್ಚಳ ಸ್ವಾಭಿಮಾನಿಯಾಗಿ ಕಂಡು ಬರುತ್ತಾನೆ.

ಸರ್ವಜ್ಞನಿದ್ದ ಕಾಲವು ತುಂಬಾ ಸಂಕೀರ್ಣ ಹಾಗೂ ಸಂಕುಚಿತತೆಯಿಂದ ಕೂಡಿತ್ತು. ಜನ ಸಾಮಾನ್ಯರ ಜೀವನದಲ್ಲಿ ತುಂಬಿಕೊಂಡ ಆತಂಕವನ್ನು ಕಡಿಮೆ ಮಾಡಬೇಕಾಗಿತ್ತು. ದಿಕ್ಕೆಟ್ಟ ಸಮಾಜಕ್ಕೆ ಸರಿದಾರಿ ತೋರುವ ಮಹಾಪುರುಷ ಬೇಕಾಗಿತ್ತು. ಆಗ ಕೆಲವರು ತಾವೇ ಬುದ್ಧಿವಂತರೆಂದು ವರ್ತಿಸು ವವರನ್ನು ಕಂಡ ಸರ್ವಜ್ಞ;

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರಿದ್ದು ಬಲವಿಲ್ಲ ಸಾಹಿತ್ಯ
ವೆಲ್ಲರಿಗೆ ಇಲ್ಲ ಸರ್ವಜ್ಞ.

ಎಂದು ಕೆಲ ಅಹಂಕಾರಿಗಳಿಗೆ ತಕ್ಕ ಪಾಠ ಕಲಿಸಿದ್ದಾನೆ. ಸರ್ವಜ್ಞನಲ್ಲಿರುವ ಮತ್ತೊಂದು ಗುಣ ವೆಂದರೆ; ಜನತೆಯನ್ನು ತಿದ್ದುವುದು. ಅವನು ಮನಸ್ಸು ಮಾಡಿದ್ದರೆ ಷಡಕ್ಷರದೇವನಂತೆ ಪ್ರೌಢ ಚಂಪೂ ಮಹಾಕಾವ್ಯಗಳನ್ನು ಬರೆಯಬಹುದಾಗಿತ್ತು. ಆದರೆ ಅವನು ಜನಸಾಮಾನ್ಯರಿಗೆ ತಿಳಿಯುವ ಸರಳ ಭಾಷೆಯಲ್ಲಿ ತನ್ನ ಭಾವನೆಗಳನ್ನು ವ್ಯಕ್ತಪಡಿಸುವಲ್ಲಿ ಶರಣರಂತೆ 'ವಚನ' ರೂಪವನ್ನು ಬಳಸಿಕೊಂಡವನು. ಈ 'ವಚನ' ಎಂದರೆ; ಕೇವಲ ಕೂತು ಬರೆದದ್ದು ಎನ್ನುವುದಕ್ಕಿಂತ ಸುಮ್ಮನೆ ಸಹಜವಾಗಿ ಹೇಳಿದ್ದು, ಮಾತನಾಡಿದ್ದು ಎಂದು ಅರ್ಥೈಸಿಕೊಳ್ಳಬಹುದು. ಆದ್ದರಿಂದ ಸರ್ವಜ್ಞನ ವಚನ ಎಂದು ಹೆಸರಿಸುವುದು ಈ ಕಾರಣದಿಂದಲೇ ಇರಬೇಕು (ಹಿನ್ನೆಲೆ: ಪು.೧೨೦)"ಜನಪದರ ಹಾಡುಗಬ್ಬವಾದ ತ್ರಿಪದಿಯ ಪ್ರಕಾರವನ್ನು ತನ್ನ ಭಾವಾಭಿವ್ಯಕ್ತಿಗೆ ಸರಿದೂಗಬಹುದೆಂದು, ಅಂತಃಕರಣದ ಶುದ್ಧಿಗೆ ಪ್ರತೀಕವೆಂದು ಇದನ್ನೇ ಆಯ್ದು ಕೊಂಡವನು" (ಸರ್ವಜ್ಞ ಜೀವನ, ಕೃತಿಗಳು ಹಾಗೂ ಸಂದೇಶ, ಪು.೧೦೩).

ಒಟ್ಟಾರೆ ಸರ್ವಜ್ಞನಲ್ಲಿ ಕಂಡುಬರುವ ಇನ್ನೊಂದು ದೊಡ್ಡ ವ್ಯಕ್ತಿತ್ವ ...'ವೆಂದರೆ; ಎಲ್ಲ ಧರ್ಮಗಳ ಬಗೆಗಿನ ಸಮಾನತ್ವ. ಅದಕ್ಕಾಗಿ "ದೇವರಲ್ಲಿ ಕುಲಬೇಧವಿಲ್ಲ" ಎಂದು ಸಾರಿರುವನು. ಹೀಗೆ ಸರ್ವಜ್ಞನ ವ್ಯಕ್ತಿತ್ವ ದರ್ಶನ ಮಾಡುವುದು ಕಷ್ಟದಾಯಕವಾದುದು. ಒಂದು ಮಾತಿನಲ್ಲಿ, ಒಂದು ವಾಕ್ಯದಲ್ಲಿ ಅಥವಾ ಒಂದೇ ಓಡಿತದಲ್ಲಿ ಆತನ ಬಗೆಗೆ ವಿವರಿಸುವುದು ಬೆಟ್ಟಕ್ಕೆ ಬಟ್ಟೆ ಹೊದಿಸಿದಂತೆಯೇ ಸರಿ.

## ೩.೫. ಜಾನಪದ ಪರಿಸರ :

ಜಾನಪದವೆಂಬುದು ಸಮಸ್ತವನ್ನೂ ಒಳಗೊಂಡಿದ್ದು, ಇದು ಮಾತು ಮತ್ತು ಕ್ರಿಯೆಗಳಿಂದ ಅಭಿವ್ಯಕ್ತವಾಗುತ್ತದೆ. ಕಥೆ, ಗೀತೆ, ನೀತಿ, ಲಾವಣಿ ಮುಂತಾದ ಶಾಬ್ದಿಕ ಪ್ರಕಾರಗಳು ಮಾತಿಗೆ ಮಾಧ್ಯಮವಾದರೆ, ಸಂಪ್ರದಾಯ, ಆಚರಣೆ, ಕುಣಿತ, ಆಟ, ಪೂಜೆ ಮುಂತಾದವು ಕ್ರಿಯೆಗೆ ಮಾಧ್ಯಮವಾಗುತ್ತವೆ. ಇವು ಜನಪದ ಸಂಸ್ಕೃತಿಯ ಅಂಗವಾಗಿವೆ. ಈ ಸಮಸ್ತ ಜನಪದ ತಿಳುವಳಿಕೆಯೇ ಜಾನಪದ ಪರಿಸರವೆನ್ನಬಹುದು. ಇಲ್ಲಿ ಸರ್ವಜ್ಞ ಕಂಡುಂಡ ಅನೇಕ ಚಿತ್ರಣಗಳನ್ನು ನೋಡುವುದರ ಮೂಲಕ ಆತನ ಪರಿಸರವನ್ನು ತಿಳಿದುಕೊಳ್ಳಬಹುದಾಗಿದೆ.

ಸರ್ವಜ್ಞ ಯಾವ ಪರಿಸರದಲ್ಲಿ ಓಡಾಡಿದ್ದಾನೆಂಬುದು ಆತನ ವಚನಗಳಿಂದ ವ್ಯಕ್ತವಾಗುತ್ತದೆ. ಹೊಳೆಯಲ್ಲಿ ಹೋಗುವ ತೆಪ್ಪ, ಲಂಗರು ಹಾಕಿದ ದೋಣಿ, ಅಂಬಿಗ, ಅರಗೋಲು, ಮೀನಿನ ಬಲೆ, ಆಳವಾದ ನೀರಿನಲ್ಲಿ ಚಲಿಸುವ ಮೀನು ಮುಂತಾದ ವರ್ಣನೆಯನ್ನು ನೋಡಿದಾಗ ಈತ ತುಂಗಭದ್ರ ನದಿ ಅಥವಾ ಮಾಸೂರು ಸರೋವರ ಹಾಗೂ ಅಕ್ಕಪಕ್ಕದ ಪ್ರದೇಶಗಳಲ್ಲಿ ತಿರುಗಾಡಿದ್ದಿರಬಹುದು. ಈತನು ತಿರುಗಾಡಿದ ಕೃಷ್ಣೆ, ತುಂಗಭದ್ರ ನದಿಗಳು ಅವುಗಳ ಹರವು ಕರ್ನಾಟಕದಲ್ಲಿಯೇ ಇವೆ.

ಕನಿಷ್ಟಪಕ್ಷ ಅರ್ಧ ಶತಮಾನ ಕಾಲವಾದರೂ ಬದುಕಿರಬಹುದಾದ ಸರ್ವಜ್ಞ ಅನೇಕ ಗುರುಮಠಗಳನ್ನು, ತೀರ್ಥ ಕ್ಷೇತ್ರಗಳನ್ನು, ವಿದ್ವಾಂಸರನ್ನು , ಜನಸಾಮಾನ್ಯರನ್ನು ಕಂಡಿರಬಹುದು. ಎಲ್ಲರಲ್ಲಿ ಗರ್ವದಿಂದ ನುಡಿಗಲಿತು, ವಿದ್ಯೆಯ ಪರ್ವತ ತಾನಾಗಿ, ನೆಚ್ಚಿದೊಂದೂರಲ್ಲಿರದೆ, ಒಬ್ಬರಿಚ್ಛೆಯಲ್ಲಿರದೇ, ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು, ಹಿಂಡನಗಲಿದ ಗಜದಂತೆ, ಊರೂರು ತಿರುಗುತ್ತ, ಕರದಿಕಪ್ಪರವಿಡಿದು, ತಿರಿವಂತರಿಂದ ಸಿರಿವಂತವರಾರು ಎಂದು ಹೇಳಿಕೊಂಡು ಭಿಕ್ಷೆ ಬೇಡುತ್ತಲೇ ನಡೆದವನು. ಈತನಿಗೆ ನೆಲವೇಹಾಸಿಗೆ, ಆಕಾಶವೇ ಹೊದಿಕೆಯಾಗಿರಬಹುದು.

ಸಮಾಜ ಜೀವಿಯಾದ ಸರ್ವಜ್ಞ ಜೀವಂತ ಸಮಾಜದ ಮಧ್ಯ ಜೀವಂತ ಕವಿಯಾಗಿ, ಯುಗದ ಶಕ್ತಿಯನ್ನನುಭವಿಸಿದಾತ. ಜನಜೀವನದೊಂದಿಗೆ ನೇರವಾದ ಸಂಪರ್ಕವನ್ನಿಟ್ಟುಕೊಂಡು ಅವರ ತುಡಿತ ಮಿಡಿತಗಳಿಗೆ ಸ್ಪಂಧಿಸಿದಾತ. ಸರ್ವಜ್ಞನ ಕಣ್ಣುಗಳು ಬಹಳ ಸೂಕ್ಷ್ಮ ಹಾಗೂ ಪಾರದರ್ಶಕವುಳ್ಳವುಗಳು. ಕಂಡಂತೆ ಹೇಳಿದರೆ ಭೂಮಂಡಲ ಕೆಂಡವಾಗುವುದೆಂಬುದು ಬಲ್ಲ. ಅವನ ಮಾತುಗಳಲ್ಲಿ ನಯಗಾರಿಕೆ ಕಡಿಮೆ. 'ಹಂಗಿನರಮನೆಗಿಂತ ಎಂಗಡದ ಗುಡಿಲೇಸು' ಎನ್ನುವ ನಿಶ್ಚಳ ಸ್ವಾಭಿಮಾನಿ. ಇನ್ನು ಹಳ್ಳಿಯ ಬದುಕಿನ ಚಿತ್ರಣವನ್ನು ಸರ್ವಜ್ಞನ ವಚನಗಳ ಮೂಲಕ ಇಲ್ಲಿ ಅವಲೋಕಿಸುತ್ತಾ ಹೋದಂತೆ;

ಹಳ್ಳಿಯಿಂದ ಹಳ್ಳಿಗೆ, ಬೀದಿಯಿಂದ ಬೀದಿಗೆ, ಜನರೊಂದಿಗೆ ಬೆರೆತು ಪ್ರಸಂಗಕ್ಕನುಸಾರವಾಗಿ ವಚನಗಳನ್ನು ಕಟ್ಟುತ್ತಾ ಸಾಗಿದ್ದಾನೆ. ಒಮ್ಮೆ ಸತಿ-ಪತಿಯರಿರುವ ಕುಟುಂಬ ಇವನ ಕಣ್ಣಿಗೆ ಬಿತ್ತು. ಆಗ ಬೆಚ್ಚನೆಯ ಮನೆ, ವೆಚ್ಚಕ್ಕೆ ಹೊನ್ನು, ಇಚ್ಛೆಯರಿವ ಸತಿ ಇದ್ದಾಗ ಸ್ವರ್ಗ ಬೇಕಿಲ್ಲವೆಂದು ನುಡಿದ. ಮನೆ ಎಂದ ಮೇಲೆ ಹಿರಿಯರು ಕಿರಿಯರು ಇರುತ್ತಾರೆ. ಅಲ್ಲಿ ಕಿರಿಯರು ಹಿರಿಯರಿಗೆ ಗೌರವಿಸಬೇಕು. ಈ ಸಂಸ್ಕಾರ ಅಲ್ಲಿ ಕಾಣದಿದ್ದಾಗ 'ತಂದೆ-ತಾಯಿ, ಗುರುವಿಗೆ ವಂದಿಸದ ಪಾಪಿಯ ಮುಂದಲೆಯ ಹಿಡಿದು ಕೆಡಹುವನು ಯಮನು' ಎಂಬ ಎಚ್ಚರಿಕೆ ನೀಡಿದ.

ಸಮಾಜ ಎಂದ ಮೇಲೆ ಒಳ್ಳೆಯವರು, ಕೆಟ್ಟವರು ಇರುತ್ತಾರೆ. 'ಸಜ್ಜನರ ಸಂಗ ಹೆಜ್ಜೇನಾದರೆ, ದುರ್ಜನರ ಸಂಗ ಬಚ್ಚಲಿನ ನೀರಿನಂತೆ' ಎಂದು ಹೋಲಿಕೆ ನೀಡಿದ. ಮಾತನಾಡುವುದಕ್ಕೆ ಶುದ್ಧಭಾಷೆ ಇರಬೇಕು, ಆ ಭಾಷೆ ಅಥವಾ ಮಾತುಗಳು ಹೇಗಿರಬೇಕು ? ಮತ್ತೊಬ್ಬರನ್ನು ನೋಯಿಸುವಂತಿರಬಾರದು 'ಮಾತಿನಿಂ ನಗೆನುಡಿ, ಮಾತಿನಿಂ ಹಗೆ-ಕೊಲೆ' ಎಲ್ಲವೂ ಒದಗುವುದರಿಂದ ಎಚ್ಚರಿಕೆಯಿಂದ ಮಾತನಾಡುವುದು ಒಳಿತೆಂದ. 'ಹೊತ್ತಿಗೊದಗಿದ ಮಾತು, ಸತ್ತವನು ಎದ್ದಂತೆ' ಅಂತಹ ಮಾತುಗಳನ್ನಾಡಬೇಕೆಂದು ತಿಳಿಹೇಳಿದೆ. ಸರ್ವಜ್ಞನ ಪ್ರಕಾರ ದಾನವೆಂಬುದು ಪವಿತ್ರವಾದುದು. ಒಬ್ಬರಿಗೊಬ್ಬರು ದಾನ ಮಾಡುತ್ತಿದ್ದರೆ ಸಮಾಜದಲ್ಲಿ ಕಳ್ಳತನ, ಮೋಸಗಳಿರಲಾರವು. ಈ ಮಾತು ಸಾರ್ವಕಾಲಿಕ ಸತ್ಯವಾಗಿದೆ. 'ಸಿರಿಬಂದಾಗ ಕರೆದು ದಾನ ಮಾಡಿದಾಗ ಕೈಲಾಸ ನೆರೆಮನೆಯಲ್ಲಿರುತ್ತದೆ' ಎಂದು ನುಡಿಯಾಡಿದ.

ಅಷ್ಟೇ ಅಲ್ಲ ದಾನಗಳಲ್ಲಿ ಅನ್ನದಾನ ಶ್ರೇಷ್ಠವೆಂಬುದನ್ನು ಬಲ್ಲವನಾಗಿದ್ದ ಸರ್ವಜ್ಞ ಊರಲ್ಲಿ ಬೇಡುವ ತಿರುಕರು ಇರಬೇಕೆಂಬ ಅಪೇಕ್ಷೆ ವ್ಯಕ್ತಪಡಿಸಿದ. ಇಂದಿನಂತೆ ಆತನ ಕಾಲದಲ್ಲಿದ್ದ ಹಲವಾರು ಜಾತಿಜನರ ಸಂಘರ್ಷಗಳನ್ನು ನೋಡಿ, ಜ್ಯೋತಿ ತಾ ಹೀನವೇ ? ಭೂಮಿ,ನೀರು, ಬೆಂಕಿಗಳ ಬಣ್ಣ ಒಂದೇ ಇರುವಾಗ ಜಾತಿ,ಕುಲ,ಗೋತ್ರಗಳ ಲೆಕ್ಕಾಚಾರವೇಕೆ ? ಎಂದು ಪ್ರಶ್ನಿಸಿದ. ಹೀಗೆ ಮುಂದುವರೆದು ಜಾತಿ ಬೀಜ ಬಿತ್ತಿದ ಬ್ರಾಹ್ಮಣರನ್ನು ಕಂಡು 'ಮೂರೆಳೆಯನುಟ್ಟಾತ ಸ್ವರ್ಗಕ್ಕೆ ಹೋಗುವುದಾದರೆ, ನೂರೆಂಟು ಎಳೆಯ ಕೌದಿಯ ಹೊದ್ದಾತ ಏಕೆ ಹೋಗಲಾರ?' ಎಂದು ವಿಡಂಬಿಸಿದ.

ಅಂತೆಯೇ ಡಂಬಾಚಾರದ ಭಕ್ತಿಯಲ್ಲಿ ಕಲ್ಲಿಗೆ ಹೂ-ಪತ್ರೆಗಳನಿಟ್ಟು, ಕಟ್ಟಿದ ಲಿಂಗವಡಿಯಾಗಿ ಶರಣೆಂಬ ಭ್ರಷ್ಟರನ್ನು ಕಂಡು ಬೈದ. ಲೋಕಕ್ಕೆಲ್ಲಾ ಶಿವನೊಬ್ಬನೇ ಪರಮಾತ್ಮ. ಆತನ ಕುರುಹೇ ಲಿಂಗ. ಇದನ್ನು ಪೂಜಿಸದೇ 'ಕಲ್ಲುಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ, ಪೂಜಿಸಿ ನಿಲ್ಲದೇ ಹಣೆಯ ಬಡಿವವರಿಗೆ ಬುಗುಟು ಬಾರದಿರುವುದಿಲ್ಲ'ವೆಂದು ವ್ಯಂಗ್ಯ ಮಾಡಿದ. ಶಿವಭಕ್ತನಾದವನ ಮನೆಗೆ ಒಮ್ಮೆ ಸರ್ವಜ್ಞ ಭಿಕ್ಷೆಗಾಗಿ ಹೋದಾಗ ಆ ಮನೆಯೊಡೆಯ ಮುಂದಕ್ಕೆ ಕಳುಹಿಸಿದ. ' ಉಣ್ಣದ ಲಿಂಗಕ್ಕೆ ಬೋನವನ್ನು ಎಡೆ ಮಾಡಿ, ಉಣ್ಣುವ ಅಣ್ಣಗಳಿಗೆ ನೀಡಲಾರದೇ ಲಿಂಗಕ್ಕೆ ತೋರಿಸುವಾತನನ್ನು ಕಂಡು 'ಕಪಿಯೇ' ಎಂದು ತೆಗಳಿದ. ಈ ಮಾತನ್ನು ಕೇಳಿದ ಮನೆಯೊಡೆಯ ಸರ್ವಜ್ಞನಿಗೆ ಅನ್ನ ನೀಡಿ ವಟಗುಟ್ಟ ತೊಡಗಿದ. ಇದನ್ನು ಕೇಳಿಸಿಕೊಂಡ ಸರ್ವಜ್ಞ 'ಅನ್ನವನು ನೀಡಿ ನನ್ನಿಯನು ನುಡಿ' ಎಂದು ಬೋಧಿಸಿದ.

ಸರ್ವಜ್ಞನ ದೃಷ್ಟಿಗೊಮ್ಮೆ ಅಕ್ಕಸಾಲೆಯವ ಬಿದ್ದ. ಅವನು ಬಂಗಾರದಿಂದ ಆಭರಣಗಳನ್ನು ಮಾಡುವ ಕುಶಲತೆಯನ್ನು ನೆಚ್ಚಿಕೊಂಡರೂ ಅವನಲ್ಲಿರುವ ಕಳ್ಳತನ, ವಂಚನೆಗಳ ಬಗೆಗೆ ಖಂಡಿಸಿದ. ಅವನು ಬಂಗಾರ ಕದಿಯುವ ಚಿತ್ರಣವನ್ನು ಈ ರೀತಿ ಹೇಳುತ್ತಾ; ಕದ್ದ ಬಂಗಾರವನ್ನು ಬೂದಿಯಲ್ಲಿ ಬಚ್ಚಿಡುವುದು, ಒರೆಹಚ್ಚಿ ನೋಡುವ ನೆಪದಲ್ಲಿ ಕದಿಯುವುದು, ಕಾಸಿ ಬಡಿದಾಗ ಹೆಚ್ಚಾದ ಬಂಗಾರವನ್ನು ತೆಗೆದುಕೊಳ್ಳುವುದು. ಹೀಗೆ ಅವನ ಮಗನೂ ಸಹ ಆಟವಾಡಲು ಚಿಮ್ಮಟಿಗೆಯನ್ನಿಡಿದು ಬಂಗಾರದ ತುಣುಕನ್ನು ಕದಿಯುವನೆಂದು ಹೇಳಿದ. ನಂಬುಗೆಯನ್ನು ಕಾಯ್ದುಕೊಂಡು ಹೋಗುವುದು ಒಳ್ಳೆಯಗುಣ. ಆದರೆ ಕೇವಲ ಸ್ವಲಾಭದಿಂದ ಯಾರೂ ನಂಬುಗೆ ಕಾಯ್ದುಕೊಳ್ಳಲಾರರೆಂದು ತಿಳಿಸಿದ ಸರ್ವಜ್ಞ, 'ಹರದನಾ ಮಾತನ್ನು ಹಿರಿದು ನಂಬಲು ಬೇಡ' ಎಂದ. ಹೀಗೆ ಆತನ ಕಣ್ಣಿಗೆ ಗಾಣಿಗ , ಬಣಜಿಗ, ಬಡಿಗ, ಕುಂಬಾರ, ಸುಂಕಿಗ ಮುಂತಾದವರು ಬಿದ್ದಿದ್ದಾರೆ. ಅವರೆಲ್ಲರ ವೃತ್ತಿಯಲ್ಲಿರುವ ದೋಷಗಳನ್ನು ಜಾಲಾಡಿದ್ದಾನೆ.

ಒಮ್ಮೆ ಸರ್ವಜ್ಞ ಭಿಕ್ಷೆ ಬೇಡಲು ಒಂದು ಮನೆಗೆ ಬಂದ. ಮನೆಯಲ್ಲಿ ಐಶ್ವರ್ಯವೇನೋ ತುಂಬಿತ್ತು. ಆದರೆ ಮನೆಯಲ್ಲಿ ಮಕ್ಕಳು ಇರಲಿಲ್ಲದ್ದನ್ನು ಸೂಕ್ಷ್ಮವಾಗಿ ಗಮನಿಸಿದ. ಆ ಮನೆಯ ಹೆಣ್ಣೊಬ್ಬಳು ಬಂಜೆತನದಿಂದ ನರಳುತ್ತಿದ್ದಳು. ತನಗೊಬ್ಬ ಮಗ ಬೇಕು. ಅದು ಇಂದೇ ಹುಟ್ಟಿ ನಾಳೆಯೇ ಸತ್ತರೂ ಪರವಾಗಿಲ್ಲ. ಕಾರಣ ಈ ಬಂಜೆ ಶಬ್ದ ಕೇಳಿ ಅವಳಿಗೆ ಸಾಕಾಗಿತ್ತು. ಇದನ್ನರಿತ ಸರ್ವಜ್ಞ 'ಬಸುರಾಗದ ಬಾಳುವೆ, ಬೇಸಿಗೆಯ ಬಿಸಿಲಂತೆ' ಎಂದುಕೊಂಡ. ಹಾಗೆಯೇ ಮುಂದಿನ ಮನೆಯ ಬಾಗಿಲಿಗೆ ಬಂದಾಗ, ಆ ಮನೆಯಲ್ಲಿ ದೊಡ್ಡ ಸಂಸಾರವಿತ್ತು. ತಂದೆ,ತಾಯಿ,ಮಕ್ಕಳು ಬಹಳ ಸಂತೋಷದಿಂದಿದ್ದರು. ಹೀಗೆ ಇರುವಾಗಲೇ ಆ ಮಕ್ಕಳಿಗೆಲ್ಲ ಯಾವುದೋ ರೋಗ ಬಂದು ತೀರಿ ಕೊಂಡರು. ಬಹಳ ಕಷ್ಟಪಟ್ಟು ಸಂಪಾದಿಸಿದ್ದ ಸಂಪತ್ತನ್ನು ಕಳ್ಳರು ಒಂದೇ ದಿನದಲ್ಲಿ ದೋಚಿಕೊಂಡು ಹೋದಂತಾಗಿತ್ತು. ಆಗ ಆ ತಂದೆ ತಾಯಿಗಳು ನಿರ್ಗತಿಕರಾಗಿ ಅಳುತ್ತಿದ್ದುದನ್ನು ಕಂಡ ಸರ್ವಜ್ಞ 'ಮಕ್ಕಳಿಲ್ಲದ ಮನೆಯು ರೊಕ್ಕವಿಲ್ಲದ ಬಾಳುವೆಯಂತೆ ಬಲು ದುಃಖ ಕಾಣಯ್ಯ' ಎಂದು ತನ್ನ ಸಂಕಟ ವ್ಯಕ್ತಪಡಿಸಿದ.

ಇನ್ನೊಂದು ಮನೆಗೆ ಬಂದಾಗ ಅಲ್ಲಿ ತಂದೆ,ತಾಯಿ,ಗಂಡು ಹಾಗೂ ಹೆಣ್ಣು ಮಕ್ಕಳು ಹೀಗೆ ತುಂಬಿದ ಸಂಸಾರ ಹಾಗೂ ಐಶ್ವರ್ಯ ಕೂಡ ಅವನ ಕಣ್ಣಿಗೆ ಬಿತ್ತು. ಆದರೆ ಅಲ್ಲಿ ಒಬ್ಬರನ್ನೊಬ್ಬರು ಕಂಡರೆ ರೇಗಾಡುತ್ತಿದ್ದರು. ಅವರುಗಳಲ್ಲಿ ಪ್ರೀತಿಯೆಂಬುದೇ ಗೊತ್ತಿರಲಿಲ್ಲ. ಸ್ವತಃ ತಂದೆ-ತಾಯಿ ಗಳನ್ನು ವೈರಿಗಳಂತೆ ಕಾಣುವ ಮಕ್ಕಳನ್ನು ಕಂಡ ಸರ್ವಜ್ಞ 'ಅಕ್ಕರೆಯಿಲ್ಲದ ಮನೆ ದುಃಖ ಕಾಣಯ್ಯ' ಎಂದು ಉದ್ಗಾರ ತೆಗೆದ. ಮತ್ತೊಂದು ಮನೆಗೆ ಬಂದಾಗ ಆ ಮನೆಯಲ್ಲಿ ತಂದೆ-ತಾಯಿಗಳಿಗೆ ತುಂಬಾ ಮಕ್ಕಳೇನೋ ಇದ್ದರು. ಅವರೆಲ್ಲಾ ಹೆಣ್ಣು ಮಕ್ಕಳು. ಗಂಡು ಮಕ್ಕಳಿರಲಿಲ್ಲ. ಅವರಿಗೆ ಒಂದು ಗಂಡು ಮಗು ಬೇಕೆಂಬ ಕೊರಗಿನಲ್ಲಿ ಸೋತು ಸುಣ್ಣವಾಗಿರುವುದನ್ನು ಕಂಡು 'ಕಂದರಿಲ್ಲದ ಮನೆ ವಾರ್ತೆ, ಹಂದರವಿಲ್ಲದ ಮದುವೆಯಂತೆ' ಎಂದು ಹೋಲಿಕೆ ನೀಡಿದ.

ಸರ್ವಜ್ಞ ದಾರಿಯಲ್ಲಿ ಬರುವಾಗ ಸುಂದರ ಯುವತಿಯೊಬ್ಬಳು ಕಣ್ಣಮುಂದೆ ಹಾದು ಹೋಗಿರಬೇಕು. ಆಗ ಅವನ ಮನಸ್ಸು ಅವಳ ಹಿಂದೆಯೇ ಓಡಿರಬೇಕು. ಆಗ ಹೆಣ್ಣನ್ನು, ಹೊನ್ನನ್ನು, ಮಣ್ಣನ್ನು , ಹಣ್ಣನ್ನು ಕಣ್ಣಿನಲ್ಲಿ ಕಂಡು ಬಯಸದಿಹ ಅಣ್ಣಗಳಾರಿಹರು ? ಎಂದು ಪ್ರಶ್ನಿಸಿಕೊಂಡ. ಶಿವ ಭಕ್ತನಾದವನು ವೇಶ್ಯ ಸಂಗ ಮಾಡಿರುವುದನ್ನು ಕಂಡಿರಬಹುದಾದ ಸರ್ವಜ್ಞ, 'ಮೀಸಲಾಗಿದ್ದ ಊಟ, ಹಂದಿ ತಿಂದು ಹೋದಂತೆ' ಎಂದು ಲೇವಡಿ ಮಾಡಿದ. ಸಂಗವನ್ನು ತೊರೆದವಂಗೆ ಬಂಗಾರ, ಶೃಂಗಾರಗಳೇಕೆ ? ಎಂದು ಮತ್ತೆ ಪ್ರಶ್ನೆ ಮಾಡಿದ. ವೇಶ್ಯಾ ಸ್ತ್ರೀಯರನ್ನು ಕಟುವಾಗಿ ಟೀಕಿಸಿದ.

ಅವನ ಕಾಲದಲ್ಲಿ ರಾಜ,ಮಂತ್ರಿ, ಸೈನಿಕ ಮುಂತಾದವರಿದ್ದರು. ಅವರು ಕೆಲವೊಮ್ಮೆ ಪ್ರಜೆಗಳಿಗೆ ತೊಂದರೆ ಮಾಡುವುದನ್ನು ಕಂಡು 'ಅರಸು ರಕ್ಕಸನಂತೆ, ವರ ಮಂತ್ರಿ ಹುಲಿಯಂತೆ' ಎಂದು ಮೃಗಗಳಿಗೆ ಹೋಲಿಸಿದ. ಅಂತಹ ಅರಸ, ಮಂತ್ರಿಗಳೊಡನೆ ಜನಸಾಮಾನ್ಯರು ಹೇಗೆ ನಡೆದುಕೊಳ್ಳಬೇಕೆಂದು ಕಿವಿ ಮಾತುಗಳನ್ನು ಅವರಿಗೆ ಹೇಳುತ್ತಾ, ಎಚ್ಚರವಿಲ್ಲದೆ ಮಾತನಾಡುವುದು, ಅರಸನೊಲುಮೆ ಅರಿಯದೇ ಮಾತನಾಡುವುದು, ಗೆಳೆಯರಂತೆ ವರ್ತಿಸುವುದು ಇವೆಲ್ಲಾ ಮಾಡಬಾರದೆಂದು ತಿಳಿಹೇಳಿದ. ಹಾಗೆಯೇ ಸರ್ವಜ್ಞ ಮುಂದೆ ನಡೆದು ಬರುತ್ತಾ ಹೊಲ-ಗದ್ದೆಗಳೆಡೆಗೆ ಕಣ್ಣು ಹಾಯಿಸಿದಂತೆ ತೋರುತ್ತದೆ. ಅವನ ಕಣ್ಣಿಗೆ ಹೊಲದಲ್ಲಿ ದುಡಿಯುವ ಒಕ್ಕಲಿಗ ಬಿದ್ದಿರಬೇಕು.

ಅವನು ರಂಟೆ, ಕುಂಟೆ, ಎತ್ತು, ಬಂಡಿ, ಕಣಗ ಮುಂತಾದ ವಸ್ತುಗಳೊಡನೆ ನಿರತನಾಗಿರುವುದನ್ನು ಕಂಡು 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು' ಎಂಬ ಮೆಚ್ಚುಗೆಯನ್ನು ಸೂಚಿಸಿದ. ಒಕ್ಕಲಿಗನ ವಸ್ತುಗಳು ಹೊಲದಲ್ಲಿ ನಡೆದಾಡದಿದ್ದರೆ, ಇಡೀ ದೇಶದ ಸ್ಥಿತಿಗತಿಗಳೆಲ್ಲಾ ನಿಲ್ಲುತ್ತವೆಯಾದ್ದರಿಂದ ರೈತನಿಗೆ ಯಾವತ್ತೂ ಗೌರವ ಸಲ್ಲಬೇಕೆಂದು ' ಒಕ್ಕಲಿಗನಿಲ್ಲದಿರೆ ಬಿಕ್ಕುವುದು ಜಗವು' ಎಂಬ ನುಡಿಗಳನ್ನಾಡಿ ' ಊರಿಂಗೆ ಒಕ್ಕಲಿಗೆ ಲೇಸು' ಎಂದು ಸಂದೇಶ ಸಾರಿದ.

ಸರ್ವಜ್ಞ ಮೂಡಣ ನಾಡಿಗೆ ಪಯಣ ಹೊರಟ. ಹಾದಿಯ ಇಕ್ಕೆಲಗಳಲ್ಲಿ ಜಾಲಿಯ ಗಿಡಗಳನ್ನು ಕಂಡ. ಬೀದಿಯಲ್ಲೆಲ್ಲಾ ಜಾಲಿಯ ಮುಳ್ಳು ಹರಡಿದ್ದವು. ಅಲ್ಲಿ ಪೆದ್ದ ಜನರು ಬೀದಿಗಳಲ್ಲಿ ಉಡುಗೆ ಹೀನರಾಗಿ ತಿರುಗಾಡುತ್ತಿದ್ದರು. ಆಗ ಆತನು 'ಮೂಡಣ ದಿಕ್ಕಿನ ಹಾದಿಯೇ ಬೇಡ' ಎಂದು ಹೇಳಿಕೊಂಡ. ಆದರೆ ಮೂಡಣ ನಾಡಿನಲ್ಲಿ ಇನ್ನೂ ಮುಂದುವರೆದು ನೋಡುತ್ತಾ ಹೋದ. ಅಲ್ಲಿ ಪುಟ್ಟಿಯ ಹಣ್ಣು, ಮೆಕ್ಕೆಕಾಯಿ, ದಪ್ಪನಾದ ಮಜ್ಜಿಗೆ ಬಹಳವಾಗಿ ಸಿಗುವುದನ್ನು ತಿಳಿದುಕೊಂಡ. ಆಗ ಮೂಡಣ ನಾಡನ್ನು ವೃಥಾ ಹಳಿಯಬಾರದೆಂದುಕೊಂಡ. ಹೀಗೆ ಸರ್ವಜ್ಞ ಗುಣದೋಷಗಳನ್ನು ಸಮ ತೂಕವಾಗಿ ಪ್ರತಿಕ್ರಿಯಿಸುವ ಚತುರ.

ನಂತರ ಸರ್ವಜ್ಞ ಬಡಗಣ ನಾಡಿಗೆ ಪಯಣ ಹೊರಟ. ಅಲ್ಲಿ ಮೆಚ್ಚಿಕೊಳ್ಳುವಂತಹದೇನೂ ಅವನ ಕಣ್ಣಿಗೆ ಬೀಳಲಿಲ್ಲ. ಅಲ್ಲಿನ ಜನರು ನುಡಿ ಹೀನರೆಂದುಕೊಂಡ. ಅಲ್ಲಿಯೇ ಸನಿಹದಲ್ಲಿ ಊರು ಕೇರಿಗಳಿರಲಿಲ್ಲ. ದಾರಿಯಲ್ಲಿ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಆಕಡೆ ಈಕಡೆ ಕಣ್ಣು ಹಾಯಿಸಿದ.

ನೆರಳು ಕಾಣಲಿಲ್ಲ. ಬಾಯಾರಿಕೆಗೆ ನೀರು ಸಹ ದೊರೆಯಲಿಲ್ಲ. ಅಂತೆಯೇ ' ಈ ಬಡಗಣ ದಾರಿ ಬೇಡೆಂದುಕೊಂಡ'. ಹಾಗೆಯೇ ಮುಂದುವರೆದು ತೆಂಕಣ ನಾಡಿಗೆ ಪಾದ ಬೆಳೆಸಿದ. ಅಲ್ಲೆಲ್ಲಾ ಮನೆಗಳಲ್ಲಿ ಶಂಕರನ ಪೂಜೆ ಸಡಗರದಿಂದ ನಡೆದುದನ್ನು ಕಂಡ. ಅಲ್ಲದೆ ತೆಂಕಣದ ಪ್ರದೇಶ, ಭೋಗದ ಬೀಡಾಗಿ ಕಂಡಿತು. ತೆಂಕಣದವರು ಮುಷ್ಟಿಯಲ್ಲಿ ಉಣ್ಣುತ್ತಿದ್ದರಂತೆ. ಅಂಗೈಯಲ್ಲಿ ರೊಟ್ಟಿ ಇಟ್ಟುಕೊಂಡು ಉಣ್ಣುವುದು ಜನಪದರಿಗೆ ರುಚಿಕರವಾಗಿ ತೋರಿರುವುದನ್ನು ಈತ ಗಮನಿಸಿದ. ಮುಂದೆ ಪಡುವಣ ದಿಕ್ಕಿಗೆ ನಡೆದ. ಅಲ್ಲಿ ರೋಗರುಜಿನಿಗಳು ಹೆಚ್ಚಾಗಿ ಕಂಡು ಬರುವುದನ್ನರಿತ.

ಅಂದಿನ ಜನ ಜೀವನದ ಪರಿಸರದಲ್ಲಿ ವಿವಿಧ ಬಗೆಯ ಆಹಾರ ಸೇವಿಸುವವರನ್ನು ಆತ ಕಂಡಿದ್ದ. ಇಂಗು ತಿಂಬಾತನನ್ನು ಬ್ರಾಹ್ಮಣನೆಂದು ಗುರುತಿಸಿದ. ಜನಸಾಮಾನ್ಯರು ರೊಟ್ಟಿ, ಅಂಬಲಿ, ನುಚ್ಚು, ಅಂಬ್ರ, ಸುಟ್ಟ ಬದನೆ, ಸೌತೆಕಾಯಿ ಮುಂತಾದವುಗಳನ್ನು ಊಟ ಮಾಡುತ್ತಿದ್ದರಲ್ಲದೆ, ಉದ್ದಿನ ವಡೆ ತಿನ್ನುವುದನ್ನು, ಮೊಸರಿನ ಜೊತೆಗೆ ಊಟ ಮಾಡುವುದನ್ನು ಕಂಡಿರಬಹುದಾದ ಸರ್ವಜ್ಞ ತನ್ನ ವಚನಗಳಲ್ಲಿ ಉಲ್ಲೇಖ ಮಾಡಿದ್ದಾನೆ. ''ಮೊಸರು ಇಲ್ಲದ ಊಟ ಕೆಸರು ಇಲ್ಲದ ಗದ್ದೆಗೆ' ಹೋಲಿಸಿದ. ಹರಕು ಹೋಳಿಗೆ, ಮುರುಕು ಹಪ್ಪಳ, ಅಕ್ಕಿ, ಜೋಳ, ನವಣೆ, ರಾಗಿ, ಬೇಳೆ, ಬೆಲ್ಲ ಮುಂತಾದವುಗಳ ರುಚಿಯನ್ನು ಕಂಡು ಮೆಚ್ಚುಗೆಯನ್ನು ಸೂಚಿಸಿದ.

ಇದಲ್ಲದೆ ಸರ್ವಜ್ಞನ ವಚನಗಳಲ್ಲಿ ಕಂಡು ಬಂದ ಕೆಲವು ಮರ-ಗಿಡಗಳು, ಗಿಡಮೂಲಿಕೆಗಳು ಮುಂತಾದ ವಿಶೇಷತೆಗಳನ್ನು ಈ ಕೆಳಗೆ ವಿಂಗಡಿಸಲಾಗಿದೆ;

ಮರ-ಗಿಡಗಳು :

ಆಲ, ತೆಂಗು, ಅಡಿಕೆ, ಮಾವು, ಬೇವು, ಜಾಲಿ, ಬೂರಲ, ಈಚಲ, ಬಿದಿರು ಮೊದಲಾದವು.

ಗಿಡಮೂಲಿಕೆಗಳು :

ಚುರಚಿ, ನಸಗುನ್ನಿ, ಕಾಡಕವಡಿ,ಹೆಗ್ಗುಳಲ, ಎಕ್ಕೆ, ಹತ್ತಿ, ದವನ, ದಾಸಾಳ, ಬೆಳ್ಳುಳ್ಳಿ, ಕಳ್ಳಿ, ಇಂಗುಳ, ಹೆಣಜೆ, ಉತ್ತರಣೆ, ಕೋಲಾಣಿ, ಆಳಿಂಬೆ, ಕಾರಿ, ಈರೆ, ನೆಗ್ಗಿಲು ಸೀಗೆ, ತಂಬಾಕು, ಭಂಗಿ, ಜೇಕು, ಕರಿಕೆ ಇತ್ಯಾದಿ.

ಪುಷ್ಪಗಳು :

ಜಾಜಿ, ಮಲ್ಲಿಗೆ, ಸಂಪಿಗೆ, ಕೇದಗೆ, ಕಮಲ ಮುಂತಾದವು.

ಪತ್ರೆ ಮತ್ತು ಫಲಗಳು :

ಬಿಲ್ವ, ಬೇಲ, ಹಲಸು, ಬಾಳೆ, ಕಿತ್ತಳೆ, ಕುಂಬಳ, ಸೌತೆ, ಕಬ್ಬು, ಹತ್ತಿ, ಗೇರು,ನೆಲ್ಲಿ, ಅರಸಿನ,ಕೀರೆ ಇತರೆ.

ದವಸ-ಧಾನ್ಯಗಳು :

ಜೋಳ, ರಾಗಿ, ನವಣೆ, ಬೇಳೆ, ಅಕ್ಕಿ, ಗೋದಿ, ತೊಗರಿ, ಕಡಲೆ, ಅವರೆ, ಎಳ್ಳು, ಉದ್ದು, ಅಲಸಂದಿ ಮೊದಲಾದವು.

ಪಶು-ಪಕ್ಷಿಗಳು :

ಕುರಿ, ಹುಲಿ, ಕರಡಿ, ಆನೆ, ಚಿರತೆ, ಹೋತ, ನರಿ, ನಾಯಿ, ಎಮ್ಮೆ, ಎತ್ತು, ಕೋತಿ,ಹಂದಿ, ಮೊಸಳೆ, ಕೋಳಿ, ಗಾಗೆ, ಬೆಕ್ಕು, ಹದ್ದು, ಗೂಬೆ ಇತ್ಯಾದಿ.

ಜೀವಜಂತು-ಕೀಟಗಳು :

ಹಲ್ಲಿ, ಹಾವು, ಚೇಳು, ಮುಂಗಲಿ, ಆವೆ, ಏಡಿ, ಕೀಡಿ, ತಗಣಿ, ಚಿಕ್ಕಾಡು (ಸೊಳ್ಳೆ), ಉಣ್ಣೆ, ಹೇನು, ಕೂರಿ, ತೊನಸಿ, ನೊಣ ಮುಂತಾದವು.

ನಾಣ್ಯಗಳು :

ಅಡ್ಡ, ತಾರ, ಕಾಸು, ಹಾಗ, ಹಣ, ಇಪ್ಪಳ, ಬೇಳೆ ಇತರೆ.

ಪದ್ಧತಿಗಳು :

ಗುರು, ಲಿಂಗ , ಜಂಗಮ, ಪ್ರಸಾದ, ರುದ್ರಾಕ್ಷಿ, ಭಕ್ತಿ, ದೈವ, ಯೋಗ, ದಾನ, ರಾಜನೀತಿ, ಸಂಗ, ವಿಧಿವಶ, ಬ್ರಾಹ್ಮಣ, ಲೇಸು, ಹೊಲ್ಲ, ದೇಶ, ಅನ್ನ, ವೈದ್ಯ, ಬೆಡಗಿನ, ರಸವಾದ, ಸ್ತ್ರೀವರ್ಗ, ಸ್ತ್ರೀಸ್ತುತಿ, ಸ್ತ್ರೀನಿಂದಾ, ಜಾರರ, ಜಾರೆಯರ, ವೇಶ್ಯಾ ಸ್ತ್ರೀ, ಜ್ಞಾನ , ಕಾಲಜ್ಞಾನ ಇತ್ಯಾದಿ.

ಅಧ್ಯಾಯ - ೪

# ಜಾನಪದ ವೃತ್ತಿಗಳು

೪.೧. ಪ್ರವೇಶ

೪.೨. ಗ್ರಾಮೀಣ ಕಸುಬುಗಳು

೪.೨.೧. ಕಸುಬುಗಳ ಉಪಕರಣಗಳು

೪.೩. ಒಕ್ಕಲುತನದ ಮಹತ್ವ

೪.೩.೧. ನಂಬಿಕೆಗಳು

೪.೩.೨. ಮಳೆ

೪.೩.೩. ರೀತಿ-ನೀತಿಗಳು

೪.೪. ಬಡಿಗತನ

೪.೫. ಅಕ್ಕಸಾಲಿಗ

೪.೬. ಗಾಣಿಗ

೪.೭. ಹರದ (ಬಣಜಿಗ)

೪.೮. ಸುಂಕಿಗ

೪.೯. ಬೆಸ್ತರವ

೪.೧೦. ಡೊಂಬರವ

೪.೧೧. ಕುಂಬಾರ

೪.೧೨. ಸಿಂಪಿಗ

೪.೧೩. ಬೇಟೆಗಾರ

೪.೧೪. ವೇಶ್ಯೆಗಾರಿಕೆ

## ೪.೧. ಪ್ರವೇಶ :

ಮಾನವನಿಗೆ ತನ್ನ ಮೂಲಭೂತ ಅಗತ್ಯಗಳಾದ ಅಸನ, ವಸನ, ವಸತಿಗಳನ್ನು ಪಡೆಯುವ ಸಲುವಾಗಿ ಹಾಗೂ ಬದುಕನ್ನು ಸುಂದರ ಮತ್ತು ಸುಖಕರವಾಗಿ ಸಾಗಿಸಿಕೊಂಡು ಹೋಗಲು ಸಾಧ್ಯವಾಗಬೇಕಿದ್ದಲ್ಲಿ, ದುಡಿಮೆಗೆ ಶರಣು ಹೋಗದೇ ಬೇರೆ ದಾರಿಯಿಲ್ಲ. ಅದು ಯಾವುದೇ ಉದ್ಯೋಗ ಅಥವಾ ಕುಲ ಕಸುಬಾಗಿರಬಹುದು.

ನಮ್ಮ ಜನಪದರು ಯಾವುದೇ ದುಡಿತವೂ ಹಂಗಿನದಾಗಿರಬಾರದೆಂದು ಭಾವಸಿದ್ದಾರೆ. ಅವರು ದುಡಿಮೆಯನ್ನು ಆಯ್ಕೆ ಮಾಡಿಕೊಂಡು, ಆನಂದದಾಯಕವಾಗಿ ಬದುಕನ್ನು ಕಳೆಯುತ್ತಾರೆ. ಅಲ್ಲದೆ ಸುಮ್ಮನೆ ಕಾಲ ಕಳೆಯುವ ಬೇಸರವನ್ನು, ಕೆಲಸದಲ್ಲಿ ನಿರತರಾಗಿ ಜೀವನದ ಸವಿಯನ್ನು ನೂರು ಮಡಿಯಾಗಿ ಸವಿಯುತ್ತಾರೆ. ತಾನು ಬದುಕಿ ಇನ್ನೊಬ್ಬರನ್ನು ಬದುಕಿಸುವುದು ವೃತ್ತಿಯ ಧರ್ಮ. ಕೆಲವೊಮ್ಮೆ ಸಾಮೂಹಿಕವಾಗಿ ದುಡಿಯುವಾಗ ಪ್ರತಿಫಲವನ್ನು ಸಮಪಾಲಾಗಿ ಸ್ವೀಕರಿಸುವುದುಂಟು. ಕೆಲವು ವೃತ್ತಿಗಳು ಪರಂಪರಾಗತವಾಗಿರುತ್ತವೆ. ಅವರು ಪ್ರತಿಫಲವನ್ನು ಸುಗ್ಗಿಗೊಮ್ಮೆ ಪಡೆಯುತ್ತಾರೆ. ಅಂಥವರನ್ನು ಆಯಗಾರರೆಂದು ಕರೆಯುತ್ತಾರೆ. ಆಯಗಾರ ಎಂಬುದು ಜಾತಿ ಸೂಚಕವಾದ ಪದವಲ್ಲ; ಉದ್ಯೋಗವಾಚಕ ಪದ. ಉದಾಹರಣೆಗೆ ಒಕ್ಕಲುತನ ಉದ್ಯೋಗದಲ್ಲಿ ನೆರವಾಗುವ ಬಡಿಗ, ಕಮ್ಮಾರ, ಸಿಂಪಿಗ, ಗಾಣಿಗ ಮುಂತಾದವರು ತಮ್ಮ ಉದ್ಯೋಗಗಳಿಗೆ ಪ್ರತಿಫಲವಾಗಿ ಕೂಲಿಯನ್ನು ಪಡೆಯದೇ, ಒಕ್ಕಲುತನಕ್ಕೆ ಬೇಕಾಗುವ ಸಾಮಾನು- ಸರಂಜಾಮುಗಳನ್ನು ಆಯಾ ಸಂದರ್ಭಗಳಲ್ಲಿ ಒದಗಿಸುತ್ತಾ, ರಾಶಿಯ ಕಾಲದಲ್ಲಿ ಕಾಳು-ಕಡಿ ರೂಪದಲ್ಲಿ 'ಆಯ' ಸ್ವೀಕರಿಸುವ ಪದ್ಧತಿ ಇತ್ತು. ಈ ಪದ್ಧತಿ ಈಗಲೂ ಉತ್ತರ ಕರ್ನಾಟಕದ ಕೆಲವು ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ (ಜಾನಪದ ಸಾಹಿತ್ಯ ದರ್ಶನ, ಪು. ೯೬).

ಜಾನಪದರು ನ್ಯಾಯವಾದ ಮಾರ್ಗದಲ್ಲಿ ದುಡಿದುಣ್ಣುವವರು. 'ಅಧರ್ಮದಿಂದ ಗಳಿಸಿದ ಆಸ್ತಿಯು ಆಯುಷ್ಯವನ್ನೇ ಕಡಿಮೆ ಮಾಡಬಹುದು' ಎಂಬ ನಂಬಿಕೆ ಈಗಲೂ ಗ್ರಾಮೀಣ ಪರಿಸರದ ಜನರಲ್ಲಿದೆ. 'ಉದ್ಯೋಗಂ ಪುರುಷ ಲಕ್ಷಣಂ' ಎಂಬಂತೆ ಉದ್ಯೋಗವಿಲ್ಲದೆ ಮನುಷ್ಯ ಬದುಕಬಾರದು. ಉದ್ಯೋಗ ಶೀಲತೆಯನ್ನು ಸರ್ವಜ್ಞ ಹೀಗೆ ಎತ್ತಿ ಹಿಡಿದಿದ್ದಾನೆ.

ಉದ್ಯೋಗವುಳ್ಳವನ ಹೊದ್ದುವುದು ಸಿರಿ ಬಂದು
ಉದ್ಯೋಗವಿಲ್ಲದಿರುವವನ ಕರದೊಳಗೆ
ಇದ್ದದೂ ಪೋಕು ಸರ್ವಜ್ಞ.

ಆ ಕಾಲದಲ್ಲಿ ಕೆಲ ಜನರು ಏನಾದರೊಂದು ಉದ್ಯೋಗದಲ್ಲಿರುವುದನ್ನು ಸರ್ವಜ್ಞ ನೋಡಿರುವುದರಿಂದ ಅಂತಹವರ ಜೀವನ ಸದಾ ಸುಗಮ ಸ್ಥಿತಿಯಲ್ಲಿ ಸಾಗಿರುವುದನ್ನು ಈತ ತಿಳಿದುಕೊಂಡಿದ್ದಾನೆ. ಕೆಲವರು ಉದ್ಯೋಗವಿಲ್ಲದೇ ಇದ್ದ ಅಲ್ಪಸ್ವಲ್ಪ ಆಸ್ತಿ, ಹಣದಿಂದ ಮೆರೆದು ನಂತರ ಬರಿಗೈ ದಾಸರಾಗಿ ಪಶ್ಚಾತ್ತಾಪಪಟ್ಟವರ ಸ್ಥಿತಿಯನ್ನು ನೋಡಿರಬಹುದು. ''ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು'' ಎಂಬ ಲೋಕೋಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಮನುಷ್ಯ ಯಾವುದಾದರೂ ಒಂದು ದುಡಿಮೆ ಮಾಡುತ್ತಲೇ ಇದ್ದರೆ, ಧನದ ಸಂಪಾದನೆ ಸಾಧ್ಯವಾಗುತ್ತದೆ. ತನ್ಮೂಲಕ ಯಾರ ಹಂಗಿಗೂ ಒಳಗಾಗದೆಯೇ ತಲೆಯೆತ್ತಿ ಬಾಳುವ ಮತ್ತು ಬದುಕಿನ ಸುಖವನ್ನು ಪಡೆಯುವ ಸುಸ್ಥಿತಿ ತಾನೇ ಲಭಿಸುತ್ತದೆ. ಹೀಗಾಗಿ ಜನಪದರು ಮೂಲಭೂತವಾಗಿ ಭೂತಾಯಿಯ ಮಕ್ಕಳಾಗಿರುವುದರಿಂದ ಈ ಮಣ್ಣಿನಲ್ಲಿ ದುಡಿದು, ಸುಖೀ ಜೀವನ ಪಡೆದುಕೊಂಡಿರುವುದುಂಟು.

## ೪.೨. ಗ್ರಾಮೀಣ ಕಸುಬುಗಳು :

ಗ್ರಾಮೀಣ ಕಸುಬು (ಕುಲ ಕಸುಬು) ಎಂದರೆ, ಮನೆತನದಲ್ಲಿ ಪರಂಪರೆಯಿಂದ ಬಂದ ಉದ್ಯೋಗ. ಜನಪದರು ತಮ್ಮ ಹೊಟ್ಟೆ ಹೊರೆಯುವುದಕ್ಕಾಗಿ ತಲೆ-ತಲಾಂತರದಿಂದ ಕೈಗೊಂಡು ಬಂದ ಅನುವಂಶಿಕ ವೃತ್ತಿಗಳೇ 'ಗ್ರಾಮೀಣ ಕುಲ ಕಸುಬುಗಳು' (ವಚನ ಸಾಹಿತ್ಯ ಮತ್ತು ಜಾನಪದ,ಪು.೩೧) ಎಂದು ಕರೆಯಲಾಗಿದೆ. ಗ್ರಾಮೀಣ ಪರಿಸರದಲ್ಲಿ ಸಾಮಾನ್ಯರೆನಿಸಿಕೊಂಡವರ ಉಪಜೀವನ ವೃತ್ತಿಗಳಾದ ಈ ಕಸುಬುಗಳು ಒಂದೊಂದು ವರ್ಗವಾಗಿ ರೂಪುಗೊಂಡಿರುವುದನ್ನು ಈಗಲೂ ನಾವು ಕಾಣುತ್ತೇವೆ. (ಜಾನಪದ ಸ್ಪಂದನ, ಪು.೬೧)

ಜನಪದರು ಮಾಡುವ ಕೆಲಸಗಳೆಲ್ಲವೂ ಕುಲ ಕಸುಬುಗಳಾಗಿವೆ. ಇವರ ಹೆಸರಿನಲ್ಲಿ ಜಾತಿಗಳು ಹುಟ್ಟಿಕೊಂಡವು. ಇಂತಹ ಜಾತಿ ಜಾತಿಗಳ ತರತಮ ಭಾವನೆ ಬೆಳೆದು, ಮೇಲು-ಕೀಳುಗಳೆಂಬ ತರತಮ ಭಾವನೆಗಳು ಹುಟ್ಟಿಕೊಂಡವು. ಇದನ್ನು ಹೋಗಲಾಡಿಸಲು ಅಂದಿನ ೧೨ನೇ ಶತಮಾನದ ಶರಣರು;

ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ
ವೇದವನೋದಿ ಹಾರುವನಾದ
ಕುಲವೇನೋ, ಆವಂದಿರ ಕುಲವೇನೋ......

ಬಸವಣ್ಣ ಹೀಗೆ ಪ್ರಶ್ನಿಸುವುದರ ಮೂಲಕ ವೃತ್ತಿಗಳ ನಿಜ ಸ್ಥಿತಿ-ಗತಿಗಳನ್ನು ಹೇಳಿ, ಜಾತಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ, ವೃತ್ತಿಯನ್ನು ಕಾಯಕದ ಹಂತಕ್ಕೆ ಎತ್ತರಿಸಿದರು.

ದುಡಿಯದವನಿಗೆ ಜೀವಿಸುವ ಹಕ್ಕಿಲ್ಲ. ಸಮಾಜದಲ್ಲಿ ಕೆಲವರು ಮೈ ಮರಿದು ದುಡಿಯುವುದು, ಉಳಿದವರು ಅದರ ಫಲವನ್ನುಂಡು ಜೀವಿಸುವುದು, ಇದು ಸರಿಯಲ್ಲ. ಬಡವ ಬಲ್ಲಿದರೆನ್ನದೇ ಎಲ್ಲರೂ ದುಡಿದಾಗ ಸಮಾಜ ಸ್ವಯಂ ಪೂರ್ಣವಾಗುತ್ತದೆ. ಕಾಯಕದಲ್ಲಿ ನಿಷ್ಠೆಯುಳ್ಳವನಿಗೆ, ಅದೇ ಅವನ ಆಧ್ಯಾತ್ಮಿಕ ಸಾಧನೆಯಾಗಿ ಮುಕ್ತಿ ದೊರೆಯುತ್ತದೆಂದು 'ಕಾಯಕಕ್ಕೆ' ಹೊಸ ಅರ್ಥವನ್ನು, ಜೀವಕಳೆಯನ್ನು ತುಂಬಿದ ಬಸವಣ್ಣನವರು ಲೌಕಿಕ ಆಧ್ಯಾತ್ಮಿಕತೆಗಳನ್ನೂ ಒಂದುಗೂಡಿಸಿದವರು. ತನ್ನ ಕೆಲಸವನ್ನು ನಿಷ್ಠೆಯಿಂದ, ಆತ್ಮ ಸಂತೋಷದಿಂದ ಭಗವಂತನ ನಾಮಸ್ಮರಣೆ ಎಂದು ಮಾಡಿದಾಗ ಅದರ ಹಿರಿಮೆ -ಗರಿಮೆ ಗೊತ್ತಾಗುತ್ತದೆ. ''ಪಾಪಿಯಧನ, ಪ್ರಾಯಶ್ಚಿತಕ್ಕಲ್ಲದೆ, ಸತ್ಪಾತ್ರಕ್ಕೆ ಸಲ್ಲದಯ್ಯ'' ಎಂದು ಕಾಯಕದ ಹೊರತಾಗಿ ಬರುವ ಧನವನ್ನು ತಿರಸ್ಕರಿಸಿದ್ದಾರೆ. 'ತನು-ಮನ ಬಳಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ' ಎಂದು ಅಂಥವರನ್ನು ಕೊಂಡಾಡುವಲ್ಲಿ ಸತ್ಯಶುದ್ಧ ಕಾಯಕದ ಮಹತ್ವವನ್ನು ಶರಣರು ಎತ್ತಿ ಹಿಡಿದಿದ್ದಾರೆ.

ಅದೇರೀತಿ ಕೃಷಿಕತನದ ಬಗೆಗೆ ಎಷ್ಟೊಂದು ಕಾಳಜಿ ತೋರಿಸಿದ್ದಾರೆ, ಗೌರವಾದರಗಳನ್ನು ಸಲ್ಲಿಸಿದ್ದಾರೆಂಬುದಕ್ಕೆ;

ಕೃಷಿಕಾಯದಿಂದಾಡೇನು ? ತನು ಮನ ಬಳಲಿಸಿ
ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ
ಪಾದವ ತೋರಯ್ಯ ಎನಗೆ ಅದೆಂತೆನೆ
ಆತನ ತನು ಶುದ್ಧ, ಆತನ ಮನ ಶುದ್ಧ ಆತಂಗೆ
ಉಪದೇಶವ ಮಾಡಿದಾತನೇ ಪರಮ ಸದ್ಗುರು.
ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು
ಲಿಂಗಾರ್ಚನೆಯ ಮಾಡುವ ಜಂಗಮನೇ ಜಗತ್ಪಾವನ ;
ಇಂತಪ್ಪವರ ನಾನು ನೆರೆ ನಂಬಿ ನಮೋ ನಮಃ
ಎಂಬೆನಯ್ಯ ಕೂಡಲ ಸಂಗಮದೇವ ( ಬಸವಣ್ಣನ ವಚನ-೯೭೮).

ಹೊಲ-ಮನೆ ಮಾಡಿಕೊಂಡಿದ್ದ ಒಕ್ಕಲಿಗನೇ ಆಗಲಿ ಅಥವಾ ಬೇರಾವ ಕಾಯಕವ ಮಾಡಿ ದೇಹ ಶ್ರಮದಿಂದ, ಮನದ ಪರಿಶ್ರಮದಿಂದ ದುಡಿದು ಸಂಪಾದಿಸಿದ್ದನ್ನು ದಾಸೋಹ ಮಾಡುವಂತಹ ಉತ್ತಮ ಭಕ್ತನ ಪಾದಸೇವೆ ಮಾಡುವ ಭಾಗ್ಯ ಕೊಡು; ಇಂತಹ ಜನಪದದ ನಡೆ, ನುಡಿ, ಆಚಾರ, ವಿಚಾರಗಳು ಪರಮ ಪೂಜ್ಯವಾದವುಗಳು. ಅವರ ಮನೆಯೇ ಕೈಲಾಸ, ಅವರ ಮನೆಗಳಲ್ಲಿರುವ ಜಂಗಮನಿಗೆ ನಾನು ಶರಣು ಹೋಗುವೆನೆಂದು ಬಸವಣ್ಣನವರ ಕಳಕಳಿಯನ್ನು ನೋಡಿದಾಗ ಅವರಿಗಿದ್ದ ಕಾಯಕದ ಗೌರವ ಎಷ್ಟಿತ್ತೆಂಬುದು ತಿಳಿದುಬರುತ್ತದೆ.

ಅದೇ ರೀತಿಯಾಗಿ ಸರ್ವಜ್ಞನು ತನ್ನ ವಚನಗಳಲ್ಲಿ ಅನೇಕ ಕುಲಕಸಬುಗಳ ಬಗೆಗೆ ಗೌರವಾದರಗಳನ್ನು ನೀಡಿರುವುದಲ್ಲದೆ, ಕೆಲವೆಡೆ ಟೀಕಿಸಿದ್ದಾನೆ. ಇಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಕೆಲವೇ ಕೆಲವು ವೃತ್ತಿಗಳ ಬಗೆಗಿರುವ ಸರ್ವಜ್ಞನ ವಚನಗಳನ್ನು ಆಯ್ದುಕೊಂಡು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ೪.೨.೧. ಕಸುಬುಗಳ ಉಪಕರಣಗಳು :

ಜಾನಪದರ ಮೂಲ ವೃತ್ತಿ ಒಕ್ಕಲುತನ. ಇದನ್ನಾಧರಿಸಿದ ಇತರೇ ಉಪಕರಣಗಳ ಬಗೆಗೆ ಸರ್ವಜ್ಞ ತನ್ನ ವಚನದಲ್ಲಿ ಹೇಗೆ ಕಂಡರಿಸಿದ್ದಾನೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಒಕ್ಕಲುತನಕ್ಕೆ ಆಧಾರವಾಗಿರುವ ಬಂಡಿ, ಕೀಲು, ಎತ್ತು, ಮೇಟಿ, ರಾಟಿ, ಗಾಣ ಹಾಗೂ ಏತ ಮುಂತಾದ ಉಪಕರಣಗಳ ಬಗೆಗೆ ಉಲ್ಲೇಖಿಸಿರುವುದು ಕಂಡುಬರುತ್ತದೆ. ಇವುಗಳನ್ನು ಇತರೇ ವಸ್ತುಗಳಿಗೆ ಹೋಲಿಕೆ ಮಾಡುವುದರ ಮೂಲಕ ತಿಳಿಯಪಡಿಸಿದ್ದಾನೆ.

''ಬಂಡಿ'' ಎಂಬ ವಾಹನ ಎಲ್ಲಾ ಕಸುಬುದಾರರಿಗಿಂತ ಹೆಚ್ಚಾಗಿ ಒಕ್ಕಲಿಗನಿಗೆ ಸಹಾಯವಾಗಿದೆ. ಇದಕ್ಕೆ ಜನಪದರು 'ಚಕ್ಕಡಿ' ಎಂತಲೂ ಕರೆಯುವುದುಂಟು. ಕಟ್ಟಿಗೆಗಳಿಂದ ತಯಾರಿಸಿರುವ ಈ ಬಂಡಿಯನ್ನು ಎತ್ತುಗಳಿಂದ ಎಳೆಯುವುದುಂಟು. ಜನಪದರ ಪಾಲಿಗೆ ಈ ಬಂಡಿ ಮತ್ತು ಎತ್ತುಗಳು ದೊಡ್ಡ ಆಸ್ತಿಗಳಿದ್ದಂತೆ. ಒಕ್ಕಲಿಗನಿಗೆ ಅನೇಕ ರೂಪದಲ್ಲಿ ಬಳಕೆಯಾಗುವ ಬಂಡಿಯನ್ನು ಸರ್ವಜ್ಞ ತನ್ನ ವಚನದಲ್ಲಿ;

..........................................
ಬಂಡಿಯಿಲ್ಲದವನ ಬೇಸಾಯ ತಲೆಹೋದ
ಮುಂಡದಂತಿಕ್ಕು ಸರ್ವಜ್ಞ.

ಬಂಡಿಯೆಂಬುದು ಅಂದಿನ ಸಮಾಜದಲ್ಲಿ ತುಂಬಾ ಮಹತ್ವ ಹಾಗೂ ಶ್ರೀಮಂತಿಕೆಯ ವಸ್ತುವಾಗಿತ್ತು. ಬೇಸಾಯದ ಕೆಲಸಕ್ಕೆ ನಾನಾ ರೀತಿಯಲ್ಲಿ ಅತ್ಯವಶ್ಯಕವಾದ ಬಂಡಿಯು ಒಕ್ಕಲಿಗನಲ್ಲಿದ್ದುದನ್ನು ಕಂಡಿರಬಹುದಾದ ಸರ್ವಜ್ಞ ಮೇಲಿನ ವಚನದಲ್ಲಿ ಹಾಗೆ ಹೇಳಿದ್ದಾನೆ. ಆದರಲ್ಲೂ ಬಂಡಿಗೆ ಎರಡು ಗಾಲಿಗಳ ಕೊನೆಯಲ್ಲಿ 'ಕೀಲು' ಎಂಬ ಕಬ್ಬಿಣದ ವಸ್ತುವನ್ನು ಅವುಗಳ ತೂಬಿನಲ್ಲಿ ಸಿಕ್ಕಿಸಿರುವುದುಂಟು. ಬಂಡಿ ನಡೆಸುವಾಗ ಈ ಕೀಲುಗಳು ಗಾಲಿಗಳ ರಕ್ಷಣೆಗಿರುತ್ತವೆ. ಒಂದು ವೇಳೆ ಕೀಲು ಮುರಿದರೆ, 'ಕಿಬ್ಬದಿಯ ಕೀಲು ಮುರಿದಂತೆ' ಅಂದರೆ ಮನುಷ್ಯನ ಪಕ್ಕೆಲುಬುಗಳು ಮುರಿದಾಗಾಗುವ ಸ್ಥಿತಿ ಹೇಗಿರುತ್ತದೆಯೋ ಬಂಡಿಯ ಸ್ಥಿತಿಯೂ ಹಾಗಿರುತ್ತದೆಂದು ಹೋಲಿಸಿದ್ದಾನೆ.

ಇಂತಹ ಬಲವಾದ ಬಂಡಿಗೆ ಎತ್ತುಗಳೇ ಆಧಾರ. ಒಕ್ಕಲಿಗನಿಗೂ, ಎತ್ತುಗಳಿಗೂ ಸಾವಯವ ಸಂಬಂಧವಿದೆ. ಒಕ್ಕಲಿಗ ತನ್ನ ಎತ್ತುಗಳನ್ನು 'ಬಸವಣ್ಣ' ಎಂದೇ ಪೂಜಿಸುವುದುಂಟು. ಅದು ಸುರಿಸುವ ಜೊಲ್ಲು ಅವನ ಪಾಲಿಗೆ ರತ್ನದ ಹವಳವಿದ್ದಂತೆ. ಈ ಬಸವಣ್ಣನನ್ನು ನೆನೆದರೆ, ಬರಲಾರದ ಹಾಡುಗಳು ನೆನಪಿಗೆ ಬರುತ್ತವೆಂಬ ನಂಬಿಕೆ ಒಕ್ಕಲಿಗನ ಹೆಂಡತಿಯಲ್ಲಿದೆ. ಅದಕ್ಕಾಗಿ ಅವಳು ಪ್ರೀತಿಯಿಂದ ಎತ್ತುಗಳಿಗೆ;

ಹಂತಿ ಎತ್ತುಗಳು ಹತ್ತಿರ ಬಂದರ
ಸೆರಗಿಲೆ ಸುಂಕು ಒರಿಸ್ಯಾಳ ಗೋಪಮ್ಮ
ಮಂಗಳಾರತಿ ಬೆಳಗ್ಯಾಳ.

(ಜಾನಪದ ಮುಕ್ತಕಗಳು, ಪು. ೫೩).

ಆ ಎತ್ತುಗಳ ಮೈಯನ್ನು ಸೆರಗಿನಿಂದ ಒರಸಿ, ಮಂಗಳಾರತಿ ಮಾಡುವಳೆಂಬುದು ಜನಪದರ ಸಮಾಜದಲ್ಲಿ ಕಂಡುಬರುತ್ತದೆ. ಅದೇರೀತಿ ಎತ್ತುಗಳು ಹೇಗಿರಬೇಕು ? ಎಂಬುದರ ಬಗೆಗೆ ಸರ್ವಜ್ಞ ತನ್ನ ವಚನಗಳಲ್ಲಿ; ಕುಳ್ಳವರೆಡೆತ್ತಾಗಿ, ಕೆಂದ ಸಾದೆತ್ತಾಗಿ, ಎತ್ತುಗರ ಎರಡಾಗಿ, ಚೆಂಚವೆರೆಡೆತ್ತಾಗಿ ಈ ರೀತಿ ಇದ್ದಾಗ ಮಾತ್ರ ಬಂಡಿ ನಡೆಸಲು, ಉಳುಮೆ ಮಾಡಲು ಅನುಕೂಲವೆಂದು ಹೇಳಿರುವುದಲ್ಲದೆ, ಮೋಟೆತ್ತು, ಮುದಿಯೆತ್ತು, ಬಗಡೆತ್ತು, ಹರಗದ ಎತ್ತು ಈ ಮುಂತಾದ ಎತ್ತುಗಳಿಂದ ಏನೂ ಪ್ರಯೋಜನಗಳಿಲ್ಲವೆಂಬ ಮಾತನ್ನೂ ಸಹ ತಿಳಿಸಿದ್ದಾನೆ. ಇಷ್ಟೆಲ್ಲಾ ರೈತನ ಅಭ್ಯುದಯಕ್ಕೆ ಕಾರಣವಾಗಿರುವ ಎತ್ತುಗಳು ಜೀವಂತವಾಗಿದ್ದರೂ ಲಾಭ, ಸತ್ತರೂ ಲಾಭ. ಸತ್ತ ನಂತರ ಅದೇ ಎತ್ತಿನ ಚರ್ಮ ಬಾರುಕೋಲಾಗಿ ಮತ್ತೆ ರೈತನ ಹೆಗಲೇರುತ್ತದೆ.

ಅಂತೆಯೇ ಮೇಟಿ (ನೇಗಿಲಿನ ಹಿಡಿ), ರಾಟಗಳು ಒಕ್ಕಲಿಗನಿಗೆ ಸಹಾಯಕವಾದವುಗಳೇ. ಮೇಟಿ ವಿದ್ಯೆಗಳೆಂದರೆ ಒಕ್ಕಲಿಗನ ವಿದ್ಯೆ ಅಥವಾ ನೇಗಿಲು ಎಂದೇ ಕರೆಯಲಾಗುತ್ತದೆ (ಕನ್ನಡ ರತ್ನ ಕೋಶ, ಪು.೨೦೪). ವ್ಯಕ್ತಿ ಅನೇಕ ವಿದ್ಯೆಗಳನ್ನು ಕಲಿತು ಪಂಡಿತನಾಗಿದ್ದರೂ ಅವನು ಒಕ್ಕಲಿಗನು ಬೆಳೆದ ಆಹಾರವನ್ನೇ ಉಣ್ಣಬೇಕೇ ಹೊರತು ಮತ್ತೇನು ಅಲ್ಲ.

ಇನ್ನು 'ಗಾಣ' ಎಂದರೆ, ಎಣ್ಣೆ ತೆಗೆಯುವ ಹಾಗೂ ಕಬ್ಬನ್ನು ಅರೆಯುವ ಸಾಧನ (ಕನ್ನಡ ರತ್ನ ಕೋಶ, ಪು.೬೯). ಈ ಸಾಧನಕ್ಕೆ ಒಕ್ಕಲಿಗರು ಬಲವಾದ ಎರಡೆತ್ತುಗಳನ್ನು ಕಟ್ಟಿ ಗಾಣದ ಪ್ರದೇಶದ ಸುತ್ತಲೂ ತಿರುಗಿಸುತ್ತಾರೆ. ಮಧ್ಯದಲ್ಲಿರುವ ಈ ಗಾಣದ ಯಂತ್ರದಲ್ಲಿ ಕಬ್ಬನ್ನಿಟ್ಟು ಅರೆದು, ಬೆಲ್ಲವನ್ನು ತಯಾರಿಸುವುದುಂಟು. ಇದರ ಬಳಕೆ ಸರ್ವಜ್ಞನ ಕಾಲದಲ್ಲೂ ಇತ್ತೆಂಬುದು ಆತನ ವಚನದಿಂದ ವ್ಯಕ್ತವಾಗುತ್ತದೆ.

ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು
ಎತ್ತು ಗಾಣವನು ಹೊತ್ತು ತಾ
ಸುತ್ತಿ ಬಂದಂತೆ ಸರ್ವಜ್ಞ.

ಎಂದು ಉದ್ಗಾರ ತೆಗೆದಿದ್ದಾನೆ. ಹಾಗೆಯೇ ಒಕ್ಕಲಿಗನಿಗೆ ನೆರವಾಗಿರುವ 'ಏತ'ದ ವಿಚಾರ ನೋಡಿದಾಗ ಏತವೆಂಬುದು ಬಾವಿಯಿಂದ ನೀರೆತ್ತುವ ಸಾಧನ. ತಮ್ಮ ಹೊಲಗಳಿಗೆ ನೀರುಣಿಸುವ ಕೆಲಸಕ್ಕೆ ಈ ಏತವನ್ನು ಒಕ್ಕಲಿಗರು ಬಳಸುವುದುಂಟು.

ಏತವದುಗಳೆ ಚಿಗಿತು ।ಹೂತು ಫಲವಾದಂದು
............................ ನಾರಿಯರ
ಮಾತನಚ್ಚುವುದು ಸರ್ವಜ್ಞ.

ಮಾತುಬಲ್ಲಾತಂಗೆ ಏತವದು ಸುರಿದಂಗೆ
ಮಾತಾಡಲರಿಯದಾತಂಗೆ ಬರಿಯೇತ
ನೇತಾಡಿದಂತೆ ಸರ್ವಜ್ಞ.

ನೀರಿನ ಬಾನಿಗೂ ಅಥವಾ ಬಾವಿಗೂ ಏತದ ಮರಕ್ಕೂ ಸಂಪರ್ಕ ಕಲ್ಪಿಸುವುದೇ ಏತದ ಗಾಳ; ಇದೊಂದು ಒಣಗಿದ ಬಿದಿರು ಗಳವಷ್ಟೆ. ಇಂತಹ ಒಣಮರ ನೀರಿನಲ್ಲಿ ಅದ್ದಿ ತೆಗೆದಾಗ ಅದು ಮತ್ತೆ ಚಿಗುರಿ ಹೂಬಿಟ್ಟು, ಫಲಭರಿತವಾಗುವುದು ಎಷ್ಟೊಂದು ಅಸಂಭವವೋ ಕೆಲವೊಮ್ಮೆ ಹೆಣ್ಣಿನ ಮಾತು ನಂಬಲರ್ಹವೆನ್ನುವುದೂ ಅಷ್ಟೇ ಅಸಂಭವವೆಂದು ಸರ್ವಜ್ಞ ಹೇಳಿದ್ದಾನೆ (ಹೆಣ್ಣು ಸರ್ವಜ್ಞನ ದೃಷ್ಟಿಯಲ್ಲಿ, ಪು. ೩೬). ಸಮಯಕ್ಕೆ ಸರಿಯಾಗಿ ಬಂದಂತಹ ಮಾತುಗಳಿಂದ ಸತ್ತವನು ಎದ್ದು ಕೂತಂತೆ. ಹೊತ್ತಿಗೊದಗದ ಮಾತುಗಳು ಬಂದಾಗ ಕೈಜಾರಿದ ಮುತ್ತಿನಂತೆ ಎಂಬ ವಿಚಾರವನ್ನು ಸರ್ವಜ್ಞ ಏತಕ್ಕೆ ಹೋಲಿಸಿದ್ದಾನೆ.

ಸರ್ವಜ್ಞ ತನ್ನ ಬೆಡಗಿನ ವಚನದಲ್ಲಿ ಏತದ ಲಕ್ಷಣ ಹಾಗೂ ಸ್ವರೂಪವನ್ನು ಶಬ್ದ ಚಿತ್ರಣದಲ್ಲಿ ಮಾರ್ಮಿಕವಾಗಿ ವರ್ಣಿಸಿದ್ದಾನೆ.

ಪಾತಾಳಕ್ಕಿಳಿವುದು ಸೀತಳವ ತರುತಿಹುದು
ಭೂತಳದ ಮೇಲೆ ಇರುತಿಹುದು ಅದು ತಾನು
ಏತರದು ಪೇಳಿ ಸರ್ವಜ್ಞ.

ಈ ವಚನ ಓದುತ್ತಿದ್ದಂತೆಯೇ ಒಟ್ಟಾರೆ ಏತದ ಚಿತ್ರಣ ಕಣ್ಣಿಗೆ ಕಟ್ಟುತ್ತದೆ.

## ೪.೩. ಒಕ್ಕಲುತನದ ಮಹತ್ವ :

ಅಲೆಮಾರಿಯಾಗಿದ್ದ ಮಾನವನ ಮೊದಲ ಉದ್ಯೋಗ ಬೇಟೆಯಾಡುವುದಾದರೆ, ನಂತರ ಶೋಧನೆಯ ಬೆಳವಣಿಗೆಯೇ ಪಶು ಸಂಗೋಪನೆ ಮತ್ತು ಒಕ್ಕಲುತನ (ಜಾನಪದ ಸ್ಪಂದನ,ಪು.೬೩). ಒಕ್ಕಲು ವೃತ್ತಿಯನ್ನು ಕೃಷಿ, ಬೇಸಾಯ ಮುಂತಾಗಿ ಕರೆಯುತ್ತಾರೆ.

ಕರ್ನಾಟಕದ ಸಂಸ್ಕೃತಿ ಒಕ್ಕಲುತನದ ಸಂಸ್ಕೃತಿಯಾಗಿದೆ. ಸರ್ವಜ್ಞನು ಒಕ್ಕಲಿಗರ ಮಧ್ಯದಲ್ಲಿಯೇ ಬಾಳಿ ಬದುಕಿದ ಪ್ರತಿಭೆಯಾಗಿದ್ದಾನೆ. ಒಕ್ಕಲಿಗ ಸಮಾಜದ ರೀತಿ ನೀತಿಗಳನ್ನು, ನಡೆ-ನುಡಿಗಳನ್ನು ತನ್ನ ವಚನದಲ್ಲಿ ಪ್ರತಿಬಿಂಬಿಸಿ ಅದಕ್ಕೆ ಬಹಳ ಮಹತ್ವ ಕೊಟ್ಟಿದ್ದಾನೆ. ಮತ್ತು ಒಕ್ಕಲಿಗರಿಗಾಗಿ ಚಿಂತಿಸಿದ್ದಾನೆ.

| | | |
|---|---|---|
| ಒಕ್ಕ | : | ಬೆಳೆದ ತೆನೆಯಿಂದ ಕಾಳನ್ನು ಬೇರ್ಪಡಿಸುವ ಕ್ರಿಯೆ. |
| ಒಕ್ಕಿಡು | : | ಕುಟ್ಟು, ಥಳಿಸು, ಬಡಿ |
| ಒಕ್ಕಲಿಗ | : | ಕೃಷಿಕ, ಕ್ಷೇತ್ರಜೀವಿ ಮುಂತಾದ ವಿವರಣೆಯನ್ನು ಕೊಡಬಹುದಾಗಿದೆ. |

ಒಕ್ಕಲುತನ ಅಥವಾ ಒಕ್ಕಲಿಗ ಎಂದು ಕರೆಯುವುದಕ್ಕೆ ಕೃಷಿ ವೃತ್ತಿಯೇ ಹೆಚ್ಚು ನಿಕಟವಾಗಿರುವುದು ಸ್ಪಷ್ಟವಾಗುತ್ತದೆ. ಉತ್ತರಕರ್ನಾಟಕದಲ್ಲಿ 'ಒಕ್ಕಲಿಗ' ಈ ಪದ ( ಒಕ್ಕಲು +ಇಗ) ಕೃಷಿ ಕೆಲಸದ ರೈತ ಎಂದು ಕರೆಯಲಾಗುತ್ತದೆ. ರಂಟೆ ಹೊಡೆಯುವುದು, ಬಿತ್ತುವುದು, ಕಳೆ ಕೀಳುವುದು, ಹರಗುವುದು, ನೀರು ಹಾಯಿಸುವುದು, ಬೆಳೆ ಕೀಳುವುದು, ಒಡ್ಡು ಕಟ್ಟುವುದು, ರಾಶಿ ಮಾಡುವುದು ಮುಂತಾದ ಕೆಲಸಗಳು ಒಕ್ಕಲಿಗನಿಗೆ ಸಂಬಂಧಿಸಿದ್ದಾಗಿರುತ್ತವೆ. ನೇಗಿಲು, ಕವಲಿ, ಸೆಳಗೋಲು, ಬೆಂಗೋಲು, ಬಲಗೋಲು, ಕೊಡಲಿ, ಚಲಿಕೆ, ಗುದ್ದಲಿ, ರಂಟೆ, ಕುಡುಗೋಲು, ಪುಟ್ಟಿ ಮುಂತಾದ ಬೇಸಾಯದ ಉಪಕರಣಗಳನ್ನು ಒಕ್ಕಲಿಗನು ಸಮಯಾನುಸಾರ ಬಳಸಿಕೊಳ್ಳುತ್ತಾನೆ.

ನಮ್ಮದು ಕೃಷಿ ಪ್ರಧಾನವಾದ ದೇಶ. ನಮ್ಮ ಜನಪದರ ಉದ್ಯೋಗ ಬಹಳ ಹಿಂದಿನಿಂದಲೂ ಈ ಒಕ್ಕಲುತನವೇ ಆಗಿದೆ. ಜೀವನದ ಬಹುಕಾಲವನ್ನು ಈ ಉದ್ಯೋಗದಲ್ಲಿಯೇ ಕಳೆಯುತ್ತಿರುತ್ತಾರೆ. ಅವರಿಗೆ ಈ ಕೃಷಿಗೆ ಸಂಬಂಧಿಸಿದ ಅನುಭವ ಹೇರಳವಾಗಿರುತ್ತದೆ. '' ಒಕ್ಕಲಿಗನ ಜೀವನ ಸ್ವಭಾವಗಳು ಅವನ ಪರಿಸರ, ಹೊಲ-ಗದ್ದೆ, ತೋಟ, ಉತ್ತುವುದು, ಬಿತ್ತುವುದು, ಮಳೆ-ಬೆಳೆ, ಆಳು-ಕಾಳು, ಕೂಲಿ-ನಾಲಿ ಇತ್ಯಾದಿಗಳ ಬಗ್ಗೆ ಜನಪದರಿಗಿರುವ ಜ್ಞಾನ ಎಷ್ಟು ಅಪಾರವಾದುದು ಎಂಬುದನು ಕೆಲ ಗಾದೆಗಳಲ್ಲಿ ಕಾಣಬಹುದು.

ಒಕ್ಕಲಿಗನಿಗೆ ಶಾಲೆಗೆ ಹೋಗಿ ಅಕ್ಷರ ಕಲಿಯಲು ಆಗದು. ಕಲಿತರೂ ಅದು ಅಲ್ಪ ಮಟ್ಟಿಗೆ ಮಾತ್ರ. 'ಒಕ್ಕಲಿಗನ ಓದಲ್ಲ, ಬೆಕ್ಕು ಹೆಬ್ಬುಲಿಯಲ್ಲ, ಎಕ್ಕೆ ಗಿಡ ಮರವಲ್ಲ' ಎಂದು ಹೇಳಿದರೂ 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು' ಎಂಬ ಸರ್ವಜ್ಞನ ಮಾತು ಜನಪದರಿಗೆ ತುಂಬಾ ಅಭಿಮಾನದ

ಮಾತಾಗಿದೆ. 'ಉತ್ತು ಬಾಳುವವನ ಬದುಕು ಎತ್ತಲೂ ಲೇಸು' ಎನ್ನುತ್ತಾನೆ. ಆದರೆ ತನ್ನ ತೊಂದರೆಯ ಬಗ್ಗೆ ಆರ್ಥಿಕ ಮುಗ್ಗಟ್ಟಿನ ಬಗ್ಗೆ ಅವನಿಗೆ ಅರಿವಿದೆ. ' ಒಕ್ಕಲಿಗನ ಓಡಾಟ ನಾಯಿ ಒಡನಾಟ' ಎಂದ ಅವನು ' ಒಕ್ಕಲಿಗನ ಸಾಲ ಮಕ್ಕಳ ಮೊಮ್ಮಕ್ಕಳ ತಲೇಲಿ' ಎಂಬ ಸತ್ಯವನ್ನು ಬಚ್ಚಿಡದೆ ಹೊರಹಾಕಿದ್ದಾನೆ.

ನಮ್ಮ ಜನಪದರಿಗೆ ಒಕ್ಕಲುತನದ ಮಹತ್ವ ತುಂಬಾ ಪ್ರಾಚೀನ ಕಾಲದಿಂದಲೇ ಗೊತ್ತು. ತಮ್ಮ ಜೀವನದಲ್ಲಿ ಸುಖದಿಂದ ಬಾಳಬೇಕಾದರೂ ಮೊದಲು ದಣಿದು ದುಡಿವ ಕಾಯಕದಲ್ಲಿ ತಲ್ಲೀನರಾಗುತ್ತಿದ್ದರು. ಸರ್ವಜ್ಞನು ನಾಡನ್ನು ಸುತ್ತುವಾಗ ಈ ಒಕ್ಕಲುತನದ ಹಾಗೂ ಒಕ್ಕಲಿಗನ ಕೆಲಸದ ಬಗೆಗೆ, ಅದರ ಮಹತ್ವದ ಬಗೆಗೆ ಬಹಳ ಸುಂದರವಾದ ಮಾತುಗಳನ್ನು ಹೇಳಿದ್ದಾನೆ. ಇಂತಹ ವಿಷಯ ಕುರಿತಾದ ಆತನ ವಚನಗಳು ಇಂದಿಗೂ ಪ್ರಸ್ತುತವೆನಿಸುತ್ತವೆ.

ಬೆಕ್ಕು ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು
ನಕ್ಕು ನಗಿಸುವ ನುಡಿಲೇಸು ಊರಿಂಗೆ
ಒಕ್ಕಲಿಗನೇ ಲೇಸು ಸರ್ವಜ್ಞ.

ರೈತ ತಾನು ಕಷ್ಟಪಟ್ಟು, ತನ್ನ ಭೂಮಿಯಲ್ಲಿ ದುಡಿಯುತ್ತಾನೆ. ಹೀಗೆ ದುಡಿಯದೇ ಇದ್ದರೆ ಎಲ್ಲರೂ ಹಸಿವೆಯಿಂದ ಬಳಲಬೇಕಾಗುತ್ತದೆ. ಅಲ್ಲದೆ ಊರಿನಲ್ಲಿ '' ಒಕ್ಕಲಿಗನಿಲ್ಲದಿದ್ದರೆ ಬಿಕ್ಕುವುದು ಜಗವು'' ಎಂಬ ಮಾತಿನ ಹಿನ್ನೆಲೆಯಲ್ಲಿ ಆತನ ಮಹತ್ವ ಎಷ್ಟೆಂಬುದನ್ನು ಕಾಣಬಹುದು.

ಒಕ್ಕಲುತನ ಮಾಡುವವರಿಗೆ ಭೂತಾಯಿಯೇ ಸರ್ವಸ್ವ. ಅವರ್ನು ಮಣ್ಣಿನ ಮಕ್ಕಳು, ಭೂತಾಯಿಯ ಮಕ್ಕಳು ಎಂದೆಲ್ಲಾ ಪ್ರೀತಿ ಅಭಿಮಾನದಿಂದ ಕರೆಯುವುದುಂಟು. ಭೂತಾಯಿಯನ್ನು ಒಕ್ಕಲಿಗರು ಭಕ್ತಿ ಗೌರವಗಳಿಂದ ಕಾಯ್ದುಕೊಂಡು ಬಂದಿರುವುದುಂಟು. ಗರತಿಗಂತೂ ಈ ಮಣ್ಣಿನ ಮೇಲೆ ಅದೆಷ್ಟು ಭಕ್ತಿ ಎಂದರೆ, ತಾನು ಯಾರಿಗೂ ಬೇಡವಾದಾಗ, ಬೇಸರವಾದಾಗ ಕೆಲವೊಮ್ಮೆ ;

ಎಳ್ಳು ಜೀರಿಗೆ ಬೆಳೆಯೋಳ
ಭೂಮಿ ತಾಯೀನ
ಎದ್ದೊಂದು ಗಳಿಗೆ ನೆನೆದೇನ.
ಹೆಣ್ಣು ಆಗೋದಕ್ಕಿಂತ ಮಣ್ಣು ಆಗೋದು ಲೇಸು
ಮಣ್ಣಿನ ಮೇಲೆ ಮರವಾಗಿ ಹುಟ್ಟಿದರೆ,
ಪುಣ್ಯವಂತರಿಗೆ ನೆರಳಾದೆ

ಹೆಣ್ಣೀನ ಕಾಯವ ಮಣ್ಣು ಮಾಡಲಿಬೇಕು
ಸುಣ್ಣದಳ್ಳಾಗಿ ಸುಡಬೇಕು, ಈ ಜಲುಮ
ಮಣ್ಣು ಮಾಡಿ ಮರ್ತ್ಯ ಗೆಲ್ಲಬೇಕು.

(ಕನ್ನಡ ಜಾನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ,ಪು.೪೪)

ಈ ರೀತಿ ಉಸುರುತ್ತಾಳೆ. ಅವಳು ತನ್ನ ತ್ಯಾಗ, ಪರೋಪಕಾರದ ಮೂಲಕ ತನ್ನ ಜನ್ಮವನ್ನು ಈ ರೀತಿ ಸಾರ್ಥಕಪಡಿಸಿಕೊಳ್ಳಬೇಕೆಂಬ ಹಂಬಲವಿಟ್ಟುಕೊಂಡಿದ್ದಾಳೆ.

ಇನ್ನು ಜನಪದರು ತಮ್ಮ ಪೂರ್ವಿಕರಿಂದ ಬಂದ ಜಮೀನನ್ನು ಜೀವನದುದ್ದಕ್ಕೂ ಭೂತಾಯಿ ಎಂದು ನಂಬಿ ದುಡಿಯುತ್ತಾ ಬಂದಿದ್ದಾರೆ. ತಮಗೆ ಒಲವಿರುವ ಯಾವುದೇ ದುಡಿಮೆ ಇರಲಿ, ಜನಪದರು ಅದರಲ್ಲಿ ಶ್ರದ್ಧೆಯಿಂದ ಕಷ್ಟಪಟ್ಟು ದುಡಿಯುವುದೇ ಅವರ ಜಾಯಮಾನವಾಗಿರುತ್ತದೆ.

'' ಜಾನಪದರ ಕಾಯಕ ನಿಷ್ಠೆ ಅನೇಕರಿಗೆ ಆದರ್ಶಪ್ರಾಯ. ಬಸವಾದಿ ಶರಣರು ಕಾಯಕ ತತ್ವವನ್ನು ಸಮಾಜದಲ್ಲಿದ್ದ ಬಹುಸಂಖ್ಯಾತರಾಗಿದ್ದ ಜಾನಪದರಿಂದ ಕಲಿತವರು. ಅದರ ಮಹತ್ವವನ್ನು ಅರಿತು ಅನ್ಯರೂ ಆಚರಿಸುವಂತೆ ವಚನಗಳ ಮೂಲಕ ಕರೆಕೊಟ್ಟರು''(ಕನ್ನಡ ಜಾನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಪು. ೪೬). ಜನಪದರು ಹುಟ್ಟಿದಾಗಿನಿಂದ ಸಾಯುವವರೆಗೂ ಮಣ್ಣಿನೊಡನೆ ಇರುತ್ತಾರೆ. ಇದರಿಂದ ವ್ಯವಸಾಯ ವೃತ್ತಿ ಕಷ್ಟವೆನಿಸುವುದಿಲ್ಲ. ''ಕೈ ಕೆಸರಾದರೆ ಬಾಯಿ ಮೊಸರು'' ಎಂಬುದನ್ನು ಅವರು ಸಂಪೂರ್ಣವಾಗಿ ನಂಬುತ್ತಾರೆ.

ಒಕ್ಕಲಿಗನ ನಲುಗಿಸದೇ ಲೆಕ್ಕವನು ಸಿಕ್ಕಿಸದೇ
ಕಕ್ಕುಲತೆಯಿಂದ ನಡೆಯಿಸುವ ಅರಸು ತಾ
ಚಕ್ಕಂದವಿರುವ ಸರ್ವಜ್ಞ.

ಅಂದರೆ ರಾಜನಾದವನು ಒಕ್ಕಲಿಗನನ್ನು ಚೆನ್ನಾಗಿ ನೋಡಿಕೊಳ್ಳಬೇಕು. ರೈತನೇ ಸಾಮ್ರಾಜ್ಯದ ಬೆನ್ನೆಲುಬು. ಆದ್ದರಿಂದ ಒಕ್ಕಲಿಗನಿಗೆ ತಾಪವನ್ನು ಕೊಡದೇ, ಪ್ರೇಮದಿಂದ ನೋಡಿಕೊಳ್ಳುವ ಯಾವ ಅರಸನೇ ಆಗಿರಲಿ ತನ್ನ ಸಾಮ್ರಾಜ್ಯದಲ್ಲಿ ಸುಖ-ಶಾಂತಿಯಿಂದ ಜೀವನ ಸಾಗಿಸುತ್ತಿದ್ದನೆಂಬುದು ಸರ್ವಜ್ಞನು ತನ್ನ ವಚನದಲ್ಲಿ ಸ್ಪಷ್ಟಪಡಿಸಿದ್ದಾನೆ.

''ಒಕ್ಕಲಿಗ ಎಲ್ಲ ಮತ-ಪಂಥಗಳಿಗೂ ಒಳಗಾಗಿದ್ದಾನೆ. ಭಾರತದಂತಹ ದೇಶಕ್ಕೆ ಬೆನ್ನೆಲುಬಾಗಿದ್ದಾನೆ'' (ಸರ್ವಜ್ಞನ ಸಮಾಜ ದರ್ಶನ ಮತ್ತುಸಾಹಿತ್ಯ ತತ್ವ,ಪು. ೮೬). ಜನಪದರು ಕೃಷಿಯನ್ನೇ ನಂಬಿ, ನೆಚ್ಚಿ, ಬೆವರು ಸುರಿಸಿ, ಮುಂಜಾನೆಯಿಂದ ಸಂಜೆಯವರೆಗೆ ಮೈಮುರಿದು, ಮನಸ್ಸಿಟ್ಟು ದುಡಿದು, ದಣಿದು ಜೊತೆಗೆ ಪಶುಪಾಲನೆ ನಡೆಸಿ ಜೀವಿಸುವರು.

## ೪.೨.೧. ನಂಬಿಕೆಗಳು :

ಒಕ್ಕಲಿಗರು ತಮ್ಮ ಒಕ್ಕಲುತನದಲ್ಲಿ ಕೆಲ ನಂಬಿಕೆಗಳನ್ನು ಅನೇಕ ತಲೆಮಾರುಗಳಿಂದ ಪಾಲಿಸುತ್ತಾ ಬಂದಿರುವುದನ್ನು ನಾವು ಇಂದಿಗೂ ಕೆಲ ಗ್ರಾಮೀಣ ಪ್ರದೇಶಗಳಲ್ಲಿ ಕಾಣುತ್ತೇವೆ. ''ನಂಬಿಕೆಗಳನ್ನು ಮಾನಸಿಕ ವಿನ್ಯಾಸದ ಒಂದು ಸ್ಥಿತಿಯೆಂದು, ಬೇರ್ಪಡಿಸಲಾಗದೇ, ಭಾವಸಹಚರ್ಯಗಳನ್ನೊಳಗೊಂಡ, ಭೌದ್ಧಿಕ ಸ್ಥರದಲ್ಲಿ ಕಳವಳ, ಹಿಂಜರಿಕೆ ಮತ್ತು ಸಂಶಯಗಳನ್ನು ದೂರ ಮಾಡಿ ಆತ್ಮವಿಶ್ವಾಸ ಮೂಡಲು ಸಹಾಯಕ ಮಾಡುವಂತಹ ಗ್ರಹಿಕೆ'' ಎಂದು ವಿದ್ವಾಂಸರು ವಿವರಿಸಿರುವುದನ್ನು ಈ ಸಂದರ್ಭದಲ್ಲಿ ಸ್ವೀಕರಿಸಬೇಕಾಗುತ್ತದೆ. ಇಂತಹ ನಂಬಿಕೆಗಳ ಅಧ್ಯಯನ ಮಾಡುವಾಗ ಅನೇಕಸಲ ಸಂಪ್ರದಾಯಕ್ಕೆ ಹತ್ತಿಕೊಂಡೇ ನಡೆಯಬೇಕಾಗುತ್ತದೆ. ಹಳೆಯ ಸಂಪ್ರದಾಯಗಳೆಲ್ಲವೂ ಜನಪದ ನಂಬಿಕೆಗಳಿಂದಲೇ ಕವಲೊಡೆದವುಗಳು. ಈ ನಂಬಿಕೆಗಳ ಹಿಂದೆ ಮಾನಸಿಕ ಆಂದೋಲನ ಇರುತ್ತದೆ. ಜನಪದರು ಕೃಷಿಯನ್ನೇ ನಂಬಿ, ನೆಚ್ಚಿ, ಬೆವರು ಸುರಿಸಿ ಮುಂಜಾನೆಯಿಂದ ಸಂಜೆಯವರೆಗೂ ದಣಿದು, ಜೊತೆಗೆ ಪಶುಪಾಲನೆ ನಡೆಯಿಸಿ ಜೀವಿಸುತ್ತಾರೆ. ವ್ಯವಸಾಯದಲ್ಲಿ ಗೋವುಗಳನ್ನು ಪೂಜಿಸುವುದು, ಜನಪದರ ಅಚಲವಾದ ನಂಬಿಕೆಯಲ್ಲೊಂದು.

ಒಕ್ಕಲಿಗ ಭಾವುಕಜೀವಿ ಎಂಬುದರಲ್ಲಿ ನಿಸ್ಸಂದೇಹ. ವಾರಗಳಲ್ಲಿ ಗ್ರಹಗತಿ, ನಕ್ಷತ್ರ, ತಿಥಿಗಳಲ್ಲಿ ಅತೀ ನಂಬಿಕೆಯುಳ್ಳವಂತವನು. ತಾನು ಕೈಗೊಳ್ಳುವ ಯಾವುದೇ ಕಾರ್ಯಗಳ ಫಲವನ್ನು ಕುರಿತು ಮೊದಲೇ ಭವಿಷ್ಯ ಹೇಳುವುದು, ಕೇಳುವುದು ನಮ್ಮ ಜನಪದರ ಸ್ವಭಾವ. ಒಕ್ಕಲುತನವನ್ನು ಹೊಸದಾಗಿ ಆರಂಭ ಮಾಡುವಾಗ, ಬೆಳೆಯುವಾಗ, ಹಬ್ಬ-ಹರಿದಿನ, ತಿಥಿ ಮುಂತಾದ ಏನೆಲ್ಲಾ ಮಾಡುವಾಗ ಒಕ್ಕಲಿಗ ಮಠದ ಸ್ವಾಮಿಗಳನ್ನೋ ಇಲ್ಲವೆ ಪಂಡಿತರ ಸಲಹೆ-ಸೂಚನೆಗಳನ್ನು ಕೇಳುವುದುಂಟು. ತಮ್ಮ ಒಕ್ಕಲುತನದ ಕಾರ್ಯದಲ್ಲಿ ಬಳಸಿಕೊಳ್ಳುವ ಎತ್ತುಗಳನ್ನು ಬಸವಣ್ಣನೆಂದು ಭಕ್ತಿಯಿಂದ ಪೂಜಿಸುತ್ತಾರೆ. ಮನೆಯಲ್ಲಿ ಅವುಗಳನ್ನು ಬಲಭಾಗಕ್ಕೆ ಕಟ್ಟುತ್ತಾರೆ. ಬಲ ಎಂಬುದು ಯಾವಾಗಲೂ ಮನಸ್ಸಿಗೆ 'ನಿರ್ದಿಷ್ಟ ಬಲ' ಕೊಡುವುದೆಂದು ನಂಬಿಕೆಯುಂಟು. ಇನ್ನು ದನಗಳನ್ನು ಕೊಂಡುಕೊಳ್ಳುವ ವಿಷಯದಲ್ಲಿ ಭೀಮಸುಳಿ, ಗ್ವಾದಲಿಸುಳಿ, ಗದ್ದಿಗಿಸುಳಿ ದನಗಳಿದ್ದರೆ ಒಳ್ಳೆಯದು. ಆದರೆ, ಕಾಗಿ ಸುಳಿ, ಉರುಲು ಸುಳಿಗಳಿದ್ದರೆ ಅಪಶಕುನವೆಂದು ನಂಬುತ್ತಾರೆ. ಮನೆಯಲ್ಲಿ ಆಕಳೇನಾದರೂ ಕರು ಹಾಕಿದಾಗ ಅದಕ್ಕೆ ದೃಷ್ಟಿ ಬೀಳಬಾರದೆಂದು ಕೊರಳಲ್ಲಿ ತೆಂಗಿನಚಿಪ್ಪು ಅಥವಾ ಹಳೆಯ ಕಸಬರಿಗೆಯನ್ನು ಕಟ್ಟುತ್ತಾರೆ. ಒಕ್ಕಲಿಗರು ದಿನನಿತ್ಯ ಉಪಯೋಗಿಸುವ ಕೃಷಿ ಸಾಮಾನುಗಳನ್ನು ವಿಷಯದಲ್ಲಿಯೂ ಬಹಳ ಎಚ್ಚರಿಕೆಯನ್ನು ವಹಿಸುತ್ತಾರೆ. ಕೃಷಿ ಸಾಮಾನುಗಳು ಅವರ ದೃಷ್ಟಿಯಲ್ಲಿ ಲಕ್ಷ್ಮೀಯಸಮಾನ. ಹೊಲ-ಗದ್ದೆಗಳಲ್ಲಿ ಅವುಗಳಿಂದ ಕೆಲಸ ಮಾಡುತ್ತಿರುವಾಗ ಆಕಸ್ಮಾತ್ ಮುರಿದರೆ ಅಪಶಕುನವೆಂದು ಭಾವಿಸುತ್ತಾರೆ.

ಬಿತ್ತನೆಯ ಸಮಯದಲ್ಲಿ ಊರದೇವತೆಗೆ ಮೊದಲು ಉಡಿ ತುಂಬಿ ಬಂದು, ನಂತರ ಬಿತ್ತನೆ ಕೆಲಸ ಆರಂಭಿಸುತ್ತಾರೆ. ಬಿತ್ತಿದ ಕೆಲವು ದಿನಗಳ ಮೇಲೆ ಜೋಕುಮಾರ ಸ್ವಾಮಿ ಬರುತ್ತಾನೆ. ಅವನ ಪ್ರಸಾದವನ್ನೆಲ್ಲಾ ತಮ್ಮ ಭೂಮಿಯಲ್ಲಿ ಹರಡುತ್ತಾರೆ. ಬಿತ್ತನೆಯ ನಂತರ ಬರುವ ಧಾನ್ಯವನ್ನು ಅಳೆಯುವಾಗಲೂ ಸಹ ಲಾಭ ಎಂದು ಆರಂಭಿಸಿ, ಅಶುಭ ಸಂಖ್ಯೆ ಎಂದು ನಂಬುವ ೭, ೧೧ ಅಥವಾ ೧೩ ಬಂದಾಗ ಇನ್ನೊಂದು ಎಂದು ಅಳೆಯುತ್ತಾರೆ. ಚೀಲಕ್ಕೆ ಕಾಳನ್ನು ತುಂಬುವಾಗ ಅಥವಾ ತುಂಬಿದ ಮೇಲೆ ಆ ಚೀಲದ ಮೇಲೆ ಕಸಬರಿಗೆ ಇಡಬಾರದು ಎಂಬ ನಂಬಿಕೆಯಿದೆ.

ಮನೆಯೊಳಗೆ ಬೆಕ್ಕು ಇದ್ದರೆ ಅದು ಸಣ್ಣ ಕ್ರಿಮಿ-ಕೀಟಾದಿಗಳನ್ನು ಹಿಡಿಯುವುದಲ್ಲದೆ, ಮನೆಯನ್ನು ಅಂಥವುಗಳಿಂದ ಕಾಪಾಡುತ್ತದೆ. ಸರ್ವಜ್ಞ ಪ್ರತಿ ಮನೆಗಳಲ್ಲಿ ಬೀಸುವ ಕಲ್ಲುಗಳನ್ನು ಕಂಡಿದ್ದಾನೆ. ಹಳ್ಳಿಯ ಗರತಿಯರು ದಿನನಿತ್ಯ ಬೆಳಿಗ್ಗೆ ಬೇಗನೆ ಎದ್ದು, ಬೀಸುವ ಕಲ್ಲಿನ ಮುಂದೆ ಕುಳಿತು ರಾಗ-ತಾಳ ಬದ್ಧವಾಗಿ ಹಾಡುಗಳನ್ನು ಹೇಳುತ್ತಾ, ಕಾಳನ್ನು ಬೀಸುತ್ತಿದ್ದರು. ಆದ್ದರಿಂದ 'ಮುಕ್ಕು ಕಲ್ಲಿಗೆ ಲೇಸು' ಎಂದಿದ್ದಾನೆ.

ಹೀಗೆ ಊರಿನಲ್ಲಿ ವಾಸಿಸುತ್ತಿರುವ ಇತರೆ ಅನೇಕ ಕೆಲಸಗಳಲ್ಲಿ ನಿರತರಾಗಿರುವ ಜನರಿಗೆ ಕಾಲಕಾಲಕ್ಕೆ ಆಹಾರಧಾನ್ಯಗಳನ್ನು ನೀಡುವ ಬಹು ಪುಣ್ಯದ ಕೆಲಸ ಈ ಒಕ್ಕಲಿಗನದೆಂದು ತಿಳಿಸಿದ್ದಾನೆ.

ಒಕ್ಕಲಿಲ್ಲದ ಊರು ಮಕ್ಕಳಿಲ್ಲದ ಮನೆಯು
ಲೆಕ್ಕವಿಲ್ಲದವನ ಬೇಹಾರ ಇವು ಮೂರು
ದುಕ್ಕ ಕಾಣಯ್ಯ ಸರ್ವಜ್ಞ.

ಭಂಡಾರ ತುಂಬಿನೀ ಬಂಡಿಯಲಿ ಹೇರುವರೆ
ಮಂಡಲವನಾಳಿ ಮೆರೆಯುವರೆ ಒಕ್ಕಲನು
ಕೊಂಡಾಡಬೇಕು ಸರ್ವಜ್ಞ.

ಹಣಕ್ಕೆ ಸಂಬಂಧಿಸಿದಂತೆ ಪ್ರತಿಯೊಂದು ವ್ಯವಹಾರ ಕೈಗೊಳ್ಳುವಾಗ ಜನಪದರು ಕೇವಲ ಬಾಯಿ ಮಾತಿನಲ್ಲಿ ಹೇಳಿ-ಕೇಳಿ ನೆನಪಿಟ್ಟುಕೊಳ್ಳುವುದುಂಟು. ಲೆಕ್ಕಾಚಾರವಿಲ್ಲದೆ ಯಾವ ವ್ಯವಹಾರ ಕೈಗೊಂಡರೂ ಅದು "ನೀರಿನಲ್ಲಿ ಹೋಮ ಮಾಡಿದಂತೆ"ಯೇ ಸರಿ. ಅದೇ ರೀತಿ "ಮಕ್ಕಳಿರಲವ್ವ ಮನೆ ತುಂಬ" ಎಂಬ ನಾಣ್ಣುಡಿಯಂತೆ ಮನೆಯಲ್ಲಿ ಮಕ್ಕಳಿದ್ದರೆ ಆಸರಕಿ-ಬೇಸರಕಿಗಳೆಲ್ಲಾ ಮಾಯವಾಗುತ್ತವೆ.

ಮಕ್ಕಳಿದ್ದ ಮನೆಗೆ ಬೀಸಣಿಕಿ ಯಾತಾಕ?
ಕೂಸು ಕಂದಯ್ಯ ಒಳ ಹೊರಗೆ ಆಡಿದರೆ
ಬೀಸಣಿಕೆ ಗಾಳಿ ಸುಳಿದಾವ.

ಎಂಬ ಜನಪದರ ಹಾಡನ್ನು ಸರ್ವಜ್ಞ ಇಲ್ಲಿ ಸಮರ್ಪಕವಾಗಿ ಬಳಸಿಕೊಂಡಿದ್ದಾನೆ. ಅಂದಿನ ಸಮಾಜದಲ್ಲಿ ತಾನು ಕಂಡುಂಡ, ತನ್ನ ಗಮನಕ್ಕೆ ಬಂದ ಇಂತಹ ಅನೇಕ ಅಂಶಗಳನ್ನು ವಚನಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

'ಒಕ್ಕಲಿಗನಿಲ್ಲದ ಊರು ಮಸಣವಿದ್ದಂತೆ ' ಎಂಬ ಮಾತಿನಂತೆ, ಒಕ್ಕಲಿಗನ ಹಿರಿಮೆ ಎಷ್ಟೆಂಬುದನ್ನು ಹೋಲಿಕೆಗಳ ಮೂಲಕ ಎತ್ತಿಹಿಡಿದಿದ್ದಾನೆ. ಒಕ್ಕಲಿಗನ ಮಹತ್ವದ ಬಗೆಗೆ ತಿಳಿಸುತ್ತಾ, ರಾಜ್ಯದಲ್ಲಿ ಎಷ್ಟೇ ಇತರೆ ಸಂಪತ್ತು - ಸಂಭ್ರಮಗಳು ಇದ್ದರೂ ಅವೆಲ್ಲ ಒಕ್ಕಲಿಗನಿಗೆ ಸಮವಾಗಲಾರವು. ಆವನಿಲ್ಲದಿದ್ದರೆ ಈ ಸಂಭ್ರಮಗಳೆಲ್ಲಾ ಪ್ರಯೋಜನವಾಗಲಾರವು. ರಾಜ್ಯದ ಬೊಕ್ಕಸ ತುಂಬಿಸಲು ಮೂಲ ತೆರಿಗೆದಾರ ಈ ಒಕ್ಕಲಿಗನೆ ಎಂಬುದನ್ನು ಅರುಹಿದ್ದಾನೆ.

ಒಕ್ಕಲಿಗನಿಗೆ ಕುವೆಂಪುರವರು 'ನೇಗಿಲಯೋಗಿ ' ಎಂದು ಕರೆದಿದ್ದಾರೆ . ಸರ್ವಜ್ಞನೂ ಸಹ ತನ್ನ ಕಾಲದಲ್ಲಿಯೇ ಆತನನ್ನು ' ಅನ್ನ ನೀಡುವ ದೇವರು ' ಎಂದು ಹೊಗಳಿದ್ದಾನೆ . ಆದರೆ ಒಕ್ಕಲಿಗ ಯಾವ ಪ್ರಚಾರಕ್ಕೊಳಗಾಗದೇ, ಹೆಸರು-ಕೀರ್ತಿಗಳಿಗೆ ಮನಬಯಸದೆ ನಿಸ್ವಾರ್ಥದಿಂದ ತನ್ನ ಕಾಯಕದಲ್ಲಿ ನಿರತನಾಗಿರುತ್ತಾನೆ .

ಎತ್ತೊಮ್ಮೆ ಹೂಡುವುದು, ಉತ್ತೊಮ್ಮೆ ಹರಗುವುದು
ಬಿತ್ತೊಮ್ಮೆ ಹರಗಿ ಕಳೆದರಾ ಬೆಳೆಯು
ಎತ್ತಗೈ ಯುದ್ದ ಸರ್ವಜ್ಞ.

ಒಕ್ಕಲಿಗನಿಗೆ ಬೇಸಾಯವೆಂಬದು ಕಸುಬಾಗಿದ್ದರೂ , ಅದೊಂದು ದೀರ್ಘ ಕಾರ್ಯಗತಿ . ಬೆಳಗಿನ ಸಂಜೆಯವರೆಗೂ ನಿಸರ್ಗದೊಡನೆ ಹೋರಾಡಿ ತನ್ನ ಬದುಕನ್ನು ಸವೆಸುತ್ತಾನೆ.

ಜೂಲೈ ತಿಂಗಳು ಮಳೆ ಬಂದಾಗ ಭೂಮಿಯು ಹದವಾದಾಗ ಎತ್ತುಗಳನ್ನು ರಂಟೆಗೆ ಹೂಡಿ ಭೂಮಿಯನ್ನು ಉಳುಮೆ ಆರಂಭಿಸುತ್ತಾನೆ. ಭೂಮಿಯಲ್ಲಿ ಬೀಜಗಳನ್ನು ಬಿತ್ತಿದ ನಂತರ ಹರಗಿ, ಮೊಳವುದ್ದ ಬೆಳೆದ ತೆನೆಯು ನಲಿ ನಲಿದು ಹೊರ ಬರಲಿ ಎಂದು ಮನದಲ್ಲಿ ಆಶಿಸುವ ಒಕ್ಕಲಿಗನ ಚಿತ್ರಣವನ್ನು ಇಲ್ಲಿ ಕಂಡರಿಸಿದ್ದಾನೆ.

## ೪.೩.೨. ಮಳೆ

ಭಾರತದ ಒಕ್ಕಲಿಗನಿಗೆ ಮಳೆಯೇ ಸರ್ವಾಧಾರ. ಮಳೆಯನ್ನು ಅವನು 'ಮಳೆರಾಯ' ನೆಂದು ದೈವಸ್ಥಾನದಲ್ಲಿ ಕಲ್ಪಿಸಿದ್ದಾನೆ . ಇದು ಪರಂಪರೆಯ ಮೂಲವಾಗಿದೆ. ಆದಿ ವೈದಿಕ ಕಾಲದಲ್ಲಿ ಮಳೆರಾಯನನ್ನು 'ವರುಣ' ದೇವತೆಯ ಹೆಸರಿನಲ್ಲಿ ಬಹಳ ಪೂಜ್ಯನೀಯವಾಗಿ ಸ್ತುತಿಸಲಾಗಿದೆ. ಅಂದಿನಿಂದ ಇಂದಿನವರೆಗೂ ಮಳೆಯೆಂಬುದು ಭಾರತೀಯರ ಜೀವನಾಧಾರವಾಗಿದೆ . ಈ ಮಳೆಯ ಬಗ್ಗೆ ಸರ್ವಜ್ಞನು ಅನೇಕ ಬಗೆಯಾಗಿ ಆಲೋಚಿಸಿ ವಚನಗಳನ್ನು ರಚಿಸಿದ್ದಾನೆ . ಹಾಗೆಯೇ ಜಾನಪದರ ನಂಬಿಕೆಗಳನ್ನು ಬಿಂಬಿಸಿದ್ದಾನೆ. ಸರ್ವಜ್ಞನು ಒಕ್ಕಲುತನಕ್ಕೆ ಬೇಕಾದ ಹಾಗೂ ಜೀವನಾಧಾರವಾದ ಮಳೆಯು ಯಾವ ಯಾವ ನಕ್ಷತ್ರಗಳಲ್ಲಿ ಹೇಗೆ ಯಾವರೀತಿ ಬರುತ್ತದೆಂಬುದನ್ನು ರೈತ ಕಂಡುಕೊಂಡಿದ್ದಾನೆಯೋ ಹಾಗೆಯೇ ಮಳೆ ಬರುವ ಮುನ್ಸೂಚನೆಗಳನ್ನು ಕಂಡುಕೊಂಡಿದ್ದಾನೆ.

ಬದುಕು ಹಸನಾಗಬೇಕಾದರೆ ಮಳೆ ಚೆನ್ನಾಗಿ ಬರಬೇಕು. ಮಳೆ ಒಕ್ಕಲು ಮಗನಿಗೆ ಸಂಜೀವಿನಿ ಸಾದೃಶ್ಯವಾದುದು. ೨ನೇ ನಾಗವರ್ಮ ಹೇಳುವಂತೆ '' ಸರ್ವ ಭೂತಾಧಾರಂ ಮಳೆಯಂ'' ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು (ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಪು. ೧೬೯).

ಮಳೆ ಸಕಾಲಕ್ಕೆ ಬಂದರೆ, ರೈತಬಾಂಧವರು ಹರ್ಷ ಚಿತ್ತದಿಂದ ಭೂಮಿಯನ್ನು ಉತ್ತಿ, ಬಿತ್ತಿ ಬೆಳೆಯನ್ನು ಬೆಳೆಯುತ್ತಾರೆ. ಅವರಿಗೆ ''ಮಳೆ ಬಂದರೆ ಕೇಡಲ್ಲ,ಮಗ ಉಂಡರೆ ಕೇಡಲ್ಲ''. ಮಳೆಯ ಬಗೆಗೆ ಅಷ್ಟೊಂದು ಕಕ್ಕುಲತೆ ಇಟ್ಟುಕೊಂಡಿರುತ್ತದೆ. ''ಮಳೆಯ ನೀರನ್ನು ಬಿಟ್ಟು, ಮಂಜಿನ ನೀರಿಗೆ ಕೈಯೊಡ್ಡಿದಂತೆ''. ಅನಾಯಸವಾಗಿ ಕಾಲಕಾಲಕ್ಕೆ ಸರಿಯಾದ ಮಳೆ ಸುರಿದರೆ ಯಾವ ತೊಂದರೆಗಳಿರಲಾರವೆಂಬ ನಂಬಿಕೆ ಅವರಲ್ಲಿ ಮುಖ್ಯವಾಗಿವೆ. ಒಂದು ವೇಳೆ ಮಳೆ ಬಾರದೇ ಹೋದಾಗ ಜನಪದರು ಕೆಲವೊಂದು ಸಾಂಪ್ರದಾಯಿಕ ನಂಬಿಕೆಗಳನ್ನು, ಆಚರಣೆಗಳನ್ನು ಉಪಯೋಗಿಸಿ, ಮಳೆಗಾಗಿ ಆಕಾಶದೆಡೆಗೆ ನೋಡುತ್ತಾರೆ. ಗ್ರಾಮದ ಶಕ್ತಿ ದೇವತೆಗಳು ಕೋಪಿಸಿಕೊಂಡಾಗ ಮಳೆ ಬರುವುದಿಲ್ಲವೆಂದು ಅವರು ನಂಬುತ್ತಾರೆ. ಇದಕ್ಕೆ ಪರಿಹಾರವಾಗಿ ಎಲ್ಲಾ ಶಕ್ತಿ ದೇವತೆಗಳಿಗೆ ಹೊಸ ಸೀರೆ ಉಡಿಸಿ, ಉಣಬಡಿಸುತ್ತಾರೆ. ಗುಡಿಯಲ್ಲಿ ದೀಪ ಆರದಂತೆ ಐದು ಅಥವಾ ಒಂಭತ್ತನೇ ವಾರದವರೆಗೂ ಹಗಲು ರಾತ್ರಿ ಎಣ್ಣೆ ಹಾಕುತ್ತಾರೆ. ಹೀಗೆ ಮಾಡುವುದರಿಂದ ದೇವತೆಗಳು ಸಂತೃಪ್ತರಾಗುತ್ತಾರೆ. ಆಗ ಮಳೆ ಬರುತ್ತದೆಂದು ಗ್ರಾಮೀಣ ಜನರು ಭಾವಿಸಿಕೊಂಡಿದ್ದಾರೆ. ಕೆಲ ಹಳ್ಳಿಗಳಲ್ಲಿ ಮಳೆರಾಜನ ಆಹ್ವಾನಕ್ಕಾಗಿ;

ಹಳ್ಳದ ದಂಡೆಗೆ ಪೂಜೆ ಸಲ್ಲಿಸಿ
ಬಾರಪ್ಪ ಮಳಿದೇವ ಯಾವಲ್ಲಿಗ್ಹೋಗಿದ್ದಿ
ನಿನದಾರಿ ಕಾದು ಕುಂತಾರ ಬಡ ಜನ
ಎಲ್ಲಿ ಹೋಗಿ ಕುಂತಿಯೋ ಮಳಿದೇವ

ನಿನದಾರಿ ನೋಡುತಾನ ಒಕ್ಕಲಿಗ
ಭೂಮಿ ಪಡುರಣ ಬಿದ್ದು
ಬಸವಣ್ಣ ಬಾಯಿ ಬಿಡ್ತಾನ.

ಹೀಗೆ ಮಳೆರಾಯನಿಗೆ ಸ್ವಾಗತ ಕೋರುತ್ತಾರೆ. ತಮ್ಮ ಹಳ್ಳಿಯ ಕೆರೆಯ ಮಣ್ಣನ್ನು ತಂದು 'ಗುಳ್ಳವ್ವ' ಎಂಬ ಗ್ರಾಮ ದೇವತೆಯ ಗೊಂಬೆಯನ್ನು ಮಾಡಿ ಸಡಗರದಿಂದ ಪೂಜೆ ಮಾಡುತ್ತಾರೆ. ಇದಲ್ಲದೆ, ಮಕ್ಕಳಿಂದ ಗುರ್ಜಿಯಾಟವಾಡಿಸುತ್ತಾರೆ.

ಹಳ್ಳಾಗಿನ ಬಾವಿ ಪೂಜೆ ಮಾಡಿ
ಸುಣ್ಣ ಕೊಡ್ತೀನಿ ಸುರಿಯಲೇ ಮಳಿಯೇ
ಸುರಿಯಲೇ ಮಳಿಯೇ

ಎಂಬುದಾಗಿ ಏನೇನೋ ಆಸೆ ತೋರಿಸಿ ಮಳೆಯನ್ನು ಆಹ್ವಾನಿಸುತ್ತಾರೆ (ಹೊಸತು,೨೦೦೧, ಅಕ್ಟೋಬರ್, ಸಂಪುಟ-೩, ಸಂಚಿಕೆ-೩, ಪು.೮).

ಕುರುಬರಿಗೆ ಕುರಿಯಾಶೆ, ಮರಿಗಳಿಗೆ ಮೊಲೆಯಾಶೆ
ಸರುವರಿಗೆ ಮಳೆಯು ಬರುವಾಸೆ.........
..................... ಸರ್ವಜ್ಞ

ಕುರುಬರಿಗೆ ಕುರಿಗಳನ್ನು ಸಾಕುವುದು, ಹಾರೈಕೆ ಮಾಡುವುದು ಅವರ ನಿತ್ಯದ ಕೆಲಸ. ಅಲ್ಲದೆ ಕುರಿಗಳನ್ನು ಸಮೃದ್ಧವಾದ ಹಸಿರಿರುವಲ್ಲಿಗೆ ಹೊಡೆದುಕೊಂಡು ಹೋಗಿ ಚೆನ್ನಾಗಿ ಮೇಯಿಸುತ್ತಾರೆ. ಕುರಿ ಚೆನ್ನಾಗಿ ತಿಂದು ಕೊಬ್ಬಿದಷ್ಟು ಕುರುಬರಿಗೆ ಲಾಭವೇ ಸರಿ. ಅದೇ ರೀತಿ ಚಿಕ್ಕ ಪ್ರಾಣಿಗಳಿಗೆ ತಮ್ಮ ತಾಯಿಯ ಮೊಲೆ ಹಾಲು ಕುಡಿಯಬೇಕೆಂಬಾಸೆ ಎದ್ದು ಕಾಣುತ್ತದೆ. ಹೀಗೆ ಮಳೆಯೆಂಬುದು ಸಹ ಸರ್ವರಿಗೂ ಬರಬೇಕೆಂಬ ಬಲವಾದ ಆಸೆ ಇರುತ್ತದೆ. ಏಕೆಂದರೆ, 'ಬೆಳೆಗೆ ಮಳೆ ಲೇಸು' ಎಂದು ಸರ್ವಜ್ಞ ಹೇಳಿದ್ದಾನೆ. ಅಂದರೆ ಭಕ್ತಿ ನೈವೇದ್ಯಗಳಿಂದ ದೇವರನ್ನು ಪೂಜಿಸಿ ಮೋಕ್ಷವನ್ನು ಪಡೆಯುವಂತೆ ವ್ಯವಸಾಯವೂ ಸಹ ನಿಷ್ಠೆಯಿಂದ ಮಾಡುವ ಕಾಯಕವಾಗಿದೆ.

ಉತ್ತೊಮ್ಮೆ ಹರಗದಲೆ, ಬಿತ್ತೊಮ್ಮೆ ನೋಡದಲೆ
ಹೊತ್ತೇರಿ ಹೊಲಕೆ ಹೋದರೆ ಅವ ತನ್ನ
ನೆತ್ತರವ ಸುಡುವ ಸರ್ವಜ್ಞ.

ನಮ್ಮ ಜನಪದರ ವರ್ಷದಲ್ಲಿ ೨೭ ಮಳೆ ನಕ್ಷತ್ರಗಳನ್ನು ಕಂಡುಕೊಂಡಿದ್ದಾರೆ. ಆಯಾ ನಕ್ಷತ್ರಕ್ಕೆ ಹವಾಮಾನಕ್ಕನುಗುಣವಾಗಿ ಹಾಗೂ ಮಳೆಗನುಗುಣವಾಗಿ ಹೊಲದಲ್ಲಿ ಉತ್ತಿ, ಭಿತ್ತಿ, ಬೆಳೆದು ಸುಗ್ಗಿ ಮಾಡುತ್ತಾರೆ.

ಅಡರಿ ಮೂಡಲು ಮಿಂಚೆ, ಪಡುವಲಕೆ ಧನುವೇಳೆ
ಬಡಗಣದ ಗಾಳಿ ಕಡು ಬೀಸೆ, ಮಳೆಯು ತಾ
ತಡೆಯದೆ ಬಕ್ಕು ಸರ್ವಜ್ಞ.

ತೆಂಕಲಿಗೆ ಮುಗಿಲಡರೆ, ಶಂಕರನ ದೆಸೆ ಮಿಂಚೆ
ಪಂಕಜಾರತಿ ಗುಡಿಕಟ್ಟೆ ಮಳೆಯು ತಾ
ಭೋಂಕನೆ ಬಕ್ಕು ಸರ್ವಜ್ಞ.

ಮೂಡಣ (ಪೂರ್ವ) ದಿಕ್ಕಿಗೆ ಮಿಂಚು ಹೊಳೆಯುವಾಗ, ಪಡುವಣ (ಪಶ್ಚಿಮ) ದಿಕ್ಕಿನಲಿ ಕಾಮನ ಬಿಲ್ಲು ಮೂಡಿದ ಸಮಯದಲ್ಲಿ, ಬಡಗಣ ( ಉತ್ತರ) ದಿಕ್ಕಿನಲ್ಲಿ ಹೆಚ್ಚಾಗಿ ಗಾಳಿ ಬೀಸಲಾರಂಭಿಸಿದಾಗ ತಡೆ ಇಲ್ಲದೆ ಆ ಮಳೆ ತಾನೇ ತಾನಾಗಿ ಬರಲಾರಂಭಿಸುತ್ತದೆಂದು ಸರ್ವಜ್ಞ ಹೇಳಿದ್ದಾನೆ. ಅದೇ ರೀತಿ ತೆಂಕಣ (ದಕ್ಷಿಣ) ದಿಕ್ಕಿಗೆ ಮೋಡಗಳು ಒತ್ತಿಕೊಂಡು ಹಬ್ಬಿದಾಗ ಈಶಾನ್ಯ ದಿಕ್ಕಿನಲ್ಲಿ ಮಿಂಚಿದರೆ ಆಕಾಶದಲ್ಲಿ ಚಂದ್ರಮಂಡಲ ಗುಡಿ ಕಟ್ಟಿದರೆ ಮಳೆಯು ತನ್ನಿಂದ ತಾನೇ ಒಮ್ಮೆಲೆ ಸುರಿಯುತ್ತದೆಂಬ ಮಾತನ್ನೂ ಸೇರಿಸಿದ್ದಾನೆ.

ಇಂತಹ ಮಳೆಗೆ ಇಂತಹ ಕಾಳು ನಾಟಿ ಮಾಡಿದರೆ, ಶ್ರೇಷ್ಠ ಇಳುವರಿ ಪಡೆಯಬಹುದೆಂಬುದು ಒಕ್ಕಲಿಗನಿಗೆ ಚಿರಪರಿಚಿತ. ಇದು ಬೆದೆ ಮಳೆ, ಇದು ಹದ ಮಳೆ ಮುಂತಾದ್ದನ್ನು ಗಾದೆಗಳ, ನುಡಿಗಟ್ಟುಗಳ, ಆಡುನುಡಿಗಳ ಹಾಗೂ ಮೌಖಿಕ ಪರಂಪರೆಯಲ್ಲಿ ಜನಪದರು ನಂಬಿಕೆ ಇರಿಸಿಕೊಂಡಿದ್ದಾರೆ. ಪಂಚಾಂಗದ ಪ್ರಕಾರ ಚೈತ್ರಮಾಸ ಆರಂಭವಾಗಿ ಯುಗಾದಿಯ ನಂತರ ಅಮವಾಸ್ಯೆಯಿಂದ ಹುಣ್ಣಿಮೆಯವರೆಗೆ ಮತ್ತು ಹುಣ್ಣಿಮೆಯಿಂದ ಅಮವಾಸ್ಯೆಯವರೆಗೆ ಹದಿನಾಲ್ಕು ದಿವಸಕ್ಕೊಂದರಂತೆ ಒಟ್ಟು ೨೭ ಮಳೆ ನಕ್ಷತ್ರಗಳು ಇವೆ (ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಪು. ೧೫೪). ನಮ್ಮ ಜನಪದರು ಮಳೆಯ ಪ್ರತಿಯೊಂದು ವಿಶಿಷ್ಟ ಲಕ್ಷಣಗಳನ್ನು ಗುರುತಿಸಿದ್ದಾರೆ. ಉದಾಹರಣೆಗೆ ಅಶ್ವಿನಿ ಮಳೆಯು. ಈ ಮಳೆಯು ಬರಬಾರದು. 'ಅಶ್ವಿನಿ ಮಳೆ ಬಂದರೆ ಅಳುವ ಮಕ್ಕಳಿಗೆ ಹಾಲಿಲ್ಲ' ಎಂಬ ನುಡಿಗಟ್ಟಿದೆ. ಭರಣಿ ಮಳೆ ಬಂದರೆ ಒಳ್ಳೆಯದು. 'ಭರಣಿ ಮಳೆ ಬಂದರೆ ಬರವಿಲ್ಲ', 'ಭರಣಿ ಬಂದರೆ ಧರಣಿಯೆಲ್ಲಾ ಸಮೃದ್ಧಿ' ಹಾಗೂ 'ಧರಣಿ ಬಂದರೆ ಧರಣಿಯೆಲ್ಲಾ ಜೋಳ' ಇವು ರೈತ ತನ್ನ ಸ್ವ-ಅನುಭವದಿಂದ ಕಂಡುಕೊಂಡ ಮಾತುಗಳಾಗಿವೆ. ಕೃತ್ತಿಕೆ ಮಳೆಗೆ ನೆಲ ಕೆದರಬಾರದು. ಹಾಗೂ ಬೀಜ ಬಿತ್ತಬಾರದು. ಏಕೆಂದರೆ ಸರಿಯಾದ ಹದ ಮತ್ತು ಬೆದೆ ಇಲ್ಲದ ಮಳೆಯಾಗಿರುತ್ತದೆಂಬುದು ಅವನ ನಂಬಿಕೆ. ರೋಹಿಣಿ ಮಳೆಯು ಬಂದರೆ ಬಿತ್ತನೆಯನ್ನು ವೇಗವಾಗಿ

ಮಾಡಬೇಕು. ಏಕೆಂದರೆ 'ರೋಹಿಣಿ ಮಳೆಗೆ ಬೀಜ ಬಿತ್ತಿದರೆ ಓಣಿ ತುಂಬಾ ಜೋಳ' ಎನ್ನುವ ಮಾತಿದೆ. ಆದರೆ ''ಹಸ್ತ ಮಳೆ ಇಲ್ಲದಿರೆ ರೈತ ಹಲ್ಲು ಕಿಸ್ತ'', ' ಸ್ವಾತಿ ಮಳೆಯಾಗಿಂದ ಇನ್ನಾತರ ಮಳೆ' ಎಂಬೆಲ್ಲಾ ನಲ್ನುಡಿಗಳು ರೈತರಲ್ಲಿ ಈಗಲೂ ಪ್ರಚಲಿತದಲ್ಲಿವೆ.

ಇನ್ನು ಮೃಗಶಿರ ಮಳೆ ಕುರಿತು ಸರ್ವಜ್ಞ ಹೇಳಿರುವ ವಚನವನ್ನು ನೋಡಿದಾಗ;

ಅಗಿ ಹುಣ್ಣಿಮೆಯ ಹೋದ ಮಿಗೆ ಮೂರು ದಿವಸಕ್ಕೆ
ಮೃಗಧರನ ಕೂಡೆ ಮೃಗವಿರಲು ಮಳೆಗಾಲ
ಜಗದಣಿಯಲಿಕ್ಕು ಸರ್ವಜ್ಞ.

ಮೃಗಶಿರಾದಿಯ ಮೂರು ಭಗಣದಲ್ಲಿ ರವಿಯಿರಲು
ಮಘಿಯ ರಿಕ್ಷವನ್ನು ಶಶಿ ತೊಲಗೆ ಮಳೆಯು ತಾ
ಜಗದಣಿಯಲಕ್ಕು ಸರ್ವಜ್ಞ.

ಅಂದರೆ ಅಗಿ ಹುಣ್ಣಿಮೆ ಆದ ಮೂರು ದಿವಸದಲ್ಲಿ ಚಂದ್ರನೊಡನೆ (ಶಿವನು) ಮೃಗಶಿರವು ಕೂಡಲು ತಕ್ಷಣ ಮೃಗಶಿರ ಮಳೆಯು ಜಗದಣಿಯುವಂತೆ ಸುರಿಸಲಾರಂಭಿಸುತ್ತದೆಂದು ಸರ್ವಜ್ಞ ಇಲ್ಲಿ ವ್ಯಕ್ತಪಡಿಸಿದ್ದಾನೆ. ಮೃಗಶಿರ ಮೊದಲಾದ ಮೂರು ನಕ್ಷತ್ರಗಳಲ್ಲಿ ರವಿಯು ತಾನಿರಲು ಮಾಘ ಶುದ್ಧ ಹುಣ್ಣಿಮೆಯಲ್ಲಿ ಚಂದ್ರಸ್ಥಾನ ಸರಿದರೆ, ಪ್ರಪಂಚದಲ್ಲಿ ಸಾಕಾಗುವಷ್ಟು ಮಳೆಯಾಗುವುದು.

ಒಕ್ಕಲಿಗನು ಸಹ ಈ ಮೃಗಶಿರ ಮಳೆಯನ್ನು ತುಂಬಾ ಪ್ರೀತಿಸುತ್ತಾನೆ. ಇದು ಅವನಿಗೆ ಅಮೃತದ ಮಳೆ ಇದ್ದಂತೆ. ಈ ಮಳೆಯಾದರೆ ಮುಂದಿನ ನಾಲ್ಕು ಮಳೆಗಳು ಖಚಿತವೆಂಬುದು ಈತನ ನಂಬಿಕೆ. 'ಮೃಗಶಿರ ಮಿಂಚಿದರೆ ಮೂರು ಮಳೆ, ಆರಿದ್ರ ಗುಡುಗಿದರೆ ಆರು ಮಳೆ ಕಳಿತವೆ' ಆದ್ದರಿಂದ ಈ ಮಳೆಗಳಲ್ಲಿ ಗುಡುಗು-ಮಿಂಚುಗಳು ಬಹಳ ಕಡಿಮೆ ಇರಬೇಕೆಂದು ಒಕ್ಕಲಿಗನ ಮನದಾಳದ ಹಾರೈಕೆಯಾಗಿದೆ. ಆರಿದ್ರ ಮಳೆಯು ಮುಂಗಾರಿನ ಮಳೆಯಾಗಿದೆ. ಈ ಮಳೆಗಾಲದಲ್ಲಿ ಫಸಲಿನ ಎಲ್ಲ ಧವಸ-ಧಾನ್ಯಗಳನ್ನು ಬಿತ್ತಬೇಕು. ಏಕೆಂದರೆ ' ಆರಿದ್ರ ಮಳೆಗೆ ಆರು ಕಾಯಿ ಹೆಚ್ಚು' ಎಂಬ ವಿಶ್ವಾಸದ ನುಡಿಯೊಂದಿಗೆ ' ಆರಿದ್ರ ಮಳೆ ಗುಡುಗಿದರೆ ಆರು ಮಳೆಯ ಗರ್ಭ ಕರಗುತ್ತೆ' ಎಂಬ ಬಲವಾದ ಅಳಲು ಸಹ ಒಕ್ಕಲಿಗನಿಗೆ ಕಂಡು ಬರುತ್ತದೆ (ಚಿತ್ರದುರ್ಗ ಜಿಲ್ಲೆಯ ಜಾನಪದ, ಪು. ೧೫೬-೧೫೭).

ಉತ್ತರೆಯು ಹೋದರೆ, ಹೆತ್ತಮ್ಮ ಮುನಿದರೆ
ಸತ್ಯವಂತರು ಮಾರ್ಗತಪ್ಪಿ ನಡೆದರೆ ಲೋಕ ವಿ
ನ್ನೆತ್ತ ಬದುಕುವುದು ಸರ್ವಜ್ಞ.

ಮಳೆಗಾಲದಲ್ಲಿ ಈ ಉತ್ತರೆ ಮಳೆ ಎಷ್ಟೊಂದು ಶ್ರೇಷ್ಠ ಹಾಗೂ ಅವಶ್ಯಕ ಎಂಬುದರ ಬಗೆಗೆ ಸರ್ವಜ್ಞನ ಮೇಲಿನ ವಚನ ಕೈಗನ್ನಡಿಯಾಗಿದೆ. ಉತ್ತರೆ ಮಳೆ ಆಕಸ್ಮಾತ ಹೋದರೆ, ಹೆತ್ತ ತಾಯಿಯೇ ಮಕ್ಕಳ ಮೇಲೆ ಕೋಪಿಸಿಕೊಂಡರೆ ಹಾಗೂ ಸತ್ಯವಂತರು, ಜ್ಞಾನಿಗಳು, ವಿಚಾರವಾದಿಗಳು ಇವರೆಲ್ಲಾ ಜೀವನದಲ್ಲಿ ಮತ್ತೊಬ್ಬರಿಗೆ ಆದರ್ಶಪ್ರಾಯರಾಗಿರುತ್ತಾರೆ. ಒಂದು ವೇಳೆ ಇವರೂ ಸಹ ಜೀವನದಲ್ಲಿ ಹಾದಿ ತಪ್ಪಿ ನಡೆದರೆ ಇಡೀ ಜಗತ್ತನ್ನು ರಕ್ಷಿಸುವವರಾರು. ಆಗ ಈ ಲೋಕದ ಬದುಕು ಎಷ್ಟೊಂದು ಘೋರವಾಗುತ್ತದೆಂಬ ಕಳಕಳಿಯನ್ನು ಸರ್ವಜ್ಞ ಈ ವಚನದಲ್ಲಿ ಪ್ರತಿಬಿಂಬಿಸಿದ್ದಾನೆ. ಅಂದರೆ ತಾಯಿ ಹಾಗೂ ಸತ್ಯವಂತರು ಸದಾ ಸರಿಯಾದ ಮಾರ್ಗದಲ್ಲಿ ಕಾಲಕಾಲಕ್ಕೆ ಪ್ರತಿಕ್ರಿಯೆ ನೀಡಿದ್ದಾದರೆ, ಈ ಲೋಕ ಸುಖ ಶಾಂತಿಯಿಂದ ಇರುತ್ತದೆಂಬ ಭಾವನೆಯನ್ನು ಸರ್ವಜ್ಞ ವ್ಯಕ್ತಪಡಿಸಿದ್ದಾನೆ.

ಸೂರ್ಯ ಚಂದ್ರರ ಸುತ್ತಲೂ ಗೂಡು ಕಟ್ಟಿದರೆ, ಸೂರ್ಯ ಹುಟ್ಟುವಾಗ ಪಕ್ಕದಲ್ಲಿ ಸ್ವಲ್ಪ ಮೋಡವಿದ್ದರೆ, ಆಕಾಶದಲ್ಲಿ ಕೆಂಪು ಮೋಡವಿದ್ದರೆ ಮೋಡಗಳು ತತ್ತಿಯಾಕಾರದಲ್ಲಿ ಅಲ್ಲಲ್ಲಿ ಇದ್ದರೆ ಮಳೆಯಾಗುತ್ತದೆಂಬ(ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಪು. ೧೬೪) ಬಲವಾದ ನಂಬಿಕೆಗಳು ಒಕ್ಕಲಿಗನಲ್ಲಿಯೂ ಕಂಡುಬರುತ್ತವೆ.

ಮಳೆಯ ಮುನ್ಸೂಚನೆಯ ನಂಬಿಕೆಗಳು ಕೇವಲ ಗ್ರಹಿಕೆಯಾಗಿ ಉಳಿಯದೇ, ಕ್ರಿಯೆಯಲ್ಲಿ ತೊಡಗುವ ಇಚ್ಛೆಯನ್ನು ಅವಲಂಬಿಸಿವೆ (ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಪು. ೧೬೭). ಮಳೆ ಸಕಾಲಕ್ಕೆ ಬಾರದೇ ಹೋದಾಗ ಒಕ್ಕಲಿಗನಿಗೆ ಕೆಲಸವಿಲ್ಲ. ಮಳೆ ಬರದೇ ಹೋದರೆ ಬೆಳೆಯಿಲ್ಲ. ಬೆಳೆ ಇಲ್ಲವೆಂದರೆ ಬದುಕು ದಾರುಣ ಅವಸ್ಥೆಗೆ ಬರುತ್ತದೆ. ಮಳೆ ಬರದೇ ಇರಲು ಕಾರಣವನ್ನು ನಾನಾ ರೀತಿಯಲ್ಲಿ ಜಾನಪದರ ಮನಸ್ಸು ಹುಡುಕಿಕೊಳ್ಳಲಾರಂಭಿಸುತ್ತದೆ. ''ಲೋಕ ಸಾಕಲಾರದ್ದಕ್ಕಾಗಿ ಮಳೆ ಹೋದವು'' ಎಂದು ಬಹಳ ಹಲುಬುತ್ತಾರೆ.

ಸರ್ವಜ್ಞ ಮಳೆ ಬರುವ ಸನ್ನಿವೇಶವು ಹೇಗಿರುತ್ತದೆ ಮತ್ತು ಯಾವ ಸಂದರ್ಭದಲ್ಲಿ ಬರುತ್ತದೆ ಎಂಬುದನ್ನು ಈ ವಚನದಲ್ಲಿ ತಿಳಿಸಿದ್ದಾನೆ;

ಅಳಿವಣ್ಣದಾಕಾಶ, ಗಿಳಿವಣ್ಣದಾ ಮುಗಿಲು
ಅಳಿದಳಿದು ಮರ್ಕನುದಯಿಸಲು ಮಳೆಯು ತಾ
ತಳುವುದೇ ಬಕ್ಕು ಸರ್ವಜ್ಞ.

ಆಕಾಶದಲ್ಲಿ ಕಪ್ಪಾಗಿರುವ ಮೋಡಗಳು ಹಾಗೂ ಗಿಳಿಯ ಹಸುರಿನ ಬಣ್ಣದ ಮೋಡಗಳು ಒಂದೆಡೆ ಇದ್ದು, ಸೂರ್ಯೋದಯದ ವೇಳೆಯಲ್ಲಿ ಗುಡಿ ಕಟ್ಟಿದರೆ, ಕೂಡಲೇ ಮಳೆ ಸುರಿಯುವುದೆಂಬುದನ್ನು ಜನಪದರು ಆಡುವ ಮಾತುಗಳನ್ನೇ ತನ್ನ ವಚನದ ಮೂಲಕ ಮಾರ್ಮಿಕವಾಗಿ ಅಭಿವ್ಯಕ್ತಿಸಿದ್ದಾನೆ.

### ೪.೩.೩. ರೀತಿ - ನೀತಿಗಳು :

ಜನಪದರ ನಂಬಿಕೆಯ ಪ್ರಕಾರ ಆಕಾಶ ತಂದೆಯಾದರೆ, ಭೂಮಿ ಹೆತ್ತ ತಾಯಿಯಾಗಿರುತ್ತಾಳೆ. ದಿನ ಬೆಳಗಾದರೆ ಅವರು ಮೊದಲು ನೆನೆಯುವುದು ಈ ಭೂ-ತಾಯಿಯನ್ನು ;

ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಾಲಿ
ಎಳ್ಳು ಜೀರಿಗಿ ಬೆಳೆಯೋಳ । ಭೂ ತಾಯ
ಎದ್ದೊಂದು ಗಳಿಗೆ ನೆನೆದೇನ ॥

ಎಂದು ತಮ್ಮ ಜೀವನ ಯಾವ ಭೂ-ತಾಯಿಯ ಕೃಪೆಯಿಂದ ನಿಂತಿದೆಯೋ ಆ ತಾಯಿಯನ್ನು ಮನಸಾರೆ ನೆನೆಯುತ್ತಾರೆ. ಅದೇ ರೀತಿ ಗಾಳಿ, ಧೂಳು, ಸಿಡಿಲು, ಮಿಂಚುಗಳೆಲ್ಲಾ ತಮ್ಮ ಸಹೋದರರೆಂದು ಭಾವಿಸಿದ ಜನಪದರು ;

ಗಾಳೆಪ್ಪ ಧೂಳೆಪ್ಪ, ಸಿಕ್ಲೆಪ್ಪ ಮಿಂಚೆಪ್ಪ
ಇವರು ನಾಲ್ಕು ಮಂದಿ ಅಣ್ಣ ತಮ್ಮರು । ಇದ್ದರ
ಸುತ್ತ ಹಳ್ಳಿಗೆ ದೊಡ್ಡವರೋ..... ಎಂದು ಹಾಡುತ್ತಾರೆ.

ಮಳೆ ಬಂದು ಭೂಮಿ ಹದವಾದಾಗ ರಂಟೆ-ಕುಂಟೆಗಳನ್ನು ಹೊಡೆದು, ಭೂಮಿಯನ್ನು ಹರಗಬೇಕು. ನಂತರದ ದಿನಗಳಲ್ಲಿ ಬೀಜವನ್ನು ಭಿತ್ತಿ, ಕಾಲ ಕಾಲಕ್ಕೆ ಬೆಳೆಯುತ್ತಿರುವ ಬೆಳೆಯನ್ನು ಪರೀಕ್ಷಿಸಬೇಕೆಂದು ಸರ್ವಜ್ಞ ಒತ್ತಿ ಹೇಳಿದ್ದಾನೆ. ಇದೆಲ್ಲಕ್ಕೂ ಮುಖ್ಯವಾಗಿ '' ಹೊತ್ತು ಮುಳುಗುವ ಮುನ್ನ ಗೊತ್ತು ಸೇರು'' ಎನ್ನುವಂತೆ ''ಹೊತ್ತೇರುವ ಮುನ್ನ ಕೆಲಸ ಮುಗಿಸು'' ಇಲ್ಲದಿದ್ದರೆ, ಸಮಯ ಸರಿದರೆ ಸೂರ್ಯ ಇನ್ನಷ್ಟು ಬಿಸಿಯಾಗಿ,ನೆತ್ತಿಯನ್ನೇ ಸುಡುತ್ತಾನೆ. ''ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ, ಹೊತ್ತಾದ ಬಳಿಕ ನಿನ್ನನ್ನಾರು ಬಲ್ಲರು'' ಎಂಬ ಶರಣರ ನುಡಿಗಳಂತೆ ಸಮಯಾವಕಾಶವನ್ನು ಸರಿಯಾಗಿ ಬಳಸಿಕೊಂಡು ಬದುಕುವ ಸಾರ್ಥಕತೆಯನ್ನು ಸರ್ವಜ್ಞ ತಿಳಿಸಿದ್ದಾನೆ.

ಅಲೌಕಿಕ ನೆಲೆಯನ್ನು , ಸಮಯದ ಮಹತ್ವವನ್ನು ಹೀಗೆ ಶರಣರು ಕಟ್ಟಿಕೊಟ್ಟರೆ, ಸರ್ವಜ್ಞ ತನ್ನ ಲೌಕಿಕ ನೆಲೆಯಲ್ಲಿ ಹೊತ್ತಿನ ಬೆಲೆಯನ್ನು ತಿಳಿಸುತ್ತಾನೆ. ಸರ್ವಜ್ಞನು ಸಹ, ಬೇಗನೆ ಹೊಲಕ್ಕೆ ಹೋಗಿ, ಅಂದಂದಿನ ಕೃಷಿ ಕಾರ್ಯಕ್ಕೆ ಸಂಬಂಧಿಸಿದ ಕೆಲಸವನ್ನು ನಿರ್ವಹಿಸಬೇಕೆಂದು ಹೇಳುತ್ತಾ, ಇಲ್ಲದಿದ್ದರೆ, ಸೂರ್ಯ ನೆತ್ತಿಗೇರಿದ ಮೇಲೆ ಯಾವ ಕೆಲಸವೇ ಮಾಡಲಿ, ಆಯಾಸ, ನೀರಡಿಕೆ ಹೆಚ್ಚಾಗಬಹುದೆಂಬ ಎಚ್ಚರಿಕೆಯನ್ನು ನೀಡಿದ್ದಾನೆ.

ನಲ್ಲೆತ್ತು ಬಂಡಿ ಬಲವಿಲ್ಲದ ಆರಂಭ
ಕಲ್ಲು ಕಸಗಳನ್ನು ಬಿಟ್ಟಾತ ಹೊಲದೊಳಗೆ
ಹುಲ್ಲನ್ನೇ ಬೆಳೆವ ಸರ್ವಜ್ಞ.

ಹರಗದ ಎತ್ತಾಗಿ ಬರಡಾದ ಹಯನಾಗಿ
ಹರಟೆ ಹೊಡೆಯುವ ಮಗನಾಗೆ ಹೊಲದಲ್ಲಿ
ಕರಡವೇ ಬೆಳಗು ಸರ್ವಜ್ಞ.

ಬೇಸಾಯಕ್ಕೆ ಬಲವಾದ ಎತ್ತುಗಳು, ಆಳುಕಾಳುಗಳು ಹಾಗೂ ಉತ್ತಮ ಸಲಕರಣೆಗಳು ಅತ್ಯವಶ್ಯಕ. ಉಳುಮೆ ಮಾಡಲು ಎತ್ತುಗಳಂತೂ ಬೇಸಾಯಗಾರನಿಗೆ ಜೀವನಾಡಿ. ಹವಣಾದ ಎತ್ತುಗಳಿಲ್ಲದಿದ್ದರೆ ವ್ಯವಸಾಯ ಕಾರ್ಯವೇ ಸ್ಥಗಿತಗೊಳ್ಳುವುದು. ಅಷ್ಟೇ ಅಲ್ಲ;

ಹೊಲದಲ್ಲಿ ಸರಿಯಾದ ಕ್ರಮದಲ್ಲಿ ಕುಂಟೆ ಹೊಡೆಯದಿದ್ದರೆ, ಅದರಿಂದ ಪ್ರತಿಫಲ ಪಡೆಯಲು ಸಾಧ್ಯವಿಲ್ಲ. ಸರ್ವಜ್ಞ ತನ್ನ ಕಾಲದಲ್ಲಿ ಕಂಡ ಬೇಸಾಯಗಾರನ ಬೇಜವಾಬ್ದಾರಿತನ ಹಾಗೂ ಸೋಮಾರಿತನಗಳನ್ನು ಇಲ್ಲಿ ವ್ಯಕ್ತಪಡಿಸಿದ್ದಾನೆ.

ಮನೆಯ ಮಗನಾದವನು ತಂದೆಯಂತೆ ದುಡಿಯಲು ಕಲಿತಿರಬೇಕು. ಕೇವಲ ಕಾಲ ಹರಣ ಮಾಡಿದರೇನು ?. ಕೂಡಿಟ್ಟದ್ದು ಕೊನೆಯತನಕ ಇರಲಾರದು. ಸಮಯ ಸರಿದಂತೆ ಸಂಪತ್ತೆಲ್ಲಾ ಖಾಲಿ ಯಾಗಬಹುದು.

ಆಲಸಿಕೆಯಲ್ಲಿರುವಂಗೆ ಕಲಿಸಲಂಬಲಿಯಿಲ್ಲ
ಕೆಲಸಕ್ಕೆ ಆಲಸದಿರುವಂಗೆ ಬೇರಿಂದ
ಹಲಸು ಕಾತಂತೆ ಸರ್ವಜ್ಞ

ಆಲಸಿಗನಾದ ಮಗನಿದ್ದರೆ ಯಾವ ಕೆಲಸ ನೀಡಿದರೂ ಮಾಡಲಾರ. ಮುಂದೆ ಗುಟುಕು ಅಂಬಲಿಗೂ ಗತಿಯಿಲ್ಲದ ದುಸ್ಥಿತಿ ಪ್ರಾಪ್ತವಾಗುತ್ತದೆ.

ದಂಡು ಇಲ್ಲದ ಅರಸ ಕೊಂಡವಿಲ್ಲದ ಹೋಮ
ಬಂಡಿಯಿಲ್ಲದವನ ಬೇಸಾಯ ತಲೆಹೋದ
ಮುಂಡದಂತಿಕ್ಕು ಸರ್ವಜ್ಞ.

ಬೇಸಾಯ ಮಾಡುವಾಗ ಎತ್ತುಗಳು, ಕೃಷಿ ಸಲಕರಣೆಗಳು ಎಷ್ಟು ಮುಖ್ಯವೋ 'ಬಂಡಿ'ಯೂ ಅಷ್ಟೇ ಮುಖ್ಯ. ಆತನ ಕಾಲದಲ್ಲಿ ಈಗಿನಂತೆ ಆಧುನಿಕ ಸಲಕರಣೆಗಳಿರಲಿಲ್ಲ. ಅಂದಿನ ಜನರು ಬಂಡಿಯನ್ನೇ ಬಳಸುತ್ತಿದ್ದರು. ಒಂದು ವೇಳೆ ಈ ಬಂಡಿ ಇರದಿರೆ ವ್ಯವಸಾಯೋತ್ಪನ್ನಗಳನ್ನು ಸಾಗಿಸಲು ಬಹಳ ಕಷ್ಟಸಾಧ್ಯವಾಗುವ ಪರಿಸ್ಥಿತಿಯನ್ನು ಸರ್ವಜ್ಞ ಉಲ್ಲೇಖಿಸಿದ್ದಾನೆ. ಸಾಮ್ರಾಜ್ಯವನ್ನೇ ಕಟ್ಟಿದ ಒಬ್ಬ ಅರಸನಿಗೆ ತಕ್ಕಷ್ಟು ಸೈನ್ಯ ಬಲವಿಲ್ಲದಿದ್ದರೇನು ? ಕೊನೆಗೆ ಸೋಲಿನಲ್ಲಿ ಸಾಯುವುದು ಖಂಡಿತ. ಇನ್ನು ಹೋಮ, ಹವನಾದಿಗಳಿಗೆ ವಿಶೇಷವಾದ ಒಂದು ಕೊಂಡ ಬೇಕೇಬೇಕು. ಅದು ಇಲ್ಲದಿದ್ದರೆ, ಆ ಹೋಮದ ಪೂಜೆಗೇನು ಅರ್ಥ ಬಂದೀತೆಂಬುದನ್ನು ಬರೀ ಕರಿಕೆಯೇ ತುಂಬಿದ ಹೊಲ ಹಾಗೂ ಬೀಳು ಬಿದ್ದಿರುವ ಭೂಮಿಯಿಂದೇನು ಉಪಯೋಗ ಎಂದು ಹೇಳಿದ್ದಾನೆ. ಈ ಅಂಶಗಳೆಲ್ಲಾ ತಲೆಯನ್ನೇ ಕಳೆದುಕೊಂಡಿರುವ ದೇಹದಂತೆಯೇ ಸರಿ ಎಂಬ ಉಪಮೆದೊಂದಿಗೆ ಹೋಲಿಸಿದ್ದಾನೆ. ಆದ್ದರಿಂದ ಬೇಸಾಯಕ್ಕೆ ಉತ್ತಮವಾದ ಬಂಡಿ ಇರಬೇಕು.

ಹದ ಬೆದೆಯಲಾರಂಭ ಕದನದಲಿ ಕೂರಂಬ
ನದಿ ಹಾಯುವಲ್ಲಿ ಹರಗೋಲ ಮರೆದಾತ
ವಿಧಿಯ ಬೈದೇನು ಸರ್ವಜ್ಞ.

ತನ್ನ ಕಾಲದಲ್ಲಿ ನಡೆಯುತ್ತಿದ್ದ ಅನೇಕ ಕದನಗಳನ್ನು ಸರ್ವಜ್ಞ ಕಂಡಿರಬಹುದು. ಕೆಲವೊಮ್ಮೆ ಇಂತಹ ಕದನಗಳು ನಡೆದಾಗ ಹರಿತವಾದ ಬಾಣಗಳಾಗಲಿ, ಖಡ್ಗಗಳಾಗಲಿ ಮರೆತ ಅರಸ ಅಥವಾ ಸೈನಿಕರಲ್ಲಿ ಗೊಂದಲದ ಪರಿಸ್ಥಿತಿ ಹೇಗಿರುತ್ತದೆ ? ಇನ್ನು ನದಿ ದಾಟುವಾಗ ಮುಖ್ಯವಾಗಿ ಬೇಕಾದ ಹರಗೋಲನ್ನೇ ಮರೆತು ದೋಣಿಯಲ್ಲಿ ಕೂತರೆ, ನಂತರ ನದಿ ಮಧ್ಯಕ್ಕೆ ಬಂದು ದೋಣಿ ಮುಳುಗುವಾಗ ವಿಧಿಯನ್ನು ಬೈದರೇನು ಪ್ರಯೋಜನ.

ಅದೇ ರೀತಿ ಒಕ್ಕಲಿಗ ಜನಪದರು ಕಾಲ ಕಾಲಕ್ಕೆ ಸರಿಯಾಗಿ ಭೂಮಿಯನ್ನು ಹದ ಮಾಡಿ, ಬೀಜ ಗಳನ್ನು ಬಿತ್ತಿ ಪ್ರತಿಫಲವನ್ನು ಪಡೆಯಬೇಕೆ ಹೊರತು ವೃಥಾ ಕಾಲ ಕಳೆದು ವಿಧಿಯನ್ನು ತೆಗಳಿದರೆ ಉಪಯೋಗವಿಲ್ಲವೆಂಬ ಸತ್ಯವನ್ನು ಸರ್ವಜ್ಞ ಇಲ್ಲಿ ವಿಶ್ಲೇಷಿಸಿದ್ದಾನೆ.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು
ಮೇಟಿಯಿಂ ರಾಟಿ ನಡೆದುದಲ್ಲದೇ ದೇಶ
ದಾಟವೇ ಕೆಡಗು ಸರ್ವಜ್ಞ.

ಎಷ್ಟೇ ಜಾಣತನದ ವಿದ್ಯೆಗಳೇ ಇದ್ದಾಗ್ಯೂ, ಬೇಸಾಯದ ವಿದ್ಯೆ ಇಲ್ಲದಿದ್ದರೆ ಎಲ್ಲವೂ ವ್ಯರ್ಥವೆಂಬ ಧೋರಣೆಯನ್ನು ಸರ್ವಜ್ಞ '' ಮೇಟಿ ವಿದ್ಯೆಯೇ ಮೇಲು'' ಎಂಬ ಮೂಲ ಸತ್ಯವನ್ನು ಅರುಹಿದ್ದಾನೆ.

ಈ ಮೇಟಿ ವಿದ್ಯೆಯೂ ಸಹ ಸರಾಗವಾಗಿ, ಸಕಾಲದಲ್ಲಿ ನಡೆದಾಗ ಮಾತ್ರ ಎಲ್ಲರ ಹೊಟ್ಟೆಯೂ ತುಂಬುತ್ತದೆ. ಇಂತಹ ಮಹತ್ವವುಳ್ಳ ಒಕ್ಕಲುತನದ ಜ್ಞಾನವಿಲ್ಲದಿದ್ದರೆ ಇಡೀ ದೇಶವೇ ಅತಂತ್ರ ಸ್ಥಿತಿಯಾಗಬಹುದೆಂಬುದನ್ನು ಸರ್ವಜ್ಞ ತನ್ನ ವಚನಗಳಲ್ಲಿ ಕಂಡಿರಿಸಿದ್ದಾನೆ.

ಜನಪದರು ಹೇಳುವಂತೆ ಒಕ್ಕಲಿಗನು ಯಾವ ಕಾಲದಲ್ಲದರೂ, ಹೇಗದರೂ ಬಾಳುತ್ತಾನೆ ಎಂಬುದಕ್ಕೆ " ಒಕ್ಕಲು ಮಗನಿಗೆ ಬಡತನ ಉಂಟೆ ?, ಕರಿಕೆಪತ್ರಿ ಒಣಗುವುದುಂಟೆ?" ಎಂಬ ಗಾದೆಯನ್ನು ಸೃಷ್ಟಿಸಿದ್ದಾರೆ. ಕರಿಕೆಪತ್ರಿಯಂತೆ ಒಣಗದೇ ಬೇಸಾಯಗಾರ ಹೇಗೂ ಜೀವನ ಸಾಗಿಸಿಕೊಂಡು ಹೋಗಬಲ್ಲನೆಂಬ ಆತ್ಮ ವಿಶ್ವಾಸ ಸರ್ವಜ್ಞನದು. ಒಟ್ಟಿನಲ್ಲಿ ಒಬ್ಬ ಒಕ್ಕಲಿಗನಿಂದ ಹಲವು ಕುಟುಂಬಗಳು ಬದುಕುತ್ತಿರುವುದನ್ನು ಈಗಲೂ ಅಲ್ಲಗಳೆಯುವಂತಿಲ್ಲ. ಈತನೊಂದಿಗೆ ಬಡಿಗ, ಕಮ್ಮಾರ, ಕುಂಬಾರ ಇತ್ಯಾದಿ ಜನರು ಒಕ್ಕಲುತನಕ್ಕೆ ಪೂರಕವಾದ ಸಾಮಾಗ್ರಿಗಳ ತಯಾರಿಕೆಯಲ್ಲಿ ತೊಡಗುತ್ತಿದ್ದುದರಿಂದ ಸಮಾಜದಲ್ಲಿ ಎಲ್ಲಾ ವೃತ್ತಿಗಳಿಗೂ ಗೌರವ ಮನ್ನಣೆಗಳು ಹಾಗೂ ಪರಸ್ಪರ ಏಕೋಭಾವಗಳ ದೃಷ್ಟಿ ಬೆಳೆದು ಬಂದಿದೆ. ಸಮಷ್ಟಿ ಸಂಪ್ರದಾಯವನ್ನೊಳಗೊಂಡಿರುವ ವ್ಯವಸಾಯವೂ ಜಾನಪದರ ಒಂದು ಶಾಖೆಯಾಗಿದೆ. ಮಣ್ಣಿನ ಮಗನಾದ ಒಕ್ಕಲಿಗನಿಗೆ ಮಣ್ಣೇ ಹೊನ್ನು. ಅವನ ಪಾಲಿಗೆ ಮಣ್ಣು ಅನ್ನ ಕೊಡುವ ದೇವತೆ.

ಜನಪದ ವಿಜ್ಞಾನ ಅನಾದಿಕಾಲದಿಂದಲೂ ಭೂಮಿತಾಯಿಯ ಜೊತೆಗೆ ಸಂಬಂಧ ಹೊಂದಿದೆ. ಮಣ್ಣಿನಿಂದಲೇ ಅನ್ನವನ್ನು ಬೆಳೆದು ಪ್ರಪಂಚಕ್ಕೆಲ್ಲ ಆಹಾರವನ್ನು ಪೂರೈಸುವಂತಹ ಪವಿತ್ರ ಕೆಲಸದಲ್ಲಿ ತೊಡಗಿಕೊಂಡಿರುವ ಒಕ್ಕಲಿಗನ ಪಾತ್ರ ಹಿರಿದಾದುದು. " ಒಕ್ಕಲಿಗನಿಲ್ಲದೇ ಹೋದರೆ, ಬಿಕ್ಕುವುದು ಜಗವು" ಎಂಬ ಗಾದೆಯಂತೆ ಒಕ್ಕಲುತನದ ಮಹತ್ವಕ್ಕೆ ಸರ್ವಜ್ಞನ ವಚನಗಳೇ ಸಾಕ್ಷಿಯಾಗುತ್ತವೆ.

## ೪.೪. ಬಡಿಗತನ :

ಗುಡಿ ಕೈಗಾರಿಕೆಗಳೆಂದು ಗುರುತಿಸುವ ವೃತ್ತಿಗಳಲ್ಲಿ ಬಹು ಪ್ರಾಚೀನ ಕಾಲದಿಂದ ನಿರತರಾಗಿರುವ ಪಾಂಚಾಳರೇ ಬಹು ನಿಷ್ಣಾತರೆನ್ನಬಹುದು. ಈ ಪಾಂಚಾಳರು ವಿಶ್ವಕರ್ಮನ ಮಕ್ಕಳು. ಶಿವ, ವಿಷ್ಣು, ಬ್ರಹ್ಮ, ಇಂದ್ರ ಹಾಗೂ ಸೂರ್ಯ ಇವರಿಂದ ಕಮ್ಮಾರ, ಬಡಗಿ, ಕಂಚುಗಾರ, ಶಿಲ್ಪಿ ಹಾಗೂ ಅಕ್ಕಸಾಲಿಗರನ್ನು ನಿರ್ಮಿಸಿ, ಅವರಿಗೆ ಪಂಚವಿದ್ಯೆಯನ್ನು ನೀಡಿದವರೆಂದು ಹೇಳಲಾಗಿದೆ (ಜಾನಪದ ಸಾಹಿತ್ಯ ದರ್ಶನ, ಪು. ೧೬೦). ಗ್ರಾಮ ಜೀವನದ ವಿವಿಧ ವೃತ್ತಿಗಳಲ್ಲಿ ನಿರತರಾದ ಈ ಜನಾಂಗಕ್ಕೆ ಇಂತಹ ವಿಶೇಷ ಪರಂಪರೆಯನ್ನು, ಗೌರವವನ್ನು ನೀಡುವ ಪ್ರಯತ್ನ ಇಲ್ಲಿ ಕಂಡುಕೊಳ್ಳಬಹುದು. ಈ ಪಾಂಚಾಳರು ವಿಶೇಷ ಜ್ಞಾನಿಗಳು, ಕರಕುಶಲಿಗಳು ವೈದಿಕಾಚರಣೆ, ವೇದ ವಿದ್ಯೆಗಳಲ್ಲಿ ನಂಬಿಕೆಯುಳ್ಳವರು. ಅಷ್ಟೇ ಅಲ್ಲದೆ, ೬೪ ಕಲೆಗಳಲ್ಲಿ ಪರಿಣತರು. ವಿವಿಧ ಕಸುಬುದಾರರು ಪರಂಪರೆಯ ಆಚರಣೆಗಳನ್ನು ಉಳಿಸಿಕೊಂಡು ಬಂದು, ಆಯಗಾರರೆಂದೇ ಪ್ರಸಿದ್ಧರಾಗಿರುವರು (ಜಾನಪದ ಸಾಹಿತ್ಯ ದರ್ಶನ, ಪು.೧೬೦). ಕೃಷಿಕ ಕೇಂದ್ರವಾದ ಹಳ್ಳಿಗಳಲ್ಲಿ ದನಕಾಯುವ,ಕ್ಷೌರಿಕ, ಅಂಬಿಗ, ಕಮ್ಮಾರ,

ಬಡಿಗ, ಚಮ್ಮಾರ, ಬಣಜಿಗ, ಹರದ, ಸುಂಕಿಗ, ಒಕ್ಕಲಿಗ, ಅಕ್ಕಸಾಲಿಗ ಮೊದಲಾದವರೆಲ್ಲರೂ ಗ್ರಾಮೀಣ ಕುಲ ಕಸುಬುದಾರರಾಗಿದ್ದಾರೆ. ಬಡಿಗನು ಮರವನ್ನು ಕಡಿದು, ಕೆತ್ತಿ, ರೈತೋಪಯೋಗಿ ಹಾಗು ಗೃಹೋಯೋಗಿ ಉಪಕರಣಗಳನ್ನು ಪಾರಂಪರಿಕವಾಗಿ ಮಾಡುತ್ತ ಬಂದಿರುವ ಕಸುಬುದಾರ ಬಡಿಗನ ಅಗತ್ಯ ಗ್ರಾಮೀಣ ಜನರಿಗೆ ಇದ್ದೇ ಇರುತ್ತದೆ. ಒಕ್ಕಲಿಗ ತನ್ನ ಹೊಲದಲ್ಲಾಗಲ್ಲಿ ಅಥವಾ ಸುತ್ತಮುತ್ತ ಬೆಳೆದ ಮರಗಳಲ್ಲಾಗಲಿ ಕಡಿದು, ತಂದು ಈ ಬಡಿಗನಿಗೆ ಕೊಟ್ಟರೆ, ಒಕ್ಕಲಿಗನಿಗೆ ಬೇಕಾದ ವ್ಯವಸಾಯದ ಉಪಕರಣಗಳನ್ನು ತಯಾರಿಸಿಕೊಡುತ್ತಾನೆ (ಜಾನಪದ ಸಾಹಿತ್ಯ ದರ್ಶನ,ಪು.೯೭). ಕಟ್ಟಿಗೆ ಕೆಲದಲ್ಲಿ ಬಡಿಗ ಬಹು ಕುಶಾಗ್ರಮತಿ ಎಂಬುದು ಸರ್ವವಿಧಿತ ಸಂಗತಿ (ಧಾರವಾಡ ಜಿಲ್ಲೆಯ ಒಕ್ಕಲುತನದ ಪೂಜೆಗಳು,ಪು.೫೮).

ಬಡಿಗನು ರೈತನ ವ್ಯವಸಾಯಕ್ಕೆ ಅಗತ್ಯವಾದ ರಂಟೆ, ಕುಂಟೆ, ಎತ್ತಿನಬಂಡಿ, ನೊಗ, ಸಲಿಕೆ, ಪಿಕಾಸಿ, ಗುದ್ದಲಿಗಳ ಕಾವು, ಮೂರ್ತಾಳ ಮುಂತಾದವುಗಳನ್ನು ಮಾಡುತ್ತಾನೆ. ದಿನ ನಿತ್ಯ ಗೃಹೋಪಯೋಗಿ ಉಪಕರಣಗಳಾದ ಕಡೆಗೋಲು, ರೊಟ್ಟಿ ಕೊಣವಿಗೆ, ಹುಟ್ಟು, ಲಟ್ಟಣಗಿ, ಈಳಿಗೆ ಮಣಿ, ಹೋಳಿಗೆ ಮಣಿ, ಊಟದ ಮಣಿ, ತೊಟ್ಟಿಲು, ಖುರ್ಚಿ, ಮೇಜು, ಟೇಬಲ್ಲು, ಮಂಚ ಮೊದಲಾದವುಗಳನ್ನು ತಯಾರು ಮಾಡುತ್ತಾನೆ. ಅದೇರೀತಿ ಗೃಹನಿರ್ಮಾಣದ ಉಪಕರಣಗಳಾದ ಕಿಡಕಿ, ಬಾಗಿಲು, ಕಂಬ ಹಾಗೆಯೇ ದೇವಸ್ಥಾನಕ್ಕೆ ಬೇಕಾದ ತೇರು, ವಿಗ್ರಹ, ಪಲ್ಲಕ್ಕಿ ಮುಂತಾದವುಗಳನ್ನು ಮಾಡುತ್ತಾನೆ. ಮಕ್ಕಳಾಡಲಿಕ್ಕೆ ಬೇಕಾದ ಆಟಿಕೆ ಸಾಮಾನುಗಳಾದ ಮಗುವಿಗೆ ಕಾಲು ಬರಲು ಉಪಯೊಗಿಸುವ ಮೂರುಗಾಲಿಯ ಬಂಡಿ, ಬಟವಣಿಗೆ, ಬುಗರಿ ಮುಂತಾದವುಗಳನ್ನು ತಯಾರಿಸಿಕೊಡುವ ಕೆಲಸ ಅವನ ದಾಗಿರುತ್ತದೆ (ಜಾನಪದ ಸ್ಪಂದನ, ಪು.೮೧).

ಗ್ರಾಮೀಣ ಜನರ ವೃತ್ತಿ ಜೀವನಗಳಿಗೆ ಅನಿವಾರ್ಯನೂ, ಅತೀ ಸಮೀಪನೂ ಆದ ಈ ಬಡಗಿಯು ಎಲ್ಲ ಸಮನ್ವಯ ಸೂತ್ರದವನಾಗಿದ್ದಾನೆ (ಜಾನಪದ ಸಾಹಿತ್ಯ ದರ್ಶನ, ಪು.೧೬೦). ಬಡಿಗ ಹಳ್ಳಿಯ ಕುಶಲ ಕರ್ಮಿಯೂ, ಆಯಗಾರನೂ ಹೌದು. ಒಕ್ಕಲಿಗ ಕೂರಿಗೆ ಪೂಜೆಯನ್ನು ಮಾಡುವಾಗ ಬಿತ್ತುವ ಬೀಜಗಳನ್ನು ಬಡಿಗನ ಮನೆಯಿಂದ ತಂದುಕೊಡುವರು. ಆಗ ಮಂಡೆಗೆ, ಪತ್ರೆ, ಹೂ, ಕುಂಕುಮಗಳಿಂದ ಪೂಜೆ ಸಲ್ಲಿಸುವುದು ಬಡಿಗನ ಕೆಲಸವಾಗಿರುತ್ತದೆ. ರೈತ ಬಿಟ್ಟ ಮಂಡಿಯ ಬೀಜಗಳು ಬಡಿಗನಿಗೆ ಸಲ್ಲುತ್ತವೆ. ಅದೇ ರೀತಿ ಕಾರುಹುಣ್ಣಿಮೆಯ ಕರಿ ಹರಿಯುವಾಗ ಕಾರು ಹುಣ್ಣಿಮೆಯ ಬಂಡಿಗಳನ್ನು ಮಾಡಿಕೊಟ್ಟಾಗಲೂ ಬಡಿಗನಿಗೆ ಅನೇಕ ಕೆಲಸಗಳುಂಟು. ವ್ಯವಸಾಯ ಪ್ರಮುಖವಾದ ಗ್ರಾಮೀಣ ಜೀವನದಲ್ಲಿ ಬಡಿಗತನದ ವೃತ್ತಿ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ.

ಬಡಿಗೇರನ್ನು ಕೂಡ ಒಕ್ಕಲುತನದ ಉಪಕರಣಗಳನ್ನು ತಯಾರಿಸುವಾಗ ಕೆಲವೊಂದು ನಂಬಿಕೆ ಗಳನ್ನು ಅನುಸರಿಸುವುದನ್ನು ಕಾಣುತ್ತೇವೆ. ಉದಾಹರಣೆಗೆ ಕೂರಿಗೆ ಹಾಯಿಸಿ (ಸಜ್ಜು ಮಾಡಿ) ಕೊಡುವ ಸಮಯದಲ್ಲಿ ಮೊದಲು ಓರಿ ಕುರುಬ ಹಾಗೂ ಕುಡ ಒಕ್ಕಲಿಗ ನಂತರ ಗೌಡ, ಕುಲಕರ್ಣಿ ಆನಂತರ ಉಳಿದ ರೈತರು ಕೂರಿಗಳಿಗೆ ಕೈ ಹಾಕುವುದು.

ಈ ವೃತ್ತಿ ಜನಪದರ ಜೀವನಾಡಿಯಾಗಿದೆ. ತಲತಲಾಂತರಗಳಿಂದ ಬಡಿಗತನದಲ್ಲಿ ಹುಟ್ಟಿ ಬಂದ ಜನರು ಕಾಲಕ್ಕೆ ತಕ್ಕಂತೆ ಈ ಬಡಿಗತನದಲ್ಲಿರುವ ಹೊಸ ರೀತಿಯ ಉಪಕರಣಗಳನ್ನು ತಯಾರು ಮಾಡುತ್ತಾ ಬಂದಿರುವುದನ್ನು ನಾವು ಈಗಲೂ ಕಾಣುತ್ತೇವೆ. ಬಡಿಗನಿಗೆ ಕೆಲವೊಮ್ಮೆ ಉದ್ಯೋಗವಿಲ್ಲದಿರುವುದನ್ನು ಕಂಡ ಜನಪದರು ''ಉದ್ಯೋಗವಿಲ್ಲದ ಬಡಿಗ, ಮಗನ ಮುಕುಳಿ ಕೆತ್ತಿ, ಮೂರು ಮಣೆ ಮಾಡಿದ'' ಎಂಬ ಹಾಸ್ಯದ ಗಾದೆ, ''ಕೆತ್ತುವವನ ಮುಂದೆ ನಿಲ್ಲಬೇಡ, ಬಡಿಯುವವನ ಹಿಂದೆ ನಿಲ್ಲಬೇಡ'' ಎಂಬ ಗಾದೆಯೂ ಸಹ ಈಗಲೂ ಜನಪ್ರಿಯವಾಗಿವೆ.

ಜನಪದರ ಸಮಾಜದಲ್ಲಿ ಸಂತನಾಪೇಕ್ಷೆಗೆ ಅಗ್ರ ಸ್ಥಾನವಿತ್ತು. ಈ ಸಂತಾನಕ್ಕೂ, ಈ ಬಡಿಗನಿಗೂ ಎಲ್ಲಿಯ ಹೋಲಿಕೆ ಎಂಬ ಪ್ರಶ್ನೆ ನಮ್ಮ ಮುಂದೆ ಬರಬಹುದು. ಹಿಂದಿನ ಕಾಲದಲ್ಲಿ ಈಗಿನಂತೆ ಕುಟುಂಬ ಯೋಜನೆಯಂತಹ ವ್ಯವಸ್ಥೆಗಳಿರಲಿಲ್ಲ. ಹಿಂದೊಂದು ಕಾಲದಲ್ಲಿ ಸಂತಾನ ಶ್ರೀಮಂತಿಕೆಯ ವ್ಯಾಮೋಹ ಎಷ್ಟಿತ್ತೆಂಬುದಕ್ಕೆ ಇಲ್ಲಿಯ ಜನಪದರ ತ್ರಿಪದಿ;

ನಾಗನೂರ ಬಡಿಗ್ಯಾಗ ನಾಕ ತೊಟ್ಟಿಲ ಹೇಳ
ನಾದೂನಿಗೊಂದ, ನನಗೊಂದ ಮನಿಯಾನ
ಅತ್ತೆವ್ವಗೊಂದ, ಸೊಸೆಗೊಂದ.....

ಈ ರೀತಿ ತೊಟ್ಟಿಲುಗಳನ್ನು ಮನೆಯಲ್ಲಿ ಪ್ರತಿಯೊಬ್ಬ ಗರತಿಗೂ ಅವಶ್ಯ ಬೇಕಾದಂತಹ ಸಂದರ್ಭದಲ್ಲಿ ಬಡಿಗನಿಗೆ ಕೈತುಂಬಾ ಕೆಲಸ.

ಈ ಬಡಿಗನನ್ನು ಕುರಿತಾದ ಕೆಲವು ಜಾನಪದ ಪದ್ಯಗಳು ಈ ಕೆಳಗಿನಂತಿವೆ;

ತಿಟ್ಟೂರ ಬಡಗೀಯ ಥಟ್ಟನೆ ಬರಹೇಳಿ
ಕಟ್ಟೆ ಉಳಿ ಬಾಚಿ ಸಹವಾಗಿ । ರಂಗಯ್ಯ
ಭಾರೀಯ ತೇರು ಕಡಿದಾರು ॥
ಬಡಿಗೇರ ಬಂದವ್ವನ ಬಡಿವಾರ ನೋಡಿರೆ
ಬಡಬಾಯಿ ತುಂಬ ಎಲೆ-ಅಡಿಕ । ಹಣೆ ಮ್ಯಾಲೆ
ಬಂಡಿ ಗಾಲೆಂಥ ಕುಂಕುಮ.
ಕಂದವ್ವನೆತ್ತಿಕೊಂಡು ಕಂಡೆ ಬಡಿಗೇರ ಮನೆಯ
ಸಧ್ಯಕ್ಕೆ ಬೇಕಣ್ಣ ಕಡಗೋಲು । ನಮ್ಮನಿಯ
ಕಾಳೆಮ್ಮೆ ಹಾಲು ಕೊಡೋದೈತಿ ॥
(ಜಾನಪದ ಸಾಹಿತ್ಯ ದರ್ಶನ, ಸಂಪುಟ-೭, ಪು.೧೬೫).

ಈ ಬಡಿಗತನಕ್ಕೆ ೧೨ನೇ ಶತಮಾನದ ಶರಣರ ವಚನಗಳಲ್ಲಿ ''ಬಾಚಿ-ಕಾಯಕ'' ಎಂದು ಕರೆಯಲಾಗಿದೆ. ಬಡಗಿಯ ಕಾಯಕದಲ್ಲಿ 'ಬಾಚಿ'ಗೆ ಇರುವ ಪ್ರಾಮುಖ್ಯತೆಯನ್ನು ಪ್ರಾಯಶಃ ಈ ಕಸುಬಿಗೆ 'ಬಾಚಿ ಕಾಯಕ' ಎಂದು ಕರೆಯಲು ಕಾರಣವಾಗಿರಬೇಕು. ಬಾಚಿ ಕಾಯಕದ ಬಸಪ್ಪನೆಂಬ ಶರಣನಿದ್ದ ಎಂಬುದು ಇವರಿಂದ ತಿಳಿದುಬರುತ್ತದೆ. ಇಂತಹ ಬಡಿಗ ವೃತ್ತಿಯವನೊಬ್ಬನನ್ನು ನೋಡಿದ ಸರ್ವಜ್ಞ ಬಹು ಹಾಸ್ಯಾತ್ಮಕವಾಗಿ;

ಅಡ್ಡ ಬಡ್ಡಿಯೂ ಅಲ್ಲ, ಗಿಡ್ಡ ಬಾಗಿಲು ಅಲ್ಲ,
ಹೆಡ್ಡರೊಡನಾಟ ಹೊಲ್ಲ ಬಡಿಗ ತಾ
ರೊಡ್ಡನಿರಹೊಲ್ಲ ಸರ್ವಜ್ಞ.

ಎಂದು ವಿನೋದವಾಗಿ ನುಡಿದಿದ್ದಾನೆ. ಸರ್ವಜ್ಞನದು ಅಪಾರವಾದ ಲೋಕಜ್ಞಾನ. ಬಹಳ ಚಮತ್ಕಾರದಿಂದ ಪರಸ್ಪರ ಸಂಬಂಧ ಪಡುವ ಹೋಲಿಕೆಗಳೊಂದಿಗೆ ಮೇಲಿನ ವಚನವನ್ನು ಅರುಹಿದ್ದಾನೆ. ಈ ಬಡಿಗನ ಅಗತ್ಯವೆಷ್ಟು ಎಂಬುದನ್ನು ಇಲ್ಲಿ ತಿಳಿಸಿದ್ದಾನೆ.

ಹಡಗು ಕಡಲಿಗೆ ಬೇಕು, ಗುಡುಗು ಮಿಂಚಿಗೆ ಬೇಕು
ಕಡಗದಾ ಕೈಯ ಸೊಸೆಬೇಕು । ಊರಿಂಗೆ
ಬಡಿಗ ತಾ ಬೇಕು ಸರ್ವಜ್ಞ.

ಕಡಲಿಗೆ ಹಡಗು, ಮಿಂಚಿಗೆ ಗುಡುಗು, ಸೊಸೆಗೆ ಕಡಗುಳ್ಳ ಕೈ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವೆಂಬುದು ಸರ್ವಜ್ಞನ ಅಭಿಮತ. ಬಡಿಗತನದ ಕಸಬು ಗ್ರಾಮೀಣ ವರ್ಗದ ಜೀವನದಲ್ಲಿ ಹಾಸುಹೊಕ್ಕಾಗಿದೆ. ಹೀಗೆ ಗ್ರಾಮ ಜೀವನದ ಕ್ರಿಯಾಶೀಲ ಜನಾಂಗವಾದ ಬಡಿಗರು ತಮ್ಮದೇ ಆದ ತತ್ವ ವಿವೇಚನೆ, ನಡೆ-ನುಡಿ, ನಂಬಿಕೆಗಳನ್ನು ಬಿಂಬಿಸುವ ವಿಶಿಷ್ಟ ಜನ ಸಮುದಾಯದವರಾಗಿದ್ದಾರೆ (ಜಾನಪದ ಸಾಹಿತ್ಯ ದರ್ಶನ, ಪು. ೧೫೯).

## ೪.೫. ಅಕ್ಕಸಾಲಿಗ :

ಅರ್ಕಸಾಲೆ ಅಂದರೆ ಚಿನ್ನ, ಬೆಳ್ಳಿ ಮುಂತಾದ ಕೆಲಸ ಮಾಡುವವನು. ಅಕ್ಕಸಾಲಿ ಎಂಬುದರ ಶಿಷ್ಟ ರೂಪ ಅರ್ಕಸಾಲಿ(ಮಾನ್ಯ:ಪು.೫೩)ಎಂದು ಕರೆಯಲಾಗಿದೆ(ಕನ್ನಡ ನಿಘಂಟು-೧). 'ಅಕ್ಕಸಾಲಿ'ಗೆ 'ಅರ್ಕಸಾಲೆ' ಯೇ ಮೂಲಪದ. ಅರ್ಕ ಎಂದರೆ ಸೂರ್ಯ. ಸೂರ್ಯನನ್ನು ದೈವವಾಗಿ ಹೊಂದಿರುವ ಪಂಥದವರು ಎಂದರ್ಥ. 'ಪತ್ತಾರ'ರನ್ನು ಸಹ ಅಕ್ಕಸಾಲಿಗರೆಂದು ಕರೆಯುವ ವಾಡಿಕೆ ಇದೆ. ಗ್ರಾಮೀಣ ಅಕ್ಕಸಾಲಿ ಚಿನ್ನ ಕರಗಿಸಲು ಇದ್ದಿಲು ಉರಿಸುವ ಕುಪ್ಪಡಿಗೆಯನ್ನು ಎಂದರೆ ಅಗ್ಗಿಷ್ಟಿಕೆಯನ್ನು ಉಪಯೋಗಿಸುತ್ತಿದ್ದ ಎಂಬುದು ಮಡಿವಾಳ ಮಾಚಯ್ಯನವರ ವಚನದಲ್ಲಿ ಕಂಡು ಬರುತ್ತದೆ. ಕುಪ್ಪಡಿಗೆಯನ್ನು 'ಕುಪ್ಪಟಿಗೆ' ಎಂದು ಕರೆಯಲಾಗಿದೆ (ಉದ್ಧೃತ : ವಚನಗಳಲ್ಲಿ ಜಾನಪದೀಯ ಅಂಶಗಳು, ಪು.೩೯).

ಹೆಣ್ಣು ಮಕ್ಕಳ ಮೂಗು, ಕಿವಿಗಳನ್ನು ಚುಚ್ಚಲು ಅಕ್ಕಸಾಲಿಯೇ ಬೇಕು. ಅದು ಶಾಸ್ತ್ರೋಕ್ತವಾಗಿರುತ್ತದೆ. ಆತ ನೋವಾಗದಂತೆ ಏನೇನೋ ಹಾಸ್ಯಭರಿತವಾಗಿ ಮಾತನಾಡಿಸುವ ಜಾಣ್ಮೆ ರಕ್ತಗತವಾಗಿ ಬಂದಿರುತ್ತದೆ. ಅಂತೆಯೇ ''ಅಕ್ಕಸಾಲಿ ಚುಚ್ಚಿದರೆ ನೋವಾಗುವುದಿಲ್ಲ'' ಎಂಬ ಗಾದೆ ಪ್ರಚಲಿತವಾಗಿದೆ ( ಉದ್ಧೃತ : ವಚನಗಳಲ್ಲಿ ಜಾನಪದೀಯ ಅಂಶ ಗಳು, ಪು.೧೭೧). ಮದುವೆಯ ತಾಳಿ, ಕಡಗ ಇನ್ನಿತರ ಒಡವೆಗಳನ್ನು ಶ್ರೀಮಂತರ , ರಾಜರ, ಸ್ತ್ರೀಯರ ಆಭರಣಗಳನ್ನು ಅಕ್ಕಸಾಲಿಗರೇ ಮಾಡಿಕೊಡುತ್ತಾರೆ. ಚಿನ್ನವನ್ನು ಕದಿಯುವುದು, ಒಡವೆಗಳನ್ನು ಮಾಡಿಕೊಡಲು ತಡಮಾಡಿ ಓಡಾಡಿಸುವುದು ಆ ವೃತ್ತಿಯ ಲಕ್ಷಣಗಳೇ ಆಗಿವೆ.

''ಅಕ್ಕಸಾಲೆಯವಗೆ ಬಂಗಾರವಂ ಕೊಟ್ಟೊಡವಂ ಬಂಗಾರಮಂ ಕುಡದೆಡೆಯಾಡಿಸಿದನೆನೆ' (ಧರ್ಮ ಪ.......?, ಪು.೬, ಪದ್ಯ-೧೫) ಅಂದರೆ, ಅಕ್ಕಸಾಲೆಯವನಿಗೆ ಬಂಗಾರ ಕೊಟ್ಟು ಒಡವೆ ಮಾಡಿ ಕೊಡಲು ಹೇಳಿದರೆ,ಅವನು ಬೇಗನೆ ಮರಳಿಕೊಡದೇ ನೂರಾರು ಬಾರಿ ಓಡಾಡಿಸುವುದುಂಟು. ಈ ಅಕ್ಕಸಾಲಿಗರನ್ನು ನೋಡಿದ ಸರ್ವಜ್ಞನು ಅವರ ಸ್ವಭಾವವನ್ನು ಬಹಿರಂಗಪಡಿಸಿದ್ದಾನೆ. ಅಕ್ಕಸಾಲಿಗನ ಗುಣದ ಬಗ್ಗೆ ಸರ್ವಜ್ಞ ತನ್ನ ಕೆಲವು ವಚನಗಳ ಮೂಲಕ ಹೊರ ಹಾಕಿದ್ದಾನೆ.

ಅಕ್ಕಸಾಲೆಯನೂರಿಗೊಕ್ಕಲೆಂದೆನಬೇಡ
ಬೆಕ್ಕು ಬಂದಿಲಿಯ ಹಿಡಿವಂತೆ ಊರಿಗವ
ರಕ್ಕಸನು ನೋಡ ಸರ್ವಜ್ಞ.

ಅಕ್ಕಸಾಲಿಗನು ಊರಿನಲ್ಲಿ ವಾಸಿಸಿರಬೇಕೆಂದು ಇಚ್ಛೆಯನ್ನು ಮಾಡಲೇಬಾರದು. ಏಕೆಂದರೆ, ಬೆಕ್ಕು ಹೊರಗಿನಿಂದ ಬಂದು ಇಲಿಯನ್ನು ಹಿಡಿದುಕೊಂಡು ಹೋಗುವಂತೆ ಅವನು ಊರಿನಲ್ಲಿರುವ ಜನರ ಆಭರಣಗಳನ್ನು ಮಾಡಿಕೊಡುವೆನೆಂದು ಸುಳ್ಳು ಹೇಳಿ, ಜನರ ಆಭರಣಗಳನ್ನೇ ನುಂಗಿ ನೀರು ಕುಡಿಯುವನು. ಅಲ್ಲದೆ ರಾಕ್ಷಸನಾಗಿ ಜನರ ಪ್ರಾಣವನ್ನೇ ಹಿಂಡುವನು.

ಈ ಅಕ್ಕಸಾಲಿಗ ಕಸುಬಿನಲ್ಲಿ ಕೆಲವರು ಕೀಳುಮಟ್ಟದ ಅಕ್ಕಸಾಲಿಗರು ಅದ್ಭುತವಾದ ರೀತಿಯಲ್ಲಿ ಜನರನ್ನು ಮೋಸ, ವಂಚನೆಗಳಿಂದ ಮನಸ್ಸನ್ನು ನೋಯಿಸುತ್ತಿದ್ದರೆಂದು ಹಾಗೂ ''ಅಕ್ಕಸಾಲಿಗನ ಭಕ್ತಿ ಅಗ್ಗಿಷ್ಟಿಗೆಯಲ್ಲಿ ಹೋಯಿತ್ತು''ಎಂಬ ವಚನ ಗಾದೆಯೊಂದು ಚನ್ನಬಸವಣ್ಣನ ವಚನದಿಂದ ತಿಳಿದುಬರುತ್ತದೆ. ಅಕ್ಕಸಾಲಿಗನಿಗೆ ಆಭರಣ ತಯಾರಿಸಬೇಕೆಂದರೆ ಮೂಲ ಧಾತುವಾದ 'ಹೊನ್ನು' ಅತ್ಯವಶ್ಯಕವಾಗಿ ರುತ್ತದೆ. ''ಆಭರಣವನ್ನು ಬೇಕಾದ ಆಕೃತಿಗೆ ತರುವ ಮೊದಲು ಅದನ್ನು ಚೆನ್ನಾಗಿ ಕರಗಿಸಬೇಕು. ಇಲ್ಲವೆ ಜೀರ್ಣಗೊಳಿಸಬೇಕು. ಅಂತೆಯೇ 'ಅಕ್ಕಿಸು'ಎಂಬ ಧಾತುವಿನಿಂದ ಅರಗಿಸು, ಕರಗಿಸು, ಜೀರ್ಣಗೊಳಿಸು ಎಂಬ ಅರ್ಥಗಳು ಬಿಚ್ಚಿಕೊಳ್ಳುತ್ತವೆ. ''ನಿಜವಾಗಿ ಅಕ್ಕಸಾಲಿ ಅಕ್ಕನ ಬಂಗಾರವನ್ನೂ ಕದಿಯದೇ ಬಿಡನು'' ಎಂಬ ಜನಪದ ಗಾದೆ ಇವನ ವ್ಯವಹಾರ ಚತುರತೆಯನ್ನು ಹೇಳುತ್ತದೆ.

ಬೂದಿಯೊಳು ಹುದುಗಿಸುತ । ವೇಧಿಸುತ ಮರೆಮಾಡಿ
ಕಾದಿರ್ದ ಚಿನ್ನದೊಳು ಬೆರೆಸಿ ಒರೆ ಹಚ್ಚಿ ।
ಊದುತಲಿ ಟೊಣೆವ ಸರ್ವಜ್ಞ ॥

ಕಡುಗಾಸಿ ಚಿಮ್ಮಾಡಿ । ಕುಡಿ ಮಗುಚಿ ಕತ್ತರಿಸಿ
ಪೊಡೆವೆಡೆಗಳೊಳಗೆ ಸಿಡಿಸಿದನು ಸಂವಳಿಸೆ ।
ಪಡೆವ ಪ್ರತಿವೆರಸಿ ಸರ್ವಜ್ಞ ॥

ನೆವದೊಳೆಡೆಯಾಡಿಸುತ । ತವೆ ಸಖನ ನುಡಿಯಿಸುತ
ಕವಿದಿರಲು ಬಗೆದ ಚಿನ್ನವನು ಪ್ರತಿವೆರಸಿ
ತವಕದಲಿ ತೆಗೆವ ಸರ್ವಜ್ಞ ॥

ಬಂಗಾರವನ್ನು ಕದಿಯುವುದರಲ್ಲಿ ಅತೀ ನಿಪುಣನೆಂದು ಸರ್ವಜ್ಞ ಇಲ್ಲಿ ಒತ್ತಿ ಹೇಳಿದ್ದಾನೆ. ಅವನ ಈ ತಂತ್ರಗಾರಿಕೆ ಹುಟ್ಟಿನಿಂದಲೇ ರಕ್ತಗತವಾಗಿ ಬೆಳೆದುಬಂದಿರುತ್ತದೆ. ಅವನ ಬಂಗಾರ ಕದಿಯುವ ಕೆಲಸ ವನ್ನು ತುಂಬಾ ಸುಲಭವಾಗಿ ಮಾಡಿಬಿಡುವನು. ಹೇಗೆಂದರೆ, ಬಂಗಾರದಿಂದ ಆಭರಣ ತಯಾರಿಸು ವಾಗ, ಅದರ ತುಂಡುಗಳನ್ನು ಕರಗಿಸುವಾಗ ಅಥವಾ ಬಿಸಿ ಮಾಡುವಾಗ ಆ ಬೂದಿಯಲ್ಲಿ ಮುಚ್ಚಿಡುವನು. ಆಭರಣ ಸಿದ್ಧಪಡಿಸುವಾಗ ಅತಿಯಾದ ಕುಶಲತೆ ತೋರಿಸುವಲ್ಲಿ ಅಥವಾ ಸುಂದರ ಆಕಾರ ನಿರ್ಮಿಸುವ ನೆಪದಲ್ಲಿ ತೂತು ಕೊರೆಯುತ್ತಾ ಕದಿಯುವನು. ಕಾದ ರಸವಾದ ಬಂಗಾರದಲ್ಲಿ ಕೂಡಿಸಿಬಿಡುವನು, ಒರೆಹಚ್ಚಿ ನೋಡುವ ನೆವದಿಂದಲೂ ಹಾಗೂ ಊದುವ ನೆವದಿಂದಲೂ ಬಂಗಾರವನ್ನು ಕದಿಯದೇ ಇರಲಾರನು.

ಇಷ್ಟೇ ಅಲ್ಲ ಅವನು ಚಿಮ್ಮಟಿಗೆಯಿಂದ ಬಂಗಾರವನ್ನು ಹಿಡಿದು ಕಾಸಿ, ಹೆಚ್ಚಾದ ಬಂಗಾರ ವನ್ನು ಕತ್ತರಿಸಿ, ತುಂಡು ಮಾಡಿ, ಚೆನ್ನಾಗಿ ಮೇಲಿಂದ ಮೇಲೆ ಬಡಿದು ಆಕಾರವನ್ನೆಲ್ಲಾ ಬದಲು ಮಾಡುವ ತಂತ್ರಗಳೆಲ್ಲಾ ಇತರರಿಗೆ ಗೊತ್ತಾಗದ ಹಾಗೆ ಪರಿಷ್ಕರಿಸುವನು. ಕಳ್ಳತನದಲ್ಲಿ ಈ ಅಕ್ಕಸಾಲಿಗನಷ್ಟೇ ಅವನ ಮಗನೂ ಜಾಣನೆ;

ಅಕ್ಕಸಾಲೆಯ ಮಗುವು ಚಿಕ್ಕದೆಂದೆನ ಬೇಡ
ಚಿಕ್ಕಟವು ಮೈಯ ಕಡಿದಂತೆ ಚಿಮ್ಮುಟವ
ನಿಕ್ಕುತಲೆ ಕಳುವ ಸರ್ವಜ್ಞ.

ಅಕ್ಕಸಾಲಿಯ ಮಗನು ಇನ್ನೂ ಸಣ್ಣವನೆಂದು ಹೇಳುವಂತಿಲ್ಲ. ಸಣ್ಣ ಸೊಳ್ಳೆ ಬಹಳ ಸೂಕ್ಷ್ಮವಾಗಿ ರಕ್ತವನ್ನು ಹೀರುವಂತೆ ಒಂದು ಸಣ್ಣ ಚಿಮ್ಮುಟಿಗೆಯನ್ನು ಮುಟ್ಟುತ್ತಲೇ ಅದರಿಂದ ಕಳುವು ಮಾಡುವ ಪ್ರಕ್ರಿಯೆಯನ್ನು ರೂಢಿಸಿಕೊಳ್ಳುವನೆಂದು ಸರ್ವಜ್ಞನು ಅಕ್ಕಸಾಲಿಗನ ವಂಶವನ್ನೇ ಜಾಲಾಡಿದ್ದಾನೆ.

ಸಂಚಕವನೀಯದಲೆ। ಲಂಚಕರ ಹೊಗಿಸದಲೆ
ಅಂಚಿತವನೊದರಿ ಕಳುಹಿದರೆ ಅಕ್ಕಸಾಲೆ।
ವಂಚಿಸಲಿ ಕರಿಯ ಸರ್ವಜ್ಞ.

ಹಣವಿಗೊಂದೀ ಸವಿ। ಪ್ರಣಕೊಂದು ಬೇಳೆಯನು
ತ್ರಿಣಯನಾ ಮಕುಟವಾದರೂ ಅಕ್ಕಸಾಲೆ
ಟೊಣೆಯದೇ ಬಿಡನು ಸರ್ವಜ್ಞ.

ಸರಿಯಾದ ಸಮಯಕ್ಕೆ ಜನರ ಆಭರಣಗಳನ್ನು ಮಾಡಿಕೊಡದೇ, ಬರೀ ವಂಚನೆಯ ಮಾತುಗಳಲ್ಲಿ ಕಾಲ ನೂಕುವ ಅಕ್ಕಸಾಲಿಗನ ಬಗೆಗೆ ಸರ್ವಜ್ಞ ಬಹಳ ನಿಷ್ಠುರವಾಗಿ ಹೇಳಿದ್ದಾನೆ. ಅಕ್ಕಸಾಲಿಗನಿಗೆ ಮುಂಗಡ ಹಣವಾಗಲಿ ಅಥವಾ ಹೆಚ್ಚಿನ ಹಣ ನೀಡಿದಾಗ್ಯೂ ಬಂಗಾರದ ಕಳ್ಳತನವನ್ನು ಮಾತ್ರ ಬಿಡಲಾರ. ಅದು ಅವನ ಜೀವನಕ್ಕೆ ಅಂಟಿಕೊಂಡಿರುತ್ತದೆಂಬಂತೆಯೇ ಸರ್ವಜ್ಞ ಗುರುತಿಸಿದ್ದಾನೆ.

ಅವನು ಸಾಕ್ಷಾತ್ ಶಿವನೇ ಬಂದು ಪ್ರತ್ಯಕ್ಷವಾದರೂ, ಶಿವನ ಮುಕುಟದಲ್ಲಿರುವ ಬಂಗಾರವನ್ನೂ ಸಹ ಕದಿಯದೇ ಇರಲಾರನೆಂಬ ಆತನ ಅನಿಷ್ಠ ವಂಚನೆಯನ್ನು ಸರ್ವಜ್ಞ ಬಲ್ಲ. ಜನರ ಬಂಗಾರವನ್ನು ಕದಿಯುವುದು ಹಾಗೂ ಸುಳ್ಳು ಹೇಳುವುದು ಅಕ್ಕಸಾಲಿಗನ ದೌರ್ಬಲ್ಯವಾಗಿರಬಹುದು.

ಅವನು ಜನರನ್ನು ವಂಚಿಸುವುದಕ್ಕೆ ಮೂರು ಕಾರಣಗಳಿರಬಹುದಾಗಿದೆ. ಒಂದು ಪರರ ವಸ್ತುಗಳನ್ನು ಕದಿಯುವುದು. ಇನ್ನೊಂದು ಮಾಡಬೇಕಾದ ಕೆಲಸದಲ್ಲಿ ಮೈಗಳ್ಳತನ ತೋರುವುದು. ಅದಕ್ಕೆ ಕೆಲಸದ ಒತ್ತಡವೂ ಆಗಿರಬಹುದು.ಇಂತಹ ಕಾರಣಗಳಿಂದ ಸುಳ್ಳನ್ನು ಹೇಳುತ್ತಾ ಮೋಸಗೊಳಿಸುತ್ತಿರಬಹುದಾಗಿದೆ.

ಹುಸಿಯ ಪೇಳ್ವದರಿಂದ ಹಸಿದು ಸಾವುದು ಲೇಸು
ಹುಸಿದು ಮೆರೆಯುವನ ಬದುಕಿಂದ ಹಂದಿಯ
ಇಸಿಯು ಲೇಸೆಂದ ಸರ್ವಜ್ಞ.

''ಯಾವುದೋ ಒಂದು ಸ್ವಾರ್ಥ ಪ್ರಯೋಜನಕ್ಕಾಗಿ, ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಅಕ್ಕಸಾಲಿಗ ಸುಳ್ಳು, ವಂಚನೆ ಅಥವಾ ಕಳ್ಳತನ ಮಾಡುವುದಕ್ಕಿಂತಲೂ ಅವನು ಹಸಿದು ಸಾಯುವುದೇ ಲೇಸು ಎಂದು ಹೇಳುತ್ತಾನೆ. ಮುಂದುವರೆದು, ಸುಳ್ಳು ಹೇಳುತ್ತಾ ಮೆರೆಯುವ ಬದುಕು ಹಂದಿಯ ಇಸಿಯಂತೆ ನಿಕೃಷ್ಟವೂ, ಹೇಯವೂ ಆಗಿ ಪರಿಣಮಿಸುತ್ತದೆ''(ಸರ್ವಜ್ಞ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು.೧೧೧)ಎಂದು ಸರ್ವಜ್ಞ ಎಗ್ಗಿಲ್ಲದೆ ಹೀಗಳೆದಿದ್ದಾನೆ.

ಒಟ್ಟಾರೆ ಅಕ್ಕಸಾಲಿಗನಂತಹ ವಂಚನೆ ಮಾಡುವ ಸಮಾಜ ಘಾತುಕರು ತಮಗರಿವಿಲ್ಲದೇ ಸ್ವವಿನಾಶಕ್ಕೆ ಒಳಗಾಗುವುದು ಖಂಡಿತ ಎಂದು ಸರ್ವಜ್ಞನ ವಚನಗಳಿಂದ ತಿಳಿದುಬರುತ್ತದೆ. ಈಗಲೂ ಜಾನಪದರಲ್ಲಿ ಸುಳ್ಳು, ವಂಚನೆಗಳು ವಿರಳವೆನ್ನಬಹುದು. ಅವರ ಮಾತುಗಳಲ್ಲಿಯೇ ಹೇಳುವುದಾದರೆ, ''ಮನುಷ್ಯ ಹಿಂದೆ ಪಡೆದದ್ದನ್ನು ಉಣ್ಣುತ್ತಾನೆಯೇ ಹೊರತು ದುಡಿದದ್ದು ಅಲ್ಲ. ಒಂದು ವೇಳೆ ದುಡಿದದ್ದೇ ಉಣ್ಣುವುದು ಕಷ್ಟವಾಗಿರುವಾಗ ಕದ್ದಿರುವುದು ಉಣ್ಣಲಾಗುತ್ತದೆಯೇ ?'' ಎನ್ನುವಂತೆ ಆದಕ್ಕೊಂದು ಪರಿಮಿತಿ ಇದ್ದೇ ಇರುತ್ತದೆ.

ಕಳ್ಳನೂ ಒಳ್ಳಿದನು ಎಲ್ಲ ಜಾತಿಯೊಳಿಹರು
ಕಳ್ಳನೊಂದೆಡೆಗೆ ಉಪಕಾರಿ ಪಂಚಾಳ
ನೆಲ್ಲರಿಗೆ ಕಳ್ಳ ಸರ್ವಜ್ಞ.

ಪಂಚಾಳರೈಯ್ವರುಂ ವಂಚನೆಗೆ ಗುರುಗಳೇ
ಕಿಂಚಿತ್ತು ನಂಬಿ ಕೆಡಬೇಡ ತಿಗುಣೆಯಾ
ಮಂಚದಂತಿಹರು ಸರ್ವಜ್ಞ.

ಎಲ್ಲ ಜಾತಿಗಳಲ್ಲೂ ಕಳ್ಳತನ ಮಾಡುವವರು, ಸುಳ್ಳು ಹೇಳುವವರು ಇರುತ್ತಾರೆ. ಕಳ್ಳನಾದವನು ಕೆಲವೊಮ್ಮೆ ಪಶ್ಚಾತಾಪದಿಂದಲ್ಲಾದರೂ ತನ್ನ ತಪ್ಪನ್ನು ಒಪ್ಪಿಕೊಂಡು ಸರಿದಾರಿಯನ್ನು ಹಿಡಿಯಬಹುದು. ಆದರೆ ಈ ಅಕ್ಕಸಾಲಿಗನು ಆ ಕಳ್ಳನಿಗಿಂತಲೂ ಬಲುಗಳ್ಳನಾಗಿರುತ್ತಾನೆ. ಕಳ್ಳನಾದವನು ಚಾಪೆಯ ಕೆಳಗೆ ತೂರಲು ಯತ್ನಿಸಿ ತನ್ನ ಚಾಣಾಕ್ಷತನವನ್ನು ಸಮಾಜದಲ್ಲಿ ತೋರ್ಪಡಿಸಿದರೆ, ಈ ಅಕ್ಕಸಾಲಿಗ ಅವನಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ, ರಂಗೋಲಿ ಅಡಿಯಲ್ಲಿ ತೂರಿಕೊಳ್ಳುವ ಸ್ವಭಾವವನ್ನು ಪ್ರದರ್ಶಿಸುವನು. ಆದ್ದರಿಂದ ಸರ್ವಜ್ಞ ಈ ಅಕ್ಕಸಾಲಿಗ ಎಲ್ಲರಿಗಿಂತಲೂ ಮಹಾಕಳ್ಳನೆಂದು ಹೇಳಿದ್ದಾನೆ.

ಇನ್ನೊಂದು ವಚನದಲ್ಲಿ, ಅಕ್ಕಸಾಲಿಗನು ಮಂಚದಲ್ಲಿ ಅಡಗಿದ ತಗಣೆಯಂತೆ ಎಂದು ಹೇಳಲಾಗಿದೆ. ಅವನನ್ನು ನಂಬುವುದೆಂದರೆ, ''ಬಣ್ಣದ ಬಿದಿರಿನ ತಡಿಕೆಯನ್ನು ನಂಬಿ ಸುಣ್ಣದ ಗೋಡೆಯನ್ನು ಕೆಡವಿದಂತೆಯೇ'' ಆಗುತ್ತದೆ.

ಸಾಲಿಗನು ಮೇಣಕ್ಕ ಸಾಲೆಯಲಿ ನಂಬಿಕೆಯು
ಜಾಲಗಾರನಲಿ ದಯೆ-ಧರ್ಮ ಮುನ್ನಾವ
ಕಾಲಕ್ಕೂ ಇಲ್ಲ ಸರ್ವಜ್ಞ.

ಸಾಲ ಕೊಡುವವನಲ್ಲಿ ಮೃಧು ಹೃದಯ, ಮೀನು ಹಿಡಿದು ತಿಂಬುವವನಲ್ಲಿ ದಯೆ-ಧರ್ಮಗಳು ಎಂದೆಂದಿಗೂ ಇರಲಾರವು. ಆದರಂತೆ ಅಕ್ಕಸಾಲಿಗನಲ್ಲಿ ನಂಬಿಕೆ ಎನ್ನುವುದು ಖಂಡಿತ ಇರಲಾರದು. ಆದ್ದರಿಂದ ಅವರನ್ನು ನಂಬಲೂ ಬಾರದೆಂದು ಸರ್ವಜ್ಞ ತುಂಬಾ ಮಾರ್ಮಿಕವಾಗಿ ತಿಳಿಸಿದ್ದಾನೆ.

''ಅಕ್ಕಸಾಲಿಗ ಅಕ್ಕನ ಬಂಗಾರವನ್ನೂ ಕದಿಯದೆ ಬಿಡ'' ಎಂಬ ಜನಪದರ ಗಾದೆಯ ಸಂದರ್ಭವೊಂದು ಹೀಗಿದೆ; ಅಕ್ಕಸಾಲೆಯ ಮಗ, ಅಕ್ಕಸಾಲಿಯಲ್ಲಿ, ಅಕ್ಕನ ಬಂಗಾರದಲ್ಲಿ ಒಡವೆ ಮಾಡುತ್ತಿರುತ್ತಾನೆ. 'ಅಕ್ಕ' ಎಂಬ ಸಂಬಂಧದ ಕಾರಣದಿಂದ,ಅವಳ ಬಂಗಾರವನ್ನು ಆತ ಕದಿಯದೇ ಇರಬಹುದು ಎಂಬ ಅನುಮಾನದಿಂದ ಮನೆಯ ಒಳಗಡೆಯಿರುವ ಆತನ ತಂದೆ 'ಕದಿ' ಎಂಬುದನ್ನು 'ರಾಮಾ, ರಾಮಾ' ಎಂಬ ಕೂಗುವಿಕೆಯ ಮೂಲಕ ಸೂಚಿಸುತ್ತಾನೆ. ಆದರೆ, ಈ ವೃತ್ತಿಯಲ್ಲಿ ಮಗ ತಂದೆಯನ್ನು ಮೀರಿಸುವ ಚಾಣಾಕ್ಷನು. 'ರಾಮನ ಹೆಂಡತಿ ಸೀತೆಯನ್ನು, ರಾವಣ ಆಗಲೇ ಕದ್ದೊಯ್ದ' ಎಂದು ಹೇಳಿ ತಂದೆಯ ಅನುಮಾನವನ್ನು ನಿವಾರಿಸುತ್ತಾನೆ.

ಅಕ್ಕಸಾಲಿಯ ವಂಚಕ ವೃತ್ತಿಯನ್ನು ಸಂಕೇತಿಸುವ ಈ ಮೇಲಿನ ಗಾದೆ ಅದೆಷ್ಟು ನೈಜವಾಗಿ, ಧ್ವನಿಪೂರ್ಣವಾಗಿ ಮೂಡಿಬಂದಿದೆ. ಅಕ್ಕಸಾಲಿ ಚಿನ್ನವನ್ನು ಸುತ್ತಿಗೆಯಿಂದ ಬಡಿವಾಗ 'ಕೊಟ್ಟೋನ್ ಕೆಟ್ಟ, ಕೊಟ್ಟೋನ್ ಕೆಟ್ಟ, ಕುಟ್ಟಾ, ಕುಟ್ಟ, ಕೊಟ್ಟೋನ್ ಕೆಟ್ಟ' - ಎಂಬ ಧ್ವನಿ ಹೊರಡುತ್ತದೆಯಂತೆ. ಇದು ಕೂಡ ಸಾಂಕೇತಿಕವಾಗಿ ಆತನ ಮನೋಧರ್ಮವನ್ನು ಲೇವಡಿ ಮಾಡಿದೆ.

## ೪.೬. ಗಾಣಿಗ :

ಕುಸುಬಿ, ಎಳ್ಳು, ಸೇಂಗಾ ಮೊದಲಾದ ಧಾನ್ಯಗಳನ್ನು ಗಾಣಕ್ಕೆ ಹಾಕಿ, ಎಣ್ಣೆ ತೆಗೆಯುವ ಕಾಯಕದವರಿಗೆ ಗಾಣಿಗ ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಎತ್ತಿನ ಗಾಣದಿಂದ ಎಣ್ಣೆ ತೆಗೆಯುವ ವಿಧಾನ ಇತ್ತು. ಗಾಣ ತಿರುಗಿಸಲು ಎತ್ತುಗಳನ್ನು ಬಳಸಿಕೊಳ್ಳುತ್ತಿದ್ದರು. ಇದನ್ನು 'ಗಾಣದ ಎತ್ತು' ಎಂದು ಶರಣರ ವಚನಗಳಲ್ಲಿ ಉಲ್ಲೇಖವಾಗಿದೆ. ಊರಿನ ರೈತರು ತಾವು ಬೆಳೆದ ಎಳ್ಳನ್ನು ಗಾಣಿಗನಿಗೆ ಕೊಟ್ಟು, ಅವನಿಂದ ಎಣ್ಣೆಯನ್ನು ಪಡೆದು ಮತ್ತೆ ಪ್ರತಿಯಾಗಿ ಎಳ್ಳನ್ನೇ ಹಣದ ರೂಪದಲ್ಲಿ ಕೊಡುತ್ತಿದ್ದರು. ಎತ್ತಿನಿಂದ ಗಾಣವಾಡಿಸಿ, ಎಣ್ಣೆ ಉತ್ಪಾದಿಸುವ ಕಾಯಕದಲ್ಲಿ ಬಹಳ ನಿಪುಣರಾಗಿದ್ದ ಅಂಥವರನ್ನು ಕಂಡಿರುವ ಸರ್ವಜ್ಞ;

ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ
ಕಳ್ಳರನು ಬಲ್ಲ ತಳವಾರ ಬಣಜಿಗ
ಎಲ್ಲವನ್ನೂ ಬಲ್ಲ ಸರ್ವಜ್ಞ.

ವ್ಯವಹಾರದಲ್ಲಿ ಬರುವ ಮೋಸ, ವಂಚನೆ, ನಯಗಾರಿಕೆ ಮೊದಲಾದ ಗುಣಗಳನ್ನು ಬಣಜಿಗನಾದವನಿಗೆ ತಿಳಿದಿರುತ್ತದೆ. ಇಡೀ ಗ್ರಾಮವನ್ನು ಕಾಯುವ ತಳವಾರನಿಗೆ ಕಳ್ಳರ ಸ್ವಭಾವಗಳು ಕರತಲಾಮಲಕವಾಗಿರುತ್ತವೆ. ಇನ್ನು ಬಟ್ಟೆ ಹೊಲೆದು ಕೊಡುವ ಸಿಂಪಿಗನಂತೂ ಆಗ ಬಾ, ಹೋಗಿ ಬಾ ಎಂದು ಸುಳ್ಳು ಹೇಳಿ ಗಿರಾಕಿಗಳನ್ನು ಸತಾಯಿಸುವುದುಂಟು. ಅದೇ ರೀತಿ ಎಂಥಹ ಎಳ್ಳಿನಿಂದ ಉತ್ತಮ ವಾದ ಎಣ್ಣೆಯನ್ನು ಉತ್ಪಾದಿಸಬಹುದೆಂಬ ಚಮತ್ಕಾರದ ಸ್ವಭಾವ ಗಾಣಿಗನಿಗಷ್ಟೇ ಹೆಚ್ಚು ಗೊತ್ತಿರುತ್ತದೆಂಬ ವಿಷಯವನ್ನು ತಿಳಿಸುವ ಸಂದರ್ಭದಲ್ಲಿ ಸರ್ವಜ್ಞ ಇತರೇ ಉಪಮೆಗಳನ್ನು ನೀಡುತ್ತಾನೆ.

ಆನೆಗಂದಳವೇಕೆ ಸೋನಂಗೆ ಸೊಬಗೇಕೆ
ಗಾಣವಾಡುವಗೆ ಮಡಿಯೇಕೆ ಮರುಳಂಗೆ
ಆನಂದವೇಕೆ ಸರ್ವಜ್ಞ.

ಪಲ್ಲಕ್ಕಿಯಲ್ಲಿ ದೇವರನ್ನಿಟ್ಟುಕೊಂಡು ಮೆರವಣಿಗೆ ಮಾಡುತ್ತಾರೆಯೇ ಹೊರತು, ಪಲ್ಲಕ್ಕಿಯನ್ನು ಹೊತ್ತ ಆನೆಯನ್ನಲ್ಲ. ಅದಕ್ಕಾಗಿ ಆನೆಗೆ ಪಲ್ಲಕ್ಕಿಯ ಅರಿವಿರುವುದಿಲ್ಲ. ಅದೇರೀತಿ 'ನಾಯಿ ಬಾಲ ಸದಾ ಡೊಂಕು' ಎಂಬಂತೆ ನಾಯಿಯನ್ನು ಬಹಳ ಪ್ರೀತಿಯಿಂದ ಎತ್ತಿಕೊಂಡು ಬಂದು ಸಿಂಹಾಸನದ ಮೇಲೆ ಕೂಡಿಸಿದರೂ ಅದು ಹೇಸಿಗೆ ಕಂಡ ತಕ್ಷಣ ಜಿಗಿಯುತ್ತದೆ. ಆದ್ದರಿಂದ ನಾಯಿಗೆ ಸೊಬಗುತನ ಬೇಡ. ಹಾಗೆಯೇ ಗಾಣಿಗನಾದವನಿಗೆ ತನ್ನದೇ ವೃತ್ತಿಯಲ್ಲಿ ನಿರತನಾಗಿರುವಾಗ ಹಗಲುರಾತ್ರಿಗಳು ಗೊತ್ತಾಗುವುದಿಲ್ಲ ಹಾಗೂ ಗಾಣಿಗನಿಗೆ ಮಡಿಮೈಲಿಗೆಗಳ ಪರಿವೆಯೇ ಇರುವುದಿಲ್ಲ.

ಅಂದಿನ ಕಾಲದಲ್ಲಿದ್ದ ಗಾಣಿಗನಿಗೆ ಸಂಬಂಧಿಸಿದಂತೆ 'ಗಾಣಿಗನ ಮೇಲೆ ಸಿಟ್ಟಾಗಿ ಒಣ ರೊಟ್ಟಿ ತಿಂದಂತೆ' ಎಂಬ ಗಾದೆ ನೆನಪಿಗೆ ಬರುತ್ತದೆ. ಅಂದರೆ ಸಮಯಕ್ಕೆ ಸರಿಯಾಗಿ ಅವನು ರೈತರಿಗೆ ಎಣ್ಣೆಯನ್ನು ಉತ್ಪಾದಿಸಿಕೊಡುತ್ತಿರಲಿಲ್ಲವೆಂದೆನಿಸುತ್ತದೆ. ಎಣ್ಣೆ ಬರುವಾಗ ಗಾಣ ಮುರಿಯಿತು ಅಥವಾ ಎತ್ತಿಗೆ ಸುಸ್ತಾಯಿತು ಹೀಗೆ ಒಟ್ಟಾರೆ ತನ್ನ ಮಂದಗತಿಯ ಕೆಲಸದಿಂದ ಮತ್ತೊಬ್ಬರಿಗೆ ಆತ ಕೋಪ ತರಿಸಿರಲೂ ಬಹುದು.

ಕೆಲವೊಮ್ಮೆ ಎಳ್ಳು ಕೊಟ್ಟವರು ಏನೂ ಮಾಡದೆ, ತಾಳ್ಮೆ ತಂದುಕೊಂಡು ಬಂದಿರುವ ಕೋಪವನ್ನು ಹತ್ತಿಟ್ಟುಕೊಳ್ಳದೆ ಬೇರೆ ಪ್ರಯೋಜನವಿರುತ್ತಿರಲಿಲ್ಲ. ಇಂತಹ ಸಂದರ್ಭದ ಫಲವನ್ನು ಗಾಣಿಗ 'ಗಾಳಿ ಬಿಟ್ಟಾಗ ತೂರಿಕೋ' ಎಂಬ ಗಾದೆಯಂತೆ ಅವಕಾಶ ಪಡೆದುಕೊಂಡಿರಬಹುದು. ಇಂತಹ ಗಾಣಿಗನನ್ನು ನೋಡಿರುವ ಸರ್ವಜ್ಞ ಬಹಳ ಕೋಪದಿಂದ;

ಗಾಣಿಗನ ಒಡನಾಟ ಕೋಣನಾ ಬೇಸಾಯ
ಕ್ಷೀಣಿಸುವ ಕುತ್ತ ಸಮರ ಕ್ಷಾಮಗಳಿಂದ
ಪ್ರಾಣವದು ಘಾಸಿ ಸರ್ವಜ್ಞ.

ಎಂದಿದ್ದಾನೆ. ಸರ್ವಜ್ಞನಿದ್ದ ಕಾಲ ಯುದ್ಧ, ಭಯಗಳಿಂದ ತುಂಬಿದುದಾಗಿತ್ತು. ಏಕೆಂದರೆ ಆತ ಗಾಣಿಗನ ಬಗೆಗೆ ಹೇಳುವಾಗ ಯುದ್ಧದ ವಿಷಯಕ್ಕೆ ಹೋಲಿಸಲೆತ್ನಿಸಿದ್ದಾನೆ. ಬರೀ ಯುದ್ಧಗಳೇ ನಡೆದರೆ, ಎಲ್ಲವೂ ಹಾನಿಯಾಗುತ್ತದೆಯಲ್ಲದೆ, ಪ್ರತಿಯೊಬ್ಬರಿಗೆ ರೋಗ ಬರುವುದುಂಟು ಹಾಗೂ ಕೊನೆಗೆ ಪ್ರಾಣವೂ ಹಾರಿ ಹೋಗುವುದುಂಟು.

ಯುದ್ಧದಿಂದಾಗುವ ಲಾಭಗಳಿಗಿಂತ ಕೆಡಕುಗಳೇ ಹೆಚ್ಚಾಗುವಂತೆ ಹೊಲವನ್ನುಳುವ ಸಂದರ್ಭದಲ್ಲಿ ಕೋಣಕ್ಕೆ ನೇಗಿಲು ಹೋರಿಸಿದರೆ, ರಂಟೆ,ಕುಂಟೆ ಹೊಡೆಯಲು ಸಾಧ್ಯವಿಲ್ಲ. ಆ ರೀತಿ ಕೋಣನೊಡನೆ ಬೇಸಾಯ ಮಾಡುವುದು ಅಭಾಸಕಾರಿಯಾದಂತೆ ಗಾಣಿಗನಲ್ಲಿನ ಒಡನಾಟದ ಕ್ರಿಯೆಯು ಎಂದಿಗೂ ಸರಿಯಲ್ಲವೆಂದು ತಿಳಿಸಿದ್ದಾನೆ.

ಅಂದು ಸರ್ವಜ್ಞನು ಗಾಣಿಗನೊಬ್ಬನಲ್ಲಿ ಎಣ್ಣೆ ಬೇಡಲು ಹೋಗಿರಲೂಬಹುದು. ಅವನು ಕೊಡುವುದಿಲ್ಲವೆಂದು ಕೋಪದಿಂದ ಬೈದು ಕಳುಹಿಸಿರಬಹುದು. ಇದಕ್ಕೆ ಪ್ರತಿಯಾಗಿ ಸರ್ವಜ್ಞ ಅವನ ಇಡೀ ಜನ್ಮವನ್ನೇ ಜಾಲಾಡಿದಂತೆ ಅವನ ಒಡನಾಟದಿಂದ ಏನೂ ಪ್ರಯೋಜನವಿಲ್ಲವೆಂದು ಹಿಂದಿನ ವಚನದಲ್ಲಿ ಉಲ್ಲೇಖಿಸಿದ್ದಾನೆ.

ಗಾಣಿಗನು ಈಶ್ವರನ ಕಾಣನೆಂಬುದು ಸಹಜ
ಏಣಾಂಕಧರನು ಧರೆಗಿಳಿಯಲವನಿಂದ
ಗಾಣವಾಡಿಸುವ ಸರ್ವಜ್ಞ.

ಗಾಣಿಗನಾದವನು ಎಷ್ಟೊಂದು ಮೂಢನಾಗಿರಬಹುದು ಅಥವಾ ತನ್ನ ಕಾಯಕದಲ್ಲಿ ನಿರತನಾಗಿ ಇತರರ ವ್ಯಕ್ತಿತ್ವ, ರೀತಿನೀತಿಗಳನ್ನೇ ಮರೆಯುವ ಸ್ಥಿತಿ ಅವನಲ್ಲುಂಟಾಗಿರುವುದೆಂಬುದಕ್ಕೆ ಮೇಲಿನ ವಚನವೇ ಸಾಕ್ಷಿಯಾಗಿದೆ.

ತಲೆಯಲ್ಲಿ ಚಂದ್ರನನ್ನು ಧರಿಸಿದ ಶಿವನೇ ತನ್ನ ನಂದಿಯನ್ನೇರಿ ಧರೆಗಿಳಿದು ಗಾಣಿಗನ ಮುಂದೆ ನಿಂತಾಗಲೂ, ಆ ಬಡ ಗಾಣಿಗ ಏನುತಾನೇ ಮಾಡಿಯಾನು ?. ಬಂದಿರುವಾತ ದೇವರೆಂಬ ನಂಬಿಕೆ ಬರುವುದಿಲ್ಲ. ಕಾರಣ ಗಾಣದಲ್ಲಿ ಸುತ್ತುವ ಆತನ ಎತ್ತು ಸತ್ತು ಹೋಗಿರಬಹುದು. ಇದರಿಂದ ತನ್ನ ಕಾಯಕಕ್ಕೆ ಅಡ್ಡಿಯಾಯಿತಲ್ಲವೆಂಬ ಚಿಂತೆಯಲ್ಲಿ ಮುಳುಗಿರಬಹುದು. ಈ ಸಂದರ್ಭದಲ್ಲಿ ಪ್ರತ್ಯಕ್ಷನಾದ ಶಿವನನ್ನು ಹಾಗೂ ಅವನೊಂದಿಗಿರುವ ಗಟ್ಟಿಮುಟ್ಟಾದ ಎತ್ತನ್ನು ನೋಡಿ, ಬೆರಗಾಗಿ ಆ ವ್ಯಕ್ತಿಯಿಂದಲೇ ತನ್ನ ಗಾಣದಲ್ಲಿ ಎತ್ತನ್ನು ಹೂಡಿಸಿ, ಗಾಣ ಆಡಿಸಿಕೊಳ್ಳಬೇಕೆಂಬ ಆಲೋಚನೆ ಹೊಳೆದಿರಬೇಕು.

ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು ?
ಎತ್ತು ಗಾಣವನು ಹೊತ್ತು ತಾ
ಸುತ್ತಿ ಬಂದಂತೆ ಸರ್ವಜ್ಞ.

ಯಾವುದೇ ಕೆಲಸದಲ್ಲಿ ನಿರತನಾದರೆ ಅದರಲ್ಲಿ ಶ್ರದ್ಧೆ ಎಂಬುದು ಇರಲೇಬೇಕು. ಶ್ರದ್ದೆ ಇಲ್ಲದಿರುವ ಕೆಲಸವೆಲ್ಲ 'ನೀರಿನಲ್ಲಿ ಹುಣಸೇ ಹಣ್ಣು ತೊಳೆದಂತೆ ವ್ಯರ್ಥವಾಗುವಂತೆ' ಇದಕ್ಕೆ ಸರ್ವಜ್ಞನು 'ಎತ್ತು ಗಾಣವನು ತಾ ಹೊತ್ತು ಸುತ್ತಿದಂತೆ' ಎಂಬುದಾಗಿ ಹೇಳಿದ್ದಾನೆ. ಆ ಬಡಪಾಯಿ ಎತ್ತುಗಳಿಗಾದರೂ ಏನು ಗೊತ್ತಿರುತ್ತದೆ ?. ಇದು ಮಹತ್ವದ ಕೆಲಸವೆಂಬುದರಿವಿರುವುದಿಲ್ಲ. ಹೀಗೆ ಇಲ್ಲಿ ಗಾಣಿಗನನ್ನು ಟೀಕಿಸುತ್ತಾ ಆತನ ಎತ್ತುಗಳನ್ನು ಸಹ ಶ್ರದ್ಧೆ ಇಲ್ಲದ ಕೆಲಸಕ್ಕೆ ಹೋಲಿಸಿದ್ದಾನೆ.

## ೪.೭. ಹರದ (ಬಣಜಿಗ) :

ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಯಾವುದಾದರೊಂದ ವ್ಯಾಪರವನ್ನು ಮನುಷ್ಯ ಮಾಡುತ್ತಾ ಬಂದಿರುವುದು ನಮಗೆಲ್ಲಾ ತಿಳಿದೇ ಇದೆ. ಈ ವ್ಯಾಪಾರವೆಂಬುದು ಲಾಭದಾಯಕವಾಗಿರಬೇಕಾದ ಕಸುಬಾಗಿರಬೇಕು. ಸ್ವಲ್ಪವೂ ಲಾಭವನ್ನು ಪಡೆಯದ ವ್ಯಾಪಾರ, ವ್ಯಾಪಾರವೆನ್ನಿಸಲಾರದು.

ಸಾಂಪ್ರದಾಯಕವಾಗಿ ವ್ಯಾಪಾರ ವೃತ್ತಿಯನ್ನು ಮಾಡುತ್ತಾ ಬಂದವರನ್ನು ಬಣಜಿಗ, ಹರದ ಅಥವಾ ವ್ಯಾಪಾರಿ ಎಂದು ಕರೆಯುವುದು ರೂಢಿಯಲ್ಲಿದೆ. ಸರ್ವಜ್ಞ ತನ್ನ ಕಾಲದಲ್ಲಿದ್ದ ವ್ಯಾಪಾರ ವಹಿವಾಟಿನ ವಿಷಯ ಕುರಿತಾಗಿ ತನ್ನ ವಚನಗಳಲ್ಲಿ ಸಿಡಿಲಿನಂತಹ ನುಡಿಗಳಿಂದ ಒತ್ತಿ ಹೇಳಿದ್ದಾನೆ. ಅಂದಿನ ಜನಜೀವನದಲ್ಲಿದ್ದ ಕೆಲವರ ವ್ಯಾಪಾರದ ವೈಚಿತ್ರ್ಯವನ್ನು ಕೆಲವು ಕಡೆ ಕಂಡರಿಸಿದ್ದಾನೆ. ವ್ಯಾಪಾರಕ್ಕೆ ಸಂಬಂಧಿಸಿದ ಎಲ್ಲ ಬಗೆಯ ವಿಷಯಗಳನ್ನು ಸರ್ವಜ್ಞ ಅರಿತುಕೊಂಡಿದ್ದನೆಂಬುದಕ್ಕೆ ಆತನ ವಚನಗಳೇ ಸಾಕ್ಷಿ. ವ್ಯಾಪಾರದಲ್ಲಿ ಕಂಡುಬರುವ ಲೋಪ-ದೋಷಗಳನ್ನು ಬಯಲಿಗೆಳೆದು ನುಡಿಯುವುದರ ಮೂಲಕ ತನ್ನ ಕಾಲದ ಸಮಾಜವನ್ನು ಟೀಕಿಸಿದ್ದಾನೆ.

ಹರದನಾ ಮಾತನ್ನು ಹಿರಿದು ನಂಬಲು ಬೇಡ
ಗರಗಸದೊಡನೆ ಮರ ಹೋರಿ ತನ್ನ ತಾ
ನಿರಿದುಕೊಂಡಂತೆ ಸರ್ವಜ್ಞ.

ಈ ವ್ಯಾಪಾರಿಯನ್ನೇನಾದರೂ ನಂಬಿದ್ದೇಯಾದರೆ ಗರಗಸದಿಂದ ಮರವನ್ನು ಕೊರೆಯಲು ಹೋಗಿ ತನ್ನನ್ನು ತಾನೇ ಇರಿದುಕೊಂಡಂತಾಗುತ್ತದೆಂದು ಸರ್ವಜ್ಞ ಎಚ್ಚರಿಕೆ ನೀಡಿದ್ದಾನೆ. 'ಬಣಜಿಗ ಬಿಡ, ಕೊಮಟಿಗ ಕೊಡ' ಎಂಬ ಜಾನಪದ ಗಾದೆಯೂ ಸಹ ವ್ಯಾಪಾರಿ ಎಷ್ಟೊಂದು ಬುದ್ಧಿ ವಂತನಿರ ಬಹುದೆಂಬುದನ್ನು ವ್ಯಕ್ತಪಡಿಸುತ್ತದೆ.

ಅಣಜಿ ಭತ್ತವೂ ಅಲ್ಲ, ಅಣಬೆ ಸತ್ತಿಗೆಯಲ್ಲ
ಕಣಕದ ಕಲ್ಲು ಮಣಿಯಲ್ಲ ಬಣಜಿಗನು
ಗುಣವಂತನಲ್ಲ ಸರ್ವಜ್ಞ.

ಗ್ರಾಮೀಣ ಕುಲ ಕಸುಬಿನಲ್ಲಿ ಈ ಬಣಜಿಗನ ಕಾಯಕ ಪ್ರಮುಖವಾದುದು. ಈ ಕಸುಬು ಕೆಲವು ಜನರ ಅನುವಂಶಿಕವಾಗಿರಬಹುದು. ಬಣಜಿಗನು ತನ್ನ ವ್ಯಾಪಾರದಲ್ಲಿ ನಿಪುಣನಾಗಿರುತ್ತಾನೆ. ಅಣಜಿ ಎಂದಿಗೂ ಭತ್ತವಾಗಿರಲಾರದು. ಮಳೆಗಾಲದಲ್ಲಿ ಹಸಿಯಾದ ನೆಲ ಅಥವಾ ಕಸದ ರಾಶಿಯಲ್ಲಿ ಕಂಡುಬರುವ ಈ ಅಣಬೆಗಳು ಛತ್ರಿಯಾಕಾರವನ್ನು ಪಡೆದುಕೊಂಡಿರುತ್ತವೆ. ಆದರೆ ಅವುಗಳನ್ನು ಛತ್ರಿಯಂತೆ ಬಳಕೆ ಮಾಡಲು ಬರುವುದಿಲ್ಲ. ಆದೇರೀತಿ ಕಣಕ ಅಂದರೆ ನೀರಿನಲ್ಲಿ ಕಲಿಸಿ ನಾದಿರುವ ಹಿಟ್ಟು. ಇದರಿಂದ ಮಾಡಿದ ಮಣಿಯನ್ನು ಕಲ್ಲಿನ ಮಣಿಯೆಂದು ಭಾವಿಸಲುಬಾರದು. ಹೀಗೆ ಬಣಜಿಗನಾದವನು ತನ್ನ ವೃತ್ತಿಯಿಂದ ಎಂದಿಗೂ ಒಳ್ಳೆಯವನಾಗಿರಲಾರನೆಂದು ಸರ್ವಜ್ಞ ಇತರೆ ಹೋಲಿಕೆಗಳ ಮೂಲಕ ತಿಳಿಸಿದ್ದಾನೆ.

''ಹೊಟ್ಟೆಯಾಸೆ ಬಡವಂಗೆ, ಹರದಂಗೆ ಪಟ್ಟಣದಾಸೆ'' ಎಂದು ಹೇಳುವ ಸರ್ವಜ್ಞ ಬಡವನಿಗೆ ಸದಾ ಹೊಟ್ಟೆ ತುಂಬಿಸಿಕೊಳ್ಳುವ ಚಿಂತೆ ಕಾಡಿದಂತೆ ಈ ವ್ಯಾಪಾರಿಯಾದವನಿಗೆ ಪಟ್ಟಣದಲ್ಲಿ ಹೆಚ್ಚಿನ ವ್ಯವಹಾರ ಕೈಗೊಳ್ಳಬೇಕೆಂಬ ಆಸೆಯಿರುತ್ತದೆ. ಕಾರಣ ಹಳ್ಳಿಯ ಜನಪದರು ಪಟ್ಟಣದ ವಾಸನೆಗೆ ಮರುಳಾಗಿ, ಅಲ್ಲಿಯ ವ್ಯವಹಾರಕ್ಕೆ ಕೈ ಹಾಕುವುದುಂಟು. ಹಳ್ಳಿಯಲ್ಲಾಗುವ ಮಂದಗತಿಯ ವ್ಯಾಪಾರ ಕ್ಕಿಂತ ಪಟ್ಟಣ ಸೇರಿ ದೊಡ್ಡ ವ್ಯಾಪಾರ ಕೈಗೊಂಡು ಹೆಚ್ಚಿನ ಲಾಭವನ್ನು ಸಂಪಾದಿಸಬಹುದೆಂಬ ಆಸೆ ಇರುವುದು ಸಹಜ. ಅದನ್ನೇ ಸರ್ವಜ್ಞ ;

........................
ಬೆಟ್ಟಗಳಾಸೆ ಮೃಗಗಳಿಗೆ, ಹರದಂಗೆ
ಇಟ್ಟೆಡೆಗಳಾಸೆ ಸರ್ವಜ್ಞ.

ದಟ್ಟವಾಗಿ ಬೆಳದು ನಿಂತು ಮರ-ಗಿಡಗಳು ಹಾಗೂ ಹುಲ್ಲು-ಪೊದೆಗಳಲ್ಲಿ ವಾಸ ಮಾಡುವುದೆಂದರೆ ಪ್ರಾಣಿಗಳಿಗೆ ಹೆಚ್ಚು ಸಂತೋಷ. ಅಂತಹ ದಟ್ಟಡವಿಯಲ್ಲಿ ಬೇಕಾದ ಆಹಾರಾದಿಗಳು ಹೇರಳವಾಗಿ ದೊರೆಯಲ್ಪಡುವುದರಿಂದಲೂ ಹಾಗೂ ನಿರಾತಂಕವಾಗಿ ವಾಸ ಮಾಡಲು ಪ್ರಾಣಿಗಳಿಗೆ ಹೆಚ್ಚು ಅವಕಾಶ ಇರುತ್ತದೆ. ಅದೇರೀತಿ ಮೋಸ, ಕಪಟದ ತಂತ್ರೋಪಾಯಗಳಿಂದ ಹೆಚ್ಚು ಲಾಭ ಗಳಿಸಬೇಕೆಂಬ ಆಸೆ ಹಾಗೂ ಹಂಬಲ ವ್ಯಾಪಾರಿಯದಾಗಿರುತ್ತದೆಂಬ ಅಭೀಪ್ಸೆಯನ್ನು ಸರ್ವಜ್ಞ ಬಯಲಿಗೆಳೆದಿದ್ದಾನೆ. ವ್ಯಾಪಾರವೆಂದರೇನೇ ಮೋಸದಿಂದ ಕೂಡಿರುತ್ತದೆ ಎಂದ ಧೋರಣೆ ಎಲ್ಲಾ ಕಾಲಕ್ಕೂ ಕಂಡು ಬರುತ್ತಿದೆ.

ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ
ಕಳ್ಳತನ ಬಲ್ಲ ತಳವಾರ ಬಣಜಿಗ
ಎಲ್ಲವನು ಬಲ್ಲ ಸರ್ವಜ್ಞ.

ವ್ಯವಹಾರವನ್ನು ಪ್ರಾಮಾಣಿಕತೆಯ ದೃಷ್ಟಿಯಿಂದ ನೋಡುವುದಾದರೆ, ಗಾಣಿಗನಿಗೆ ಎಳ್ಳು ಕೊಟ್ಟರೆ ಆ ಎಳ್ಳಿಗೆ 'ಎಳ್ಳು ನೀರು ಬಿಟ್ಟಂತೆಯೇ ಸರಿ'. ಸಿಂಪಿಗನು ಹೇಳಿದ ಸಮಯಕ್ಕೆ ಸರಿಯಾಗಿ ಬಟ್ಟೆಗಳನ್ನು ಹಿಂದಿರುಗಿಸಲಾರ. ಅಲ್ಲದೆ ತಳವಾರನಿಗೆ ಕಳ್ಳನ ಮನಸ್ಸನ್ನು ಅರಿತಿರುವುದರಿಂದ ಅವನಲ್ಲಿ ಸ್ವಲ್ಪ ಸಲುಗೆ ಇಟ್ಟುಕೊಂಡಿರುತ್ತಾನೆ. ಅದೇರೀತಿ ಈ ಬಣಜಿಗನು ಈ ಮೇಲಿನ ಎಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ, ಅನೇಕ ಮೋಸಗಾರಿಕೆಯ ತಂತ್ರಗಳನ್ನು ಹೊಂದಿರುತ್ತಾನೆಂದು ಸರ್ವಜ್ಞ ಹೇಳಿದ್ದಾನೆ. ಗಾಣಿಗನಾದವನು ಎಳ್ಳಿನ ಮಹತ್ವವನ್ನು ಅರಿತವನಾಗಿರುತ್ತಾನೆ. ಎಂತಹ ಎಳ್ಳಿನಿಂದ ಯಾವ ರೀತಿ, ಎಷ್ಟು ಪ್ರಮಾಣದಲ್ಲಿ, ಹೇಗೆ ಎಣ್ಣೆಯನ್ನು ತೆಗೆಯಬಹುದೆಂಬ ಅಂಶ ಗೊತ್ತಿರುತ್ತದೆ. 'ಕಳ್ಳರನ್ನು ನಂಬಬಹುದು. ಆದರೆ ಸುಳ್ಳರನ್ನು ಮಾತ್ರ ನಂಬಬಾರದು' ಎಂಬ ಮಾತಿನಂತೆ, ಸುಳ್ಳನ್ನೇ ಬಂಡವಾಳವಾಗಿಟ್ಟುಕೊಂಡು ಅನೇಕ ರೀತಿಯ ವೃತ್ತಿಗಳನ್ನು ಕೈಗೊಂಡ ಬಣಜಿಗನ ಮಾತುಗಳು ಬೆಣ್ಣೆಯಲ್ಲಿ ಕೂದಲನ್ನು ತೆಗೆದಂತಿರುತ್ತವೆ.

ಒಂದು ಸುಳ್ಳಿಗೆ ಮತ್ತೊಂದನ್ನು ಸೇರಿಸಿ, ದಾರವನ್ನು ಹೆಣೆಯುತ್ತಾ ಹೋಗುವ ಈ ಬಣಜಿಗನನ್ನು ರಾತ್ರಿ ಹೊತ್ತು ಗಸ್ತು ತಿರುಗುವ ತಳವಾರನಿಗೆ ಹೋಲಿಸಲಾಗಿದೆ. 'ಬೇಲಿ ಎದ್ದೇ ಹೊಲ ಮೇದಂತೆ' ಎಂಬ ಗಾದೆಯಂತೆ ಕೆಲವೊಮ್ಮೆ ತಳವಾರನು ಮನೆಗಳಿಗೆ ಕನ್ನ ಹಾಕಿ, ಆಸ್ತಿಯನ್ನು ದೋಚಬಹುದು. ಅದೇರೀತಿ ಇಂತಹ ಅನೇಕ ಅನುಭವಗಳು ಬಣಜಿಗನಿಗೆ ತಿಳಿದಿರುತ್ತದೆಂಬ ಕಟು ಸತ್ಯವನ್ನು ಸರ್ವಜ್ಞ ಬಯಲಿಗೆಳೆದಿದ್ದಾನೆ.

ಕೊಂಬು ಹೋರಿಗೆ ಲೇಸು ತುಂಬು ಕೇರಿಗೆ ಲೇಸು
ಕುಂಬಾರ ಲೇಸು ಊರಿಂಗೆ, ಹರದಂಗೆ
ನಂಬುಗೆಯೇ ಲೇಸು ಸರ್ವಜ್ಞ.

ಸಾಮಾನ್ಯವಾಗಿ ಜನಪದರು ತಮ್ಮ ಹೋರಿಗಳಿಗೆ ಉದ್ದವಾದ ಕೋಡು (ಕೊಂಬು) ಗಳಿದ್ದರೆ, ವಿವಿಧ ರೀತಿಯ ಬಣ್ಣ ಹಚ್ಚಿ ಅಲಂಕಾರಗೊಳಿಸುತ್ತಾರೆ. ಇಂತಹ ಹೋರಿಗಳು ತುಂಬಾ ಸುಂದರವಾಗಿ ಕಾಣುತ್ತಿರುತ್ತವೆ. ಅದೇರೀತಿ ತುಂಬಿದ ಕೇರಿ ನೋಡಲು ಚೆನ್ನಾಗಿ ಕಾಣುತ್ತದೆ. ಹಾಗೆಯೇ ಊರಿನಲ್ಲಿ ಕುಂಬಾರನಿದ್ದರೆ ದಿನನಿತ್ಯದ ಜನರ ಜೀವನಕ್ಕೆ ತುಂಬಾ ಅನುಕೂಲ ವಾಗಿರುತ್ತದೆ. ಹಾಗೆಯೇ ನಂಬಿಕೆ ಎಂಬುದು ಮನುಷ್ಯನಲ್ಲಿರಬೇಕಾದ ಬಹಳ ಶ್ರೇಷ್ಠ ಗುಣ. ಆದ್ದರಿಂದ ವ್ಯಾಪಾರಿಯಾದವನಿಗೆ ವಿಶ್ವಾಸವೆಂಬುದಿರಲೇಬೇಕು. ಇದಿಲ್ಲದಿದ್ದರೆ, ಜನರ ಕೋಪಕ್ಕೆ ಗುರಿ ಯಾಗಬಹುದೆಂದು ಸರ್ವಜ್ಞ ತನ್ನ ವಚನದ ಮೂಲಕ ವ್ಯಕ್ತಪಡಿಸಿದ್ದಾನೆ.

## ೪.೮. ಸುಂಕಿಗ :

ಹಳ್ಳಿಯಲ್ಲಿ ಗೌಡ, ಶಾನುಭೋಗ, ಸುಂಕದವ ಎಂಬ ಇತ್ಯಾದಿ ಮುಖಂಡರುಗಳು ಕಾನೂನು ರೀತಿಯಲ್ಲಿ ನೀತಿ-ನಿಯಮಗಳಿಗನುಸಾರವಾಗಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ.

ಈ ಸುಂಕದವನ ಕಾಯಕವೇನೆಂದರೆ; ಪ್ರತಿಯೊಂದು ಮನೆ, ಅಂಗಡಿ, ಹೊಲ, ಗದ್ದೆ ಮುಂತಾದವುಗಳ ತೆರಿಗೆಯನ್ನು ಹಣದ ರೂಪದಲ್ಲಿ ತೆಗೆದುಕೊಳ್ಳುವುದಾಗಿರುತ್ತದೆ. ಈ ಸುಂಕದವನ ಕಣ್ಣಿಗೆ ಬಡವ ಬಲ್ಲಿದವನೆಂಬ ಬೇಧವನ್ನೆಣಿಸದೆ ಮತ್ತು ಯಾರ ಹಂಗಿಗೂ ಒಳಗಾಗದೆ ತೆರಿಗೆಯನ್ನು ಕಿತ್ತುಕೊಳ್ಳುವ ಮೂಲ ಉದ್ದೇಶವಾಗಿರುತ್ತದೆ.

ಕೆಲ ಸುಂಕಿಗರು ಜನ ಸಾಮಾನ್ಯರ, ಬಡವರ ಶೋಷಣೆ ಮಾಡಿ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರೆಂಬ ವಿಷಯ ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾಗಿದೆ. ಅಂದಿನ ಕಾಲದಲ್ಲಿದ್ದ ಕೆಲ ಸುಂಕಿಗರು ಜನರನ್ನು ಬಹಳ ಒತ್ತಾಯಿಸಿ, ವಂಚಿಸುವುದರ ಮೂಲಕ ಸುಂಕವನ್ನು ಪಡೆಯುತ್ತಿದ್ದಿರಬಹುದು. ಇಲ್ಲಿ ಅನಕ್ಷರಸ್ಥರ , ಅಜ್ಞಾನಿಗಳ, ದುರ್ಬಲರ, ಅಸಹಾಯಕರ ಪರಿಸ್ಥಿತಿಯನ್ನೇ ಅಳತೆಗೋಲನ್ನಾಗಿ ಮಾಡಿಕೊಂಡು ಈ ಪ್ರತಿಷ್ಠಿತ ಸುಂಕದವನು ತನ್ನ ಟೊಳ್ಳು ನೀತಿ-ನಿಯಮಗಳನ್ನು ಹೇಳಿ, ತೆರಿಗೆಯನ್ನು ಕಸಿದುಕೊಳ್ಳುತ್ತಿರಬಹುದಾದ ಸನ್ನಿವೇಶವನ್ನು ಸರ್ವಜ್ಞ ತನ್ನ ಕಾಲದಲ್ಲಿ ಕಂಡಿರಬಹುದು. ಅಂತಹ ಸುಂಕದವನ ಮೇಲೆ ಸರ್ವಜ್ಞನು ;

ಬೆಂಕಿಯಲಿ ದಯವಿಲ್ಲ, ಮಂಕನಲಿ ಮತಿಯಿಲ್ಲ
ಸುಂಕಿನ ಧ್ವನಿಗೆ ಪ್ರತಿಯಿಲ್ಲ ಸ್ವರ್ಗದಲಿ
ಸುಂಕವೇ ಇಲ್ಲ ಸರ್ವಜ್ಞ.

ಇಲ್ಲಿ ಸುಂಕಿಗನ ಗುಣವನ್ನು ನೇರವಾಗಿ ಬಯಲಿಗೆಳೆದಿದ್ದಾನೆ. 'ಉರಿವ ಬೆಂಕಿಗೆ ಮೈಯೆಲ್ಲಾ ನಾಲಿಗೆ' ಎಂಬಂತೆ ಬೆಂಕಿಗೆ ಬಿದ್ದ ಯಾವುದೇ ವಸ್ತುವಾಗಿರಲಿ ಸುಟ್ಟು ಹೋಗುವುದು ಸತ್ಯ. ಇಲ್ಲಿ ಬೆಂಕಿಯನ್ನು ಸುಂಕದವನಿಗೆ ಸಾಮ್ಯಗೊಳಿಸಲಾಗಿದೆ. ಬೆಂಕಿ ತನ್ನ ಶಾಖದಿಂದ ಎಲ್ಲ ವಸ್ತುಗಳಿಗೂ ಬಿಸಿ

ಮುಟ್ಟಿಸದೇ ಇರದು. ಆದಕ್ಕೆ ದಯೆ ಎಂಬುದ ಇರುವುದಿಲ್ಲ. ಉತ್ತಮವಾದ ಬೆಲೆ ಬಾಳುವಂತಹ ವಸ್ತುವಾಗಿರಲಿ ಅಥವಾ ಬಡವನ ಗುಡಿಸಲಾಗಿರಲಿ ಅಂತಃಕರಣ ಎಂಬುದು ಬೆಂಕಿಗೆ ಇರಲಾರದು. ಹಾಗೆಯೇ ಮಂಕು ಹಿಡಿದವನಿಗೆ ಆಲೋಚನಾ ಶಕ್ತಿ ಇರಲಾರದೆಂಬ ಸತ್ಯವನ್ನು ಸರ್ವಜ್ಞ ತಿಳಿಸಿದ್ದಾನೆ. ಇನ್ನು ಈ ಸುಂಕದವನಿಗೆ ಕರುಣೆಯೆಂಬುದಿರಲಾರದು. ಕೆಲವೊಮ್ಮೆ ಬಡಜನರ ಮನಃಸ್ಥಿತಿಯನ್ನು ಅರಿತು ಒಂದಕ್ಕೆ ಎರಡರಷ್ಟು ತೆರಿಗೆಯನ್ನು ವಸೂಲಿಮಾಡಿ ಅನ್ಯಾಯವೆಸಗುವುದುಂಟು.

ಇದನೆಲ್ಲಾ ನೋಡಿದ ಸರ್ವಜ್ಞ ಈ ಮರ್ತ್ಯ ಲೋಕದಲ್ಲಿ ಬಾಳುವೆ ಮಾಡುವುದೇ ದುರ್ಲಬವೆಂದು ಕೊಂಡು ಆ ಸ್ವರ್ಗದಲ್ಲಿ ಇಂಥಹ ತೊಂದರೆಗಳೇ ಇಲ್ಲವೆಂದು ಹೇಳಿದ್ದಾನೆ. ಈ ಸುಂಕದವರಿಗಿರುವ ಬಿಂಕದ ಬಗೆಗೆ ವಿವರಿಸುತ್ತಾ.

ಸುಂಕದ ಅಣ್ಣಗಳ ಬಿಂಕವನು ಏನೆಂಬೆ
ಸುಂಕಕ್ಕೆ ಸಟೆಯ ನೆರೆಯಾಡಿ । ಕಡೆಯಲ್ಲಿ
ಟೊಂಕ ಮುರಿದಿಹುದು ಸರ್ವಜ್ಞ.

ಸುಂಕವನ್ನು ಜನರಲ್ಲಿ ವಸೂಲು ಮಾಡುವ ವ್ಯಕ್ತಿ ಅಗತ್ಯಕ್ಕಿಂತ ಹೆಚ್ಚಾಗಿ ದರ್ಪವನ್ನು ತೋರಿಸಿದಾಗ ಮತ್ತು ಸುಂಕದ ಹಣವನ್ನು ತೆಗೆದುಕೊಳ್ಳುವುದ ರೊಂದಿಗೆ ತನ್ನ ಬಿಂಕತನವನ್ನು ತೋರಿದರೆ ಆಗ ಜನರಿಂದ ತೊಂದರೆ ಎದುರಿಸಬೇಕಾಗುತ್ತದೆ. ಅಂದರೆ ಜನರು ತಾಳ್ಮೆ ಕಳೆದುಕೊಂಡು ಆ ಸುಂಕದವನ ಸೊಕ್ಕು, ಅಹಂಕಾರದ ಮಾತುಗಳನ್ನು ಕೇಳಿ ಅವನ ಸೊಂಟವನ್ನೇ ಮುರಿಯುತ್ತಾರೆ ಎಂಬ ಮಾತನ್ನು ಸರ್ವಜ್ಞ ಇಲ್ಲಿ ನುಡಿದಿದ್ದಾನೆ. ಸುಂಕವಿಲ್ಲದ ಸ್ಥಳವೇ ಇಲ್ಲವೆಂದು ಹೇಳುತ್ತಾ;

ಗಡಿಯ ನಾಡಿನ ಸುಂಕ, ತಡಿಯಲಂಬಿಗ ಕೂಡಿ
ಮಡದಿರ ಒತ್ತೆಯೊಳಲಂಚ ಇವು ನಾಲ್ಕು
ಅಡಿ ಇಟ್ಟಡಿಲ್ಲ ಸರ್ವಜ್ಞ.

ಊರಿನಲ್ಲಿದ್ದರೆ ತೆರಿಗೆಯ ಕಾಟವೆಂದು ಗಡಿಯ ಪ್ರದೇಶಕ್ಕೆ ಹೋಗಿ ನೆಲೆಸಿದರೂ ಅಲ್ಲಿಯೂ ತೆರಿಗೆ ಕಾಟ ತಪ್ಪುವುದಿಲ್ಲ. ''ಹೋದೆಯಾ ಪಿಶಾಚಿ ಎಂದರೆ; ಬಂದೆ ಗವಾಕ್ಷಿಯಲ್ಲಿ'' ಎನ್ನುವಂತೆ ಹೊಳೆಯ ದಾಟಿ ಬೇರೆ ಪ್ರದೇಶಕ್ಕೆ ಹೋಗುವಾಗ ಅಲ್ಲಿಯೂ ಹೊಳೆಯನ್ನು ದಾಟಿಸುವ ಅಂಬಿಗನಿಗೂ ಹಣ ಕೊಡಬೇಕಾಗುತ್ತದೆ. ಕೆಲವೊಮ್ಮೆ ಹಣದ ಬದಲಾಗಿ ಸರ್ವಜ್ಞನ ಕಾಲದಲ್ಲಿ ತಮ್ಮ ಹೆಂಡತಿಯರನ್ನು ಒತ್ತೆ ಇಡುವುದು ಸಾಮಾನ್ಯವಾಗಿದ್ದಿರಬಹುದೆಂಬುದನ್ನು ಆತನ ವಚನದಲ್ಲಿ ವೇದ್ಯವಾಗುತ್ತದೆ.

ಈ ರೀತಿಯ ಸುಂಕದ ಬಲೆ ಇಲ್ಲದ ಸ್ಥಳಗಳೇ ಇಲ್ಲವೆಂದು ಸರ್ವಜ್ಞ ಸಾರಿದ್ದಾನೆ. ಸುಂಕ ವಸೂಲು ಮಾಡುವ ಕರ್ತವ್ಯದವನಿಗೆ ಜನರ ಸುಖ ದುಃಖಗಳ ಬಗೆಗೆ ಸಂಬಂಧವನ್ನು ಅರಿವಿರುವುದಿಲ್ಲ. ಇಂತಹ ಸುಂಕದವರನ್ನು ನೋಡಿಯೇ ನಮ್ಮ ಜನಪದರು '' ಸುಂಕದವನ ಹತ್ತಿರ ಸುಖ ದುಃಖ ಹೇಳಿ ಕೊಂಡ್ರೆ, ಕಂಕುಳಲ್ಲಿ ಇರುವುದೇನು ಅಂದ್ನಂತೆ'' ಎಂಬ ಗಾದೆ ಮಾತನ್ನು ಬಹಳ ಮಾರ್ಮಿಕವಾಗಿ ನುಡಿದಿದ್ದಾರೆ.

## ೪.೯. ಬೆಸ್ತರವ :

ಹೊಳೆ ಮತ್ತು ಸಮುದ್ರ ಇವನ ಆಡೊಂಬೋಲವಾಗಿರುತ್ತದೆ. ಮುಖ್ಯವಾಗಿ ನದಿಯಲ್ಲಿ ದೋಣಿ ನಡೆಸುವುದು ಮತ್ತು ಮೀನುಗಳನ್ನು ಹಿಡಿಯುವುದು ಅವನ ಕಾಯಕ. ನಂತರ ಅವುಗಳನ್ನು ಮಾರಾಟ ಮಾಡುವುದು. ಈ ರೀತಿಯಾದ ವೃತ್ತಿಯನ್ನು ಕೈಗೊಂಡ ಬೆಸ್ತಗಾರಿಕೆಯ ಜನಪದರಿಗೆ ಮೀನ ಬಲೆಯೇ ಮೂಲಾಧಾರ. ಈ ವೃತ್ತಿಯವರಿಗೆ ನದಿ ಮತ್ತು ಅದರೊಳಗಿರುವ ಹಲವಾರು ತರಹದ ಮೀನುಗಳೇ ಜೀವನದ ಸಂಪತ್ತು.

ಇವರು ವಿಶೇಷವಾಗಿ ನದಿ ತೀರದಲ್ಲಿ ವಾಸ ಮಾಡುವ ಜನಾಂಗ. ಅಂಬಿಗ, ಬೆಸ್ತ, ಕಬ್ಬಲಿಗ, ಕಬ್ಬೇರ, ಜಾಲಗಾರ,ಮೀನುಗಾರ, ದೋಣಿಗಾರ, ತೊರೆಯ ಎಂದೆಲ್ಲಾ ಇವರನ್ನು ಕರೆಯಲಾಗುತ್ತದೆ (ಜಾನಪದ ಸಾಹಿತ್ಯ ದರ್ಶನ, ಭಾಗ-೧೭, ಪು. ೧೨೯).

ಕಿರಿಮೀನು ಹಿರಿ ಮೀನು ಕೊರೆ ಕೊರೆದು ತಿಂಬಾತ
ಗಿರುವವನೊಬ್ಬ ಮಗಸಾಯಿ ನೋವಿನ
ತೆರನ ತಾನರಿಯ ಸರ್ವಜ್ಞ.

ವಿವಿಧ ವೃತ್ತಿಗಳಲ್ಲಿ ಈ ಬೆಸ್ತರನವನದು ಒಂದು ವೃತ್ತಿಯಾಗಿದ್ದರೂ ಸರ್ವಜ್ಞನ ದೃಷ್ಟಿಯಲ್ಲಿ ಆರೋಗ್ಯಕರವಾಗಿ ಕಂಡುಬಂದಿಲ್ಲ. ಇವನು ನದಿಯಲ್ಲಿ ಬಲೆ ಬೀಸಿ ಹಿಡಿದುಕೊಂಡ ಮೀನುಗಳಲ್ಲಿ ಅನೇಕ ಹಿರಿ-ಕಿರಿಯ ಮೀನುಗಳನ್ನು ಬೇರ್ಪಡಿಸಿ, ಅವುಗಳನ್ನು ಜೀವಂತವಿರುವಾಗಲೇ ಕೊರೆ ಕೊರೆದು, ನಾನಾ ರೀತಿಯಲ್ಲಿ ಮಾರಾಟ ಮಾಡುತ್ತಾನೆ. ಅವನಿಗೆ ಕನಿಕರವೆಂಬುದೇ ಇರುವುದಿಲ್ಲ. ಒಂದು ವೇಳೆ ಅವನ ಮಗನ ಪ್ರಾಣ ಹೋದಾಗ ವಿಪರೀತಿ ನೋವಿನಲ್ಲಿ ಮುಳುಗುವುದರ ಮೂಲಕ ಪ್ರತಿಯೊಂದು ಜೀವಿಗಳ ಪ್ರಾಣ ಎಷ್ಟೊಂದು ಮುಖ್ಯವೆಂಬುದ ಅವನಿಗೆ ಅರಿವಾಗುತ್ತದೆಂಬ ಸೂಕ್ಷ್ಮತೆಯನ್ನು ವ್ಯಕ್ತಪಡಿಸಿದ್ದಾನೆ.

ಸಾಲಿಗನಲ್ಲಿ ಮೇಣಕ್ಕೆ ಸಾಲೆಯಲಿ ನಂಬಿಕೆಯು
ಜಾಲಗಾರನಲ್ಲಿ ದಯೆ-ಧರ್ಮ ಮುನ್ನಾವ
ಕಾಲಕ್ಕೂ ಇಲ್ಲ ಸರ್ವಜ್ಞ.

ಸಾಲದ ರೂಪದಲ್ಲಿ ಹಣ ನೀಡುವವನಿಗೆ ಹೆಚ್ಚಿನ ಬಡ್ಡಿ ಹಾಕಿ ಹಿಂಸಿಸುವ ಸ್ವಭಾವ ಸಹಜವಾಗಿರುವುದರಿಂದ ಅವನಲ್ಲಿ ಮೃದು ಹೃದಯವಿರಲಾರದೆಂದಿದ್ದಾನೆ. ಕೆಲವೊಮ್ಮೆ ಕಳ್ಳನಾದವನು ಉಪಕಾರ ಮಾಡಬಹುದು. ಆದರೆ ಕಳ್ಳರನ್ನೂ ಮೀರಿಸುವ ಈ ಅಕ್ಕಸಾಲಿಗನು ಬಲುಗಳ್ಳನೆಂದು ನಿಷ್ಠೂರವಾಗಿ ತೆಗಳುವ ಜೊತೆಗೆ ಈ ಜಾಲಗಾರನಲ್ಲಿಯೂ ಸಹ ದಯೆ-ಧರ್ಮಗಳಿರುವುದಿಲ್ಲ. ನಿತ್ಯವೂ ಒಂದಲ್ಲ ಒಂದು ರೀತಿಯಿಂದ ಮತ್ತೊಂದು ಜೀವಿಗಳ ಪ್ರಾಣ ಹರಣ ಮಾಡುವ ಪ್ರಸಂಗದಲ್ಲಿ ದಿನಗಳನ್ನು ನೂಕುವವನಲ್ಲಿ ದಯೆ-ದಾಕ್ಷಿಣ್ಯಗಳು ಕಡಿಮೆ ಎಂಬುದೇ ಸರ್ವಜ್ಞನ ದೃಷ್ಟಿಕೋನ.

## ೪.೧೦. ಡೊಂಬರವ :

ಹಸಿವೆಗಾಗಿ ಜನಪದರು ಎಂತಹ ಕ್ಲಿಷ್ಟವಾದ ಮಾರ್ಗದಿಂದಲಾದರೂ ಹಸಿವೆಯನ್ನು ನೀಗಿಸಿಕೊಳ್ಳುತ್ತಾರೆಂಬುದಕ್ಕೆ ಈ ಡೊಂಬರಾಟವೇ ನಿದರ್ಶನವಾಗಿದೆ. ಈ ದೊಂಬರಾಟದವರು ಮೊದಲು ಹಲಗೆಯೊಂದನ್ನು ಭಾರಿಸುವುದರ ಮೂಲಕ ಅದರಿಂದ ವಿಚಿತ್ರವಾದ ಶಬ್ದವನ್ನು ಹೊರಹೊಮ್ಮಿಸಿ, ಜನರನ್ನು ಆಕರ್ಷಿಸುತ್ತಾರೆ. ನಂತರ ವಿವಿಧ ಚಾಣಾಕ್ಷತೆಯ ಅಥವಾ ಕಣ್ಣುಕಟ್ಟುವಂತಹ ಆಟಗಳನ್ನು ಪ್ರದರ್ಶಿಸುವ ಮೂಲಕ ನೆರೆದ ಜನರು ನೀಡುವ ಹಣದಿಂದ ತಮ್ಮ ಹಸಿವೆಯನ್ನು ಪರಿಹರಿಸಿಕೊಳ್ಳುತ್ತಾರೆ. ಇದೊಂದು ವೃತ್ತಿಯನ್ನಾಗಿ ಆಯ್ದುಕೊಂಡವರಿಗೆ ಹೆಚ್ಚಿನ ಪ್ರಮಾಣದ ಆದಾಯವಿರಲಾರದೆಂಬುದು ಸರ್ವಜ್ಞನ ಅಭಿಮತ. ಜಾನಪದ ವೃತ್ತಿಯ ಅನೇಕ ಕಲೆಗಳಲ್ಲಿ ಈ ಡೊಂಬರಾಟವೂ ಸಹ ಒಂದು ಜನಪ್ರಿಯ ಕಲೆಯಾಗಿದೆ. ಈ ಡೊಂಬರಾಟದವರು ತಮ್ಮ ಮಾನಸಿಕ ಮತ್ತು ದೈಹಿಕವಾದ ನೋವು ನಲಿವುಗಳನ್ನು ನುಂಗಿಕೊಂಡು ನೆರೆದ ಜನರ ಮುಂದೆ ನಾಟಕೀಯವಾಗಿ ನಗುತ್ತಾ, ವಿವಿಧ ಕಸರತ್ತಿನ ಆಟಗಳನ್ನು ಪ್ರದರ್ಶಿಸುವುದುಂಟು. ಈ ಆಟದ ಬಗೆಗೆ ಹೇಳುವುದಾದರೆ; ಮುಖ್ಯವಾಗಿ ತಂತಿಯ ಮೇಲೆ ನಡೆಯುವುದು, ವೃತ್ತಾಕಾರದ ತಂತಿಯ ಚಕ್ರದೊಳಗೆ ನುಸುಳುವುದು, ಅತೀ ಎತ್ತರದ ಬೊಂಬಿನ ಮೇಲೆ ನಿಂತುಕೊಳ್ಳುವುದು ಮುಂತಾದ ಅಪಾಯಕಾರಿ ಆಟಗಳನ್ನು ಹಾದಿ ಬೀದಿಗಳಲ್ಲಿ ಪ್ರದರ್ಶಿಸುತ್ತಾರೆ. ಇಂತಹ ದೊಂಬರಾಟವನ್ನು ಕಂಡಿರಬಹುದಾದ ಸರ್ವಜ್ಞ;

ಕತ್ತೆಗಂ ಕೋಡಿಲ್ಲ ತೊತ್ತಿಂಗೆ ಗುಣವಿಲ್ಲ
ಹತ್ತಿಯ ಹೊಲಕೆ ಗಿಳಿಯಿಲ್ಲ, ಡೊಂಬನಿಗೆ
ವೃತ್ತಿಯೇ ಇಲ್ಲ ಸರ್ವಜ್ಞ.

ಕತ್ತೆಗೆ ಕೋಡುಗಳಿರುವುದಿಲ್ಲವೆಂಬುದು ಸರ್ವವಿಧಿತ. "ತೊತ್ತಿಂಗೆ ಗುಣವಿಲ್ಲ" - ಸೇವಕನಾದವನಿಗೆ ಅತ್ಯಂತ ಜವಾಬ್ದಾರಿತನದ ಗುಣಗಳಿರುವುದಿಲ್ಲ. ಆದಕ್ಕಾಗಿ ಜನಪದರು " ಆಳು ಮಾಡಿದ್ದು ಹಾಳು, ಮಗ ಮಾಡಿದ್ದು ಮಧ್ಯಮ, ತಾನು ಮಾಡಿದ್ದು ಶ್ರೇಷ್ಠ" ಎಂದು ಹೇಳಿದ್ದಾರೆ. ಸಾಮಾನ್ಯವಾಗಿ ಹಣ್ಣಿನ ಮರ-ಗಿಡಗಳಲ್ಲಿ ಗಿಳಿಗಳಿರುತ್ತವೆಯೇ ಹೊರತು 'ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ ' ಎಂಬ ನಾಣ್ನುಡಿಯಂತೆ ಬಿಳಿ ಹತ್ತಿಯ ಗಿಡಗಳು ಬೆಳೆದು ನಿಂತ ಹೊಲದಲ್ಲಿ ಗಿಳಿಗಳಿರಲಾರವು. ಅದೇರೀತಿಯಾಗಿ ಈ ಡೊಂಬರಾಟವಾಡುವವನಿಗೆ ಸರಿಯಾದ ಕೆಲಸಗಳಿರುವುದಿಲ್ಲ. ಏಕೆಂದರೆ ಆ ಆಟದಿಂದ ಪೂರ್ಣ ಪ್ರಮಾಣದ ಹೊಟ್ಟೆ ತುಂಬುವುದಿಲ್ಲವೆಂಬುದನ್ನು ಸರ್ವಜ್ಞ ಗುರುತಿಸಿದ್ದಾನೆ.

## ೪.೧೧. ಕುಂಬಾರ:

ಕುಂಬಾರ (>ಕುಂಭ+ಕಾರ) ರ ಸಂಖ್ಯೆ ಉತ್ತರ ಕರ್ನಾಟಕದಲ್ಲಿ ಹೆಚ್ಚು. ಹಳ್ಳಿಯ ಜೀವನ ಸಾಗಿಸುವ ಇವರು ಅಲ್ಲಿಯೇ ದೊರೆಯುವ ಮಣ್ಣಿನ ಕೆಸರನ್ನೆ ತುಳಿದು ಗಡಿಗೆಗಳನ್ನು ಮಾಡುವ ಕುಂಬಾರಿಕೆ ಒಂದರ್ಥದಲ್ಲಿ ಲೌಕಿಕ - ಪಾರಮಾರ್ಥಿಕವೆರಡರ ಜೀವನ ಸೂತ್ರಕ್ಕೆ ಹಿಡಿದ ಕನ್ನಡಿ ಯಾಗಿದೆ. ಕುಂಬಾರರ ಜೀವನದಲ್ಲಿ ಕುಂಬಾರ ಗುಂಡಯ್ಯನ ಪ್ರಭಾವದ್ಯೋತಕ ವಾದ ಹಂತಿಯ ಹಾಡುಗಳೆಷ್ಟೋ ಪ್ರಚಲಿತದಲ್ಲಿವೆ (ಜಾನಪದ ಸಾಹಿತ್ಯ ದರ್ಶನ : ಪು: ೧೦೧) ಸರ್ವಜ್ಞನ ವಚನಗಳಲ್ಲಿ ಕುಂಬಾರಿಕೆ ವಿಷಯ ಕಂಡುಬಂದಿರುವುದರಿಂದ ಅವನನ್ನು ಕುಂಬಾರ ಕುಲದವನೆಂದೂ ತಿಳಿದಿರುವುದು ಮೈಸೂರು ಪ್ರಾಚ್ಯವಿದ್ಯಾವಿಶ್ವ ಸಂಶೋಧನಾಲಯದ ಕೈ ಬರಹದ ಹೊತ್ತಿಗೆಯಲ್ಲಿ;

ತಂದೆ ಕುಂಬಾರ ಮಲ್ಲ , ತಾಯಿ ಮಳಲಾದೇವಿ
ಇಂದುಶೇಖರನ ವರಪುತ್ರ ಧರಣಿಗೆ
ಬಂದು ಜನಿಸಿದ ಸರ್ವಜ್ಞ (ಸರ್ವಜ್ಞ ಮೂರ್ತಿಯ ವಚನಗಳು- ಪು. ೯)

ಎಂಬ ವಚನವು ಸರ್ವಜ್ಞನನ ಸ್ವತಃ ಜನನದ ಬಗೆಗೆ ಬೆಳಕು ಚೆಲ್ಲುತ್ತದೆ . ಈತನ ತಂದೆ ಕುಂಬಾರ ಮಲ್ಲ ನೆಂಬುದಾಗಿ ಅಂದರೆ ಕುಂಬಾರಿಕೆಯ ವೃತ್ತಿಯನ್ನು ಮಾಡುತ್ತಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ತನ್ನ ಕುಲದ ಬಗೆಗೆ ವಿಶೇಷ ಕಾಳಜಿಯನ್ನು ಸರ್ವಜ್ಞ ವ್ಯಕ್ತ ಪಡಿಸಿದ್ದಾನೆ . ಬಹುಶಃ ಸರ್ವಜ್ಞನನು ಪುರಾತನ ಶಿವಶರಣ ಕುಂಬಾರ ಗುಂಡಯ್ಯನ ಕುಲದವನಾಗಿದ್ದಿರಬಹುದೆಂದು ಊಹಿಸಲು ಬರುವಂತಿದೆ.

ಕುಂಬಾರಿಕೆ ಎಂದರೆ, ಎಲ್ಲ ಕೈಕಸುಬುಗಳಂತೆ, ಮಾನವನ ಬದುಕಿನ ಅವಿಭಾಜ್ಯ ಅಂಗವಾಗಿ ಅರಳಿರುವುದಾಗಿದೆ. ಹದವಾದ, ಜಿಗುಟಾದ ಹಾಗೂ ಗಟ್ಟಿಯಾದ ಮಣ್ಣಿನಿಂದ ಮಡಕೆ , ಕುಡಿಕೆ, ಮುಚ್ಚಳ ಮುಂತಾದ ವಸ್ತುಗಳನ್ನು ತಯಾರಿಸುವುದು. ಈ ವೃತ್ತಿ ಮೂಲಭೂತವಾಗಿ ಗ್ರಾಮೀಣ ಪರಿಸರದಿಂದ ಬಂದಿರುವಂತಹದ್ದು. ಬಂಡಿಯ ಗಾಲಿಯನ್ನು ತಿರುಗಿಸಿ, ಅದರ ಮೇಲೆ ಮಣ್ಣಿನ ಮುದ್ದೆಯನ್ನಿಟ್ಟು ಕೈಯಿಂದ ಮಡಕೆಯನ್ನು ತಯಾರಿಸಿ, ನಂತರ ಅದರಿಂದ ಮಡಿಕೆಯನ್ನು ತೆಗೆದು ಬಿಸಿಲಿನಲ್ಲಿ ಒಣಗಿಸಿ, ಒಣಗಿದ ಮಡಕೆಗಳನ್ನು ಆವಿಗೆಯಲ್ಲಿಟ್ಟು, ಸುಟ್ಟು ಗಟ್ಟಿಗೊಳಿಸುತ್ತಾರೆ. ಹಾಗೆಯೇ ಮಣ್ಣಿನಿಂದ ತಯಾರಿಸಿದ ನಾನಾ ವಿಧವಾದ ಗೊಂಬೆಗಳನ್ನು ಆವಿಗೆಯಲ್ಲಿಟ್ಟು ಸುಡುತ್ತಿದ್ದರೆಂಬುದು ನಮ್ಮ ಗ್ರಾಮೀಣ ಪರಿಸರದಲ್ಲಿ ಕಂಡುಬರುತ್ತದೆ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೩೭). ಇದನ್ನು ಕುರಿತು ಸರ್ವಜ್ಞನ ವಚನಗಳನ್ನು ಅವಲೋಕಿಸಿದಾಗ ಬಹಳ ವಚನಗಳೇನೂ ದೊರಕುವುದಿಲ್ಲ. ೧೨ನೇ ಶತಮಾನದ ವಚನಕಾರರಲ್ಲಿ ಈ ವೃತ್ತಿಯ ಬಗೆಗೆ ಬಹಳ ವಚನಗಳು ಸಿಗುತ್ತವೆ. ''ಮಡಕೆಯ ಮಾಡುವೊಡೆ ಮಣ್ಣೇ ಮೊದಲು'' ಎಂದು ಬಸವಣ್ಣ ಸೂಚಿಸುತ್ತಾನೆ. ಯಾವುದೇ ಊರು ಕುಂಬಾರ ನಿಲ್ಲದೆ ಪೂರ್ಣವಲ್ಲ ಎಂಬುದು ನಮ್ಮ ಸರ್ವಜ್ಞನ ಅನುಭವದ ಮಾತಾಗಿದೆ.

ಅಂಬು ಬಿಲ್ಲಿಗೆ ಲೇಸು, ಇಂಬು ಕೋಣೆಗೆ ಲೇಸು
ಸಂಚಾರ ಲೇಸು ಸಾರಿಗಂ, ಊರಿಂಗೆ
ಕುಂಬಾರ ಲೇಸು ಸರ್ವಜ್ಞ.

ಬಿಲ್ಲಿಗೆ ಅಂಬು, ಕೋಣೆಗೆ ಇಂಬು, ಸಾರಿಗೆಗೆ ಸಂಚಾರವೆಷ್ಟು ಮುಖ್ಯವೋ, ಅಷ್ಟೇ ಮುಖ್ಯ ಒಂದು ಊರಿಗೆ ಕುಂಬಾರ. ಅನಾದಿ ಕಾಲದಿಂದ ನಮ್ಮ ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದುಬಂದ ಕುಂಬಾರ ಎನ್ನುವ ಶಬ್ಧಕ್ಕೆ ಕುಲಾಲ, ಛಕ್ರಿ, ದಂಡಧರ, ಕುಂಬಕಾರ ಮುಂತಾದ ಅರ್ಥಗಳಿವೆ.

ಕೊಂಬು ಹೋರಿಗೆ ಲೇಸು ತುಂಬು ಕೇರಿಗೆ ಲೇಸು
ಕುಂಬಾರ ಲೇಸು ಊರಿಂಗೆ, ಹರದಂಗೆ
ನಂಬುಗೆಯೇ ಲೇಸು ಸರ್ವಜ್ಞ.

ಸಾಮಾನ್ಯವಾಗಿ ಜನಪದರು ಒಕ್ಕಲಿಗರಾಗಿರುತ್ತಾರೆ. ಅವರಿಗೆ ಉಳುಮೆ ಮಾಡಲು ಎರಡು ಎತ್ತುಗಳು ಅತ್ಯವಶ್ಯಕವಾಗಿರುತ್ತವೆ. ಅವು ಸಾಮಾನ್ಯ ಎತ್ತುಗಳಾಗದೇ ಬಹಳ ಶಕ್ತಿಶಾಲಿಯಾದ ಹಾಗೂ ಉತ್ತಮವಾದವುಗಳನ್ನು ಕೊಂಡುಕೊಂಡಿರುತ್ತಾರೆ. ಅವುಗಳ ಕೊಂಬುಗಳು ಉದ್ದವಾಗಿದ್ದರೆ ತುಂಬಾ ಲಕ್ಷಣವಾಗಿರುತ್ತವೆಂಬ ನಂಬಿಕೆ ಈಗಲೂ ಜನಪದರಲ್ಲಿದೆ. ಗ್ರಾಮೀಣ ಪ್ರದೇಶದಲ್ಲಿ ಅನೇಕ ಕೇರಿಗಳನ್ನು ಕಂಡಿರುವ ಸರ್ವಜ್ಞ ಅಂತಹ ಕೇರಿಗಳಲ್ಲಿ ಜನವಸತಿ ದಟ್ಟವಾಗಿದ್ದರೆ, ಜೀವನ ಸುರಕ್ಷಿತ

ವೆಂದಿದ್ದಾನೆ. ಅದೇರೀತಿ ಊರಿಗೊಬ್ಬನಾದರೂ ಕುಂಬಾರ ವೃತ್ತಿಯವನು ಇರಲೇಬೇಕೆಂದು ಅಭಿಪ್ರಾಯಪಟ್ಟಿದ್ದಾನೆ. ಸರ್ವಜ್ಞನು ಸ್ವತಃ ಅದೇ ಕುಲದವನೆಂದ ಮೇಲೆ ಹೆಚ್ಚಿನ ಆಸಕ್ತಿಯಿಂದ ಕುಂಬಾರಿಕೆಯವರ ಬಗೆಗೆ ಹೆಚ್ಚಿನ ಪ್ರೀತಿಯನ್ನು ತೋರಿದ್ದಾನೆ. ಅಂದಿನ ಕಾಲದಲ್ಲಿ ಸಾಮಾನ್ಯವಾಗಿ ಜನಪದರು ಮಣ್ಣಿನಿಂದ ತಯಾರಾದ ಪಾತ್ರೆಗಳನ್ನು ಹೆಚ್ಚು ಬಳಸುತ್ತಿದ್ದರು. ಇದನ್ನು ಕಂಡೇ ಆತ ಮೇಲಿನ ವಚನವನ್ನು ಹೇಳಿದ್ದಿರಬಹುದು. ಮಣ್ಣಿನ ಪಾತ್ರೆಗಳನ್ನು ತಯಾರಿಸುವ ವೃತ್ತಿ ಕೌಶಲ್ಯವು ಕುಂಬಾರಿಕೆಯಲ್ಲಿ ಈಗಲೂ ಉಳಿದುಕೊಂಡು ಬಂದಿದೆ. ಈ ಕಲೆ ಮನಸ್ಸಿಗೆ ಮುದ ನೀಡುವುದರ ಜೊತೆಗೆ ಹಸಿವನ್ನು ನೀಗಿಸಿಕೊಳ್ಳಲು ಜೀವನಕ್ಕೆ ದಾರಿಯಾಗಿರುತ್ತದೆ. ಕಲಾ ಪ್ರಾವಿಣ್ಯವನ್ನು ಬಹಳ ಸುಂದರವಾಗಿ ಕುಂಬಾರಿಕೆಯಲ್ಲಿ ಅಭಿವ್ಯಕ್ತಿಗೊಳಿಸುವ ಕುಶಲ ಕರ್ಮಿ ಈ ಕುಂಬಾರ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೩೭). ''ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ'' ಎಂಬ ಗಾದೆಯಂತೆ ಈ ಮಣ್ಣಿನ ಪಾತ್ರೆಗಳನ್ನು ಬಹಳ ಜೋಪಾನವಾಗಿ ಕಾಪಾಡುವುದು ಕುಂಬಾರನಿಗೆ ಬಹಳ ಕಷ್ಟದಾಯಕವಾದ ಕೆಲಸವಾಗಿದೆ.

ಕುಂಬಾರ ಹೊಟ್ಟೆಯಲ್ಲಿ ಪಿಂಜಾರ ಹುಟ್ಟುವನು
ಕುಂಭಿಕುಂಭಿಗಳ ನಳಿಯುತ್ತಲಿ ಕುಂಭಿನಿಯೋ
ಳಿಂಬುಗೊಂಡಾನು ಸರ್ವಜ್ಞ.

ಕುಂಬಾರನ ಹೊಟ್ಟೆಯಿಂದ ಪಿಂಜಾರ ಜಾತಿಯ ಮಗನು ಹುಟ್ಟುವನು. ಅವನು ಗಡಿಗೆಗಳನ್ನು ಒಡೆಯುತ್ತಾ ಒಡೆಯುತ್ತಾ, ಕುಂಬಾರ ಜಾತಿಯ ಹೆಣ್ಣನ್ನೇ ಲಗ್ನವಾಗುವನು. ''ಎತ್ತ ಹೋದರೂ ಇತ್ತಲೇ ಬರಲೇಬೇಕು'' ಎಂಬ ಗಾದೆಯಂತೆ ಅಂದು ಕುಂಬಾರ ಜಾತಿಯವನು ಅದೇ ವೃತ್ತಿಯವನ ಮಗಳನ್ನೇ ಕೈಹಿಡಿಯಬೇಕಾಗಿತ್ತು. ನಮ್ಮ ಜಾನಪದರು ಈ ಕುಂಬಾರ ವೃತ್ತಿಯ ಬಗೆಗೆ ಹಾಗೂ ಆತನ ವೃತ್ತಿಯ ಕೌಶಲ್ಯದ ಬಗೆಗೆ ತುಂಬಾ ಸುಂದರವಾದ ಗೀತೆಯನ್ನು ರಚಿಸಿದ್ದಾನೆ.

ಮುಂಜಾನೆದ್ದು ಕುಂಬಾರಣ್ಣ ಹಾಲುಬಾನುಂಡಾನ
ಹಾರ್‍ಯಾಡಿ ಮಣ್ಣ ತುಳಿದಾನ,
ಹಾರಿ ಹಾರ್‍ಯಾಡಿ ಮಣ್ಣ ತುಳಿಯೂತ ಮಾಡ್ಯಾನ
ಮಿತ್ರೇರು ಹೊರುವಂತ ಐರಾಣಿ........

ಕುಂಬಾರನ ವೃತ್ತಿಯಲ್ಲಿ ವಿಶೇಷತೆ ಏನೆಂದರೆ; ಮದುವೆ, ಉತ್ಸವದಂತಹ ಸಂದರ್ಭಗಳಲ್ಲಿ ಈ ವೃತ್ತಿಗೆ ತುಂಬಾ ಬೆಲೆ ಇರುತ್ತದೆ. ಮದುವೆಯಲ್ಲಿ ಬಳಸುವ ಐರಾಣಿ ಹಾಗೂ ಗುಗ್ಗಳದ ಸಂದರ್ಭದಲ್ಲಿ ಹಿಡಿದಿರುವ ದೊಡ್ಡ ಗಡಿಗೆಯನ್ನು ತಯಾರಿಸುವ ಕಲೆ ಕಂಡುಬರುತ್ತದೆ. ಅಲ್ಲದೆ ಕೆಲವೊಂದು ವಾದ್ಯಗಳಿಗೆ ಬೇಕಾಗುವ ಮಡಿಕೆಗಳನ್ನು ಕುಂಬಾರನು ಮಾಡಿಕೊಡುತ್ತಾನೆ. ಒಕ್ಕಲುತನ ಪ್ರಧಾನವಾಗಿರುವ ನಮ್ಮ ಅನೇಕ ಹಳ್ಳಿಗಳಲ್ಲಿ ಆ ಕುಟುಂಬಗಳಿಗೆ ಅಗತ್ಯವಾಗಿರುವ ಕುಡಿಕೆ-ಮಡಕೆಯಿಂದ ಹಿಡಿದು ಹರಣಿ, ಬೃಹತ್ ಗಾತ್ರದ ಅಂಚು, ಅರನಾಳಿಗೆ ವಿವಿಧ ಬಗೆ ಸಾಮಗ್ರಿಗಳನ್ನು ಸಹ

ತಯಾರಿಸುತ್ತಾನೆ. ವಿಶೇಷ ಹಬ್ಬದ ದಿನಗಳಾದ ಯುಗಾದಿಯ ದಿನದಂದು ಬೇವು-ಬೆಲ್ಲ ಕಲಿಸಲು ಹೊಸ ಗಡಿಗೆಗಳನ್ನು ಹಾಗೂ ದೀಪಾವಳಿಯ ಸಂದರ್ಭದಲ್ಲಿ ಹೊಸ ಪ್ರಣತಿಗಳನ್ನು ಇಂದಿಗೂ ಬಳಸುವುದುಂಟು.

ಈ ಮೇಲಿನ ಗೀತೆಯಲ್ಲಿ ಕುಂಬಾರನು ಹೆಚ್ಚು ಗಮನ ಕೊಡುವುದು ತನ್ನ ಕಾಯಕದಲ್ಲಿಯೇ ಹೊರತು, ಆದರಿಂದ ಬರುವ ಲಾಭಕ್ಕೆ ಹೆಚ್ಚಿನ ಗಮನ ಕೊಡಲಾರನು. ಹಳ್ಳಿಗಳಲ್ಲಿ ಬಹಳ ಸುಲಭವಾಗಿ ದೊರೆಯುವ ಆಹಾರವೆಂದರೆ; ಹಾಲು ಮತ್ತು ತುಪ್ಪ. ಆದ್ದರಿಂದ ಹಾಲು-ಬಾನ ಮತ್ತು ತುಪ್ಪ ಬಾನವನ್ನಷ್ಟೇ ಉಂಡು ಉಂಡು ಹೊಟ್ಟೆ ತುಂಬಿಸಿಕೊಳ್ಳುತ್ತಾನೆ.

ಮದುವೆಯ ಸಮಾರಂಭದಲ್ಲಿ ತೊಡಗಿರುವ ನಾರಿಯರು ಈ ಕುಂಬಾರನಿಗೆ ಅಕ್ಕಿ ಹಿಟ್ಟು ಕೊಡುತ್ತೇವೆ. ಐರಾಣಿಯನ್ನು ತೆಗೆದುಕೊಂಡು ಬಾ ಎಂದು ಹೇಳುವ ಸನ್ನಿವೇಶ ಬಹಳ ಆತ್ಮೀಯತೆಯ ಜೊತೆಗೆ ಆತನ ಹಸಿವಿನ ಜೊತೆಗೆ ಬೇರೆ ರುಚಿಯನ್ನು ತಿಳಿಯಪಡಿಸುವುದಾಗಿದೆ. ಸರ್ವಜ್ಞ ಈ ಕುಂಬಾರಿಕೆ ವೃತ್ತಿಯ ಬಗ್ಗೆ ಹೆಚ್ಚಿನ ವಚನಗಳನ್ನು ಬರೆದಂತೆ ಕಾಣುವುದಿಲ್ಲ (ಜಾನಪದ ಸಾಹಿತ್ಯ ದರ್ಶನ, ಪು. ೨೦೩).

## ೪.೧೨. ಸಿಂಪಿಗ :

ಹರಿದ ಬಟ್ಟೆಗಳನ್ನು ಮತ್ತು ಹೊಸ ಬಟ್ಟೆಗಳನ್ನು ಅತ್ಯಂತ ಕುಶಾಗ್ರಮತಿಯಿಂದ ಹೊಲೆದುಕೊಡುವ ವೃತ್ತಿಯೇ ಸಿಂಪಿಗಾರಿಕೆಯಾಗಿದೆ. ಈ ವೃತ್ತಿಯನ್ನು ಸಾಂಪ್ರದಾಯಿಕವಾಗಿ ಮಾಡುತ್ತಾ ಬಂದವರನ್ನು ಸಿಂಪಿಗರು, ಸಿಂಪಿಗ್ಯಾರು, ಚಿಂಪಿಗ್ಯಾರು ಎಂದು ಕರೆಯುವ ರೂಢಿ. ಸಿಂಪಿಗರಲ್ಲಿ ಶಿವ ಸಿಂಪಿಗರು, ಜನಿವಾರ ಸಿಂಪಿಗರು, ನಾಮದೇವ ಸಿಂಪಿಗರು ಎಂಬ ಪಂಗಡಗಳುಂಟು.

ಬೆಳೆ ಬಂದ ಸುಗ್ಗಿಯಲ್ಲಿ ರೈತನಿಂದ ಇವರು ತಮ್ಮ ಕೆಲಸಕ್ಕೆ ತಕ್ಕ 'ಆಯ' ಪಡೆದುಕೊಳ್ಳುತ್ತಿದ್ದುದುಂಟು. ಹಬ್ಬ ,ಹುಣ್ಣಿಮೆ, ಮದುವೆ ಇತರೆ ಸಮಾರಂಭ, ಉತ್ಸವಗಳಲ್ಲಿ ಜನರಿಗೆ ಅವರ ಅಭಿಲಾಷೆಗೆ ತಕ್ಕಂತೆ ವಿವಿಧ ನಮೂನೆಯ ಹೊಸ ಬಟ್ಟೆಗಳನ್ನು ಹೊಲೆದುಕೊಡುವ ವೃತ್ತಿಯೇ ಮುಖ್ಯವಾದುದಾಗಿದೆ. ಆದರೆ ಸರಿಯಾದ ಸಮಯಕ್ಕೆ ಬಟ್ಟೆಗಳನ್ನು ಕೊಡದೇ ಸುಳ್ಳು ಹೇಳುವ ಸಿಂಪಿಗರನ್ನು ಸರ್ವಜ್ಞ ಕಂಡಿರಬಹುದಾಗಿದೆ. ಕಾರಣ ಅವನ ಕಾಲದಲ್ಲಿ ಈಗಿನಂತೆ ಯಂತ್ರ (ರಾಟಿ)ಗಳಿಲ್ಲದ್ದರಿಂದ ಕೈಯಿಂದ ಹೊಲೆದು ಕೊಡಬೇಕಾಗು ತ್ತಿತ್ತಾದ್ದರಿಂದ ಅನಿವಾರ್ಯವಾಗಿ ಸುಳ್ಳನ್ನು ಹೇಳದೇ ವಿಧಿ ಇರಲಿಲ್ಲ. ಇಂತಹವನ್ನು ಕಂಡಿರಬಹುದಾದ ಸರ್ವಜ್ಞ ; ''ಸುಳ್ಳು ಸಿಂಪಿಗ ಬಲ್ಲ'' ಎಂದು ತನ್ನ ವಚನದಲ್ಲಿ ಹೇಳುತ್ತ ಅವನ ಬುದ್ಧಿಶಕ್ತಿಯನ್ನು ಎತ್ತಿ ಹಿಡಿದಿದ್ದಾನೆ (ಜಾನಪದ ಸ್ಪಂದನ, ಪು. ೧೦೮).

## ೪.೧೩. ಬೇಟೆಗಾರ :

ಮಾನವ ವಿಕಾಸದ ಪ್ರಾರಂಭದ ಘಟ್ಟದಲ್ಲಿ ಬೇಟೆಯು ಒಂದು ಜೀವನ ವಿಧಾನವಾಗಿತ್ತು. ಕ್ರೂರ ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಅವುಗಳ ಜೊತೆಗೆ ಹೋರಾಡುವುದು ಅನಿವಾರ್ಯವಾಗಿದ್ದಿತ್ತು. ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯನ್ನು ಬೇಟೆಯಾಡಿ ಕೊಂದು ತಿನ್ನುವಂತಹ ಕ್ರಿಯೆಯನ್ನು ನೋಡಿದ ಈ ಮನುಷ್ಯ ಅವುಗಳಿಂದ ಪ್ರಭಾವಿತನಾಗಿ ತಾನೂ ಅನೇಕ ಆಯುಧಗಳಿಂದ ಪ್ರಾಣಿಗಳನ್ನು ಬೇಟೆಯಾಡಲು ಕಲಿತ. ಸಸ್ಯಹಾರ, ಮಾಂಸಹಾರ, ಅಹಿಂಸೆ, ಹಿಂಸೆ, ಒಳ್ಳೆಯದು, ಕೆಟ್ಟದ್ದು ಇವುಗಳ ನಡುವಿನ ವ್ಯತ್ಯಾಸದ ಪರಿಕಲ್ಪನೆಗಳು ಇದ್ದಿಲ್ಲ.

ಕೃಷಿ ಮಾನವನ ಬದುಕಿನಲ್ಲಿ ಪ್ರವೇಶ ಮಾಡಿದಾಗ, ಕಾಡು ಪ್ರಾಣಿಗಳು ಹೊಲದೊಳಗೆ ನುಗ್ಗಿ ಬೆಳೆದ ಪೈರನ್ನು ಹಾಳು ಮಾಡುವಾಗಲೋ, ಒಮ್ಮೊಮ್ಮೆ ಕ್ರೂರ ಮೃಗಗಳು ಊರಿಗೆ ನುಗ್ಗಿ ಧಾಂದಲೆ ಎಬ್ಬಿಸಿದಾಗಲೋ ಬೇಟೆಗಾರ ಅಂತಹ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದನು. ಮುಂದೆ ಇದು ಆಳುವವರ ಮನೋರಂಜನೆಯ ಒಂದು ಕೆಲಸವಾಗಿಯೂ ಪರಿವರ್ತನೆಯಾಗಿರಬಹುದು (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು. ೩೬).

ಬೇಡ-ಬೇಟೆಯ ರೂಪಕವನ್ನು ಸರ್ವಜ್ಞ ತನ್ನ ವಚನವೊಂದರಲ್ಲಿ ಬಳಸಿರುವುದು ಆ ಬೇಡನ ಧೈರ್ಯ ವನ್ನು ಸಾಂಕೇತಿಸಿರುವುದು ಕಂಡು ಬರುತ್ತದೆ.

ಎಂಟು ಪಟ್ಟದ ಮೇಲೆ ತುಂಟ ಬೇಡನು ಹುಟ್ಟಿ
ನಂಟರನ್ನೆಲ್ಲಾ ಸದೆಬಡಿದು ಶ್ರೀರಂಗದಲ್ಲಿ
ಮಂಟಪಾ ಹೋದನಯ್ಯ ಸರ್ವಜ್ಞ.

ಬೇಡರು ತಾವು ಹುಟ್ಟಿ ಸಾಧಿಸುವ ಅನೇಕ ಅದ್ಭುತ ಕಾರ್ಯಗಳನ್ನು ಸರ್ವಜ್ಞ ತನ್ನ ಕಾಲದ ಇತಿಮಿತಿ, ಸ್ಥಿತಿಗತಿಗಳೊಂದಿಗೆ ವಿವರಿಸಿದ್ದಾನೆ (ಬೇಟೆ ಮತ್ತು ಬೇಡ ಸಂದರ್ಭಗಳು ಒಂದು ಚಾರಿತ್ರಿಕ ಅಧ್ಯಯನ, ಪು.೧೩೨).

ಬೇಟೆ ಸರ್ವಜ್ಞನ ಕಾಲದ ಒಂದು ಪ್ರಮುಖ ಕಲೆಯಾಗಿರಬಹುದು. ಹಾಗೂ ವೃತ್ತಿಯಾಗಿದ್ದಂತೆಯೂ ಕಾಣುತ್ತದೆ. ಬೇಟೆಗಾರನ ಬಗೆಗೆ ಅವಿಶ್ವಾಸತೆಯನ್ನೇ ವ್ಯಕ್ತಪಡಿಸಿರುವ ಸರ್ವಜ್ಞ, ಈ ಬೇಟೆಯಿಂದ ಕೆಡಕು ಹಾಗೂ ಹಿಂಸೆಯೇ ಮೂಲವೆಂದು ಪ್ರತಿಪಾದಿಸಿದ್ದಾನೆ. ಅಹಿಂಸಾಮತಿಯಾದ ಇವನು ಬೇಟೆಯಿಂದಾಗುವ ಹಿಂಸೆಯನ್ನು ಗಮನಿಸಿ, ಅದನ್ನು ಖಂಡಿಸಿರುವುದು ಆತನ ವಚನಗಳಲ್ಲಿ ಕಾಣಬಹುದು.

ಸಾಕಿದವರನು ತಿಂಬ ಸೋಕಿದವರನು ತಿಂಬ
ಕೇಕರಿಸಿದವರ ಮುರಿತಿಂಬ ಬೇಡನ
ಸೋಕಲೇ ಬೇಡ ಸರ್ವಜ್ಞ.

''ದುಷ್ಟರನ್ನು ಕಂಡರೆ ದೂರವಿರು'', '' ಆಪತ್ತಿನಲ್ಲಿ ಕಾಲಿಗೆ ಬುದ್ಧಿ ಹೇಳು'' ಎಂಬ ಜನಪದರ ನಾಣ್ನುಡಿಯಂತೆ ಈ ಬೇಡನಿದ್ದ ಸ್ಥಳ ಬಹಳ ಹಿಂಸೆಯಿಂದಿರುತ್ತದೆ. ಕರುಣೆಯೆಂಬುದು ಕಿಂಚಿತ್ತೂ ಇರಲಾರದು. ಕೋಪವುಳ್ಳವನಾಗಿರುವ ಈತನನ್ನು ಮಾತನಾಡಿಸುವುದೆಂದರೆ; ''ಹಗ್ಗಕೊಟ್ಟು ಕೈಕಟ್ಟಿಸಿ ಕೊಂಡಂತೆಯೇ ಸರಿ'', ಕೆಲವೊಮ್ಮೆ ಸಾಕಿಸಲುಹಿದವರ ಮೇಲೆಯೂ ಹರಿಹಾಯುತ್ತಾನೆಂದು ಸರ್ವಜ್ಞ ಹೇಳಿದ್ದಾನೆ.

ಬೇಡನಿಗಿರುವ ಅಡವಿಯ ಚಿಂತೆಯನ್ನು ಮೂರು ಉಪಮೆಗಳ ಮೂಲಕ ಅಭಿವ್ಯಕ್ತಿಗೊಳಿಸಿದ ಈ ಕೆಳಗಿನ ವಚನ ಹೀಗಿದೆ;

ಬೇಡಗಡವಿಯ ಚಿಂತೆ ಆಡಿಂಗೆ ಮಳೆ ಚಿಂತೆ
ನೋಡುವ ಚಿಂತೆ ಕಂಗಳಿಗೆ , ಹೆಳವಗೆ
ದ್ದಾಡುವ ಚಿಂತೆ ಸರ್ವಜ್ಞ.

ಅದೇ ರೀತಿ ಕಂಗಳಿಗೆ ಹೊಸ ನೋಟವನ್ನು ನೋಡುವ ಚಿಂತೆ, ಕುಂಟನಿಗೆ ಎದ್ದು ಓಡಾಡಬೇಕೆಂಬ ಚಿಂತೆ ಇದ್ದೇ ಇರುತ್ತದೆ. ''ಸಪ್ಪಗಿರುತ್ತಿಪ್ಪ ಬೇಡನ ಮಾತಿಂಗೆ ಒಪ್ಪಲೇ ಬೇಡ'' ಎಂದಿರುವ ಸರ್ವಜ್ಞ, ಬೇಡನಿಗೆ ಸದಾ ಅಡವಿಯ ಚಿಂತೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ. ಅವನಿಗೆ ಹಸಿವನ್ನು ಪ್ರಾಣಿಗಳ ಬೇಟೆಯಾಡಿ ತೀರಿಸಿಕೊಂಡಾಗಲೇ ಆತನಿಗೆ ಊಟ ರುಚಿಸುತ್ತದೆ. ಆಗ ಮೈಮನಗಳೆಲ್ಲ ತಣಿಯುತ್ತದೆಂಬುದು ಅವನ ಅಭಿಪ್ರಾಯ. ಬೇಟೆಗಾರನನ್ನು ಮತ್ತೊಬ್ಬರೆದುರಿಗೆ ಒಳ್ಳೆಯವನೆಂದು ಹೊಗಳಬಾರದೆಂದು ಎಚ್ಚರಿಕೆ ನೀಡುತ್ತಾ ;

ಬೇಡನೊಳ್ಳಿದನೆಂದು ಆಡದಿರು ಸಭೆಯೊಳಗೆ
ಬೇಡ ಬೇಡಿದನು ಕೊಡದಿರೆ ಆ ಇರುಳು
ಗೋಡೆಯನು ಒಡೆವ ಸರ್ವಜ್ಞ.

ಬೇಡನ ಕೆಳೆಯಿಂದ ಕೇಡು ತಪ್ಪದೆಬಹುದು
ನೋಡಿ ನಂಬಿದರೂ ಕೇಡನು, ಕಡೆಗವನು
ಮಾಡದೇ ಬಿಡನು ಸರ್ವಜ್ಞ.

ಪ್ರಾಣಿಗಳಿಗಿರುವ ಸ್ವಭಾವ, ಸಂಕೇತ, ಆಸಕ್ತಿ, ಭಯ ಮುಂತಾದವುಗಳ ಬಗೆಗಿನ ಸ್ಥಿತಿಯನ್ನು ನಿಪುಣತೆ ಹಾಗೂ ಜಾಣ್ಮೆಯಿಂದ ಬಲ್ಲವನಾದ ಬೇಟೆಗಾರ ಇತರೇ ಮನುಷ್ಯರ ನಡೆನುಡಿಗಳ ಬಗೆಗೂ ತಿಳಿದಿರುತ್ತಾನೆ. ಅಂತಹ ಬೇಡನೊಡಗೂಡಿ ಒಳ್ಳೆಯ ಮಾತುಗಳನ್ನಾಡಿ ಸುಮ್ಮನಿದ್ದರೆ, ಅಥವಾ ಅವನು ಬೇಡಿದ್ದನ್ನು ನೀಡದೇ ಇದ್ದರೆ, ರಾತ್ರಿಯೇ ಮನೆಯ ಗೋಡೆ ಕೆಡವಿ ಎಲ್ಲವನ್ನೂ ದೋಚುವವನಾಗಿರುತ್ತಾನೆ. ಅಕಸ್ಮಿಕವಾಗಿ ಬೇಡನಿಗೆ ಸಹಕರಿಸಿದರೆ '' ಬೇಡಂಗೆ ಮಾಡಿದುಪಕಾರ ಕಡೆಯಲ್ಲಿ ಕೇಡು'' ಎಂಬಂತಾಗುತ್ತದೆಂದು ಸರ್ವಜ್ಞ ಎಚ್ಚರಿಸಿದ್ದಾನೆ. ''ಬೇಡನ ನಂಟು ನೆರೆಹೊಲ್ಲ'' ಎಂದು ಸರ್ವಜ್ಞ ತನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಬೇಡನಿಗೆ ಮಾಡುವ ಉಪಕಾರವೆಲ್ಲ '' ಬೆಟ್ಟಕ್ಕೆ ಕಲ್ಲು ಹೊತ್ತ ಹಾಗೆ'' ನಿರರ್ಥಕವೇ ಸರಿ.

## ೪.೧೪. ವೇಶ್ಯಗಾರಿಕೆ :

ವೇಶ್ಯಾವೃತ್ತಿ ಬಹು ಪುರಾತನವಾದುದು. ವೇಶ್ಯಯರನ್ನು ದೇವಲೋಕದ ಅಪ್ಸರೆಯರೆಂದು ಕರೆಯು ತ್ತಿದ್ದುದುಂಟು. ಮಹಾಭಾರತದಲ್ಲಿ ವೇಶ್ಯಯರು ನಿತ್ಯ ಸುಮಂಗಲೆಯರೆನಿಸಿ, ಶುಭ ವಸ್ತುಗಳೆಂದು ಪರಿಗಣಿಸಲ್ಪಟ್ಟಿದ್ದರು. ಮದುವೆ, ಮಂಗಳ ಕಾರ್ಯಗಳಲ್ಲಿ ಅವರ ಇರುವಿಕೆ ಶುಭಕರವಾಗಿತ್ತು. ವೇದಗಳು, ರಾಮಾಯಣ ಮತ್ತು ಮಹಾಭಾರತಗಳಲ್ಲೂ ವೇಶ್ಯಗಾರಿಕೆಯನ್ನು ಕುರಿತಾಗಿ ಉಲ್ಲೇಖಗಳು ಕಂಡು ಬರುತ್ತವೆ (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ,ಪು.೯೯). ಹಿಂದೆ ರಾಜ-ಮಹಾರಾಜರ ಆಳ್ವಿಕೆಯ ದಿನಗಳಲ್ಲಿ ವೇಶ್ಯಗೆ ತುಂಬಾ ಮಹತ್ವದ ಸ್ಥಾನವನ್ನು ಕಲ್ಪಿಸಲಾಗಿತ್ತು. ಅವರು ಆಸ್ಥಾನದಲ್ಲಿ ಗಾಯನ, ನರ್ತನ, ನಟನೆಗಳನ್ನು ಮಾಡಿ ರಾಜರ, ಸಭಾಸದರನ್ನು ತೃಪ್ತಿಗೊಳಿಸುತ್ತಿದ್ದರು. ಒಬ್ಬ ರಾಜನಿಗೆ ವೇಶ್ಯಳಾಗಿ ಬಾಳುವುದು ಅಂದು ಆಕೆಗೆ ಗೌರದ ಸ್ಥಾನವಾಗಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ. ವೇಶ್ಯೆಯನ್ನು ಸೂಳೆ,ಚಾರೆ,ಮಾನಿಸಗಳ್ಳೆ(ಕದ್ದು ಹಾದರ ಮಾಡುವವಳು),ಅನಂಗಸಂಗಿ (ಕಾಮವಿಕಾರಿ),ರಂಡಿ,ಮುಂಡೆ, ಕುಂಟಣಗಿತ್ತಿ, ಚಾಂಡಾಲಗಿತ್ತಿ, ಹಾದರಗಿತ್ತಿ, ಬಜಾರಿ, ಮಿಂಡಿ ಮುಂತಾದ ಹೆಸರುಗಳಿಂದ ಸಂಬೋಧಿಸಲಾ ಗುತ್ತದೆ. ಸರ್ವಜ್ಞನ ಕಾಲದಲ್ಲಿ ಕೆಲ ವೇಶ್ಯಯರು ಸಾಕಷ್ಟು ಹಣ ಸಂಪಾದನೆ ಮಾಡಿ ಐಷಾರಾಮವಾಗಿ ಜೀವನ ಸಾಗಿಸುತ್ತಿದ್ದರೆಂಬುದು ಆತನ ತ್ರಿಪದಿಗಳಿಂದ ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯವಾದ ಹಂಪಿಯಲ್ಲಿ ಅಚ್ಚುತರಾಯನ ಗುಡಿಯ ಎದುರಿನ ವಿಶಾಲವಾದ ಬೀದಿಗೆ ಸೂಳೆ ಬಜಾರ್ ಎಂದು ಹೆಸರಿದೆ. ಇಲ್ಲಿ ಅತೀ ಹೆಚ್ಚು ಸೂಳೆಯರು ವಾಸಿಸುತ್ತಿದ್ದರೆಂಬ (ಹಂಪಿ ಜಾನಪದ, ಪು.೭೬) ವಿಷಯ ಇತಿಹಾಸದಿಂದ ತಿಳಿದುಬರುತ್ತದೆ.

ದೇಶ ಸಂಚಾರದಲ್ಲಿ ಸರ್ವಜ್ಞ ತನ್ನ ಬದುಕಿನ ಬಹು ಭಾಗವನ್ನು ಕಳೆದಿರಬಹುದಾದ ಸಂದರ್ಭ ದಲ್ಲಿ ಆತನ ದೃಷ್ಟಿಯ ಅನೇಕ ಸೂಳೆಗಾರಿಕೆಯ ಹೆಣ್ಣು ಮಕ್ಕಳು ಕಂಡಿರಬಹುದು. ಅವರ ಬಗೆಗೆ ಕಣ್ಣಿಗೆ ಕಟ್ಟುವಂತೆ ತನ್ನ ಪ್ರತಿಕ್ರಿಯೆಯನ್ನು ಅಭಿವ್ಯಕ್ತಪಡಿಸಿದ್ದಾನೆ. ಸರ್ವಜ್ಞನ ದೃಷ್ಟಿಯಲ್ಲಿ ಈ ವೇಶ್ಯಾಗಾರಿಕೆ ಒಂದು ವಿಲಕ್ಷಣವಾದ ವೃತ್ತಿ. ಈ ವೃತ್ತಿಗೆ ಸ್ವಂತದ ಶರೀರವನ್ನುಳಿದು ಇನ್ನಾವ ಸಂಪನ್ಮೂಲ,

ಸಾಮಾನು- ಸರಂಜಾಮುಗಳ ಅಗತ್ಯವೇ ಇಲ್ಲವೆಂಬುದನ್ನು ಬಹಿರಂಗಪಡಿಸಿದ್ದಾನೆ. ಬಹಿರಂಗದಲ್ಲಿ ವೇಶ್ಯೆಯರನ್ನು ಮೆಚ್ಚಿಕೊಂಡಿದ್ದರೂ, ಅಂತರಂಗದಲ್ಲಿ ಆಕೆಯ ಜೀವನದ ಆಗು- ಹೋಗುಗಳ ಬಗ್ಗೆ ಬಹುಶಃ ಯಾರಿಗೂ ಮೆಚ್ಚುಗೆ ಇಲ್ಲ. ಹೀಗಿದ್ದರೂ ವೇಶ್ಯೆ ಇತಿಹಾಸದಲ್ಲಿ ಅಂದಿನ ಕಾಲಕ್ಕೆ ಸಮಾಜದಲ್ಲಿ ಗಣ್ಯಸ್ಥಾನ ಹೊಂದಿದ್ದಳೆಂಬುದು ತಿಳಿದುಬರುತ್ತದೆ. ಆಕೆಯ ರೂಪ, ನಡತೆ, ನಟನೆ, ಕಲಾವಂತಿಕ ಸರ್ವರನ್ನೂ ಮರಳುಗೊಳಿಸುವ ಗುಣ ಜೊತೆಗೆ ಹಣ ದೋಚುವ ಕ್ರಿಯೆ ಹೆಚ್ಚಾಗಿರುತ್ತದೆ. ಆಕೆಯನ್ನು ಸಮಾಜದ ಮೇಲ್ದರ್ಜೆಯಲ್ಲಿ ನಿಲ್ಲಿಸಿದ್ದರೂ ಒಂದೆಡೆ ಸರ್ವಜ್ಞ;

ವಾರಂಗನೆಯರಿಂಗೆ ಯಾರೆಂಜಲೇನಯ್ಯ
ಊರೆಂಜಲನ್ನು ತಿಂಬುವಾ ಶುನಕಂಗೆ
ಯಾರೆಂಜಲೇನು ಸರ್ವಜ್ಞ.

ವೇಶ್ಯಾ ಸ್ತ್ರೀಯರಿಗೆ ಯಾರ ಎಂಜಲು (ಸಂಗ) ಆದರೇನು ? ಊರಿನ ಎಂಜಲನ್ನು ತಿಂದು ಬದುಕುವ ನಾಯಿಗಳಿಗೆ ಯಾರ ಎಂಜಲು ತಿಂದರೂ ಹೊಟ್ಟೆ ತುಂಬಿದರೆ ಸಾಕೆಂಬಂತೆ ವೇಶ್ಯೆಯರ ಜೀವನವಾಗಿದೆ ಎಂದು ಹಳಿದಿದ್ದಾನೆ. ಸರ್ವಜ್ಞನ ಕಾಲದ ವೇಶ್ಯೆ ಹಿಂದಿನ ಎಲ್ಲ ಅಭಿಪ್ರಾಯ ಗೊಂದಲಗಳ ಪ್ರತೀಕ ವಾಗಿದ್ದಾಳೆ. ಅವಳ ಸ್ಥಾನ-ಮಾನ ಸ್ವರೂಪಗಳ ಜೊತೆಗೆ ಸಮಾಜಕ್ಕೆ ಅವಳಿಂದ ಒದಗುವ ಅನಿಷ್ಟವನ್ನು ಅಲಕ್ಷಿಸಿದ್ದಾನೆ.

ಸೂಳೆಯನು ಹೋದವನ ಬಾಳುವೆಯನೇನೆಂಬೆ ?
ಕಾಳು ಮೈಬಣ್ಣ ಹಲ್ಲುದುರೆ ಹರಿಯುವಾ
ಮೂಳ ನಾಯಕ ಸರ್ವಜ್ಞ.

ವೇಶ್ಯೆರ ಸಂಗವನ್ನು ಮಾಡಿದವನ ಜೀವನವು ದಿಕ್ಕಿಲ್ಲದೇ ತಿರುಗುತ್ತಿರುವ ಮುದಿ ಕರಿನಾಯಿಯಂತೆ. ಹೇಸಿಗೆಯಾದದ್ದೆಂದು ತಿರಸ್ಕರಿಸಿದ್ದಾನೆ.

ಇನ್ನು ಗ್ರಾಮೀಣ ಪರಿಸರದ ಸಮಾಜದಲ್ಲಿ ವೇಶ್ಯೆಗೆ ಮನ್ನಣೆಯೇ ಇಲ್ಲ. ಅವಳು ಮಂಗಳ ಕಾರ್ಯಗಳಲ್ಲಿ ತೊಡಗುವುದಂತಿಲ್ಲ. ಅನೇಕ ಕುಂಟುಂಬದ ಸದಸ್ಯರು ಈ ವೇಶ್ಯೆಯರ ಸಹವಾಸದಿಂದ ಹಾಳಾಗಿದ್ದಾರೆ. ಇಂತಹ ವೇಶ್ಯಯರ ಬೆನ್ನು ಹತ್ತಿದ ಗಂಡಿನ ಗುಣದ ಬೆಲೆಗೆ ಜನಪದರು ತಮ್ಮ ತ್ರಿಪದಿಯಲ್ಲಿ;

ಸೂಳೆಗೆ ಹೋದಾವ ಏನಾದ ಎಂತಾದ
ಕಾಡು ನಾಯಾದ, ಕಪಿಯಾದ । ಮರುದಿನಕೆ
ಸೂಳೆ ಕಾಲಿಗೆ ಕೆರವಾದ.

ಇಷ್ಟೊಂದು ಹೀನಾಯ ಸ್ಥಿತಿಗೆ ತಲುಪುವವನು ಈ ಗಂಡುಜೀವಿ. ನಾಯಿಯಾಗಿ, ಕಪಿಯಾಗಿ ಕೊನೆಗೆ ಸೂಳೆಯ ಕಾಲಿಗೆ ಕೆರವಾಗುವ, ಅಂದರೆ ತನ್ನತನವನ್ನೇ ಮಾರಿಕೊಂಡು ನಿರ್ಜೀವಿಯಾಗುವ ಸ್ಥಿತಿಯನ್ನು ಜನಪದರು ಕಡೆಗಣಿಸಿ ಹೇಳಿದ್ದಾರೆ.

ಸೂಳಿಯ ಕೂಡಾಡಿ ಹುಡುಗ್ಯಾಕ ಬಡವಾದ
ಬಂಗಾರ ಒತ್ತಿ, ಬಳಿ ಒತ್ತಿ । ಆದಾವ
ಸಣ್ಣ ಸೀರೊತ್ತಿ ಸವೆದ್ಹೋದ ॥

ಎಂಬ ಈ ತ್ರಿಪದಿಯಲ್ಲಿ ಸೂಳೆಯಿಂದ ಹಣವೂ ಹಾಳು, ಮಾನವೂ ಹಾಳು, ಆರೋಗ್ಯವೂ ಹಾಳೆಂಬ ಸತ್ಯವನ್ನು ಇಲ್ಲಿ ಜನಪದರು ನಂಬಿದ್ದಾರೆ. ಹೀಗೆ ವೇಶ್ಯೆಯ ಸಂಗ ಮಾಡಿದವರ ಸ್ಥಿತಿ ರೊಚ್ಚಿನಂತಾಗುವುದೆಂದು ಹೇಳಿದ್ದಾನೆ. ಅದೇರೀತಿ ಸರ್ವಜ್ಞನು ಸಹ ಸೂಳೆಯ ಸೆರಗಿನಲ್ಲಿ ಬಿದ್ದವನ ಪಾಡು ಗಾಳಕ್ಕೆ ಸಿಕ್ಕ ಮೀನು ಎನ್ನುತ್ತಾ;

ವ್ಯಸನದ ದೆಸೆಯಿಂದ ಮಸಿ ಹೆಣ್ಣಿನೊಳಗಾಗಿ
ಹುಸಿದು ಹೋಗುವಳ ಒಡನಾಡಿ,ತಾ ನುಗ್ಗು
ನುಶಿಯಾದ ಕಾಣೋ । ಸರ್ವಜ್ಞ.

ಅವಿವೇಕತನಕ್ಕೆ ಒಳಗಾದ ಜಾರ ಪುರುಷ, ಸರ್ವ ಸಾಮಾನ್ಯವಾಗಿ ತನ್ನ ವ್ಯಸನದ ದೆಸೆಯಿಂದ ಅಪಾರ ಹಾನಿಯನ್ನು ತಂದುಕೊಳ್ಳುವನು. ವೇಶ್ಯೆಯ ಸುಳಿಗೆ ಸಿಲುಕಿದವನ ದುರ್ಗತಿ ಹೇಳಲಾಸಲ್ಲ. ತನ್ನ ಚಟ ತೀರಿಸಿಕೊಳ್ಳಲು ಆತ ಅವಳ ಕಪಿಮುಷ್ಠಿಗೆ ಸಿಕ್ಕು, ಆಕೆಯ ಸುಳ್ಳಿನ ಸೋಗಲಾಡಿತನಕ್ಕೆ ಬಲಿಯಾಗಿ , ಹಾಳಾಗಿ ಹೋಗುತ್ತಾನೆ. ಇದು ಇಷ್ಟಕ್ಕೆ ಕೊನೆಗೊಳ್ಳುವುದಿಲ್ಲ. ಆತನ ದುರ್ವಿಪಾಕ ಒಮ್ಮೊಮ್ಮೆ ಜಾರತನದ ತಿರುಗುಬಾಣಕ್ಕೂ ಆತ ಬಲಿಯಾಗುವ ಪ್ರಸಂಗ ಬರುತ್ತದೆ (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು.೯೨).

ವೇಶ್ಯೆಯನ್ನು ಲೋಕವು ಗುರುತಿಸುವುದು ಆಕೆಯ ಹಾವಾಭಾವ, ನಟನೆಗಳಿಂದಲೇ. ಆಕೆಯ ನಟನೆ, ವಯ್ಯಾರ, ವನಪುಗಳು ತನಗಾಗಿಯೇ ಅಲ್ಲ; ವಿಟರನ್ನು ಮರುಳುಗೊಳಿಸಿ, ಅವರ ಹಣವನ್ನು ಸೂರೆಗೊಳ್ಳುವುದಕ್ಕಾಗಿ.

ಬಿಕ್ಕು ಬಿಕ್ಕನೇ ತೋರಿ ಇಕ್ಕುವಳು ಕಣ್ಣೀರ
ಸಿಕ್ಕಿದಳು ಸೂಳೆ ಎನಬೇಡ ರೊಕ್ಕ
ತಕ್ಕೊಂಬುವುದಕ್ಕೆ ಸರ್ವಜ್ಞ.

ಸೂಳೆಯೂ ಬಿಕ್ಕಿ ಬಿಕ್ಕಿ ಅತ್ತು ಕಣ್ಣೀರು ಸುರಿಸುವುದು ಕೇವಲ ನಟನೆಗಾಗಿ. ಸೂಳೆಯು ತನ್ನ ಕೈಯಲ್ಲಿ ಸಿಕ್ಕಳೆಂದು ಭಾವಿಸಬಾರದು. ಅವಳ ನಟನೆಯು ಕೇವಲ ಹಣವನ್ನು ದೋಚುವುದಕ್ಕಾಗಿ ಮಾತ್ರ. ಇದೊಂದು ಅವಳಿಗೆ ವ್ಯಾಪಾರವಾಗಿದ್ದರಿಂದ ಇಂತಹ ಕೆಲಸ ಅನಿವಾರ್ಯವಾಗಿತ್ತೆಂಬುದು ತಿಳಿದುಬರುತ್ತದೆ. ಆದರೆ ಜಾನಪದರು ಈ ವೇಶ್ಯಾ ವೃತ್ತಿಯನ್ನು ತಿರಸ್ಕರಿಸಿದ್ದಾರೆ. ಅಲ್ಲಿ ಪತಿವ್ರತೆಗೆ ಮಹತ್ವ ನೀಡಿದ್ದಾರೆ. ಬೇರೆ ಗಂಡಸರನ್ನು ನೋಡುವುದಾಗಲಿ, ಮಾತನಾಡುವುದಾಗಲಿ ಅವರಲ್ಲಿ ನಿಷಿದ್ಧ. ನಾಲ್ಕು ಗೋಡೆಯ ಮಧ್ಯೆ ಜೀವನ ನಡೆಸುವ ಹೆಣ್ಣಿಗೆ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಗೌರವದ ಸ್ಥಾನ ನೀಡಲಾಗಿದೆ.

ಸರ್ವಜ್ಞ ಇಂತಹ ಮಹಿಳೆಯರನ್ನು ನೋಡಿ ಗೌರವಿಸಿದ್ದಲ್ಲದೆ, ವೇಶ್ಯೆಯರ ಬಗೆಗೆ ತಿರಸ್ಕಾರದ ಭಾವನೆ ತಾಳಿದ್ದಾನೆ. ವೇಶ್ಯೆಗೆ ಹಣ ಸಂಪಾದನೆಯೇ ಗುರಿಯಾಗಿತ್ತೇ ಹೊರತು ಮತ್ಯಾವುದೂ ಅಲ್ಲ.

ಹಣವ ಕಂಡರೆ ಬಾಯ ಹೆಣ ಬಿಡುವುದೆಂದಿರಲು
ಹಣ ನೋಡಿ ಆಣೆಯ ಮಾಡುವಳು ಇಲ್ಲದಿರೆ
ಒಣ ಮಾತಿನವಳು ಸರ್ವಜ್ಞ.

'ಹಣವನ್ನು ಕಂಡರೆ,ಹೆಣವೂ ಬಾಯಿ ಬಿಡುವುದು' ಎಂಬ ಗ್ರಾಮೀಣ ನಾಣ್ಣುಡಿಯ ಮಾತನ್ನು ಸರ್ವಜ್ಞ ಇಲ್ಲಿ ನೇರವಾಗಿ ಬಳಸಿಕೊಂಡಿದ್ದಾನೆ. ಆದರಂತೆ ಸೂಳೆಯೂ ಸಹ ತನ್ನಲ್ಲಿಗೆ ಬಂದವರಲ್ಲಿ ಹಣವಿದ್ದರೆ ಆಣೆಯನ್ನು ಮಾಡಿ ಮರಳುಮಾಡುವಳು. 'ಜಾರೆಗೆ ನೀತಿ ಇಲ್ಲ, ಮಾರಿಗೆ ಕರುಣೆ ಇಲ್ಲ' ಎಂಬಂತೆ ವಿಟರಲ್ಲಿ ಹಣವಿರದಿದ್ದರೆ, ಕೇವಲ ಒಣಮಾತುಗಳನ್ನಾಡಿ ಹೊರದೂಡುವಳು.

ವೇಶ್ಯೆಯರು ಸಾಮಾನ್ಯವಾಗಿ ಸಿರಿವಂತರಾಗಿರುತ್ತಾರೆ. ಅವರಿಗೆ ದಾಸ-ದಾಸಿಯರಿರುವುದುಂಟು. ಸರ್ವಜ್ಞನಿದ್ದ ಕಾಲದಲ್ಲಿ ರಾಜರ ಆಳ್ವಿಕೆಯಲ್ಲಿ ವೇಶ್ಯೆಯನ್ನು ಅನೇಕರು ಬಯಸುತ್ತಿದ್ದರು. ಅಂದಿನ ಸಮಾಜದಲ್ಲಿ ಅಧಿಕಾರಿಗಿದ್ದ ಗೌರವದ ಸ್ಥಾನ ಅವಳಿಗೂ ಇತ್ತು. ಅವರು ಕಲಾವಿದರೂ ಆಗಿದ್ದುದರಿಂದ ತಮ್ಮ ಅಭಿರುಚಿ, ಸ್ಥಾನ-ಮಾನಗಳಿಗೆ ತಕ್ಕಂತಹ ವಿಟರನ್ನು ಬಯಸುತ್ತಿದ್ದರು. ವೇಶ್ಯೆಯರನ್ನು ಎಲ್ಲ ಜಾತಿಯವರು ಬಯಸುತ್ತಿದ್ದುದರಿಂದ ಅವಳಿಗೆ ಹಣ ಮುಖ್ಯವಾಗಿತ್ತೇ ಹೊರತು, ವಿಟರಲ್ಲಿ ಜಾತಿಯನ್ನು ಅರಸುತ್ತಿರುಲಿಲ್ಲ.

ಬೆಳೆಗೆ ಮಳೆ ಬರಲೇಸು ಗಿಳಿಗೆ ಪಂಜರ ಲೇಸು
ಸುಳಿಗಾಳಿ ಲೇಸು ಬೆಮರಿಂಗೆ ಸೂಳೆಗಂ
ಗಳಿಕೆಯೇ ಲೇಸು ಸರ್ವಜ್ಞ.

ಒಕ್ಕಲಿಗೆ ಊರಾಸೆ ಮಕ್ಕಳಿಗೆ ಮನೆಯಾಸೆ
ಜಕ್ಕವಕ್ಕಿಗೆ ಕೊಳದಾಸೆ, ಸೂಳೆಗೆ
ರೊಕ್ಕದಾಸೆ ಸರ್ವಜ್ಞ.

ಬೆಳೆಗಳಿಗೆ ಆಗಾಗ್ಗೆ ಮಳೆ ಬರುತ್ತಿದ್ದರೆ ಉತ್ತಮ. ಸಾಕಿದ ಗಿಳಿಯು ಪಂಜರದೊಳಗಿದ್ದರೆ ಅದಕ್ಕೆ ಅನೇಕ ಮಾತುಗಳನ್ನು ಕಲಿಸಬಹುದು. ಕೆಲಸ ಮಾಡುವಾಗ ಬೆವರು ಬರುವುದು ಸಹಜ. ಆ ಸಂದರ್ಭದಲ್ಲಿ ತಣ್ಣನೆಯ ಗಾಳಿ ಇದ್ದರೆ ಮನಸ್ಸಿಗೂ, ದೇಹಕ್ಕೂ ಹಿತಕರ. ಅದೇರೀತಿ ವೇಶ್ಯೆಗೆ ಹಣದ ಅವಶ್ಯಕತೆ ಇದ್ದಾಗ ಅನೇಕ ಶ್ರೀಮಂತ ವಿಟರೊಡಗೂಡಿ ಸಾಕಷ್ಟು ಹಣ ಸಂಪಾದಿಸುತ್ತಾರೆ. ರೊಕ್ಕದ ಗಳಿಕೆಯೇ ಅವಳಿಗೆ ಸರ್ವಸ್ವ ಹಾಗೂ ಸುಖದಾಯಕ. ಮಿಕ್ಕುದೆಲ್ಲವೂ ಅದಕ್ಕೆ ಪೋಷಕ.

ಕತ್ತೆಗಂ ಗುಣವಿಲ್ಲ, ಕತ್ತಿಗಂ ದಯೆಯಿಲ್ಲ
ಬತ್ತಿದಾ ಕೆರೆಗೆ ತುರುವಿಲ್ಲ, ಸೂಳೆಯರೊ
ಳುತ್ತಮರು ಇಲ್ಲ ಸರ್ವಜ್ಞ.

ಕತ್ತೆಗೆ ಹೇಳಿಕೊಳ್ಳುವಂತಹ ಯಾವ ಗುಣಗಳೂ ಇರಲಾರವು; ಖಡ್ಗಕ್ಕೆ ದಯೆ-ದಾಕ್ಷಿಣ್ಯಗಳು ಇರುವುದಿಲ್ಲ. 'ಬತ್ತಿದಾ ಕೆರೆ' ಬಹುಶಃ ಹಳ್ಳಿಗಳಲ್ಲಿ ಕಂಡುಬರುವ ಬತ್ತಿದ ಕೆರೆಯನ್ನು ನೋಡಿದ ಸರ್ವಜ್ಞ ಅಲ್ಲಿ ದನಗಳ ಹಿಂಡು ಇಲ್ಲದಿರುವುದನ್ನು ತಿಳಿದು ತನ್ನ ವಚನದಲ್ಲಿ ಹೋಲಿಕೆಯಾಗಿ ಬಳಸಿಕೊಂಡಿದ್ದಾನೆ. ಹೀಗೆ ವೇಶ್ಯೆಯಲ್ಲಿಯೂ ಸಹ ಯಾವ ಉತ್ತಮ ಗುಣಗಳು ಕಾಣಬರುವುದಿಲ್ಲವೆಂಬುದನ್ನು ತಿಳಿಯಪಡಿಸಿದ್ದಾನೆ. " ಅಕ್ಕನಿದ್ದರೆ ಮಾವ; ರೊಕ್ಕವಿದ್ದರೆ ಸೂಳೆ " ಎಂಬ ಗಾದೆಯಂತೆ ಸೂಳೆಗೆ ರೊಕ್ಕ ಗಳಿಸುವ ಹಂಬಲವಿರುವುದರಿಂದ ಅವಳು ತನ್ನ ದೇಹವನ್ನೇ ಒತ್ತೆ ಇಡುವವಳು.

ಮಾರಿಕೊಂಬುವಳನ್ನು ಮೀರಿ ನಂಬುವನೆಗ್ಗ
ಹಾರುವ ಹುಳವು ಹಣ್ಣೆಂದು ಸೊಡರಿಂಗೆ
ಹಾರಿ ಸತ್ತಂತೆ ಸರ್ವಜ್ಞ.

ಎಷ್ಟಾದರೂ ವೇಶ್ಯೆ ಬೆಲೆವೆಣ್ಣು; ಬೆಲೆ ಕೊಟ್ಟು ಕೊಳ್ಳುವ ಹೆಣ್ಣು. ಅಂತವಳನ್ನು ಮಿತಿಮೀರಿ ವಿಟ ಪುರುಷನೊಬ್ಬ ನಂಬಿದರೆ ಕೇಡು ತಪ್ಪಿದ್ದಲ್ಲ. ಉರಿಯುವ ದೀಪವನ್ನು ಹಣ್ಣೆಂದು ಭ್ರಮಿಸಿ ಅದನ್ನು ಮುತ್ತಲು ಹೋಗುವ ಪತಂಗಕ್ಕೆ ಒದಗುವ ಗತಿಯೇ ಅವನಿಗಾಗುತ್ತದೆ. ಆದ್ದರಿಂದ ಜನಪದ ಗರತಿಯೊಬ್ಬಳು ಸೂಳೆಯ ಮನೆಗೆ ಹೋಗಿ ಬಂದವನನ್ನು ಕಂಡು ಎರವಿನ ಸೂಳೆ ಸ್ಥಿರವೇನೋ ? ಎಂದು ಪ್ರಶ್ನಿಸಿದ್ದಾಳೆ. ಇನ್ನೂ ಮುಂದುವರೆದು ;

ತಂಬಿಟ್ಟಿಗುಪ್ಪುಂಟೆ ತವರೀಗೆ ಮುಪ್ಪುಂಟೆ
ಡೊಂಬನಾ ಮನೆಗೆ ಕದವುಂಟೆ, ಸೂಳೆಯ
ನಂಬಿದನಿಗುಂಟೆ ಸಂಸಾರ ?.

ಸಾಮಾನ್ಯವಾಗಿ ತಂಬಿಟ್ಟನ್ನು ನಾಗರ ಪಂಚಮಿ ಹಬ್ಬದಲ್ಲಿ ತಯಾರಿಸಲಾಗುತ್ತದೆ. ಆ ಪದಾರ್ಥ ತುಂಬಾ ಸಿಹಿ ಇರುತ್ತದೆಯೇ ಹೊರತು ಅದಕ್ಕೆ ಯಾರೂ ಉಪ್ಪನ್ನು ಬೆರೆಸಲಾರರು. ಅದೇರೀತಿ ಹೆಣ್ಣಿಗೆ ತವರುಮನೆ ಎಂಬುದೇ ಸ್ವರ್ಗಕ್ಕೆ ಸಮಾನವಾದುದಾಗಿರುತ್ತದೆ. ಅದು ಎಂದೆಂದಿಗೂ ಸುಖ, ಸಮೃದ್ಧಿ ನೀಡುವ ತಾಣವಾಗಿರುತ್ತದೆ. ಅದಕ್ಕೆ ಮುಪ್ಪು ಎಂಬುದೇ ಇರಲಾರದೆಂಬುದು ಜನಪದ ಗರತಿಯ ಭಾವನೆ. ದೊಂಬರಾಟವಾಡುವವರು ಅಂದರೆ ಹೊಟ್ಟೆ ಹೊರೆದುಕೊಳ್ಳಲು ನಾನಾ ವಿಧವಾದ ನೋವನ್ನು ಅನುಭವಿಸಿ ಜನರಿಗೆ ಆಶ್ಚರ್ಯ ತರಿಸುವ ಆಟಗಳನ್ನು ಪ್ರದರ್ಶಿಸುವವರು. ಇವರಿಗೆ ದಿನನಿತ್ಯದ ಹೊಟ್ಟೆಯ ಚಿಂತೆ ಇರುವಾಗ ತಮ ಮನೆಗೆ ರಕ್ಷಣೆಯ ವಿಷಯದಲ್ಲಿ ಹೆಚ್ಚಿನ ಗಮನ ಹರಿಸಲಾರರು. ಅದೇರೀತಿ ಸೂಳೆಯ ಮನೆಗೆ ಹೋಗುವವನು ಮತ್ತು ಸೂಳೆಯ ರುಚಿಯನ್ನು ಅನುಭವಿಸಿದವನಿಗೆ ಸಂಸಾರ ಸುಖದ ಬಗ್ಗೆ ಕಲ್ಪನೆ ಇರುವುದಿಲ್ಲವಾದ್ದರಿಂದ ಜನಪದರ ಪತಿವ್ರತೆ ಮಹಿಳೆ ತನ್ನ ಗಂಡನಿಗೆ 'ಸೂಳೆಯ ನಂಬಿದನಿಗುಂಟೇ ಸಂಸಾರ?' ಎಂದು ಅನೇಕ ಹೋಲಿಕೆಗಳ ಮೂಲಕ ತನ್ನ ಗಂಡನನ್ನು ಪ್ರಶ್ನಿಸಿರುವುದು ಕಂಡುಬರುತ್ತದೆ. ಗ್ರಾಮೀಣ ಸಮಾಜದಲ್ಲಿ ಸೂಳೆಯ ಸಹವಾಸದಲ್ಲಿದ್ದ ತನ್ನ ಅಣ್ಣನನ್ನು ಕಂಡ ಒಬ್ಬ ತಂಗಿ ತ್ರಿಪದಿಯ ಮೂಲಕ ಮರ್ಯಾದಸ್ಥರ ಮಾನ ಹೇಗೆ ಹೋಗುತ್ತದೆಂಬುದನ್ನು ತುಂಬಾ ಮಾರ್ಮಿಕವಾಗಿ ಉಪಮೆಯ ಮೂಲಕ ವ್ಯಕ್ತಪಡಿಸಿದ್ದಾಳೆ.

ಮಂಜು ಮರಳಲ್ಲ, ಮರಳು ಸಕ್ಕರೆಯಲ್ಲ
ಮಡಗಿದ್ದ ಸೂಳೆ ಸ್ಥಿರವಲ್ಲ ಅಣ್ಣಯ್ಯ
ಮನೆಗೆ ತಂದಿರಿಸು ಮಡದೀಯ (ಜನಪದ ಮುಕ್ತಗಳು, ಪು. ೩೭).

ಮಂಜಿನ ಹನಿಗಳು ಎಂದಿಗೂ ಮರಳಾಗುವುದಿಲ್ಲ. ಬಿಳಿಯ ಮರಳಿನ ಕಣಗಳು ನೋಡಲು ಸಕ್ಕರೆಯಂತೆ ಕಂಡರೂ ಅದು ಸಿಹಿಯಾಗಿರುವುದಿಲ್ಲ. ಕೇವಲ ಹಣಕ್ಕಾಗಿ ಹಾತೊರೆಯುವ ಸೂಳೆಯನ್ನು ನಂಬಿ ಜೀವನ ಮಾಡುವುದು ಯೋಗ್ಯವಲ್ಲ ಆದ್ದರಿಂದ ಶಾಶ್ವತವಾಗಿ ಸುಖವಾದ ಜೀವನ ನಡೆಸಲು ಒಂದು ಹೆಣ್ಣಿಗೆ ತಾಳಿ ಕಟ್ಟಿ ಮಡದಿಯಾಗಿ ಸ್ವೀಕರಿಸಿ ಜೀವನ ನಡೆಸೆಂಬುದು ಆ ತಂಗಿಯ ಮನದ ಇಚ್ಛೆ.

ಸಂತಿ ಸೂಳಿ ನಂಬಿ ಮನಿಯ ಹೆಂಡ್ತಿ ಬಿಟ್ಟ
ಸಂತಿಲಿ ಇರುವ ಬದನಿಯ ಕಾಯ್ನಂಬಿ
ಕರು ಎಮ್ಮಿ ಬಿಟ್ಟ - ಕುಲಗೇಡಿ (ಜನಪದ ಮುಕ್ತಗಳು - ಪು. ೩೪).

ಎಂದು ಹೀಯಾಳಿಸುತ್ತಾಳೆ. ಸಂತೆಯಲಿ ಕಾಣುವ ಸೂಳೆಯನು ನಂಬಿ ಅವಳ ಹಿಂದೆ ಹೊರಟ ತನ್ನಣ್ಣನ ಸ್ಥಿತಿಯನ್ನು ನೋಡಿ ಆ ತಂಗಿ ಮೇಲಿನಂತೆ ಕೇಳಿದ್ದಾಳೆ. ಸಂತೆಯಲ್ಲಿ ಸದಾ ಬದನೇಕಾಯಿ ದೊರೆಯುತ್ತದೆಂದು ತಿಳಿದು, ಮನೆಯಲ್ಲಿ ಕಟ್ಟಿರುವ ಹಾಗೂ ಹಾಲು ಕೊಡುವ ಎಮ್ಮೆ ಕರುವನ್ನು ಬಿಟ್ಟುಬಿಡುವುದು ಎಷ್ಟೊಂದು ಹೇಯತನವಾದುದೆಂದು ಎಚ್ಚರಿಕೆ ನೀಡಿದ್ದಾಳೆ. ಸರ್ವಜ್ಞನು ಸಹ ತನ್ನ ವಚನದಲ್ಲಿ ಈ ರೀತಿ ಪ್ರಶ್ನಿಸಿದ್ದಾನೆ;

ಜತ್ತು ಹೆಂಡತಿ ಮೇಲೆ, ಮತ್ತೆ ಸೂಳೆಯು ಏಕೆ
ಕುತ್ತವದು ಬಂದು ಮುಸುಗರೆವ ಮನುಜಂಗೆ
ಮತ್ತೆ ಕಿಚ್ಚೇಕೆ ? ಸರ್ವಜ್ಞ.

ಮನೆಯಲ್ಲಿ ಅನುಕೂಲಳಾಗಿರುವ ಹೆಂಡತಿ ಇದ್ದಾಗ ಮತ್ತೆ ಸೂಳೆಯ ಚಿಂತೆ ಏಕೆ ?. ನಂತರ ಅಂತಹವಳ ಸಹವಾಸದಿಂದ ರೋಗಗಳೇನಾದರೂ ಬಂದಾಗ ಕೋಪ ಮಾಡಿಕೊಳ್ಳುವುದೇಕೆ ? ಎಂಬ ಪ್ರಶ್ನೆಗಳಿಂದ ತಿಳಿಹೇಳಿದ್ದಾನೆ.



ಈ ರೀತಿಯಾಗಿ ಬಹು ಪ್ರಸಿದ್ಧ ಕಾಯಕ ಜೀವಿಗಳಾದ ಕಮ್ಮಾರ, ಬಡಿಗ, ಅಕ್ಕಸಾಲಿಗ, ಕುಂಬಾರ ಮುಂತಾದ ವರನ್ನು ಸರ್ವಜ್ಞನ ಕಾಲದಲ್ಲಿ ಪಂಚಾಳರೆಂದು ಕರೆಯಲಾಗುತ್ತಿತ್ತು. ಅಲ್ಲದೆ, ವಿಶ್ವಕರ್ಮ ಸಮಾಜದ ವರೆಂದೂ ಕರೆಯಲಾಗುತ್ತಿದೆ. ಪುರೋಹಿತ ವರ್ಗಕ್ಕೆ ಸರಿಸಮಾನವಾಗಿ ಬೆಳೆದು ಬಂದ ಈ ಪಂಚಾಳ ವರ್ಗವು ಸಹ ಸರ್ವಜ್ಞನ ಕಾಲದಲ್ಲಿ ತುಂಬಾ ಮಹತ್ವವನ್ನು ಪಡೆದಿತ್ತು. ಅಂದಿನ ಸಮಾಜದಲ್ಲಿ ಇವರಿಲ್ಲದೆ, ಯಾವ ಕೆಲಸಗಳೂ ನಡೆಸುತ್ತಿರಲಿಲ್ಲ. ವೇದಾಗಮ ಕಲಿತು, ರಾಜಾಶ್ರಯ ಪಡೆದುಕೊಂಡು ತಮ್ಮನ್ನು ತಾವೇ ಇತರರಿಗಿಂತ ಶ್ರೇಷ್ಠರೆಂದು ಮೆರೆಯುತ್ತಿದ್ದ ಪುರೋಹಿತ ವರ್ಗಕ್ಕೆ ವಿರುದ್ಧವಾಗಿ ಈ ಪಾಂಚಾಳರು ಸಹ ಎಲ್ಲ ಗೃಹ ಕೈಗಾರಿಕೆಗಳನ್ನು ರೂಢಿಸಿಕೊಂಡು ಸಮಾಜದಲ್ಲಿ ತಮ್ಮ ಅಸ್ತಿತ್ವದ ಬೇಡಿಕೆ ಯನ್ನು ಅತ್ಯಂತ ಅವಶ್ಯಕವೆಂಬಂತೆ ಬದುಕಿದವರು.

ಇವರು ಒಂದಲ್ಲಾ ಒಂದು ಬಗೆಯಲ್ಲಿ ಪ್ರತಿಯೊಬ್ಬರಿಗೂ ಅವಶ್ಯಕವಾದ ವಸ್ತುಗಳನ್ನು ತಯಾರಿಸಿಕೊಡುವ ಸೇವಾನಿಷ್ಠತೆಯಲ್ಲಿ ವಿಶೇಷ ಹೆಸರನ್ನು ಪಡೆದವರು. ಉದಾಹರಣೆಗೆ; ರೈತರಿಗೆ ಒಕ್ಕಲುತನಕ್ಕೆ ಬೇಕಾದ ಸಲಕರಣೆಗಳನ್ನು, ಗೃಹ ಉಪಯೋಗಿ ಕೆಲಸಕ್ಕೆಬೇಕಾದ ಸಲಕರಣೆಗಳನ್ನು ಮಹಿಳೆಯರಿಗೆ ಹಾಗೂ ದೇವರ ವಿಗ್ರಹಗಳಿಗೆ ಬೇಕಾದ ವೈವಿಧ್ಯಮಯವಾದ ಆಭರಣಗಳನ್ನು ದೇವಸ್ಥಾನಗಳಿಗೆ ಬೇಕಾದ ರಥ, ಅಡ್ಡಪಲ್ಲಕ್ಕಿ ಮುಂತಾದ ವಸ್ತುಗಳನ್ನು ಕಾಲಕಾಲಕ್ಕೆ ತಯಾರಿಸಿ ಕೊಡುತ್ತಾ ಬಂದಂತಹವರು. ಅಷ್ಟೇ ಅಲ್ಲ ಗ್ರಾಮದೇವತೆಗಳ ವಿಶೇಷ ಪೂಜಾ ಕಾರ್ಯದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು, ಮುಂದೆ ನಿಂತು ಕಾರ್ಯ ನಿರ್ವಹಿಸುವುದು ಎಲ್ಲಾ ಧರ್ಮದವರಿಗೆ ದೇವಸ್ಥಾನಗಳನ್ನು ಕಟ್ಟಿಕೊಡುವುದು ಮತ್ತು ವಿಶೇಷವಾದ ಶಿಲ್ಪ ರಚನೆಯಲ್ಲೂ ಪಳಗಿದವರಾಗಿದ್ದರು.

ಇವರು ಭಾರತಿಯ ಸಂಸ್ಕೃತಿ ಅಭಿವೃದ್ಧಿಗೆ ದುಡಿದವರು. ವಿಜಯನಗರ ಸಾಮ್ರಾಜ್ಯ ಪತನವಾದ ನಂತರದ ದಿನಗಳಲ್ಲಿ ಈ ವರ್ಗದವರು ಹರಿದು ಹಂಚಿ ಹೋದರಲ್ಲದೆ, ತಮ್ಮ ಕೆಲಸದಲ್ಲಿ ತುಂಬಾ ಬದಲಾವಣೆಯನ್ನು ಕಂಡುಕೊಂಡರೆಂಬ ವಿಷಯ ಇತಿಹಾಸದಿಂದ ತಿಳಿದುಬರುತ್ತದೆ.

ಗ್ರಾಮೀಣ ಕಸುಬು ಎಂದರೆ ಮನೆತನದ ಉದ್ಯೋಗ,ಪರಂಪರಾಗತವಾಗಿ ಬಂದ ವೃತ್ತಿ ಅಥವಾ ಜಾತಿ ವೃತ್ತಿ ಎಂದು ಹೇಳಬಹುದು. ಉಪ ಜೀವನದ ವೃತ್ತಿಗಳಾದ ಈ ಕಸುಬುಗಳನ್ನು ರೂಢಿಸಿಕೊಂಡ ಜನಪದರು ಅನೇಕ ವರ್ಗಗಳಲ್ಲಿ ಕಂಡುಬರುತ್ತಾರೆ. ಈಗಾಗಲೇ ತಿಳಿಸಿರುವಂತೆ ಅಕ್ಕಸಾಲಿಗನಲ್ಲಿ ನಂಬಿಕೆ ಇಲ್ಲದಿರುವಂತೆ; ಜಾಲಗಾರನಲ್ಲಿ ದಯೆ-ಧರ್ಮವಿಲ್ಲ; ಕಟುಕನಿಗೆ ಮರುಕಿಲ್ಲ; ಬೇಡಂಗೆ ಶುಚಿಯಿಲ್ಲ; ಡೊಂಬನಿಗೆ ವೃತ್ತಿಯೇ ಇಲ್ಲ; ಜೇಡನಿಗೆ ಮಗ್ಗ ಲೇಸು, ಗಾಣಿಗನಿಗೆ ಎಳ್ಳು ಲೇಸು, ಹರದನಿಗೆ ಲಾಭ, ಸುಳ್ಳು ಸಿಂಪಿಗನಿಗೆ ಹೀಗೆ ಉದ್ಯೋಗಗಳಲ್ಲಿ ನಿರತರಾಗಿರುವವರ ಬಗೆಗೆ ವಿಶ್ಲೇಷಿಸಲಾಗಿದೆ. ''ದುಡಿಮೆಯೇ ದುಡ್ಡಿನ ತಾಯಿ'' ಎಂಬ ಅನುಭವದ ಮಾತಿನಂತೆ ಮನುಷ್ಯ ಯಾವು ದಾದರೂ ಕಸುಬಿನಲ್ಲಿ ತೊಡಗಿರಬೇಕೆಂಬುದೇ ಸರ್ವಜ್ಞನ ನಿಲುವು. ಆ ಕಸುಬುಗಳು ನ್ಯಾಯಯುತವಾಗಿ, ನೀತಿಯುತವಾಗಿರಬೇಕೆಂಬುದೇ ಆತನ ಜಾಯಮಾನ. ಸದಾ ದೇಶ ಸಂಚಾರಿ ಯಾಗಿದ್ದ ಸರ್ವಜ್ಞ, ಈ ದೇಹವನ್ನು ದಂಡಿಸಿ ಉದ್ಯೋಗದಲ್ಲಿ ತೊಡಗಿಕೊಂಡಾಗ ಆರೋಗ್ಯವಂತ ನಾಗಿರಬಹುದೆಂಬುದು ಆತನ ಅಭಿಪ್ರಾಯ.

ಉದ್ಯೋಗವೆಂದರೆ ಅದು ಶ್ರಮದಾಯಕವಾಗಿರಬಹುದು ಅಥವಾ ಶ್ರಮರಹಿತವಾಗಿರಬಹುದು. ಆದರೆ ದುಡಿತದಲ್ಲಿ ಒಂದು ವಿಶೇಷತೆ ಇರುತ್ತದೆ. ಅಲ್ಲದೆ ''ತಾನು ಬದುಕಿ, ಮತ್ತೊಬ್ಬರನ್ನು ಬದುಕಿಸುವಂತೆ ನೋಡಿಕೊಳ್ಳುವುದೇ ಧರ್ಮ ವ್ಯಾಪಾರ''ವಾಗಿರುತ್ತದೆ (ಮುತ್ತಿನಂತ ಮಾತುಗಳು, ಪು.೧೫೩).

''ಆಳವಿದ್ದ ಬಾವಿ ಮುಚ್ಚಬಹುದು, ಗೇಣುದ್ದವಿರುವ ಹೊಟ್ಟೆಯನ್ನು ಮುಚ್ಚಲಾಗದು'' ಎಂಬ ಗಾದೆ ಮಾತಿನಂತೆ ಈ ಹೊಟ್ಟೆಯ ಹಸಿವೆಯನ್ನು ತೀರಿಸಲು ಪ್ರತಿಯೊಬ್ಬರು ದುಡಿಯುವುದು ಅತ್ಯವಶ್ಯಕ. ಯಾರೂ ಉದ್ಯೋಗದಲ್ಲಿ ನಿರತನಾಗಿರುವನೋ ಅವನಿಗೆ ಸಿರಿ ಸಂಪತ್ತು ಎಲ್ಲವೂ ತಾನಾಗಿ ಬಳಿ ಬರುತ್ತವೆ. ಉದ್ಯೋಗವಿಲ್ಲದೆ ಸೋಮಾರಿಯಾಗಿ ಅಲೆದಾಡುವವನ ಕೈಯೊಳಗಿರುವ ಸಂಪತ್ತೆಲ್ಲಾ ಕರಗಿ ಹೋಗುತ್ತದೆಂದು ಸರ್ವಜ್ಞ ನುಡಿದಿದ್ದಾನೆ. ಆದ್ದರಿಂದ ಜನಪದರು ಸದಾ ದುಡಿಮೆಯಲ್ಲಿ ಇದ್ದರೂ ಮತ್ತೆ ಬಿಡುವಿನ ವೇಳೆಯಲ್ಲಿಯೂ ಸಹ ಸಣ್ಣ ಸಣ್ಣ ಕೈಗೆಲಸದಲ್ಲಿ ನಿರತರಾಗಿರುತ್ತಾರೆ. ''ಆಳಾಗಿ ದುಡಿ ಅರಸನಾಗಿ ಉಣ್ಣು'' ಎಂಬ ಗಾದೆಯಂತೆ ಉದ್ಯೋಗದಲ್ಲಿರುವವರ ಮನಸ್ಸು ಇತರೇ ದುಶ್ಚಟಗಳಿಗೆ ಬಲಿಯಾಗದೇ ಇರುತ್ತದೆ.

ಸರ್ವಜ್ಞನ ವಚನಗಳಲ್ಲಿ ಉಲ್ಲೇಖಿತಗೊಂಡ ಕುಲ ಕಸಬುದಾರರ ವಿಚಾರಗಳನ್ನು ನೋಡಿದಾಗ ಅವರ ಪ್ರಾಮಾಣಿಕ, ಅಪ್ರಾಮಾಣಿಕ ವ್ಯಕ್ತಿತ್ವ ಅನಾವರಣಗೊಂಡಿದೆ. ಹೀಗಾಗಿ ಕಸುಬುದಾರರ ಮನೋ ಧರ್ಮಗಳನ್ನು ಸರ್ವಜ್ಞ ತನ್ನ ವಚನಗಳ ಮೂಲಕ ವ್ಯಕ್ತಪಡಿಸಿದ್ದಾನೆ. ಆ ಕುಲ ಕಸುಬುದಾರರಿಂದ ಆಗಬೇಕಾದ ಸಾಮಾಜಿಕ ಕೆಲಸಗಳು ಆಗದೇ ಇದ್ದಾಗ ಬೇರೆ ಉಪಮೆಗಳಿಂದ ಛೇಡಿಸುವ, ಉತ್ತಮ ಕಾರ್ಯಗಳಾದಾಗ ಪ್ರೀತಿಯಿಂದ ಸ್ಮರಿಸುವ ಇಲ್ಲಿಯ ಆತನ ತ್ರಿಪದಿಗಳಿಗೆ ವೃತ್ತಿ ಬಾಂಧವರ ಬದುಕಿನ ಎಲ್ಲ ಮಗ್ಗುಲುಗಳನ್ನು ಕಟ್ಟಿಕೊಡುವ ಸಾಮರ್ಥ್ಯವಿದೆ ಎನ್ನಬೇಕು. ಒಟ್ಟಾರೆ ಜನಪದರ ಬದುಕಿನ ಆಚಾರ ವಿಚಾರಗಳಿಗೆ ಹಾಗೂ ವೃತ್ತಿಗಳಿಗೆ ಸಂಬಂಧಿಸಿದ ವಚನಗಳು ಸರ್ವಜ್ಞನಲ್ಲಿ ಹೇರಳವಾಗಿ ದೊರೆಯುತ್ತವೆ.

# ಅಧ್ಯಾಯ - ೫

# ಜಾನಪದ ಸಾಂಸ್ಕೃತಿಕ ಚಿತ್ರಣಗಳು

೫.೧. ಸಂಸ್ಕೃತಿ ವಿವರಣೆ

೫.೨. ಉಡುಗೆ-ತೊಡುಗೆ

೫.೩. ಆಹಾರ,ವೈದ್ಯ ಮತ್ತು ಆರೋಗ್ಯ

೫.೩.೧. ರೊಟ್ಟಿ

೫.೩.೨. ರಾಗಿ ಮತ್ತು ನವಣೆ

೫.೩.೩. ಅಕ್ಕಿ

೫.೩.೪. ಹೋಳಿಗೆ

೫.೩.೫. ಮಜ್ಜಿಗೆ

೫.೩.೬. ಆರೋಗ್ಯ

೫.೪. ಆಟಗಳು

೫.೫. ಗಾಯನ-ವಾದ್ಯ

೫.೬. ಆಚರಣೆಗಳು

೫.೭. ನಂಬಿಕೆಗಳು

೫.೭.೧. ದೇವರ ಬಗೆಗಿರುವ ನಂಬಿಕೆ

೫.೭.೨. ಮಳೆ ಬಗೆಗಿರುವ ನಂಬಿಕೆ

೫.೭.೩. ಹೆಣ್ಣಿನ ಬಗೆಗಿರುವ ನಂಬಿಕೆ

೫.೮. ಶಕುನಗಳು

೫.೯. ನಡಾವಳಿಕೆಗಳು

## ೫.೧. ಸಂಸ್ಕೃತಿ ವಿವರಣೆ :

ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಸಾಂಸ್ಕೃತಿಕ ಚಿತ್ರಣವನ್ನು ಜಾನಪದೀಯ ಅಂಶ ಗಳೊಂದಿಗೆ ತಿಳಿಯುವುದಕ್ಕೂ ಮೊದಲು ಸಂಸ್ಕೃತಿಯ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ಸಂಸ್ಕೃತಿಗೆ "Culutre"ಎಂಬ ಸಮಾನಾರ್ಥಕ ಪದವನ್ನು ಇಂಗ್ಲೀಷಿನಲ್ಲಿ ಪ್ರಯೋಗಿಸಲಾಗುತ್ತಿದೆ. ಅದು ಮೂಲ ಲ್ಯಾಟಿನ್ ಭಾಷೆಯಿಂದ ಬಂದುದು. ''Cult" ಅಥವಾ "Cultus" ಎಂಬಿವು ಈ ಶಬ್ದಕ್ಕೆ ಮೂಲಗಳು. ಆಚರಿಸು, ಸೇವಿಸು, ಗೌರವಿಸು, ನಿಷ್ಠೆ ತೋರು ಎಂಬ ಅರ್ಥ ಈ ಪದಕ್ಕಿದೆ (ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ ಪು.೪೭). ವ್ಯಕ್ತಿಯೊಬ್ಬನು ಹುಟ್ಟಿದೊಡನೆ ತನ್ನೊಂದಿಗೆ ಬಂದ ಪಶುತ್ವವನ್ನು ಹೋಗಲಾಡಿಸಿ ವ್ಯಕ್ತಿತ್ವವನ್ನು ಸಾಧಿಸುವುದೇ ಸಂಸ್ಕೃತಿ. ವಿಶಾಲಾರ್ಥದಲ್ಲಿ ಸಂಸ್ಕೃತಿ ಎಂಬುದು ವ್ಯಕ್ತಿಯ ಒಳಿತು ಕೆಡಕು, ಮನಸ್ಸು ದೇಹ, ಭೌತಿಕ-ಅಭೌತಿಕಗಳನ್ನೊಳಗೊಂಡ ಅವಿರತ ಸಂಘರ್ಷದ ಫಲವೆನ್ನಬಹುದು (ಅದೇ,ಪು.೪೯).

ಸಂಸ್ಕೃತಿ ಎಂಬ ಈ ಪದವನ್ನು ವ್ಯಾಖ್ಯಾನಗೊಳಿಸುವುದು ಸಾಮಾನ್ಯವಾದ ಕೆಲಸವಲ್ಲ. ನಮ್ಮ ಸಂಸ್ಕೃತಿಯಲ್ಲಿನ ಪರಿಧಿಯ ಅಂತರಂಗದಲ್ಲಿ ಬರುವ ಹತ್ತು ಹಲವು ಆಚರಣೆಗಳ ಬಗೆಗೆ ಮಾತನಾಡಿದರೆ, ಈ ಕೆಲಸ ಪೂರ್ಣವಾಗಲಾರದು. ಆದುದರಿಂದ ಸಂಸ್ಕೃತಿಗೆ ಸಂಬಂಧಿತ ಯಾವುದೇ ಒಂದು ವಿಚಾರವನ್ನು ಪೂರ್ಣ ವಾಗಿ ಚರ್ಚಿಸಲಾಗದೇ ಇದ್ದರೂ ಚರ್ಚಿಸಿಕೊಳ್ಳುವುದು ಆರೋಗ್ಯಕರ ಚಿಂತನವೆನಿಸಿಕೊಳ್ಳುತ್ತದೆ. ನಮ್ಮ ಸಂಸ್ಕೃತಿಯನ್ನು ಕಟ್ಟಿದ ಎರಡು ಮನಸ್ಸುಗಳ ಕುರಿತು ಮಾತನಾಡುವುದು ಸಕಾಲಿಕವೆನಿಸುತ್ತದೆ. ಪುರುಷ ಮತ್ತು ಮಹಿಳೆಯರು ರೂಪಿಸಿಕೊಂಡ ಬದುಕು ಒಂದರ್ಥದಲ್ಲಿ ನಮ್ಮ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ನಮ್ಮ ಸಂಸ್ಕೃತಿಯ ಕೆಲ ಆಚರಣೆಗಳನ್ನು ಪುರುಷ, ಮಹಿಳೆಯರಿಗಾಗಿ ರೂಪಿಸಿದನೋ ಅಥವಾ ಮಹಿಳೆ ಪುರುಷರಿಗಾಗಿ ರೂಪಿಸಿದಳೋ ತಿಳಿವ ಕುತೂಹಲಕ್ಕಿಂತ ಅವರ ಜೀವನದ ಗತಿಯಲ್ಲಿ ಅದರಿಂದಾದ ಏರುಪೇರುಗಳನ್ನು ತಿಳಿದು ಕೊಳ್ಳಬೇಕಾಗುತ್ತದೆ. ಈ ತಿಳುವಳಿಕೆ ನಮಗೆ ಬರಬೇಕಾದರೆ ನಮ್ಮವರ ಜೀವಿತದ ನಡುವಳಿ (ಆಚರಣೆ)ಗಳನ್ನು ಆಮೂಲಾಗ್ರವಾಗಿ ಅವಲೋಕಿಸಬೇಕಾಗುತ್ತದೆ (ಸೈದ್ಧಾಂತಿಕ ಜಾನಪದ, ಪು.೧).

ಸಂಸ್ಕೃತಿ ಕೇವಲ ಪೂರ್ವಜರಿಂದ ಬಂದುದಷ್ಟೇ ಅಲ್ಲ. ಅಲ್ಲದೆ ಅಭೌತಿಕವಷ್ಟೇ ಅಲ್ಲ. ಸಮಾಜದಲ್ಲಿ ಬದುಕುತ್ತಿರುವ ವ್ಯಕ್ತಿ, ಇತರ ವ್ಯಕ್ತಿಗಳೊಂದಿಗೆ ನಡೆಸುವ ಎಲ್ಲ ವ್ಯವಹಾರಗಳು ಕೊಡುವ, ಪಡೆಯುವ ಎಲ್ಲ ವಸ್ತು ವಿಚಾರಗಳು ಸಂಸ್ಕೃತಿಗೆ ಸೇರಿದುದಾಗಿವೆ. ಅಂತೂ ಸಂಸ್ಕೃತಿ ಹುಟ್ಟುವುದು ವ್ಯಷ್ಟಿಯಲ್ಲಿ, ಅದು ಬದುಕಿ ಬಾಳುವುದು ಸಮಷ್ಟಿಯಲ್ಲಿ. ಮಾನವ ಶಾಸ್ತ್ರದ ಪಿತಾಮಹ ಇ.ಟಿ. ಟೈಲರ್ 'Culture' or 'Civilization' is that complex whole which includes knowledge, belief, art, morals, law, custom, sprituals, disipline and any other capabilities and habits accuired by man as a member of the society (1891:25) ಎಂದು ವ್ಯಾಖ್ಯಾನಿಸಿ ಸಂಸ್ಕೃತಿಯ ಬಗೆಗೆ ಅವರು ಹೆಚ್ಚು ಸ್ಪಷ್ಟವಾದ ಹಾಗೂ ವಿಸ್ತೃತವಾದ ಅರ್ಥವನ್ನು ಒದಗಿಸಿದ್ದಾರೆ (ಜಾನಪದ,೧೯೯೧, ಪು.೧).

ಮಾನವನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಒಂದು ಪ್ರಮುಖವಾದ ಅಂಶವೇ ಸಂಸ್ಕೃತಿ. ಮನುಷ್ಯನಲ್ಲಿ ದೈಹಿಕವಾದ ಕೆಲವು ವಿಶಿಷ್ಟ ಲಕ್ಷಣಗಳಿವೆ. ಇವುಗಳಿಂದಾಗಿಯೇ ಸಂಸ್ಕೃತಿಯನ್ನು ಕಟ್ಟುವುದಕ್ಕೆ ಸಮರ್ಥನಾಗಿದ್ದಾನೆ. ಮಾನವಶಾಸ್ತ್ರಜ್ಞನಾದ ಮಲಿನೋವ್‌ಸ್ಕಿ ''ಮನುಷ್ಯನಿಗೆ ಕೆಲವೊಂದು ಆಚರಣೆಗಳ ಅವಶ್ಯಕತೆಗಳಿರುತ್ತವೆ. ಈ ಅವಶ್ಯಕತೆಗಳ ಈಡೇರಿಕೆಯ ದೃಷ್ಟಿಯಿಂದ ಮನುಷ್ಯನಲ್ಲಿ ಸಂಸ್ಕೃತಿ ನಿರ್ಮಾಣವಾಗಿದೆ'' ಎಂದು ಸಂಸ್ಕೃತಿಯನ್ನು ಕುರಿತು ಹೇಳಿದ್ದಾನೆ (ಜಾನಪದ ದರ್ಶನ, ಪು. ೧೨೪).

ಜಾನಪದವು ಒಂದು ಸ್ವತಂತ್ರವಾದ ಅಧ್ಯಯನದ ವಿಷಯವಾಗಿದ್ದರೂ ಅದು ಸಂಸ್ಕೃತಿಯ ಒಂದು ಅಂಗವಾಗಿರುವುದರಿಂದ ಹಾಗೂ ಒಂದು ಜನಪದ ವರ್ಗದ ಮಾನವಕುಲಶಾಸ್ತ್ರಕ್ಕೆ ಸಂಬಂಧಿಸಿದ ಅಂಶಗಳನ್ನು ಅತೀ ಸೂಕ್ಷ್ಮವಾಗಿ ಪರಿಶೀಲಿಸುವುದರಿಂದ ನಿಜಕ್ಕೂ ಅದು ಸಾಂಸ್ಕೃತಿಕ ಮಾನವಶಾಸ್ತ್ರದ ನೇರವಾದ ಸಂಬಂಧವನ್ನಿರಿಸಿಕೊಂಡಿದೆ. ಮಾನವ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಶಾಸ್ತ್ರಗಳಲ್ಲಿ ಜಾನಪದ ಪ್ರಮುಖವಾದುದು. ''ಸಂಸ್ಕೃತಿ'' ಎಂಬುದು ವ್ಯಾಪಕವಾದ ಒಂದು ಪರಿಕಲ್ಪನೆ. ಸಂಸ್ಕೃತಿಯ ಒಂದು ಮುಖ ಜಾನಪದ. ಯಾವುದೇ ಜನಸಮುದಾಯದ ಬೇಸಾಯ, ಮೀನುಗಾರಿಕೆ, ಬೇಟೆ, ಮಡಕೆಮಾಡುವುದು, ಆಸ್ತಿ ರವಾನೆಯ ಕ್ರಮ, ಬಂಧುತ್ವದ ವಿಚಾರ, ಕುಟುಂಬ ವ್ಯವಸ್ಥೆಯಂತಹ ಸಾಮಾಜಿಕ ರಚನೆ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆ, ಧರ್ಮ, ಭಾಷೆ ಮುಂತಾದವು ಸಂಸ್ಕೃತಿಯ ಮುಖಗಳು (ಜಾನಪದ : ಕೆಲವು ವಿಚಾರಗಳು, ಪು.೧೩). ಜಾನಪದವಿಲ್ಲದ ಯಾವುದೇ ಸಂಸ್ಕೃತಿಯು ಅಸ್ಥಿತ್ವದಲ್ಲಿಲ್ಲವೆನಿಸಿದರೂ ಯಾವುದೇ ಸಂಸ್ಕೃತಿಯಲ್ಲಿ ಜಾನಪದದ ಜೊತೆಗೆ ಇತರೆ ವಿಷಯಗಳಿರುತ್ತವೆಂಬುದು ಸ್ಪಷ್ಟವಾಗುತ್ತದೆ.

ಮಾನವ ಸಂಸ್ಕೃತಿಯ ಅಧ್ಯಯನವನ್ನೇ ಮೂಲ ಉದ್ದೇಶವಾಗಿರಿಸಿಕೊಂಡಿರುವ ಜಾನಪದ : ಆಚರಣೆ, ನಂಬಿಕೆ, ಸಂಪ್ರದಾಯ ಇತ್ಯಾದಿಗಳ ಮೂಲಕ ಮಾನವ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಧ್ಯೇಯವನ್ನು ನೋಡಬಹುದು (ಅದೇ, ಪು. ೧೭). ಸಂಸ್ಕೃತಿ ಮಾನವ ಜೀವನದ ವಿಶಾಲ ಪರಿಧಿಯನ್ನೆಲ್ಲಾ ಅದು ಆಕ್ರಮಿಸಿರುತ್ತದೆ. ಮನುಷ್ಯ ತನಗೆ ಬೇಕಾದಂತೆ ಸೃಷ್ಟಿಸಿಕೊಂಡ ಆಹಾರದ ಭಾಷೆ ,ವೈದ್ಯಭಾಷೆ ಮುಂತಾದವುಗಳಲ್ಲಿ ಉತ್ತಮ ಸಂಸ್ಕೃತಿಯ ವಿಚಾರಗಳೇ (ಪಂಪ ಭಾರತ ಒಂದು

ಸಾಂಸ್ಕೃತಿಕ ಅಧ್ಯಯನ, ಪು. ೭೫). ಸರ್ವಜ್ಞನ ಜಾನಪದ ಸಂಸ್ಕೃತಿಯ ಚಿತ್ರಣವನ್ನು ಅಧ್ಯಯನ ಮಾಡುವುದರ ಮೂಲಕ ಸಂಸ್ಕೃತಿಯ ಆಶಯಗಳನ್ನು, ಅಂಶಗಳನ್ನು, ಅರ್ಥಗಳನ್ನು ಹುಡುಕಲಾಗಿದೆ. ಸರ್ವಜ್ಞನ ವಚನಗಳಲ್ಲಿ ಅಭಿವ್ಯಕ್ತಿಯಾದ ಸಂಸ್ಕೃತಿಯ ಲಕ್ಷಣಗಳನ್ನು ಆತನ ಸಮಕಾಲೀನತೆ ಜಾನಪದ ಅಂಶಗಳೊಂದಿಗೆ ಚರ್ಚಿಸುವುದು ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ. ಇದರ ವ್ಯಾಪ್ತಿಯಲ್ಲಿ ಅಪರಿಮಿತವಾಗಿ ಬರುವ ಸಾಂಸ್ಕೃತಿಕ ವಿಚಾರಗಳನ್ನು ಇಡಿಯಾಗಿ ಇಲ್ಲಿ ನಿರೀಕ್ಷಿಸುವುದು ಕಷ್ಟಸಾಧ್ಯವಾಗಬಹುದು. ಸರ್ವಜ್ಞನ ವಚನಗಳಲ್ಲಿ ಕಂಡುಬರುವ ಸಾಂಸ್ಕೃತಿಕ ವಿಷಯಗಳನ್ನು ಕ್ರೋಢೀಕರಿಸಿ, ಈ ಕೆಳಗಿನಂತೆ ವಿಂಗಡಿಸಿ ವಿವರಿಸಲು ಪ್ರಯತ್ನಿಸಲಾಗಿದೆ. ೧) ಉಡುಗೆ-ತೊಡುಗೆ, ೨) ಆಹಾರವೈದ್ಯ ಮತ್ತು ಆರೋಗ್ಯ, ೩) ಆಟಗಳು, ೪) ಗಾಯನ-ವಾದ್ಯ , ೫) ಆಚರಣೆಗಳು , ೬)ನಂಬಿಕೆಗಳು, ೭) ಶಕುನಗಳು, ೮) ನಡಾವಳಿಕೆಗಳು.

## ೫.೨. ಉಡುಗೆ-ತೊಡುಗೆ :

ಮನುಷ್ಯ ಶಿಲಾಯುಗದಲ್ಲಿ ಬತ್ತಲೆಯಾಗಿಯೇ ವಾಸವಾಗಿದ್ದವನು. ವಿಕಾಸವಾದಂತೆಲ್ಲಾ ಇತರೆ ಪ್ರಾಣಿ-ಪಕ್ಷಿಗಳಿಗಿಂತ ಬುದ್ಧಿವಂತ ಪ್ರಾಣಿ ಎಂದೆನಿಸಿಕೊಳ್ಳುವತ್ತ ಸಾಗಿದ. ಮೂಲಭೂತ ಅವಶ್ಯಕತೆಗಳಾದ ನೀರು, ಆಹಾರಾದಿಗಳ ಶೋಧ ನಡೆಯಿಸಿ, ಅವುಗಳಿಂದ ತೃಪ್ತಿಹೊಂದಿದ. ನಂತರ ಪ್ರಕೃತಿಯಲ್ಲಾಗುವ ಮಳೆ,ಗಾಳಿ, ಬೆಂಕಿ ಮುಂತಾದವುಗಳಿಂದ ತನ್ನ ದೇಹವನ್ನು ರಕ್ಷಿಸಿಕೊಳ್ಳಲು ಗಿಡ-ಮರ-ಬಳ್ಳಿಗಳ ಎಲೆಗಳನ್ನೋ, ಪ್ರಾಣಿಗಳ ಚರ್ಮಗಳನ್ನೋ ಉಡುಗೆ-ತೊಡುಗೆಗಳನ್ನಾಗಿ ಬಳಸಿಕೊಳ್ಳತೊಡಗಿದ. ಕಾಲ ಬದಲಾದಂತೆ ಅವನ ಜೀವನಮಟ್ಟ ಸುಧಾರಿಸುವಂತೆಯೇ ಬಟ್ಟೆಯ ಶೋಧನೆಯಿಂದ ನಾನಾ ವಿಧವಾದ ಉಡುಗೆಗಳನ್ನು ಧರಿಸತೊಡಗಿದ್ದಾನೆ.

ಸ್ತ್ರೀಯರು ಮತ್ತು ಪುರುಷರು ಧರಿಸುವ ಉಡುಗೆಗಳಿಗೆ ಉಡುಪುಗಳೆಂದು ಕರೆಯುವುದುಂಟು. ಮೊದಲು ಕೇವಲ ದೇಹ ರಕ್ಷಣೆಗಾಗಿ ಬಳಸುತ್ತಿದ್ದ ಉಡುಗೆಗಳು ನಂತರ ಸೌಂದರ್ಯ ಪ್ರಜ್ಞೆ ಬೆಳೆದಂತೆಲ್ಲಾ ಅಲಂಕಾರಕ್ಕಾಗಿ ಬಳಸಲಾರಂಭಿಸಿದರು. ಉಡುಗೆಗಳಲ್ಲಿ ಸ್ತ್ರೀಯರು ಧರಿಸುವ ಸೀರೆ, ಕುಪ್ಪಸ, ಲಂಗ ಮುಂತಾದವುಗಳನ್ನು, ಪುರುಷರು ಧರಿಸುವ ಅಂಗಿ,ಉಂಗು, ದೋತ್ರ ಮುಂತಾದವುಗಳನ್ನು ಹೆಸರಿಸಬಹುದು. ಸಾಮಾನ್ಯ ದಿನಗಳಲ್ಲಿ ಜಾನಪದರು ಧರಿಸುವ ಉಡುಗೆಗಳೇ ಬೇರೆ. ಹಬ್ಬ, ಉತ್ಸವ, ವಿವಾಹ ಮುಂತಾದ ಶುಭ ಸಂದರ್ಭಗಳಲ್ಲಿ ಧರಿಸುವ ಉಡುಗೆ-ತೊಡುಗೆಗಳೇ ಬೇರೆಯಾಗಿರುತ್ತವೆ.

ಸರ್ವಜ್ಞನ ವಚನಗಳಲ್ಲಿ ಉಡುಗೆಯ ವಿಷಯವಾಗಿ ಹೆಚ್ಚಿನ ವಚನಗಳು ದೊರಕದೇ ಇದ್ದರೂ ಒಂದೆರಡನ್ನು ಗಮನಿಸಬಹುದಾಗಿದೆ. ಜಾನಪದ ಹೆಂಗಳೆಯರು ಉಟ್ಟುಕೊಳ್ಳುವ 'ಸೀರೆ'ಗೆ 'ಬಣ್ಣ'ವೆಂತಲೂ ಕರೆಯುವುದುಂಟು. ತಾಯಿ ಮನೆಯವರು ಉಡಿಸಿದ ಸೀರೆಗೆ ವಿಶೇಷವಾಗಿ 'ತವರು ಬಣ್ಣ'ವೆಂದು ಅವರು ಪ್ರೀತಿಯಿಂದ ಕರೆಯುವುದುಂಟು. ಈ ಸೀರೆಯ ಕುರಿತಾಗಿ ಸರ್ವಜ್ಞ ;

ಅಚ್ಚ ಬಣ್ಣವನುಟ್ಟು.....
.................................
ಅಚ್ಚು ಹಾಕಿದ ಸೀರೆ । ಪಚ್ಚ ಗುಪ್ಪಸ ತೊಟ್ಟು

ಎಂದು ಉಲ್ಲೇಖಿಸಿದ್ದಾನೆ. ಆತನ ಕಾಲದಲ್ಲಿ ಮಹಿಳೆಯರು ಬಣ್ಣಬಣ್ಣದ ಚಿತ್ತಾರವಿರುವ ಸೀರೆ, ಕುಪ್ಪಸಗಳನ್ನು ಧರಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಅದರಲ್ಲೂ ವೇಶ್ಯಾಸ್ತ್ರೀಯರು ಧರಿಸುವ ಸೀರೆಗಳು ಎಷ್ಟೊಂದು ವೈವಿಧ್ಯಮಯವಾಗಿರುತ್ತಿದ್ದವೆಂದರೆ; ಇಂತಹ ಸೀರೆಗೆ ಮರುಳಾದ ಪುರುಷರನ್ನು ತಮ್ಮ ವನಪು-ವಯ್ಯಾರಗಳಿಂದ ಇನ್ನಷ್ಟು ಆಕರ್ಷಿಸುತ್ತಿದ್ದರೆಂಬ ವಿಚಾರ ಆತನಿಂದ ತಿಳಿದುಬರುತ್ತದೆ. ಈ ಸೀರೆಗೆ 'ಸೆರಗು' ಎಂಬುದಿರುತ್ತದೆ. ಜಾನಪದ ಗರತಿಯರು ಸೆರಗು ಇಲ್ಲದ ಸೀರೆಯನ್ನೇ ಉಡಲಾರರು. ಸೆರಗು ಎಂಬುದು ಸೀರೆಗೆ ಗೌರವದ ಪ್ರತೀಕವಾಗಿದೆ.

ಶರಗು ಇಲ್ಲದ ಸೀರೆ ಅರಗಳಿಗೆ ಉಡಲಾರೆ
ಅಂಗೈಗೆ ಬಳಿಯ ಇಡಲಾರೆ
(ಜಾನಪದ ಮುಕ್ತಕಗಳು, ಪು. ೨೧).

ಎಂದು ಗರತಿಯೊಬ್ಬಳ ಮಾತು ಕೇಳಿದಾಗ ಸೆರಗಿನ ಮಹತ್ವ ತಿಳಿದುಬರುತ್ತದೆ. ಸೆರಗು ಹಾಸು (ಮತ್ತೊಬ್ಬನಿಗೆ ಮರುಳಾಗು), ಸೆರಗುಕಟ್ಟು (ಹೋರಾಟಕ್ಕೆ ಸಿದ್ಧಳಾಗು), ಸೆರಗಿನಲ್ಲಿ ಕೆಂಡವಿದ್ದಂತೆ (ಬಾಳುವೆಯ ಪರಿಸ್ಥಿತಿ) ಈ ಮುಂತಾದ ಮಾತುಗಳು ಜಾನಪದರಲ್ಲಿ ಕೇಳಿಬರುತ್ತವೆ. ಸೆರಗು ಜಾರಿಸುವ ಹೆಣ್ಣನ್ನು ನಡತೆಗೆಟ್ಟವಳೆಂದು ಗರತಿಯರು ಹಂಗಿಸುವುದುಂಟು. ಅದಕ್ಕಾಗಿ ಹಿರಿಯರು 'ಸೆರಗು ಭದ್ರವಾಗಿರಲಿ' ಎಂದು ಉಪದೇಶ ಮಾಡುವುದುಂಟು. ಈ ವಿಚಾರವಾಗಿ ಸರ್ವಜ್ಞ ಏನು ಹೇಳಿದ್ದಾನೆಂದು ನೋಡಿದಾಗ;

.................................
ಹೆಚ್ಚಾಗಿ ಸೆರಗ ಬಿಡುವವಳು ಕಾಮನ
ಮೆಚ್ಚಿನಲ್ಲಿಹಳು ಸರ್ವಜ್ಞ.

..........................................

ನಿಚ್ಚಲು ಸೆರಗು ಹಾಸುವಳು ಹಾದರಕೆ
ಮೆಚ್ಚು ಕಾಣಯ್ಯ ಸರ್ವಜ್ಞ.

ನೀತಿಯುಳ್ಳ ಹೆಂಗಸಿನ ಮಾನಾಪಮಾನಗಳೆಲ್ಲಾ ಅವಳು ಧರಿಸುವ ಉಡುಗೆ ತೊಡುಗೆಗಳಲ್ಲಡಗಿರುತ್ತವೆ. ಸೀರೆಯ ಸೆರಗು ಒಮ್ಮೆ ಜಾರಿದರೆ, ಇಡೀ ಬಾಳೆಲ್ಲಾ ಗೋಳಾಗಬಹುದೆಂದು ಸರ್ವಜ್ಞ ಇಲ್ಲಿ ಎಚ್ಚರಿಸಿದ್ದಾನೆ. ಅಂತೆಯೇ ವೇಶ್ಯಾಸ್ತ್ರೀ ತಾನು ಧರಿಸುವ ಸೀರೆಯ ಸೆರಗನ್ನು ಹಾದರಕ್ಕೆ ಹಾಸುವ ವಿಷಯವನ್ನು ಮೇಲಿನಂತೆ ತಿಳಿಸಿದ್ದಾನೆ. ಒಟ್ಟಾರೆ ಹೆಣ್ಣಿನ ಉಡುಗೆಗಳಲ್ಲಿ ಸೀರೆಯ ಉಡುಪು ಅತ್ಯಂತ ಗೌರವ ಸಂಕೇತವಾಗಿರುವುದಲ್ಲದೆ, ಅದರಲ್ಲೂ ಸೆರಗುಳ್ಳ ಸಿರೆ ಧರಿಸಿದ ಮಹಿಳೆ ಇನ್ನಷ್ಟು ಅಲಂಕಾರದಿಂದ ಕಂಗೊಳಿಸುತ್ತಿರುತ್ತಾಳೆ.

ಈ ಉಡುಗೆ-ತೊಡುಗೆಗಳಲ್ಲಿನ ವೈವಿಧ್ಯತೆ ವಿಶಿಷ್ಟವಾಗಿರುತ್ತದೆ. ಇದು ಪ್ರದೇಶದಿಂದ ಪ್ರದೇಶಕ್ಕೆ ಬೇರೆಯೇ ಆಗಿರುತ್ತದೆ. ಸರ್ವಜ್ಞನ ವಚನಗಳಲ್ಲಿ ಕಂಡುಬರುವ ವೇಶಭೂಷಣದ ವಿವರ ಹೀಗಿದೆ;

'ತುಂಡುಗಂಬಳಿ ಹೊದೆದು', 'ಕಂಬಳಿಯ ಹೊದೆವ ತನ್ನಿಂಬಿನೊಳಗಿರಬೇಕು' ಮುಂತಾದ ಪ್ರಯೋಗಗಳನ್ನು ನೋಡಿದಾಗ ಸರ್ವಜ್ಞ ಸದಾ ತನ್ನ ಮೈಮೇಲೆ ಒಂದು ಬಿಳಿ ಕಂಬಳಿ ಹೊದ್ದುಕೊಂಡಂತೆ ತೋರುತ್ತದೆ. ಬಿಳಿ ಕಂಬಳಿ ವೀರಶೈವರಿಗೆ ಪಾವಿತ್ರತೆಯ ಚಿಹ್ನೆಯಾಗಿದೆ (ಸರ್ವಜ್ಞ ಜೀವನ ಕೃತಿ ಹಾಗೂ ಸಂದೇಶ, ಪು. ೯೫).

ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವರ
ಕಂಡು ನಂಬುವದು ಸರ್ವಜ್ಞ.

ಅಂತಿರ್ದ ಇಂತಿರ್ದ ಎಂತಿರ್ದನೆನಬೇಡ
ಕಂತೆಯನು ಹೊದ್ದು ತಿರಿದುಂಬ ಶಿವಯೋಗಿ
ಎಂತಿರ್ದಡೇನು ಸರ್ವಜ್ಞ

ಕಪಟ ವೇಷಧಾರಿಗಳನ್ನು ಕಂಡಿರಬಹುದಾದ ಸರ್ವಜ್ಞ, ಮಂಡೆ ಬೋಳಾದವರ ಹಾಗೂ ತುಂಡುಗಂಬಳಿ ಹೊದ್ದವರನ್ನು ಕಂಡು ನಂಬಬೇಕೆ ಎಂದು ಸೂಕ್ಷ್ಮ ಚಿತ್ರಣವನ್ನು ನೀಡಿದ್ದಾನೆ. ಶಿವಯೋಗಿಯಾದವನು ಹಾಗೆ ಇದ್ದನು, ಹೀಗೆ ಇದ್ದನು ಎಂದೆಲ್ಲಾ ಅವನನ್ನು ಕಂಡು ಹಿಯಾಳಿಸಿ ಮಾತನಾಡುವುದು ಸರಿಯಲ್ಲವೆಂದು ಹೇಳುತ್ತಾ, ಖಾವಿಯ ವಸ್ತ್ರವನ್ನು ಧರಿಸಿಕೊಂಡು ಮತ್ತು ಭಿಕ್ಷೆ

ಬೇಡಿಕೊಂಡು ಊಟ ಮಾಡುವವನು ಹೇಗಿದ್ದರೇನು ಎಂದು ಪ್ರಶ್ನಿಸುತ್ತಾ ಇಲ್ಲಿ ಖಾವಿ ವಸ್ತ್ರದ ಉಡುಗೆಯ ಪರಿಚಯವನ್ನು ಮಾಡಿದ್ದಾನೆ;

......... ತೇದು ಖಾವಿಯ ಹೊದೆದು ಹೋದಾತ ಯೋಗಿಯೆನಬೇಡಅಂದರೆ ಖಾವಿ ಬಟ್ಟೆಯನ್ನು ಧರಿಸಿ, ದೇಶದಲ್ಲಿ ಸಂಚರಿಸುವವರೆಲ್ಲಾ ಯೋಗಿಗಳಾಗಿರುವುದಿಲ್ಲವೆಂಬ ಮಾತನ್ನೂ ಸಹ ಹೇಳಿದ್ದಾನೆ. ಅಂದರೆ ಡಂಭಾಚಾರದ ಭಕ್ತಿಯಿಂದ ಹಾಗೂ ಜನರನ್ನುಮೋಸಗೊಳಿಸುವ ದೃಷ್ಟಿಯಿಂದ ಧರಿಸಿರುವ ಖಾವಿ ಉಡುಪು ಹೊಂದುವವರನ್ನು ಕಂಡು ಹೀಗೆ ಮೂದಲಿಸಿರಬಹುದು.

..............................

ಉತ್ತಮರು ದೇವಾಂಗ ವಸ್ತ್ರ ಧರಿಸುವಡೆ
ಮುತ್ತು ಮಾಣಿಕ್ಯವ ತೊಡುವರೆ ?

ಸಂಗವನು ತೊರೆದವಗೆ ಅಂಗನೆಯರಿರಲೇಕೆ ?
ಬಂಗಾರವೇಕೆ ? ಬಲವೇಕೆ ? ಲೋಕದ
ಶೃಂಗಾರವೇಕೆ ಸರ್ವಜ್ಞ.

ಸನ್ಯಾಸಿಯಾದವ 'ದೇವಾಂಗ ವಸ್ತ್ರ'ವನ್ನು ಧರಿಸಿರುತ್ತಾನೆ. ಸಮಾಜೋದ್ಧಾರವೇ ಮೂಲ ಗುರಿಯಾಗಿಸಿಕೊಂಡ ಸನ್ಯಾಸಿಗೆ ಅಲಂಕಾರ ಭೂಷಣದ ಮುತ್ತು ಮಾಣಿಕ್ಯಾಧಿಗಳನ್ನು ಧರಿಸುವ ಚಪಲವೇಕೆ ?. ಇಂತಹ ವಿಷಯಲಾಲಸೆಗೊಳಗಾದವರನ್ನು ಕಂಡು ಹಂಗಿಸಿದ್ದಾನೆ. ಅದೇರೀತಿ ಮೂರು ಬಿಟ್ಟವನಾದ ಮೇಲೆ ಬಂಗಾರದ ಒಡವೆಗಳು ಹಾಗೂ ಶೃಂಗಾರಗಳ ಆಸೆಗಳೇಕೆ ಎಂದು ಪ್ರಶ್ನಿಸಿದ್ದಾನೆ. ಇಲ್ಲಿ ನೇರವಾಗಿ ಪುರುಷರು ಧರಿಸುವ ತೊಡುಗೆಗಳ ಬಗ್ಗೆ ತನ್ನ ಸಹಜ ವಚನಗಳಲ್ಲಿ ಉಲ್ಲೇಖಿಸದಿದ್ದರೂ ಬೆಡಗಿನ ವಚನದಲ್ಲಿ ಮಾತ್ರ ಈ ರೀತಿ ಹೇಳಿದ್ದಾನೆ.

ಕರವುಂಟು ಕಾಲಿಲ್ಲ ಶಿರ ಹರಿದ ಮುಂಡವದು
ನರದಿ ಬಿಗಿದಾರು ತುಂಡುದಕೆ ಕವಿಗಳಲಿ
ಅರಿದರಿದು ಪೇಳಿ ಸರ್ವಜ್ಞ.

ಇಲ್ಲಿ ಪುರುಷರು ಧರಿಸುವ ಅಂಗಿಯ ಚಿತ್ರಣವನ್ನು ತಿಳಿಯಪಡಿಸಿದ್ದಾನೆ.

ತೊಡುಗೆಗಳ ವಿಷಯವಾಗಿ ಜಾನಪದರಲ್ಲಿ ನೋಡಿದಾಗ, ಅವರಲ್ಲಿ ಬಂಗಾರದಾಸೆಗೆ ಎಂದಿಗೂ ಮನಸೋತವರಲ್ಲ. ಬಂಗಾರದ ಚಮಚವನ್ನು ಬಾಯಲ್ಲಿಟ್ಟುಕೊಂಡೇ ಜನಿಸಿದವರೆಲ್ಲಾ ಸುದೈವಿಗಳೆಂದು ಅವರು ಭಾವಿಸಿಕೊಂಡಿರುವವರಲ್ಲ. ಉದಾಹರಣೆಗೆ: ಶ್ರೀರಾಮ,

ಹರಿಶ್ಚಂದ್ರಾದಿಗಳೆಲ್ಲಾ ಇದಕ್ಕೆ ನಿದರ್ಶನ. ಬಂಗಾರದೊಡವೆಗಳನ್ನು ಧರಿಸುವುದರಿಂದ ಸುಖ ಸಂತೋಷ ಇರುತ್ತದೆಂಬ ನಂಬಿಕೆ ಜನಪದರಲ್ಲಿ ಕಾಣಲಾಗದು. ಇಲ್ಲಿ ಗರತಿಯೊಬ್ಬಳು;

ವಾಲೀಗೆರಾಯ ಒಳಹೊರಗ ಸುಳಿದರ
ವಾಲೀಗೆ ವಜ್ರ ಜಡಿದ್ಹಾಂಗ ।
ರಂಬೀಯ ರಾಯ ವರನಾಗಿ ಇದ್ದರ
ಬಂಗಾರನೇನ ಸುಡಬೇಕ.

(ಜಾನಪದ ಮುಕ್ತಕಗಳು, ಪು. ೪೦-೪೧).

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾಳೆ. ತನ್ನ ಗಂಡನೇ ಬಂಗಾರ,ವಜ್ರ ಆಗಿರುವಾಗ ಈ ತೊಡುಗೆಗಳೆಲ್ಲಾ ಏಕೆ ಬೇಕು? ಎಂದು ಪ್ರಶ್ನಿಸಿದ್ದಾಳೆ. ಇಷ್ಟಾದರು ಕೆಲ ಜಾನಪದ ಮಹಿಳೆಯರು ಹಬ್ಬ, ಮದುವೆ, ಉತ್ಸಾವದಿಗಳಲ್ಲಿ ಆಭರಣಗಳನ್ನು ಧರಿಸುತ್ತಿದ್ದರೆಂಬ ಉಲ್ಲೇಖ ಸರ್ವಜ್ಞನ ವಚನಗಳಲ್ಲಿ ಕಂಡುಬರುತ್ತದೆ.

ಮುತ್ತು ಮಾಣಿಕ್ಯವೇಕೆ ಮತ್ತೆ ಕುರುಳುಗಳೇಕೆ ?
ಉತ್ತಮದ ಉಡುಗೆ ಉಡಲೇಕೆ ? ನಿಗುಗೇಶ
ತೊತ್ತಿಗೇಕೆಂದ ಸರ್ವಜ್ಞ.

ತೊತ್ತು ಎಂದರೆ ದಾಸಿ. ನಾಲ್ಕು ಜನರ ನಡುವೆ ಕೆಲಸ ಮಾಡುವ ಹೆಣ್ಣು. ಮೈತುಂಬಾ ಆಭರಣಗಳನ್ನು ತೊಡುವುದಾಗಲಿ, ಆಕರ್ಷಕ ಉಡುಪು ಧರಿಸಿಕೊಳ್ಳುವುದಾಗಲಿ, ಕೇಶರಾಶಿಯನ್ನು ಅಲಂಕರಿಸಿಕೊಳ್ಳುವುದಾಗಲಿ ಸರಿಯಲ್ಲವೆಂಬ ಎಚ್ಚರಿಕೆಯನ್ನು ನೀಡಿದ್ದಾನೆ. ತನ್ನ ಸಮಾಜದಲ್ಲಿ ಮೈತುಂಬಾ ಮುತ್ತು ಮಾಣಿಕ್ಯಾದಿಗಳಂತಹ ಬೆಲೆಯುಳ್ಳ ಆಭರಣಗಳನ್ನು ಧರಿಸಿ ಓಡಾಡುವ ಸ್ತ್ರೀಯರನ್ನು ಕಂಡೇ ಮೇಲಿನ ವಚನವನ್ನು ಸರ್ವಜ್ಞ ಹೇಳಿರಬಹುದು. ಅಂದಿನ ಸಮಾಜದಲ್ಲಿಯೇ ಹೇಳಿದ ಆ ಮಾತು ಇಂದಿಗೂ, ಸರ್ವಕಾಲಿಕ ಸತ್ಯವೇ ಆಗಿರುವುದು ಹೆಮ್ಮೆಯ ಸಂಗತಿ. ಅಂದರೆ ಶಿಸ್ತು, ಸಂಯಮ, ಆರೋಗ್ಯ ಮುಂತಾದ ಒಳ್ಳೆಯ ನಡತೆಯಷ್ಟೇ ಮನುಷ್ಯನಿಗೆ ಮುಖ್ಯವೇ ಹೊರತು ಆಡಂಭರದ ಅಲಂಕಾರ ಸರಿಯಲ್ಲವೆಂಬುದರ ಅರ್ಥ ಸರ್ವಜ್ಞನ ವಚನಗಳಿಂದ ತಿಳಿದುಬರುತ್ತದೆ. ಆದರೂ ತೊಡಗೆಗಳ ವಿಷಯವಾಗಿ ಬಂಗಾರದೊಡವೆಗಳ ಬಗೆಗೆ ಸರ್ವಜ್ಞ ಹೆಚ್ಚಿಗೇನೂ ಹೇಳಿರುವುದು ಆತನ ವಚನಗಳಲ್ಲಿ ಕಂಡುಬರುವುದಿಲ್ಲವಾದರೂ, ಬಿಚ್ಚು ಓಲೆ, ಗೆಜ್ಜೆ ಟೀಕೆ, ಉಚ್ಚ ಬೈತಲೆ ಬೊಟ್ಟು, ಹತ್ತಕಟ್ಟಿನ ಮುತ್ತು, ಕೆತ್ತಿಸಿದ ಹರಳೋಲೆ ಮುಂತಾದ ವೈವಿಧ್ಯಮಯವಾದ ಆಭರಣಗಳ ಉಲ್ಲೇಖ ಅಲ್ಲಲ್ಲಿ ಮಾಡಿದ್ದಾನೆ. ಈ ಆಭರಣಗಳೆಲ್ಲಾ ಸರ್ವಜ್ಞನ ಸಮಾಜದಲ್ಲಿ ಮಹಿಳೆಯರು ಧರಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಅದರಲ್ಲೂ ಮೋಜು ಮಾಡುವ, ಒನಪು- ಒಯ್ಯಾರ ಮಾಡುವ, ವಿಟರನ್ನು ಆಕರ್ಷಿಸುವ ವೇಶ್ಯಾಸ್ತ್ರೀಯರು ಈ ಮೇಲಿನ ಆಭರಣಗಳನ್ನು ಹೆಚ್ಚಾಗಿ ಧರಿಸುತ್ತಿದ್ದರೆಂಬ ವಿಚಾರ ತನ ವಚನಗಳಲ್ಲಿ ಉಲ್ಲೇಖಿಸಿದ್ದಾನೆ.

ಅಚ್ಚ ಮುತ್ತನು ಕಟ್ಟಿ ಬಿಚ್ಚು ಓಲೆಯನ್ನಿಟ್ಟು
ಹೆಚ್ಚಾಗಿ ಸೆರಗ ಬಿಡುವವಳು ಕಾಮನ
ಮೆಚ್ಚಿನಲ್ಲಿಹಳು ಸರ್ವಜ್ಞ.

ನಿಚ್ಚಲು ಸೆರಗು ಹಾಸುವಳು ಹಾದರಕೆ ಮೆಚ್ಚು ಕಾಣಯ್ಯ ಸರ್ವಜ್ಞ. ಹೀಗೆ ವೇಶ್ಯಾಸ್ತ್ರೀಯರ ಮೈತುಂಬಾ ಒಡವೆಗಳನ್ನು ಧರಿಸಿ, ಸೀರೆಯ ಸೆರಗನ್ನು ಉದ್ದವಾಗಿ ಬಿಟ್ಟುಕೊಂಡು ತಮ್ಮ ಹಾವ-ಭಾವಗಳನ್ನು ಪ್ರದರ್ಶಿಸುತ್ತಿದ್ದರೆಂಬ ವಿಷಯವನ್ನು ವರ್ಣಿಸಿದ್ದಾನೆ. ಆದರೆ ಸೀರೆಯ ಸೆರಗನ್ನು ಹಾರಿಬಿಡುವ ಅಥವಾ ಜಾರಿಬಿಡುವ ಹೆಣ್ಣು ಉತ್ತಮ ಸ್ವಭಾವದವಳಲ್ಲವೆಂಬುದು ಸರ್ವಜ್ಞನ ಮತ.

ಬಂಗಾರದೊಡವೆಗಳ ಬಗೆಗೆ ಹೆಚ್ಚಿನ ಆಸಕ್ತಿ ಆತನಲ್ಲಿ ಕಂಡುಬರುವುದಿಲ್ಲವಾದರೂ ವೀರಶೈವನಾದ ಸರ್ವಜ್ಞ, ರುದ್ರಾಕ್ಷಿ ಧರಿಸುವ ವಿಷಯವಾಗಿ ಅಲ್ಲಲ್ಲಿ ಹೇಳಿದ್ದಾನೆ. ವೀರಶೈವನಾದವನು ಸದಾ ಅಂಗದ ಮೇಲೆ ವಿಭೂತಿ, ಲಿಂಗ ಧರಿಸುವುದರೊಂದಿಗೆ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಳ್ಳುವ ವಿಚಾರ ಹೇಳಿದ್ದಾನೆ.

ರುದ್ರಾಕ್ಷಿಮಾಲೆಯನು ಭದ್ರದಲಿ ಧರಿಸಿದವಗೆ
ಹೊದ್ದಿರ್ದ ಪಾಪ ಹೊಗಲದು ಸಾಕ್ಷಾತ್
ರುದ್ರನೇ ಅಕ್ಕು ಸರ್ವಜ್ಞ.

ತೊಡುಗೆಗಳಲ್ಲಿ ಸರ್ವಜ್ಞನ ಪ್ರಕಾರ ರುದ್ರಾಕ್ಷಿಯೇ ಬೆಳ್ಳಿ-ಬಂಗಾರಕ್ಕಿಂತ ಹೆಚ್ಚಿನ ಮಹತ್ವ ಪಡೆದುಕೊಂಡಂತೆ ತಿಳಿದುಬರುತ್ತದೆ. ರುದ್ರಾಕ್ಷಿ ಎಂಬುದು ಶಿವನ ಮೂರನೇ ಕಣ್ಣೆಂದು ಹಾಗೂ ಆತನ ಬೆವರ ಹನಿಗಳೆಂಬ ನಂಬಿಕೆ ಜಾನಪದರಲ್ಲಿದೆ. ಅಂತಹ ವಿಶೇಷತೆಯುಳ್ಳ ರುದ್ರಾಕ್ಷಿ ಮಾಲೆ ತೊಡುಗೆಯಾಗಿ ಸದಾ ಧರಿಸಿದವನಿಗೆ ಪಾಪಗಳು ತೊಲಗಿ ಶಿವನ ಸ್ವರೂಪ ಪಡೆದುಕೊಳ್ಳುತ್ತಾನೆಂದು ಹೇಳಿದ್ದಾನೆ.

ಹಾಗೆಯೇ ಸಂಚಾರಿಯಾದ ಸರ್ವಜ್ಞ ಮೆಟ್ಟುಗಳ ವಿಚಾರ ಹೇಳಿದ್ದಾನೆ.

..............................
ಬರಿಗಾಲಲ್ಲಿ ನಡೆಯುವವನ ಕರೆತಂದು
ಕೆರದಿಂದ ಹೊಡೆಯೆಂದ ಸರ್ವಜ್ಞ.

ಬರಿಗಾಲಲ್ಲಿ ನಡೆಯುವಗೆ ಕೊಡುವ ಶಿಕ್ಷೆಯನ್ನು ನೋಡಿದರೆ ಹಾಗೆ ನಡೆದಾಡುವುದು ತ್ಯಾಜ್ಯವೆಂದೇ ಆತನ ಅಭಿಪ್ರಾಯವಾಗಿದೆ. 'ಮೆಟ್ಟು ಇಲ್ಲದ ಪಾದ, ಚಂದನವ ಸುಟ್ಟು ಬಡಿದಂತೆ' ಎಂಬ ಹೋಲಿಕೆಯ ಮೂಲಕ ಅರ್ಥೈಸಿದ್ದಾನೆ. ಆಧುನಿಕತೆಯ ಗಾಳಿ ಬೀಸುತ್ತಿರುವ ಪರಿಣಾಮವಾಗಿ ಈ ಉಡುಗೆ-ತೊಡುಗೆಗಳು ಈಗ ತದ್ವತ್ತಾಗಿ ಕಾಣಿಸಿಕೊಳ್ಳದಿದ್ದರೂ ಅವುಗಳ ಪಳಿಯುಳಿಕೆಗಳನ್ನು ಮಾತ್ರ ನೋಡಬಹುದಾಗಿದೆ.

## ೫.೩. ಆಹಾರ-ವೈದ್ಯ ಮತ್ತು ಆರೋಗ್ಯ :

''ಆಹಾರ ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಆಹಾರ ಶೋಧನೆಯಲ್ಲಿ ಮೂಲ ಮಾನವನಿಂದ ನಡೆದು ಬಂದ ಪರಿವರ್ತನೆ ತುಂಬಾ ಆಶ್ಚರ್ಯವನ್ನುಂಟು ಮಾಡುತ್ತದೆ. ಹಸಿಯಾದ ಆಹಾರವನ್ನು ತಿನ್ನುತ್ತಿದ್ದ ಶಿಲಾಯುಗದ ಮಾನವ ನಂತರದ ದಿನಗಳಲ್ಲಿ ಬೆಂಕಿಯನ್ನು ಶೋಧಿಸಿದನು'' (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು,ಪು. ೨೫೮). ಮಾನವ ಬೆಂಕಿಯಲ್ಲಿ ಬೇಯಿಸಿ ಪದಾರ್ಥವನ್ನು ತಿಂದಾಗ ಅದರ ರುಚಿಯನ್ನು ಕಂಡುಕೊಂಡ. ಈ ಬೆಂಕಿಯನ್ನು ಕಂಡು ಕೊಂಡ ಮಾನವ ತನ್ನ ಜೀವನದ ಗತಿಯನ್ನೇ ಬದಲಿಸಿಕೊಂಡ. ಇದರ ರುಚಿಯನ್ನು ಅರಿತ ಈತ ವಿವಿಧ ಬಗೆಯ ಅಡುಗೆಗಳನ್ನು ಮಾಡಲು ಮುಂದಾದ.

ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಈ ಊಟಕ್ಕಿರುವ ಪ್ರಾಶಸ್ತ್ಯ ಬಹಳ ಹೆಚ್ಚಿನದು. ಆಹಾರವೆನ್ನುವುದು ಇತರೇ ಪ್ರಾಣಿಗಳಂತೆ ಮಾನವನಿಗೆ ಹೊಟ್ಟೆ ತುಂಬುವ ಸಾಮಗ್ರಿ ಮಾತ್ರವಾಗಿರದೆ, ಅವನ ರಸ-ರುಚಿಯನ್ನು, ತೃಷೆಯನ್ನು ತೀರಿಸುವ ಮಾನಸಿಕ ಒಂದು ಭೋಗದ ವಸ್ತುವೂ ಆಗಿದೆ. ''ಆಹಾರವು ಮಾನವನ ದೈಹಿಕ, ಮಾನಸಿಕ, ಆರೋಗ್ಯದ ಸಾಮಗ್ರಿಯೂ ಆಗಿದೆ'' ಎಂಬ ಡಾ. ಬಿ.ಬಿ. ಬಿರಾದಾರ ಅವರ ಮಾತು ಆಹಾರ ವಿಷಯದಲ್ಲಿ ಒಪ್ಪಬೇಕಾಗುತ್ತದೆ (ಜಾನಪದ ಸಿರಿ, ಪು. ೧೬).

ಉತ್ತರ ಕರ್ನಾಟಕದಲ್ಲಿ ಬಿಳಿಜೋಳ ಮತ್ತು ದ್ವಿದಳ ಧಾನ್ಯಗಳು ಆಹಾರದಲ್ಲಿ ಅತೀ ಪ್ರಸಿದ್ಧ. ಜನಪದರು ನಿತ್ಯ ಊಟಕ್ಕೆ ಉಪಯೋಗಿಸುವ ರೊಟ್ಟಿ, ಅನ್ನ , ಪಲ್ಯ, ಚಟ್ನಿ, ಹಾಲು, ಮೊಸರು, ಮಜ್ಜಿಗೆ, ಕೆನೆ, ಬೆಣ್ಣೆ, ಎಣ್ಣೆ , ತುಪ್ಪ ಹಾಗೂ ಹಬ್ಬದ ದಿನಗಳಲ್ಲಿ ಹುಗ್ಗಿ, ಹೋಳಿಗೆ, ದೋಸೆ, ಕಡಬು, ಶ್ಯಾವಿಗೆ, ಹಪ್ಪಳ, ಸಂಡಿಗೆ ಮೊದಲಾದ ಖಾದ್ಯಗಳನ್ನು ಹುಳಿ, ಸಿಹಿ, ಖಾರ, ಮಸಾಲೆ ಮುಂತಾದ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೫೩) ಷಡ್ರಸಯುಕ್ತ ಆಹಾರವನ್ನು ಸೇವಿಸುವುದುಂಟು. ಬಹು ಸಂಖ್ಯಾತ ಜನಪದರು ಶಾಖಾಹಾರಿಗಳಾಗಿದ್ದರೂ, ಕೆಲವೇ ಕೆಲವರು ಮಾಂಸಹಾರಿಗಳೂ ಇರುತ್ತಾರೆ (ಅದೇ, ಪು. ೫೨).

ನಾಡಿನ ವಿವಿಧ ಪ್ರದೇಶಗಳಿಗೆ ಭೇಟಿ ನೀಡಿದಾಗ ಅಲ್ಲಿ ಊಟ ಮಾಡುವ ಸ್ಥಿತಿಯನ್ನು ತನ್ನ ವಚನಗಳಲ್ಲಿ ಸರ್ವಜ್ಞ ಕಂಡರಿಸಿದ್ದಾನೆ: ಬಡಗಣದವರು ಸುಟ್ಟು ಉಂಬರು; ಮೂಡಣದವರು ಅಟ್ಟು ಉಂಬರು, ಪಡುವಣದವರು ತಟ್ಟೆಯಲ್ಲಿ ಉಂಬರು, ತೆಂಕಣದವರು ಮುಷ್ಟಿಯಲ್ಲಿ ಉಣ್ಣುತ್ತಿದ್ದರಂತೆ. ಅಂಗೈ ಯಲ್ಲಿ ರೊಟ್ಟಿ ಇಟ್ಟುಕೊಂಡು ಉಣ್ಣುವುದು ಈಗಲೂ ಕೆಲವರಿಗೆ ರುಚಿಕರವಾಗಿ ತೋರುವುದುಂಟು (ಸರ್ವಜ್ಞ ಕವಿ ಜೀವನ ಹಾಗೂ ಕಾವ್ಯ, ಪು.೭೩). ಬೆಳವಲ ನಾಡಿನಲ್ಲಿ ಜೋಳದ ಬೋನ, ಬೇಳೆ ತೊಗೆ, ಕಾಳೆಮ್ಮೆ ಕರೆದ ಹಾಲು ದೊರೆಯುತ್ತದೆಂದು ತಿಳಿಸಿದ್ದಾನೆ. ವಿರಕ್ತನಾದರೂ ಸವಿಗಾರನಾದ ಸರ್ವಜ್ಞ, ಮಲೆನಾಡಿನಲ್ಲಿ ಸಿಗುವ ಬೆಲ್ಲ, ಬಿಳಿಯೆಲೆ, ಹಲಸು ಮುಂತಾದವುಗಳ ಬಗ್ಗೆ ಹೇಳಿದ್ದಾನೆ. ಹೀಗೆ ಆಯಾ ಪ್ರದೇಶದ ವಿಶೇಷತೆ ಯನ್ನು ತನ್ನ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ.

ಸರ್ವಜ್ಞ ಆಹಾರ ತಯಾರು ಮಾಡುವುದರ ಕುರಿತು ಹೇಳಿರದಿದ್ದರೂ ಒಳ್ಳೆಯ, ಶುಚಿಯಾದ ಹಾಗೂ ರುಚಿಯಾದ ಆಹಾರವನ್ನು ಇತಿಮಿತಿಯಲ್ಲಿ ಹೇಗೆ ಸೇವಿಸಬೇಕೆಂಬುದನ್ನು ತನ್ನ ವಚನಗಳಲ್ಲಿ ಬಹಳ ಮಾರ್ಮಿಕವಾಗಿ ತಿಳಿಸಿದ್ದಾನೆ.

### ೫.೩.೧. ರೊಟ್ಟಿ :

ಉತ್ತರ ಕರ್ನಾಟಕದ ಭೌಗೋಳಿಕವು ಹೆಚ್ಚಾಗಿ ಕಪ್ಪು ಮತ್ತು ಮಸಾರಿ ಭೂಮಿಯನ್ನು ಹೊಂದಿದೆ. ಇಲ್ಲಿ ಮಳೆ ಕಡಿಮೆ . ಹವಾಗುಣವು ಸಮಶೀತೋಷ್ಣಕ್ಕನುಗುಣವಾಗಿ ಇಲ್ಲಿ ಜೋಳ, ನವಣೆ, ರಾಗಿ, ಸಜ್ಜೆ ಮುಂತಾದವುಗಳನ್ನು ಹೆಚ್ಚು ಬೆಳೆಯಲಾಗುತ್ತದೆ (ಜಾನಪದ ಸಿರಿ, ಪು. ೧೮). ಜೋಳದಲ್ಲಿ ಬಿಳಿ ಜೋಳ, ಕೆಂಪು ಜೋಳ, ಮುಂಗಾರಿ ಜೋಳ, ಕಡಬಿನ ಜೋಳ, ಅಳ್ಳಿನ ಜೋಳ, ಕಾಡಿಗೆ ಜೋಳ ಮುಂತಾದವುಗಳಿಂದ ವಿವಿಧ ಬಗೆಯ ರೊಟ್ಟಿಗಳನ್ನು ಮಾಡಲಾಗುತ್ತದೆ. ಜನಪದರು ದಿನನಿತ್ಯದ ಊಟದಲ್ಲಿ ಜೋಳದ ರೊಟ್ಟಿಯಿಂದ ಮಾಡುವ ಬಡಿದ ರೊಟ್ಟಿ, ಕೈರೊಟ್ಟಿ, ಕೆದರಿದ ರೊಟ್ಟಿ, ಮೆತ್ತನ ರೊಟ್ಟಿ, ಕಡಕ್‌ರೊಟ್ಟಿ, ಎಳ್ಳು ಹಚ್ಚಿದ ರೊಟ್ಟಿ, ಹರಿಶಿಣ ರೊಟ್ಟಿ, ಖಾರದ ರೊಟ್ಟಿ ಮುಂತಾದವು ಶ್ರೀಮಂತರ ರೊಟ್ಟಿಗಳಾಗಿವೆ. ಇಷ್ಟಲ್ಲದೆ, ಮೆಕ್ಕೆ ಜೋಳದ ರೊಟ್ಟಿ, ಮುಂಗಾರಿ ಜೋಳದ ರೊಟ್ಟಿ ಮುಂತಾದವು ಬಡವರ ರೊಟ್ಟಿಗಳಾಗಿವೆ (ಜಾನಪದ ಸಿರಿ, ಪು. ೨೧). ಇಂತಹ ಅನೇಕ ಬಗೆಯ ರೊಟ್ಟಿಯ ವಿಶೇಷತೆಯ ಬಗ್ಗೆ ಸರ್ವಜ್ಞ ತನ್ನ ವಚನದಲ್ಲಿ ಪ್ರಸ್ತಾಪಿಸಿದ್ದಾನೆ.

ಜನಪದರಲ್ಲಿ ಹೆಣ್ಣು ಗರ್ಭಿಣಿಯಾದಾಗ, ಅವಳ ಬಯಕೆ ತೀರಿಸಲು ವಿವಿಧ ಬಗೆಯ ಅಡುಗೆಯ ಜೊತೆಗೆ ಸಜ್ಜೆರೊಟ್ಟಿ ಮಾಡುತ್ತಾರೆ.

ಸಜ್ಜೀಯ ರುಚಿ ರೊಟ್ಟಿ ಸಜ್ಜಕದ ಹೋಳಿಗೆ
ಗಜ್ಜರಿ ಚಟ್ನಿ ಎಣ್ಣೆ ತಂಗೆವ್ವ
ಗಜ್ಜನಿನ ಬಂಕಿ ತಿಳಿದಾವ.

ಎಂದು ಒಬ್ಬ ಗರತಿ ಬಹಳ ಸುಂದರವಾಗಿ ಹೇಳಿದ್ದಾಳೆ. ಬೇರೆ ಯಾವುದೇ ಪದಾರ್ಥವನ್ನುಂಡರೂ ಊಟವಾಗಿಲ್ಲವೆಂದು, ರೊಟ್ಟಿಯ ಊಟವಾದರೆ ಮಾತ್ರ ಊಟವಾಯಿತೆಂದು ಹೇಳುವಷ್ಟರ ಮಟ್ಟಿಗೆ ಈ ಪದ್ಯದ ಮಹತ್ವ ಅಡಗಿದೆ. ಮತ್ತೊಂದು ವಿಶೇಷವೆಂದರೆ; ಗ್ರಾಮೀಣ ಪರಿಸರದಲ್ಲಿ ಹೆಣ್ಣುಮಗಳು ಮೊದಲಬಾರಿಗೆ ಗಂಡನ ಮನೆಗೆ ಹೋಗುವಾಗ ಸಜ್ಜೆರೊಟ್ಟಿ, ಸಜ್ಜಕದ ಹೋಳಿಗೆ, ಕರ್ಚಿಕಾಯಿ, ಅನ್ನ ಮುಂತಾದವುಗಳನ್ನು ಮಾಡಿಕೊಂಡು ಹೋಗಿ, ತನ್ನ ಊರಲ್ಲಿ ಹಂಚುತ್ತಾಳೆ. ಇದಕ್ಕೆ 'ರೊಟ್ಟಿ ಬುತ್ತಿ ಕೊಡುವುದು' ಎನ್ನುತ್ತಾರೆ. ಈ ಮೇಲೆ ತಿಳಿಸಿದಂತೆ ರೊಟ್ಟಿ ಊಟದ ಮಹತ್ವವನ್ನು ಅರಿತ ಸರ್ವಜ್ಞನು ;

ರೊಟ್ಟಿ ಇಲ್ಲದ ಊಟ ಹೊಟ್ಟೆಗಿಲ್ಲದ ಕೂಟ
ಇಟ್ಟಿಯರು ಇಲ್ಲದರಮನೆಯ ಚಂದನವ
ಕುಟ್ಟಿ ಹೊಗೆದಂತೆ ಸರ್ವಜ್ಞ.

ಅಂದರೆ; ರೊಟ್ಟಿ ಇಲ್ಲದ ಊಟವೇ ಇಲ್ಲವೆಂಬಷ್ಟರ ಮಟ್ಟಿಗೆ ಸರ್ವಜ್ಞನಿಗೆ ರೊಟ್ಟಿಯ ಬಗ್ಗೆ ಪ್ರೀತಿ. ಇಲ್ಲಿ ಗರ್ಭಿಣಿ ಮಹಿಳೆಗೆ 'ಬಯಕೆ ಬುತ್ತಿ' ಮಾಡುವಾಗ ಜನಪದ ಗರತಿಯೊಬ್ಬಳು;

ಎಳ್ಳು ಹಚ್ಚಿದ ರೊಟ್ಟಿ ಎಣ್ಣೆ ಬದನೇ ಕಾಯಿ
ಮಸರು ಕಲಿಸಿದ ಬುತ್ತಿ ಬಿಸಿಯ ಬಾನ

ಹಾಡಿರುವುದನ್ನು ನೆನೆಯಬಹುದು.

**ಜೋಳ :**

ಸರ್ವಜ್ಞ ಜೋಳದ ಬಗೆಗೆ ಗುಣಗಾನ ಮಾಡುತ್ತ;

ಜೋಳವನು ತಿಂಬುವವನು ತೋಳದಂತಾಗುವನು
ಬೇಳೆ ಬೆಲ್ಲಗಳ ಸವಿವವನು ಬಹುಕಾಲ
ಬಾಳಲರಿಯನು ಸರ್ವಜ್ಞ.

ಊಟದಲ್ಲಿ ಮೊದಲಿಗೆ ರೊಟ್ಟಿಯನ್ನು ತಿನ್ನುವ ರೂಢಿ ಇದ್ದೇ ಇದೆ. ಈ ರೀತಿ ನಿತ್ಯವೂ ಜೋಳದ ರೊಟ್ಟಿಯನ್ನು ತಿನ್ನುವವನಿಗೆ ತೋಳದಷ್ಟು ಶಕ್ತಿಯುತವಾಗಿ ತುಂಬಾ ಚಟುವಟಿಕೆಯುಳ್ಳವನಾಗಿ ಹಾಗೂ ನಿರೋಗಿಯಾಗಿರುತ್ತಾನೆ. ಕೇವಲ ನಾಲಿಗೆ ರುಚಿಗಾಗಿ ದಿನನಿತ್ಯ ಬೇಳೆ ಬೆಲ್ಲವನ್ನು ಊಟ ಮಾಡಿದರೆ ಆರೋಗ್ಯಕ್ಕೆ ಹಾನಿಯಾಗಬಹುದೆಂದು ಹಾಗೂ ಬಹುಕಾಲ ಬದುಕಲಾರನೆಂಬ ಮಾತನ್ನು

ಸರ್ವಜ್ಞ ತಿಳಿಸಿದ್ದಾನೆ. ಆದ್ದರಿಂದ ಹಬ್ಬದ ದಿನಗಳಲ್ಲಿ ಮಾತ್ರ ಈ ಬೇಳೆ ಬೆಲ್ಲಗಳ ಪದಾರ್ಥಗಳನ್ನು ಬಳಸಬೇಕೇ ಹೊರತು, ದಿನನಿತ್ಯವಲ್ಲವೆಂಬುದು ಜನಪದರ ನಂಬಿಕೆ.

ಜೋಳದಾ ಬೋನಕ್ಕೆ ಬೇಳೆಯ ತೊಗೆಯಾಗಿ
ಕಾಳೆಮ್ಮೆ ಕರೆದ ಹೈನಾಗಿ ಬೆಳವಲ
ಮೇಳ ನೋಡೆಂದ ಸರ್ವಜ್ಞ.

ಜೋಳದ ರೊಟ್ಟಿಯೊಂದಿಗೆ ಬಳಸುವ ಪಲ್ಯದ ಬಗ್ಗೆ ಇಲ್ಲಿ ಹೇಳಿದ್ದಾನೆ. ಕಾಯಿಪಲ್ಯ, ತೊಪ್ಪಲು ಪಲ್ಯ ಅಲ್ಲದೆ ಬೇಳೆ, ಹೆಸರು, ಕಡಲೇಬೇಳೆ, ಮಡಿಕೆ, ಅವರೇ ಕಾಳು, ಹುರಳಿಕಾಳು ಮತ್ತು ಅಲಸಂದಿಗಳ ಬಗ್ಗೆ ಅರಿತಿರಬಹುದಾದ ಸರ್ವಜ್ಞ ಜೋಳದ ರೊಟ್ಟಿಗೆ ಬೆಂದ ತೊಗರಿಬೇಳೆಪಲ್ಯ ತಿನ್ನಲು ಬಹಳ ರುಚಿಯಾಗಿರುತ್ತದೆಂದು ಸೂಚಿಸಿದ್ದಾನೆ. ಇದರೊಟ್ಟಿಗೆ ಎಮ್ಮೆ ಹಾಲಿನ ಮೊಸರು ಇದ್ದರಂತೂ ಆ ಊಟದ ಸವಿ ಬೆಳವಲನಾಡಿನ ಸೊಬಗಿನಷ್ಟಿರುತ್ತದೆಂದು ಸರ್ವಜ್ಞನ ಕಲ್ಪನೆ. ಆದ್ದರಿಂದ ಅವನು; ''ಮೊಸರು ಇಲ್ಲದ ಊಟ, ಕೆಸರು ಇಲ್ಲದ ಗದ್ದೆಯಂತೆ'' ಎಂದಿದ್ದಾನೆ.

ಇನ್ನು ಜೋಳದ ನುಚ್ಚಿನಿಂದ 'ಅಂಬಲಿ' ಮಾಡುತ್ತಾರೆ. ''ಅಂಬಲಿ ಕಂಬಳಿರಾಸ್ತು, ಮಿಕ್ಕಿದ್ದೆಲ್ಲಾ ಜಾಸ್ತು'' ಎನ್ನುವಂತೆ ಜಾನಪದರ ಪ್ರಿಯವಾದ ಆಹಾರ ಇದಾಗಿದೆ. ''ಅಂಬಲಿ ಮಾಡ್ಯಾಳ ಹದ ಹಾಕಿ, ಗಂಡ ಬಡಿದಾನ ಕದ ಹಾಕಿ''. ಅಂಬಲಿ ಮಾಡುವಾಗ ಅದು ಏನಾದರೂ ಕೆಟ್ಟಿತೆಂದರೆ ''ಅಂಬಲಿ ಮಾಡ್ಯಾಳ ಗಂಟ ಗಂಟ, ಗಂಡ ಬಡಿದಾನ ಸೊಂಟ ಸೊಂಟ'' ಎಂಬ ಪ್ರಾಸ ಪದಗಳು ಅಂಬಲಿಯ ಜನಪ್ರಿಯತೆಯನ್ನು ಸಾರುತ್ತವೆ. ಸರ್ವಜ್ಞನೂ ಸಹ ಅಂಬಲಿಯ ಬಗ್ಗೆ ; '' ಹಂಗಿನಾ ಹಾಲಿಗಿಂ ಅಂಬಲಿಯ ತಿಳಿಲೇಸು'' ಮತ್ತು ''ಹಸಿದರೆ ಅಂಬಲಿಯು ಲೇಸು, ಬಿಸಿಲಲ್ಲಿ ಕೊಡೆ ಲೇಸು'' ಎಂದಿದ್ದಾನೆ. ಇಲ್ಲಿನ ಸಾಲಿನಲ್ಲಿ ಅಂಬಲಿಗೂ, ಹಾಲಿಗೂ ಒರೆಹಚ್ಚಿ ಹೇಳಿದ್ದಾನೆ.

ನಮ್ಮ ಗ್ರಾಮೀಣ ಪ್ರದೇಶದಲ್ಲಿ ಹೈನಿಗೇನೂ ಕಡಿಮೆ ಇಲ್ಲ. ಹೈನನ್ನು ದಿನ ನಿತ್ಯದ ಊಟದಲ್ಲಿ ಪೂರ್ಣ ಆಹಾರವಾಗಿಯೂ ಜನಪದರು ಬಳಸುತ್ತಾರೆ (ಸರ್ವಜ್ಞನ ವಚನಗಳಲ್ಲಿ ಆರೋಗ್ಯ,ಪು.೪೫). ಜನಪದರು ಮತ್ತೊಬ್ಬರ ಆಸ್ತಿಗಾಗಿ ಹಾಗೂ ಹಂಗಿಗೊಳಗಾಗಿ ಬದುಕದೇ ಸ್ವಾಭಿಮಾನದಿಂದ ಜೀವನ ಸಾಗಿಸುತ್ತಾ ಬಂದವರು. ಇಂತಹ ಜನರನ್ನು ಕಂಡಿರಬಹುದಾದ ಸರ್ವಜ್ಞ '' ಅಪಮಾನದ ಊಟಕ್ಕಿಂತ ಉಪವಾಸವಿರುವುದೇ ಲೇಸು'' ಎಂದು ಹೇಳಿದ್ದಾನೆ.

### ೫.೩.೨. ರಾಗಿ ಮತ್ತು ನವಣೆ :

ರಾಗಿ ಮತ್ತು ನವಣೆ ಬಗೆಗೆ ಹೇಳುತ್ತಾ, ತೃಣಮೂಲ ಧಾನ್ಯವಾದ ನವಣೆ ಅಧಿಕ ಪೌಷ್ಠಿಕಾಂಶ ವುಳ್ಳ ಶಕ್ತಿಯುತ ಆಹಾರ. ಇದು ಬೇಗನೆ ಜೀರ್ಣವಾಗುವುದಿಲ್ಲವಾದ್ದರಿಂದ ಮೈಮುರಿದು ಕೆಲಸ ಮಾಡುವವರಿಗೆ ನವಣೆ ಹೆಚ್ಚು ಉಪಯುಕ್ತ. ಇದರಲ್ಲಿ ಶರ್ಕರ ಪಿಷ್ಠ ಹಾಗೂ ಕೊಬ್ಬಿನಾಂಶ ತೀರಾ

ಕಡಿಮೆ ಇರುವುದರಿಂದ ಇದನ್ನು ಸೇವಿಸುವವರಿಗೆ ಬೊಜ್ಜು, ಸ್ಥೂಲಕಾಯ ಮುಂತಾದ ಕಿರಿಕಿರಿ ಇರುವುದಿಲ್ಲ. ಮಧುಮೇಹ ರೋಗಿಗಳಿಗೆ ವೈದ್ಯರು ಅಕ್ಕಿಯ ಅನ್ನದ ಬದಲು ನವಣೆ ಅನ್ನವನ್ನು ಬಳಸುವಂತೆ ಸೂಚಿಸುವುದುಂಟು. ಅಂತೆಯೇ ಸರ್ವಜ್ಞ;

ನವಣೆ ತಿಂಬುವವನು ಹವಣಾಗಿ ಇರುತಿಹನು
ಭವಣೆಗಳಿಗವನು ಒಳಬೀಳ ನೀಮಾತು
ಠವಣೆಯಲ್ಲೆಂದ ಸರ್ವಜ್ಞ.

ರಾಗಿಯನು ಉಂಬುವವನು ನಿರೋಗಿ ಎಂದೆನಿಸುವನು
ರಾಗಿಯು ಭೋಗಿಗಳಿಗಲ್ಲದೆ ಬಡವರಿ
ಗಾಗಿ ಬೆಳೆದಿಹುವು ಸರ್ವಜ್ಞ.

ಸರ್ವಜ್ಞನಿಗಿಂತ ಮೊದಲೇ ಜೀವಿಸಿದ್ದ ಕನಕದಾಸರು ತಮ್ಮ 'ರಾಮಧಾನ್ಯ ಚರಿತೆ' ಯಲ್ಲಿ ರಾಗಿಯ ಮಹಿಮೆಯನ್ನು ಕೊಂಡಾಡಿದ್ದಾರೆ. ರಾಗಿ ಜನ ಸಾಮಾನ್ಯರು ತಿನ್ನುವ ಆಹಾರವಾಗಿತ್ತೆಂದು ಅವರು ತಿಳಿಸಿರುವುದಲ್ಲದೆ, ಅದು ಶ್ರೀರಾಮನಿಗೆ ಪ್ರಿಯವಾಗಿತ್ತದೆಂದು ತಿಳಿಸಿದ್ದಾರೆ. ನವಣೆ ಪೌಷ್ಟಿಕವಾದ ಧಾನ್ಯ. ಕಾರಣ ನವಣೆಯನ್ನು ತಿನ್ನುವ ವ್ಯಕ್ತಿ ಬೇರೆ ಬೇರೆ ಬವಣೆಗಳಿಗೆ ಬಲಿಬೀಳನು. ಇದೇರೀತಿ ರಾಗಿಯೂ ಸಹ ವ್ಯಕ್ತಿಯಲ್ಲಿ ರೋಗಗಳು ಬರದಂತೆ ಮಾಡಬಲ್ಲದು. ಈ ನವಣೆ ಮತ್ತು ರಾಗಿಗಳಲ್ಲಿ ಹೆಚ್ಚು ಪ್ರೋಟಿನ್ ಇರುತ್ತದೆ. ಇದು ಆರೋಗ್ಯಕ್ಕೆ ಉತ್ತಮ ಆಹಾರವಾಗಿದೆ. ಇವುಗಳ ಬಗೆಗೆ ಸರ್ವಜ್ಞ 'ರಾಗಿಯನು ಉಂಬುವವನು ನಿರೋಗಿಯಾಗಿರುವನು' ಎಂದಿದ್ದಾನೆ. ಜನಪದರ ತಮ್ಮ ಊಟದಲ್ಲಿ ನವಣೆ ಮತ್ತು ರಾಗಿಗಳನ್ನು ಹೆಚ್ಚು ಬಳಸುತ್ತಾ ಬಂದಿದ್ದಾರೆ.

ಜೋಳ ಮತ್ತು ರಾಗಿಯಿಂದ ಮುದ್ದೆ ಎಂಬ ಪದಾರ್ಥವನ್ನು ಮಾಡಲಾಗುತ್ತದೆ. ''ಮುದ್ದೆಗಿಂತ ಊಟಿಲ್ಲ, ಸಿದ್ಧಪ್ಪನಂತ ದೇವರಿಲ್ಲ'' ಎಂಬ ಗಾದೆಯು ಮುದ್ದೆ ಊಟದ ಹೆಚ್ಚುಗಾರಿಕೆ ಯನ್ನು ತೋರ್ಪಡಿಸುತ್ತದೆ. ಅದೇರೀತಿ ರಾಗಿ ಹಿಟ್ಟಿನಿಂದ ಗಂಜಿ ತಯಾರಿಸುತ್ತಾರೆ. ''ಗಂಜೀಯ ಕುಡಿದರೂ ಗಂಡನ ಮನೆ ಲೇಸು'', '' ಉಣ್ಣೋದು ಗಂಜಿ ಮುಕ್ಕಳಿಸೋದು ಪನ್ನೀರು'' ಎಂಬ ಗಾದೆಗಳು ಗಂಜಿಯ ಬಗೆಗೆ ಸೃಷ್ಟಿಯಾಗಿವೆ.

### ೫.೩.೩. ಅಕ್ಕಿ :

ಇನ್ನು ಅನ್ನದ ಬಗೆಗೆ ಸರ್ವಜ್ಞನಲ್ಲಿ ಒಂದೇ ನಿಲುವು ಕಾಣಬರುವುದಿಲ್ಲ. ''ಅಕ್ಕಿ ಬೋನವ ಲೇಸು'' ಎಂದಿದ್ದರೂ ;

ಅಕ್ಕಿಯನು ಉಂಬುವವನು ಹಕ್ಕಿಯಂತಾಗುವನು
ಸಿಕ್ಕು ರೋಗದಲಿ ರೊಕ್ಕವನು ವೈದ್ಯನಿಗೆ
ಇಕ್ಕುತಲಿರುವ ಸರ್ವಜ್ಞ.

ಸಾಮಾನ್ಯವಾಗಿ ಅಕ್ಕಿಯು ಹಗುರಾದ ಆಹಾರ ಮತ್ತು ಬೇಗ ಜೀರ್ಣವಾಗುವಂತಹದು. ಅನ್ನ ಊಟ ಮಾಡಿದರೆ ಬೇಗನೆ ಹಸಿವೆ ಕಂಡು ಬರಬಹುದು. ಅಲ್ಲದೆ, ಹಲ್ಲುಗಳಿಗೆ ಎಂಥದೂ ಕಸರತ್ತು ದೊರೆಯಲಾರದು. ಕೇವಲ ಅಕ್ಕಿ ಊಟ ಮಾಡುವುದು ರೋಗಕ್ಕೆ ಕಾರಣ. ಆಗ ಅನಿವಾರ್ಯವಾಗಿ ವೈದ್ಯರಲ್ಲಿಗೆ ಓಗಬೇಕಾಗಬಹುದು. ಅಕ್ಕಿ ಶಕ್ತಿಯುತವಾದ ಆಹಾರವಲ್ಲದಿದ್ದರೂ ಅದು ತಾಳ್ಮೆಯ ಸಂಕೇತವೆನ್ನಬಹುದು. ಬೈಗುಳ ಸಂದರ್ಭದಲ್ಲಿಯೂ ''ಹೊಟ್ಟೆಗೆ ಅನ್ನ ತಿನ್ನುವವನಾದರೆ, ತಾಳ್ಮೆಯಿಂದ ಇರುತ್ತಿದ್ದಿ'' ಎನ್ನುವ ಮಾತನ್ನು ಈಗಲೂ ಕೇಳುತ್ತಿರುತ್ತೇವೆ. ಅಕ್ಕಿಯಿಂದ ನಾನಾ ವಿಧವಾದ ಅನ್ನವನ್ನು ಜನಪದರು ಮಾಡುತ್ತಾರೆ. ಸರ್ವಜ್ಞ '' ಹಾಲು ಬೋನವ ಲೇಸು'' ಎಂದಿದ್ದಾನೆ.

ಹಸಿಯೆ ಅನ್ನವು ಲೇಸು ಬಿಸಿಯ ಪಳಿಲೆಯುಲೇಸು
ಹುಸಿಲೇಸು ಕಳ್ಳ ಹೆಣ್ಣಂಗೆ ಬೈಗಿನಾ
ಬಿಸಿಲು ಲೇಸೆಂದ ಸರ್ವಜ್ಞ.

ಈ ವಚನದಲ್ಲಿ ಹಸಿದಾಗ ಉಣ್ಣಲು ಅನ್ನವು ಒಳ್ಳೆಯದು. ಪಳಿಲೆ ಎಂಬುದು ಒಂದು ತರಹದ ಸಿಹಿ ಪದಾರ್ಥ. ಈ ಪಳಿಲೆಯುವ ಬಿಸಿಯಾಗಿದ್ದಾಗ ಉಣ್ಣಲು ರುಚಿಕರವಾದದ್ದು ಎಂದು ಹೇಳಿದ್ದಾನೆ. ಅದೇರೀತಿ ಸಂಜೆಯ ಹೊತ್ತಿರ ಎಳೆಬಿಸಿಲು ಲೇಸೆಂದು ಹೇಳಿರುವುದೇಕೆಂದರೆ ಅದು ಹಿತವಾಗಿ, ಮನೋಹರವಾಗಿರುತ್ತದೆ. ಈ ಎಳೆಬಿಸಲು ಚರ್ಮಕ್ಕೆ ಸೋಂಕಿದರೆ, ಚರ್ಮದಲ್ಲಿ 'ಡಿ' ಜೀವಸತ್ವವು ಉತ್ಪಾದಿಸಲ್ಪಡುತ್ತದೆ. ಈ ಅರಿವು ಜನಪದರಲ್ಲಿ ಇರದಿದ್ದರೂ, ಸಾಮಾನ್ಯವಾಗಿ ಇಂತಹ ಎಳೆಬಿಸಿಲಲ್ಲಿ ಕೆಲಸ ಕಾರ್ಯಗಳು ಮಾಡುವುದರ ಮೂಲಕ ದೃಢಕಾಯರಾಗಿರುತ್ತಾರೆಂದು ತಿಳಿದು ಸರ್ವಜ್ಞ ಮೇಲಿನ ವಚನದಲ್ಲಿ ಪ್ರಸ್ತಾಪಿಸಿರಬಹುದು.

ಅನ್ನದೇವರ ಮುಂದೆ ಇನ್ನು ದೇವರು ಉಂಟೆ ?
ಅನ್ನವಿರುವ ತನಕ ಪ್ರಾಣವೀ ಜಗದೊಳಗೆ
ಅನ್ನವೇ ದೈವ ಸರ್ವಜ್ಞ.

ಜನಪದರು ಸಾಮಾನ್ಯವಾಗಿ ಅನ್ನವನ್ನು ಬ್ರಹ್ಮನಿಗೆ ಹೋಲಿಸುವುದುಂಟು. ಅನ್ನವೆನ್ನುವುದು ಪ್ರಾಣ ವಿದ್ದ ಹಾಗೆ. ಉಸಿರಾಟಕ್ಕೆ ಶುದ್ಧ ಗಾಳಿ ಎಷ್ಟು ಅವಶ್ಯಕವೋ ಹಾಗೆಯೇ ತಾಳ್ಮೆ, ಶಾಂತಿಯಿಂದಿರಲು ಅನ್ನದ ಊಟ ಅತ್ಯವಶ್ಯಕ. ಆದ್ದರಿಂದ ಸರ್ವಜ್ಞ ಕೂಳು ದೇಹದಲ್ಲಿರುವತನಕ ಮನುಷ್ಯನಲ್ಲಿ ಪ್ರಾಣವಿರುತ್ತದೆ ಹಾಗೂ ಗೂಳಿಯಂತಿರುತ್ತಾನೆ. ಅದಕ್ಕೆಂದೇ 'ಕೂಳು ಇದ್ದರೆ ಬಿರುಸು' ಎಂದು ಸಹ ಹೇಳಿದ್ದಾನೆ.

ನೇತ್ರಗಳು ಕಾಣಿಸವು ಶೋತೃಗಳು ಕೇಳಿಸವು
ಗಾತ್ರಗಳು ಎದ್ದು ನಡೆಯುವವು ಕೂಳೊಂದು
ರಾತ್ರಿ ತಪ್ಪಿದರೆ ಸರ್ವಜ್ಞ.

ಹಸಿವೆಯಾದಾಗ ತುತ್ತು ಅನ್ನವನ್ನು ಊಟ ಮಾಡಿದರೆ, ದೇಹ ಮನಸ್ಸಿಗೆ ಚೈತನ್ಯ ಶಕ್ತಿ ಬರುತ್ತದೆ. ಒಂದು ವೇಳೆ ಹಸಿವೆಯಾದಾಗ ಊಟ ಮಾಡದೇ ಇದ್ದರೆ, ನಿಶ್ಯಕ್ತಿಯಾಗುತ್ತದೆ(ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ಪು. ೬).

ಸರ್ವಜ್ಞನ ವಚನದಲ್ಲಿ ಈ ಅಂಶವನ್ನು ಗಮನಿಸಿದಾಗ : ಬಹಳ ಸಮಯದವರೆಗೆ ಹಸಿವೆಯನ್ನು ಕಟ್ಟಿದ ವ್ಯಕ್ತಿಗೆ ಏನೇ ಕೊಟ್ಟರೂ ತಿನ್ನಲು ಮನಸ್ಸು ಬರುವುದಿಲ್ಲ. ಆಗ ವ್ಯಕ್ತಿಯಲ್ಲಿ ಚೈತನ್ಯ ಶಕ್ತಿ ಕುಂದಿ, ಚರ್ಮ ಸಡಿಲಾಗುತ್ತದೆ. ಕಣ್ಣುಗಳಿಗೆ ಕತ್ತಲು ಆವರಿಸಿದಂತೆ ಕಿವಿಗಳು ಕೇಳಿಸದಂತಹ ಸ್ಥಿತಿ ಪ್ರಾರಂಭವಾಗುತ್ತದೆಂದು ಅನುಭವದಿಂದಲೇ ಆತ ಹೇಳಿದ್ದಾನೆ. ಹೀಗೆ ಅನ್ನದ ಮಹತ್ವವನ್ನು ಕುರಿತು 'ಅನ್ನವನ್ನು ಇಕ್ಕಿ ಖಿನ್ನವನು ಪಡಬೇಡ' ಮತ್ತು 'ಅನ್ನವನು ಇಕ್ಕಿ ನನ್ನಿಯನು ನುಡಿ' ಎಂದು ಎಚ್ಚರಿಸಿದ್ದಾನೆ. ಆದ್ದರಿಂದ ಅನ್ನದಾನ ಮಾಡುವ ಸಂಸ್ಕೃತಿಯು ಮಾನವನ ಮನದಾಳದಿಂದ ಉದ್ಭವಿಸಿದ್ದು. ಅದು ಈ ನೆಲದ ಗುಣವಾಗಿದೆ ಎಂದು ಸಹ ಸರ್ವಜ್ಞ ಹೇಳುವುದನ್ನು ಮರೆತಿಲ್ಲ.

**೫.೩.೪. ಹೋಳಿಗೆ :**

ಜನಪದರು ಹಬ್ಬ, ಜಾತ್ರೆ, ಉತ್ಸವದ ದಿನಗಳಲ್ಲಿ ಸಿಹಿ ಪದಾರ್ಥಗಳನ್ನು ಸೇವಿಸುವುದುಂಟು. ಇಲ್ಲಿ ಹೋಳಿಗೆ ಮತ್ತು ಹುಗ್ಗಿಗೆ ಮೊದಲ ಸ್ಥಾನ ಕೊಡುತ್ತಾರೆ.

ಸುಗ್ಗಿದಾಸೋಹೆಂದು ಹಿಗ್ಗು ಬೆಳವನ ನಾಡು
ಹುಗ್ಗಿ ಹೋಳಿಗೆಯ ನಿನ್ನಾಡು - ಸುಗ್ಗೂಟ
ನಗ್ಗೇಡು ಇದಕ್ಕೆ ಮಲೆನಾಡು.

ಎಂದು ವರ್ಣಿಸಿದ್ದಾರೆ. ಹೋಳಿಗೆಯಲ್ಲಿ ಹಲವು ವಿಧಗಳು. ಕಡ್ಲೆಬೇಳೆ ಹೋಳಿಗೆ, ಹೂರಣದ ಹೋಳಿಗೆ ಮುಂತಾದವುಗಳು ಕಂಡುಬರುತ್ತವೆ. ''ಕತ್ತೆಗೇನು ಗೊತ್ತು ಹೂರಣದ ರುಚಿ'', ''ಹತ್ತು ಹೋಳಿಗೆ ಒಂದು ಲಳಗಿ ಸಮಾನ''. ''ಕದ್ದು ಹೋಳಿಗೆ ಕೊಟ್ರೆ, ಬೆಲ್ಲ ಸಾಲ್ದು ಎಂದ್ರಂತೆ'' ಎಂಬಂತಹ ಗಾದೆಗಳು ಹೋಳಿಗೆಯ ಮಹತ್ವವನ್ನು ತಿಳಿಸುತ್ತದೆ. ಇದನ್ನು ಕಂಡಿರಬಹುದಾದ ಸರ್ವಜ್ಞ, ಹೋಳಿಗೆ ಮತ್ತು ಹಪ್ಪಳದ ಮಹತ್ವ ಕುರಿತು;

ಹರಕು ಹೋಳಿಗೆ ಲೇಸು, ಮುರುಕು ಹಪ್ಪಳ ಲೇಸು
ಕುರುಕುರು ಕಡಲೆ ಲೇಸು ಪಾಯಸದ
ಸುರುಕು ಲೇಸೆಂದ ಸರ್ವಜ್ಞ.

ಎಂದು ಹೇಳಿದ್ದಾನೆ. ಆಯುರಾರೋಗ್ಯದಿಂದಿರಬೇಕಾದರೆ ಆಹಾರವನ್ನು ತಿನ್ನತಕ್ಕ ಕ್ರಮವನ್ನು ಸರ್ವಜ್ಞನು ಹೇಳದೇ ಬಿಟ್ಟಿಲ್ಲ. ಇದರಲ್ಲಿ ಭೋಜ್ಯ, ಲೇಹ್ಯ, ಖಾದ್ಯ, ಚೋಷ್ಯ ಮುಂತಾದವುಗಳೆಲ್ಲವೂ ಸಮಾವೇಶವಾಗುತ್ತವೆ. ಈ ವಿಷಯವು ಸ್ಪಷ್ಟವಾಗುವಂತೆ ಸರ್ವಜ್ಞನು ದೃಷ್ಟಾಂತದ ಸಹಿತವಾಗಿ ವಿವರಿಸಿದ್ದಾನೆ. ಅಂದರೆ; ಭೋಜ್ಯ ಪದಾರ್ಥವನ್ನು ತಂಗುಳ ಹೋಳಿಗೆಯಂತೆ, ಖಾದ್ಯ ಪದಾರ್ಥವನ್ನು ಮುರುಕು ಹಪ್ಪಳದಂತೆ, ಇಲ್ಲವೆ ಕುರುಕುರು ಕಡಲೆಯಂತೆ, ಲೇಹ್ಯ ಪದಾರ್ಥವನ್ನು ನಾಲಿಗೆಯಿಂದ ನೆಕ್ಕಿ, ಚೋಷ್ಯ ಪದಾರ್ಥವನ್ನು ಪಾಯಸದಂತೆ ಸುರಿದುಣ್ಣಬೇಕೆಂಬುದು ಅವನ ಹಿತೋಪದೇಶ.

ಮೇಲ್ಕಂಡ ಪದಾರ್ಥಗಳನ್ನು ವಿಜ್ಞಾನಕ್ಕನುಗುಣವಾಗಿ ವಿಚಾರಿಸಿದರೆ, ಅನೇಕ ಮಹತ್ವದ ಸಂಗತಿ ಗಳು ಹೊರ ಬರುವವು. ಗೋಧಿ ಆಹಾರವು ಬಿಸಿಯಾಗಿರುವಾಗ ಊಟ ಮಾಡಿದರೆ ಅದು ಹೊಟ್ಟೆಯಲ್ಲಿ ಕಣಕದಂತೆ ಮುದ್ದೆಯಾಗುವುದರಿಂದ, ತಂಗುಳವಾದ ಮೇಲೆ ಸೇವಿಸುವುದು ಉತ್ತಮ. ಬಿಸಿ ಹೋಳಿಗೆಯು ಜೀರ್ಣಕ್ಕೆ ಜಡವು, ತಂಗುಳ ಹೋಳಿಗೆಯು ಜೀರ್ಣಕ್ಕೆ ಸುಲಭವು. ಊಟ ಮಾಡುವಾಗ ಪ್ರತಿಯೊಂದು ತುತ್ತನ್ನು ಚೆನ್ನಾಗಿ ಅಗಿದು ತಿನ್ನಬೇಕು. ಒಂದು ಬಿಸಿ ರೊಟ್ಟಿಯನ್ನು ತಿನ್ನಲಿಕ್ಕೆ ಐದು ನಿಮಿಷಗಳು ಬೇಕಾದರೆ; ಕಾಲು ಭಾಗ ತಂಗಳು ರೊಟ್ಟಿಯನ್ನು ಜಗಿಯಲಿಕ್ಕೆ ಕನಿಷ್ಠ ೧೫ ನಿಮಿಷ ಬೇಕಾಗಬಹುದು. ಜೋಳದ ಬಿಸಿ ರೊಟ್ಟಿಯಂತೆ , ತಂಗುಳ ರೊಟ್ಟಿಯನ್ನು ನುಂಗಲಿಕ್ಕೆ ಹೋದರೆ, ನಾಲಿಗೆಯು ಕೊರೆಯು ವುದು. ಇಲ್ಲವೆ ಗಂಟಲು ಹರಿಯುವುದು.

''ಬಿಸಿ ಅನ್ನವನು ಉಣ್ಣುವುದಕ್ಕಿಂತ, ತಂಗುಳ ರೊಟ್ಟಿನ್ನು ಜಗಿಯುವುದೇ ಲೇಸು''. ಹಾಗೆಯೇ ಕುರುಕುರು ಕಡಲೆಯನ್ನು ಒಂದಂದಾಗಿ ತಿನ್ನುವುದರಿಂದ ಬಹಳ ರುಚಿಕರವೆನಿಸುತ್ತದೆ. ಪಂಕ್ತಿ ಭೋಜನ ದಲ್ಲಿ ಸುರಿದುಕೊಂಡು ಊಟ ಮಾಡಿದರೆ ಅದು ಪ್ರಾಣಿಗಳು ನೀರು ಕುಡಿಯುವಾಗ ಸಪ್ಪಳವಾದಂತಾಗು ವುದರಿಂದ ಇದು ಅಸಭ್ಯತನವಾಗಬಹುದು. ವಿಜ್ಞಾನ ದೃಷ್ಟಿಯಿಂದ ಈ ಪದ್ಧತಿಯನ್ನು ವಿಚಾರಿಸಿದರೆ, ಸುರಿದುಣ್ಣುವುದು ಬಹು ಶಾಸ್ತ್ರೀಯವಾದುದೆಂದು ತಿಳಿದುಬರುತ್ತದೆ. ಸುರಿದುಣ್ಣುವಾಗ ನಮ್ಮ ಐದು ಬೆರಳುಗಳು ಕೂಡಿಕೊಂಡಂತಾಗುವುದು. ಇವುಗಳ ಮಧ್ಯದಲ್ಲಿ ಉಳಿದುಕೊಂಡಿದ್ದ ರಸವು ಏಕ ಸೂತ್ರವಾಗಿ ತುದಿ ನಾಲಿಗೆಯ ಮೂಲಕ ಕಿರುನಾಲಿಗೆಯವರೆಗೆ ರುಚಿಕರವೆನಿಸುತ್ತದೆ.

ಉತ್ತರ ಕರ್ನಾಟಕದ ಕೆಲ ಜಿಲ್ಲೆಗಳಲ್ಲಿ ಹಬ್ಬ-ಹುಣ್ಣಿಮೆ, ಜಾತ್ರೆ- ಉತ್ಸವಗಳಲ್ಲಿ ಹುರಿದ ಹೋಳ್ಗಿ, ಸುರುಳಿ ಹೋಳಿಗೆ ಮಾಡುವುದು ಸಹಜ. ಅಲ್ಲದೆ ಹೋಳಿ ಹುಣ್ಣಿಮೆಯಲ್ಲಿ ಕಡ್ಡಾಯವಾಗಿ ಕೆಲವರು ಹೋಳಿಗೆ ಮಾಡುವುದುಂಟು. ಕಾರಣ ''ಹೊಯ್ಕೊಂಡೋರ್ ಬಾಯಾಗ ಹೋಳ್ಗಿ ಊಟ'' ಎಂಬ ನಂಬಿಕೆ ಜನಪದರಲ್ಲಿದೆ. ಇನ್ನು ಬಾಯಿ ಚಪಲತೆ ತೀರಿಸುವ ಆಹಾರವೆಂದರೆ; ಹಿಟ್ಟಿನಿಂದ ಮಾಡುವ ದೋಸೆ. ''ದಾಸರಾಟಲ್ಲ, ದೋಸೆ ಊಟಲ್ಲ'' ಎನ್ನುವ ಮಾತಿನಲ್ಲಿ ದೋಸೆ ಎಂಬುದು ಗಟ್ಟಿ ಪದಾರ್ಥವಲ್ಲ. ''ಎಲ್ಲರ ಮನೆ ದೋಸೆ ತೂತು'' ಎಂಬ ಗಾದೆ ಜನರ ಜೀವನ ಮಟ್ಟವನ್ನು ತಿಳಿಸುತ್ತದೆ. '' ಕುನ್ನಿ ಕೂಳು ಕಾಣದಾದಾಗ ಮುದಿನಾಯಿ ದ್ವಾಸೆ ಬೇಡಿತ್ತಂತೆ'' ಎನ್ನುವ ಗಾದೆಯಲ್ಲಿ ದೋಸೆಯ ವಿಶೇಷತೆಯನ್ನು ತಿಳಿಸಲಾಗಿದೆ. ಇದಕ್ಕೆ ಸರ್ವಜ್ಞನೂ ಸಹ ''ದೋಸೆ ಹಾಲಿಗೆ ಲೇಸು'' ಎಂದು ಹಾಲಿನೊಡನೆ ದೋಸೆಯ ಊಟ ರುಚಿಯಾಗಿರುತ್ತದೆಂದು ತಿಳಿಸಿದ್ದಾನೆ.

### ೫.೩.೫. ಮಜ್ಜಿಗೆ :

ಜನಪದರ ಊಟದಲ್ಲಿ ಮಜ್ಜಿಗೆ,ಮೊಸರು ಸಾಮಾನ್ಯವಾಗಿರುತ್ತದೆ. ಅದರಲ್ಲೂ ಮಜ್ಜಿಗೆ ಊಟವು ಕೊನೆಗೆ ಇರಲೇಬೇಕು. ''ಮಜ್ಜಿಗೆ ಪೂರ್ತೇಕ ರಾಮಾಯಣ'' ಎನ್ನುವ ಗಾದೆ ಮಜ್ಜಿಗೆಯ ಅವಶ್ಯಕತೆಯನ್ನು ತಿಳಿಸುತ್ತದೆ. ಸರ್ವಜ್ಞನೂ ಈ ಮಜ್ಜಿಗೆಯ ಬಗ್ಗೆ ತನ್ನ ವಚನದಲ್ಲಿ;

ಮಜ್ಜಿಗೆ ಊಟಕ್ಕೆ ಲೇಸು; ಮಜ್ಜನಕ್ಕೆ ಮಡಿ ಲೇಸು
ಕಜ್ಜಾಯ ತುಪ್ಪ ಉಣ ಲೇಸು ಮನೆಗೊಬ್ಬ
ಅಜ್ಜಿ ಲೇಸೆಂದು ಸರ್ವಜ್ಞ.

ಅಜ್ಜಿ ಇಲ್ಲದ ಮನೆಯು ಮಜ್ಜಿಗಿಲ್ಲದ ಊಟ
ಕೊಜ್ಜಿಯರಿಲ್ಲದ ಅರಮನೆಯು ಇವು ಮೂರು
ಲಜ್ಜೆಗೆಟ್ಟಂತೆ ಸರ್ವಜ್ಞ.

ಜನಪದರು ಸಾಮಾನ್ಯವಾಗಿ ಊಟದಲ್ಲಿ ಮಜ್ಜಿಗೆಯನ್ನು ಬಳಸುವುದುಂಟು. ಅದರಲ್ಲಿ ಉತ್ತಮ ಪೌಷ್ಟಿಕಾಂಶವಿರುವುದರಿಂದ ರೋಗ-ರುಜಿನೆಗಳು ಬರುವುದು ಕಡಿಮೆ. ಕೆಲವರು ಊಟವಾದ ನಂತರ ಮಜ್ಜಿಗೆಯನ್ನು ಕುಡಿಯುತ್ತಾರೆ. ಈ ಮಜ್ಜಿಗೆಯಿಂದಾಗುವ ವೈಜ್ಞಾನಿಕ ತಿಳುವಳಿಕೆ ಜನಪದರಿಗಿರದಿದ್ದರೂ ಸ್ವತಃ ಅನುಭವದಿಂದ ಅದರ ಮಹತ್ವವನ್ನು ಅರಿತಿದ್ದಾರೆಂದು ಸರ್ವಜ್ಞ ತಿಳಿಸಿದ್ದಾನೆ (ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ಪು. ೧೮).

ಇಲ್ಲಿ ಮಜ್ಜನಕ್ಕೆ ಮಡಿ ಲೇಸು, ಕಜ್ಜಾಯ , ತುಪ್ಪ ಹಾಗೂ ಮನೆಗೊಬ್ಬ ಅಜ್ಜಿ ಎಂಬ ಉಪಮೆಗಳ ಮೂಲ ಊಟದ ಕೊನೆಗೆ ಮಜ್ಜಿಗೆಯೂಟ ಬಹಳ ಮುಖ್ಯವೆಂದು ತಿಳಿಸಿದ್ದಾನೆ. ಮಜ್ಜಿಗೆಯ ಊಟ ಉಂಡರೆ ಸಾಮಾನ್ಯವಾಗಿ ಅದು ಕೊನೆಯ ಘಟ್ಟದ ಊಟವೆಂದೇ ಅರ್ಥ.

### ೫.೩.೬. ಆರೋಗ್ಯ :

ಸರ್ವಜ್ಞ ಊಟದ ವಿಚಾರದಲ್ಲಿ ಬಹಳ ಎಚ್ಚರಿಕೆಯ ಮಾತುಗಳನ್ನು ನೀಡಿದ್ದಾನೆ. ಎಷ್ಟು ಊಟ ಮಾಡಬೇಕು ?, ಊಟ ಮಾಡಿದ ನಂತರ ಏನು ಮಾಡಬೇಕು ? ಎಂಬ ವಿಚಾರಗಳನ್ನು ತನ್ನ ವಚನದಲ್ಲಿ ತಿಳಿಸುತ್ತಾ ;

ಒಮ್ಮೆ ಯುಂಡವ ತ್ಯಾಗಿ ಇಮ್ಮೆ ಯುಂಡವ ಭೋಗಿ
ಬಿಮ್ಮ ಗುಂಡವನೇ ರೋಗಿ, ಯೋಗಿ ತಾ
ಸುಮ್ಮ ನಿರುತಿಹನು ಸರ್ವಜ್ಞ.

ಇಲ್ಲಿ ಸರ್ವಜ್ಞ ನಿರೋಗತ್ವದ ಗುಟ್ಟನ್ನು ಬಿಚ್ಚಿಟ್ಟಿದ್ದಾನೆ. ''ರುಚಿ ಹತ್ತಿದ್ರ ಹಾರುವ ಒಳ್ಳ ನೆಕ್ಕಿದ್ನಂತೆ'' ಎನ್ನುವ ಗಾದೆ ಬಾಯಿ ಚಪಲದ ವ್ಯಕ್ತಿಯನ್ನು ಸೂಚಿಸುವುದರ ಜೊತೆಗೆ ಊಟ ಅತಿಯಾದರೆ ಆರೋಗ್ಯಕ್ಕೆ ಹಾನಿ ಎಂಬುದನ್ನು ಪರ್ಯಾಯವಾಗಿ ತಿಳಿಸಿದ್ದಾನೆ(ಜಾನಪದ ಸಿರಿ,ಪು.೪೦).

ಜನರಲ್ಲಿ ಕಂಡು ಬರುವ ರೋಗಗಳು , ಅವರು ಮಾಡುತ್ತಿರುವ ನಿತ್ಯ ಆಹಾರ, ವಿಹಾರ , ಯಾನ, ಪಾನಗಳಿಂದಲೇ ಗುರುತಿಸಬಹುದೆಂದು ಆಯುರ್ವೇದದಲ್ಲಿ ವಿವರಿಸಲಾಗಿದೆ. ಆಯುರ್ವೇದವು ಜೀವನ ಶಾಸ್ತ್ರವಾಗಿದ್ದು, ವೈದ್ಯಕೀಯ ಜಗತ್ತಿಗೆ ಭಾರತೀಯ ಕೊಡುಗೆಯಾಗಿದೆ. ಕ್ರಿ.ಪೂ.೩೦೦ರಲ್ಲಿ ಯೋಗ ಸೂತ್ರಗಳನ್ನು ಬರೆದ ಪತಂಜಲಿ ಮಹರ್ಷಿ ''ಮನಸ್ಸು ಮತ್ತು ದೇಹಗಳ ಮೇಲೆ ಸಂಪೂರ್ಣ ಪ್ರಭುತ್ವವನ್ನು ಪಡೆಯುವುದೇ ಯೋಗ'' ಎಂದಿದ್ದಾನೆ. ಇದನ್ನೇ ಸರ್ವಜ್ಞನೂ ಸಹ ಮೇಲಿನ ವಚನ ದಲ್ಲಿ ತಿಳಿಸಿದ್ದಾನೆ.

ನಾಲಿಗೆಯ ಚಪಲವನ್ನು ಕಟ್ಟಿ, ನಿಯಮಿತ ಆಹಾರವನ್ನು ಸೇವಿಸುವುದಕ್ಕೆ ಒಂದು ಯೋಗ ಬೇಕು. ಜನಪದರು ಈ ಬಗೆಯಲ್ಲಿ ಕರ್ಮಯೋಗಿಗಳಾಗಿದ್ದಾರೆ. ಅಂಥವರನ್ನು ಕಂಡಿರಬಹುದಾದ ಸರ್ವಜ್ಞ;

ಹಸಿವಿಲ್ಲದುಣಬೇಡ, ಹಸಿದು ಮತ್ತಿರಬೇಡ
ಬಿಸಿಬೇಡ ತಂಗೂಳುಣಬೇಡ । ವೈದ್ಯನಾ
ಬೆಸಸಲೇ ಬೇಡ ಸರ್ವಜ್ಞ.

ಹಸಿಯದಿರೆ ಕಡುಗಾಯ್ದು, ಬಿಸಿ ನೀರ ಕುಡಿಯುವುದು
ರಸಿವಕ್ಕು ಸಿಕ್ಕ ಮಲವಕ್ಕು ದೇಹವದು
ಸಸಿನೆಯಾಗಿಹುದು ಸರ್ವಜ್ಞ.

ಚೆನ್ನಾಗಿ ಹಸಿವೆಯಾದ ನಂತರ ಊಟ ಮಾಡುವುದರಿಂದ ಆರೋಗ್ಯ ಸುಸ್ಥಿತಿಯಲ್ಲಿರುತ್ತದೆ. ಹಸಿವೆ ಇಲ್ಲದೆ ಊಟ ಮಾಡುವುದರಿಂದ ಅಜೀರ್ಣವಾಗಿ ದೇಹಾರೋಗ್ಯ ಏರುಪೇರಾಗುತ್ತದೆ. ಅಲ್ಲದೆ ವಿಶ್ರಾಂತಿ ಗೈಯುತ್ತಿರುವ ಜಠರದ ಮೇಲೆ ದಬ್ಬಾಳಿಕೆ ನಡೆಸಿದಂತೆಯೇ. ಇದರಿಂದೇನಾಗುತ್ತದೆಂದು ಸುಮ್ಮನಿದ್ದರೆ, ಹೊಟ್ಟೆ ಬಿರಿಯುತ್ತದೆ ನಂತರ ಹಲವಾರು ರೋಗಗಳು ಬರಬಹುದು. ಹಸಿಯದೇ ಉಣ್ಣುವುದೆಂದರೆ, ಹೆಚ್ಚಾಗಿ ಸೇವಿಸಿದ ಆಹಾರವು ಹೆಚ್ಚು ಪ್ರಮಾಣದಲ್ಲಿ ರಕ್ತವಾಗದೇ ವ್ಯಕ್ತಿಯ ಬೊಜ್ಜು ಬೆಳೆಯುತ್ತದೆ. ಇದರಿಂದ ರಕ್ತದ ಒತ್ತಡ ಹೆಚ್ಚಾಗುತ್ತದೆ. ಸಿಹಿಮೂತ್ರ ರೋಗ ಹಾಗೂ ಹೃದಯಾಘಾತಗಳೂ ಸಂಭವಿಸಬಹುದು. ಕೆಲವೊಮ್ಮೆ ಹಸಿವನ್ನು ದೀರ್ಘಕಾಲ ಹತ್ತಿಟ್ಟುಕೊಂಡಾಗ ದೇಹ ನಿತ್ರಾಣವಾಗುತ್ತದೆ. ಚೈತನ್ಯಶಕ್ತಿ ಕುಂದುತ್ತದೆ. ದೇಹದ ಅಂಗಾಂಶಗಳೆಲ್ಲಾ ಚಿಕ್ಕದಾಗಿ ಚರ್ಮ ಜೋಲಾಗಿ ಸಡಿಲಾಗುತ್ತದೆ. ಅದೇ ರೀತಿ ಹಸಿವೆಯಾಗಿದೆ ಎಂದು ಬಿಸಿಬಿಸಿಯಾದ ಅಥವಾ ತಂಗಳಿನ ಆಹಾರದ ಊಟ ಮಾಡಬಾರದೆಂಬುದು ಹಾಗೂ ಇದರಿಂದ ಆರೋಗ್ಯಕ್ಕೆ ಹಾನಿಯಾಗಿ ವೈದ್ಯನ ಹತ್ತಿರ ಹೋಗ ಬೇಕಾಗಬಹುದೆಂದು ತಿಳಿಸಿದ್ದಾನೆ.

ಜಾನಪದರು ತಾವು ಮಾಡುವ ಊಟದಲ್ಲಿ ಬಳಸಿಕೊಳ್ಳುವ ಪದಾರ್ಥಗಳ ಗುಣಧರ್ಮಗಳನ್ನು ಅರಿತುಕೊಂಡು ಆ ಮೂಲಕ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾರೆ. ಸರ್ವಜ್ಞನ ದೃಷ್ಟಿಯಲ್ಲಿ ಹಸಿವೆ ಯಾಗದಿದ್ದಾಗ ಅಥವಾ ಅಜೀರ್ಣವಾದಾಗ ಸ್ವಲ್ಪ ಕಾಯಿಸಿದ ಬಿಸಿ ನೀರನ್ನು ಕುಡಿದರೆ, ಹೊಟ್ಟೆಯೊಳಗಿನ ಮಲವು ಹೊರಟು ಹೋಗಿ, ದೇಹ ಸ್ವಚ್ಛವಾಗುವುದೆಂದು ತಿಳಿಸಿದ್ದಾನೆ;

ಉಂಡು ಕೆಂಡವ ಕಾಸಿ, ಉಂಡು ನೂರಡಿ ನಡೆದು
ಉಂಡೆಡದ ಮಗ್ಗುಲಲ್ಲಿ ಮಲಗಿ ವೈದ್ಯನ
ಭಂಡಾಟವಿಲ್ಲ ಸರ್ವಜ್ಞ.

ಉಂಡು ನೂರಡಿಯಿಟ್ಟು ಕೆಂಡಕ್ಕೆ ಕೈಕಾಸಿ
ಗಂಡು ಮೇಲಾಗಿ ಮಲಗಿದರೆ ವೈದ್ಯನಾ
ಮಿಂಡನೆಂದ ಸರ್ವಜ್ಞ.

ಶರೀರ ಶಾಸ್ತ್ರದ ಅನುಭವವುಳ್ಳ ಸರ್ವಜ್ಞ; ಈ ವಚನದಲ್ಲಿ ಊಟ ಮಾಡಿದ ಮೇಲೆ ತಕ್ಷಣ ಮಲಗಬಾರದೆಂದು ಹೇಳಿದ್ದಾನೆ. '' ಉಂಡು ನೂರಡಿ ನಡೆದು'' ಅಂದರೆ; ಊಟ ಸೇವಿಸಿದ ನಂತರ ಕುಳಿತಲ್ಲಿಯೇ ಕುಳಿತುಕೊಳ್ಳಬಾರದು. ನಡೆದಾಡಬೇಕೆಂದು ಹೇಳಿದ್ದಾನೆ. ''ಕೆಂಡದಲ್ಲಿ ಕೈಕಾಸಿ''

ಎಂದರೆ ಇದು ಪಚನ ಕ್ರಿಯೆಗೆ ಅನುಕೂಲವಾಗುವುದಲ್ಲದೆ, ದೇಹವನ್ನು ಬೆಚ್ಚಗಿಡುತ್ತದೆ (ಸರ್ವಜ್ಞ ವಚನಗಳಲ್ಲಿ ಆರೋಗ್ಯ, ಪು. ೧೨) ಹಾಗೂ 'ಉಂಡ ಕೂಡಲೇ ಮಲಗಬಾರದು', ' ಉಂಡ ಜಾಗದಲ್ಲಿ ಮಲಗಬಾರದು', 'ಎಡದ ಮಗ್ಗುಲಲ್ಲಿ ಮಲಗಿ, ಬಲ ಮಗ್ಗುಲಾಗಿ ಏಳಬೇಕು' ಈ ಮುಂತಾದ ನಂಬಿಕೆಗಳು ಆರೋಗ್ಯವನ್ನು ಕುರಿತು ಹೇಳುತ್ತವೆ.

ಜನಪದರು ಬೆಳ್ಳುಳ್ಳಿಯನ್ನು ಕೆಮ್ಮಿಗೆ, ಹಾಗಲಕಾಯಿಯನ್ನು ಅಸ್ತಮಕ್ಕೆ, ಶುಂಠಿ, ಮೆಣಸು ಕಫಕ್ಕೆ, ರಾಗಿ ಗಂಜಿ ಜ್ವರಕ್ಕೆ ಹೀಗೆ ಬೇರೆ ಬೇರೆ ರೋಗಗಳಿಗೆ ಮನೆಯಲ್ಲಿ ದೊರೆಯಬಹುದಾದ ಪದಾರ್ಥಗಳಿಂದಲೇ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾರೆಯೇ ಹೊರತು ಇಂತಹುಗಳಿಗೆಲ್ಲಾ ವೈದ್ಯರಲ್ಲಿಗೆ ಹೋಗುವುದು ಕಡಿಮೆ.

ನಾಲಿಗೆಯನು ಕಟ್ಟಿದನು ಕಾಲನಿಗೆ ದೂರನಹ
ನಾಲಿಗೆ ರುಚಿಗಳ ಮೇಲೆ ಆಡುತಿರಲು ಅವನ
ಕಾಲ ಹತ್ತಿರವು ಸರ್ವಜ್ಞ.

ಯಾರು ನಾಲಿಗೆಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವರೋ ಅವರಿಗೆ ಮರಣವು ದೂರವಿರುತ್ತದೆ. ಯಾವಾಗಲೂ ರುಚಿಯಾದ ಪದಾರ್ಥಗಳನ್ನು ಸೇವಿಸುತ್ತಿದ್ದರೆ, ಬೊಜ್ಜು ಬೆಳೆದು ಅನೇಕ ಕಾಯಿಲೆಗಳಿಗೆ ತುತ್ತಾಗಬೇಕಾಗುತ್ತದೆ. ಆದ್ದರಿಂದ ಹಸಿವೆಯಾದಾಗಷ್ಟೇ ಹೊಟ್ಟೇ ತುಂಬ ಊಟ ಮಾಡಬೇಕು (ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ಪು.೨೧). ''ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ರೋಗವಿಲ್ಲ'' ''ಆರೋಗ್ಯವೇ ಮಹಾ ಭಾಗ್ಯ'' ಎಂಬ ಗಾದೆಗಳ ಅರ್ಥವನ್ನೇ ಈ ವಚನಗಳು ನೀಡುತ್ತವೆ.

ನಾಲಿಗೆಯ ಕೀಲವನು ಶೀಲದಲಿ ತಾನರಿದು
ಶೂಲವದು ರುಚಿಯು ಎಂದರಿದ, ಮುದಿಯಲ್ಲಿ
ಬಾಲನಂತಿಹನು ಸರ್ವಜ್ಞ.

ವ್ಯಕ್ತಿ ತನ್ನ ನಾಲಿಗೆಯ ರುಚಿಯ ಮೇಲೆ ನಿಯಂತ್ರಣವಿಟ್ಟುಕೊಂಡಾಗ ಆರೋಗ್ಯವನ್ನು ಕಾಪಾಡಿಕೊಳ್ಳಬಲ್ಲ. ನಾಲಿಗೆ ಎಂಬುದು ರುಚಿಯ ಪ್ರಕಾರದ ಶೂಲವಿದ್ದಹಾಗೆ. ಯಾರೂ ಶೂಲದಿಂದ ದೂರವಿರುವರೋ ಅವರು ಮುದಿ ವಯಸ್ಸಿನಲ್ಲಿಯೂ ತುಂಬಾ ಚಟುವಟಿಕೆಯಿಂದಿರುತ್ತಾರೆ. ಜನಪದರಲ್ಲಿ ಸಹಜವಾಗಿ ವಯಸ್ಸಾಗಿದ್ದರೂ ತುಂಬಾ ಚೂಟಿಯಾಗಿರುವುದನ್ನು ಕಾಣುತ್ತೇವೆ. ಕಾರಣ ಅವರು ತಮ್ಮ ನಾಲಿಗೆ ಚಪಲಕ್ಕೊಳಗಾಗದೇ ಆರೋಗ್ಯದಿಂದಿರುತ್ತಾರೆ. ಈ ವಚನವು ಹೇಳುವ ಸಂಗತಿಯೆಂದರೆ ಮನುಷ್ಯನು ರುಚಿಯ ಬೆನ್ನು ಹತ್ತಿ ಮಿತಿಮೀರಿ ಆಹಾರ ಸೇವಿಸಬಾರದು ಎಂಬುದಾಗಿದೆ.

ಇನ್ನು ಯಾವ ಪದಾರ್ಥ ಎಷ್ಟು ಸೇವಿಸ ಬೇಕೆಂಬ ಅರಿವು ಇದ್ದಾಗ, ನಾಲಿಗೆಯ ರುಚಿಯನ್ನು ನಿಯಂತ್ರಿಸಬಹುದು. ಒಂದು ವೇಳೆ ನಾಲಿಗೆಗೆ ರುಚಿಯೆಂದು ತಿನಿಸುಗೇಡಿಯಾದರೆ;

ತಿನಿಸುಗೇಡಿಯ ಬದುಕು ಕನಸು ಕಂಡಂತೆ
ತೊನಸೆ ಮುದಿಯೆತ್ತು ಹರಿತಿಂದು ಹುಳುಗಳನು
ಹನಿಸಿ ಹೋದಂತೆ ಸರ್ವಜ್ಞ.

ನಾಲಿಗೆಯ ರುಚಿಗಾಗಿ ಬೆನ್ನು ಹತ್ತಿ ದೊರಕಿದ್ದನ್ನೆಲ್ಲಾ ತಿನ್ನುವುದರ ಕಾಯಕವನ್ನಾಗಿ ಮಾಡಿಕೊಂಡ ವ್ಯಕ್ತಿಯ ಬದುಕು ಸರ್ವಜ್ಞನ ಪ್ರಕಾರ ಜೀವನ ಒಂದು ಕನಸಿದ್ದಂತೆ. ಇಂತಹ ಜೀವನ ನಿರುಪಯುಕ್ತವಾದ ಮುದಿ ಎತ್ತಿನ ಮೈಮೇಲೆ ಕುಳಿತು ಅದರ ಚರ್ಮವನ್ನು ಹರಿದು, ರಕ್ತವನ್ನು ಹೀರಿಕೊಂಡ ಹುಳುಗಳಂತೆ ಆಗುತ್ತದೆ. ಆದ್ದರಿಂದ ವ್ಯಕ್ತಿಯು ಸದಾ ತಿನಿಸುಗೇಡಿಯಾಗಬಾರದೆಂದು ತಿಳಿಸಿದ್ದಾನೆ (ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ಪು. ೨೪). '' ಆರೋಗ್ಯವಂತನ ದೇಹವು ಆತ್ಮನಿಗೆ ಅತಿಥಿಗೃಹ; ಅನಾರೋಗ್ಯವಂತನ ದೇಹವದು ಸೆರೆಮನೆ ಇದ್ದಂತೆ'' ಎಂಬ ನಾಣ್ಣುಡಿಯಂತೆ ;

ರುಚಿಗಳನು ನೆರೆಗಳೆದು ಶುಚಿಗಳಲಿ ಮೆರೆವಂಗೆ
ಪಚನವದು ಬೆಳೆಗೆ ಬಂದಿಬಾಳುವನೆಂಬ
ವಚನ ಬಂದಿಹುದು ಸರ್ವಜ್ಞ.

ವ್ಯಕ್ತಿಯು ಒಳ್ಳೆಯ ಆರೋಗ್ಯದಿಂದ ಶಕ್ತಿಯುತನಾಗಿ, ಬಲವಂತನಾಗಿ ಬಾಳಬೇಕಾದರೆ ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಡತಕ್ಕದ್ದು. ಒಂದು ತಿನ್ನುವ ಪದಾರ್ಥ ಶುಚಿಯಾಗಿರಬೇಕು. ಎರಡು ನಾಲಿಗೆ ಹೊರಳಿದ ಕಡೆಗೆ ಹೊರಳಬಾರದು. ಇದರಿಂದ ಯಾವ ರೋಗದ ತೊಂದರೆಗಳು ಇಲ್ಲದೆ ಮನುಷ್ಯ ಆಯುಷ್ಯವಂತನಾಗುತ್ತಾನೆಂದು ಸೂಚಿಸಿರುವನು (ಸರ್ವಜ್ಞನ ವಚನಗಳಲ್ಲಿ ಆರೋಗ್ಯ, ಪು.೨೭).

## ೫.೪. ಆಟಗಳು :

ಮನುಷ್ಯ ತನ್ನ ಜೀವನದಲ್ಲಿ ರಾಗ, ಭೋಗದಿಂದ ತೃಪ್ತಿ ಹೊಂದಿದ ಮೇಲೆ ಕ್ರಿಯಾತ್ಮಕ ವಾಗಿರಲು ಕೆಲ ಆಟಗಳಲ್ಲಿ ತಲ್ಲೀನವಾಗುವುದುಂಟು. ಈ ಆಟಗಳಿಂದ ತಾನು ಮನೋರಂಜನೆ ಪಡೆದು ಕೊಳ್ಳುವುದರೊಂದಿಗೆ ಪೈಪೋಟಿ ಮನೋಭಾವ, ಚಾತುರ್ಯ ಬುದ್ಧಿ ಉದ್ದೀಪನಗೊಳಿಸಿಕೊಳ್ಳುತ್ತಾನೆ. ಬದುಕನ್ನು ಚೇತೋಹಾರಿಯಾಗಿಸಿಕೊಳ್ಳುವಲ್ಲಿ ಆಟಗಳು ಮನುಷ್ಯನಿಗೆ ಉಪಯುಕ್ತವಾಗಿವೆ.

ಗ್ರಾಮೀಣ ಪ್ರದೇಶದಲ್ಲಿ ಮಕ್ಕಳಾಡುವ ಬುಗುರಿ, ಚಿಣ್ಣಿಕೋಲು, ಚೆಂಡು, ಕಣ್ಣಾಮುಚ್ಚಾಲೆ ಮುಂತಾದ ಆಟಗಳ ಬಗೆಗೆ ವಚನಕಾರರು, ದಾಸರು ತಮ್ಮ ವಚನ, ಕೀರ್ತನೆಗಳಲ್ಲಿ ಪ್ರಸ್ತಾಪಿಸಿದ್ದಾರೆ. ಇವುಗಳ ಬಗೆಗೆ ಸರ್ವಜ್ಞ ಗಮನಹರಿಸಿದಂತೆ ಕಾಣಬರುವುದಿಲ್ಲವಾದರೂ ಲೆತ್ತ (ಪಗಡೆ) ಆಟದ ಬಗೆಗೆ ಉಲ್ಲೇಖಿಸಿದ್ದಾನೆ. ಜನಪದರು ತಮ್ಮ ನಿತ್ಯ ಕೆಲಸದಲ್ಲಿ ಬಿಡುವಾದಾಗ ಸಮಯ ಕಳೆಯಲು ಅಥವಾ ಪೈಪೋಟಿಯಿಂದ ಗೆಲ್ಲಲು ಅನೇಕ ಆಟಗಳಲ್ಲಿ ಹಾಗೂ ಪಗಡೆಯಾಟದಲ್ಲಿ ಮಗ್ನರಾಗುವುದುಂಟು.

ಸಾಮಾನ್ಯವಾಗಿ ವಸ್ತು, ಹಣವನ್ನು ಪಣಕ್ಕಿಟ್ಟು ಆಡುವ ಈ ಆಟವನ್ನು ಪಣಕ್ಕಿಟ್ಟು ಆಡುವ ಈ ಆಟ ಮೊದಮೊದಲು ಮೋಜಿನದಾಗಿದ್ದರೂ, ಸರ್ವಜ್ಞನ ದೃಷ್ಟಿಯಲ್ಲಿ 'ಲೆತ್ತವದು ಒಳಿತೆಂದು ನಿತ್ಯವಾಡಲು ಬೇಡ' ಎಂದು ಎಚ್ಚರಿಸಿದ್ದಾನೆ. ಏಕೆಂದರೆ ಈ ಆಟ ಈರ್ಷೆ, ವೈಷಮ್ಯಗಳನ್ನುಂಟು ಮಾಡುತ್ತದೆ (ಸರ್ವಜ್ಞನ ವಚನಗಳಲ್ಲಿ ಜಾನಪದ ಅಂಶಗಳು, ಪು. ೩೨೦). ಇದರಲ್ಲಿ ಗೆದ್ದವನಿಗೆ ಹಣ, ಆಸ್ತಿ ಲಭಿಸಿದರೆ ಸೋತವನು ಭಿಕಾರಿಯಾಗುತ್ತಾನೆ. ಮೈದಣಿಸಿ ದುಡಿದು ಕಷ್ಟಪಡದೇ ವ್ಯರ್ಥಕಾಲ ಕಳೆಯುವ ಕೆಲ ಗ್ರಾಮೀಣ ಪ್ರದೇಶದ ಸೋಮಾರಿಗಳು ಈ ಲೆತ್ತದಾಟದಲ್ಲಿ ತೊಡಗಿ ಅನೇಕ ಸಾಚಾ ವ್ಯಕ್ತಿಗಳನ್ನು ಮೋಸ, ಕಪಟಗಳಿಂದ ಸೋಲಿಸುವುದೂ ಉಂಟು.

ಪಗಡೆ ಮತ್ತು ಚದುರಂಗದಾಟಗಳು ರಾಜರಿಗೆ, ಶ್ರೀಮಂತರಿಗೆ ಪ್ರಿಯವಾದ ಆಟಗಳೇ ವಿನಃ ಸಾಮಾನ್ಯರಿಗೆ ಅಲ್ಲ. ಆದ್ದರಿಂದ ಈ ಆಟವನ್ನು ಸರ್ವಜ್ಞ ತೀವ್ರವಾಗಿ ಖಂಡಿಸಿದ್ದಾನೆ.

ಆಡಿನಳಕೆಟ್ಟ ಮತ್ತಾಡಿ ಧರ್ಮಜ ಕೆಟ್ಟ
ಕೂಡಿದ ನಾಲ್ವರು ತಿರಿದುಂಡರ್ ಲೆತ್ತವನು
ಆಡಬೇಡೆಂದ ಸರ್ವಜ್ಞ.

ಲೆತ್ತದ ಆಟವಾಡಿ ನಳ ಮಹಾರಾಜ ಸೋತು ತನ್ನ ಹೆಂಡತಿಯೊಡನೆ ಅಡವಿ ಪಾಲಾಗಬೇಕಾಯ್ತು. ಹಾಗೆಯೇ ಧರ್ಮರಾಯ ದ್ರೌಪದಿಯನ್ನು ಪಣಕ್ಕಿಟ್ಟು ಸೋಲುವುದಲ್ಲದೆ, ತನ್ನ ನಾಲ್ಕು ಜನ ತಮ್ಮಂದಿರನ್ನು ತಿರಿದುಣ್ಣುವ ಪರಿಸ್ಥಿತಿ ತಂದ. ಅದಕ್ಕಾಗಿ ಲೆತ್ತದಾಟ ಉತ್ತಮವಲ್ಲವೆಂಬುದೇ ಅವನ ಅಭಿಪ್ರಾಯ.

ಈ ಲೆತ್ತದಾಟದಲ್ಲಿ ಆಡುವವರು ಕೆಡುವುದಲ್ಲದೆ, ನೋಡುವವರು ಮತ್ತು ಬೇಡುವವರೂ ಸಹ ಕೆಡುತ್ತಾರೆ. ಕಾರಣ ಆಡುವವರೊಡನೆ, ನೋಡುವವರು ಆಟದ ಮಧ್ಯದಲ್ಲಿ ಬಾಯಿ ಹಾಕಿ ಇತರರೊಡನೆ ಪಂದ್ಯಕಟ್ಟಿ ಸೋತು, ಎಲ್ಲವನ್ನು ಕಳೆದುಕೊಳ್ಳಬಹುದು. ಆದ್ದರಿಂದ ಆ ಆಟ ಪ್ರಾರಂಭದಲ್ಲಿ ರುಚಿಯೆನಿಸಿದರೂ ಕೊನೆಗೆ ವಿಷವಾಗಿ ಪರಿಣಮಿಸುವುದೆಂಬ ಎಚ್ಚರಿಕೆಯನ್ನು ಮುಖ್ಯವಾಗಿ ಜನ ಸಾಮಾನ್ಯರಿಗೆ ಕೊಟ್ಟಿದ್ದಾನೆ.

## ೫.೫. ಗಾಯನ-ವಾದ್ಯ :

ಮಾನವನ ಹುಟ್ಟಿನೊಂದಿಗೆ ಈ ಗಾಯನ ಕಾಣಿಸಿಕೊಂಡಿದೆ. ಈ ಗಾಯನ ಮತ್ತು ವಾದ್ಯದ ಅಭ್ಯಾಸ ಆಕಾಶದಷ್ಟು ವಿಸ್ತಾರ, ಸಮುದ್ರದಷ್ಟು ಆಳವಾಗಿದೆ. ಎಷ್ಟು ಕಲಿತರೂ ಕಲಿತೆವೆಂದೆನಿಸುವುದಿಲ್ಲ. ಭಾರತೀಯ ಸಂಗೀತದ ವೈಶಿಷ್ಟ್ಯವಿರುವುದು ಅದರ ರಾಗಗಳಲ್ಲಿ. ಸಂಗೀತ ಸೌಧದ ತಳಹದಿಯೇ ರಾಗ. ಸಂಗೀತ ಪರಿಭಾಷೆಯಲ್ಲಿ 'ರಾಗ'ವೆಂದರೆ ಮನಸ್ಸಿಗೆ ಹಿತವನ್ನುಂಟು ಮಾಡುವ ಸ್ವರಗಳ ಮಧುರ ಜೋಡಣೆ ಎಂದು ಕರೆಯಬಹುದು (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೨೮೬).

ಗಾಯನವೆಂಬುದು ಸಂಗೀತದ ಒಂದು ಅಂಶವಾಗಿದೆ. ಅನೇಕ ವಿದ್ಯೆಗಳಲ್ಲಿ ಈ ಗಾಯನ ವಿದ್ಯೆಯು ಒಂದಾಗಿದೆ ಎಂದು ನಮ್ಮ ಹಿಂದಿನವರು ಹೇಳುತ್ತಾ ಬಂದಿದ್ದಾರೆ. ಹಿಂದೆ ದೇವರನ್ನು ಮೆಚ್ಚಿಸಲು 'ಗಾಯನ'ವೆಂಬುದು ಒಳ್ಳೆಯ ಮಾಧ್ಯಮವೆಂಬ ಅಭಿಪ್ರಾಯವಿತ್ತು (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೮೧). ಸಭೆ-ಸಮಾರಂಭಗಳಲ್ಲಿ, ದೇವಸ್ಥಾನದ ಪೂಜೆ, ಉತ್ಸವಗಳಲ್ಲಿ ಈ ಗಾಯನ ಕೇಳಿಬರುತ್ತಿರುತ್ತದೆ.

ಗಾಯನಕ್ಕೆ ತನ್ನದೇ ಆದ ಲಕ್ಷಣಗಳಿವೆ. ಅಂದರೆ ತಾಳ,ಮೇಳ, ಪ್ರಾಸ, ಅರ್ಥಗಳು ಸಮವಾಗಿ ಕೂಡಿದ್ದಾಗ ಮಾತ್ರ ಕಿವಿಗೆ ಕೇಳಲು ಇಂಪಾಗಿರುತ್ತದೆ. ವ್ಯಕ್ತಿಯ ಸಂಪೂರ್ಣ ಒಳಗೊಳ್ಳುವಿಕೆಯಿಂದಾಗಿಯೇ ಯಾವುದೇ ಒಂದು ವಿದ್ಯೆ ಆನಂದ ಮತ್ತು ದರ್ಶನವನ್ನು ನೀಡುತ್ತದೆಂಬುದು ಜನಪದರ ನಂಬಿಕೆಯಾಗಿದೆ. ಗಾನ ವಿದ್ಯೆ ಜನಪದರಲ್ಲಿ ಕಾಣುತ್ತೇವೆ. ಇದಕ್ಕೆ ಜ್ಞಾನ ಬೇಕಾಗಿಲ್ಲದಿದ್ದರೂ, ಕಿವಿಯಿಂದ ಕೇಳುವುದರ ಮೂಲಕ ಹಾಗೆ ಯಥಾವತ್ತಾಗಿ ಅನುಕರಣೆ ಮಾಡಿ ಹಾಡುವ ಪ್ರತಿಭೆಗಳು ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತೇವೆ. ದಿನ ನಿತ್ಯ ರಾಗಿ, ಜೋಳ ಬೀಸುವಾಗ ಗರತಿಯರು ಹಾಡನ್ನು ಹಾಡುತ್ತಾ ಸಮಯ ಕಳೆಯುವುದನ್ನು ಸರ್ವಜ್ಞ ನೋಡಿರಬಹುದು. ಆದ್ದರಿಂದ ಆತ 'ಗಾನ ವಿದ್ಯೆಯೇ ಲೇಸು' ಎಂಬ ಉದ್ಗಾರ ತೆಗೆದಿದ್ದಾನೆ.

ಈ ಸಂಗೀತ ಗಾಯನದಲ್ಲಿ ಬರುವ ತಂಬೂರಿ, ಪಿಟೀಲು, ವೀಣೆ ಮುಂತಾದ ತಂತಿವಾದ್ಯಗಳ ಪರಿಚಯ ಸರ್ವಜ್ಞನಿಗೆ ಇರುವುದು ಆತನ ವಚನದ ಸಾಲಿನಿಂದ ತಿಳಿದುಬರುತ್ತದೆ. ಆತ 'ತಂತಿ ವಾದ್ಯವೇ ಲೇಸು' ಎನ್ನುವುದರೊಂದಿಗೆ ಅವುಗಳ ಮಹತ್ವವನ್ನು ಹೊಗಳಿದ್ದಾನೆ. ಕಾರಣ ಹಾಡಿನ ಲಯಕ್ಕನುಗುಣವಾಗಿ ಈ ತಂತಿ ವಾದ್ಯವನ್ನು ಕೈಯಿಂದ ಮೃಧುವಾಗಿ ಮೀಟಿದಾಗ ಅದರಿಂದ ಹೊರ ಹೊಮ್ಮುವನಾದ ಕೇಳಲು ಸಾಕಷ್ಟು ಇಂಪಾಗಿರುತ್ತದೆ.

ಇನ್ನು ಹಾಡತಕ್ಕಂತಹವರ ಧ್ವನಿ ಕಂಚಿನ ಕಂಠವಾಗಿರಬೇಕು. ಕಂಚಿನ ಕಂಠವಿದ್ದ ಮಾತ್ರಕ್ಕೆ ಅರ್ಥವತ್ತಾಗಿರಬೇಕು. ಅಂದರೆ ಶಬ್ದಗಳ ಉಚ್ಚಾರ ಸುಲಲಿತವಾಗಿರಬೇಕು. ಇಲ್ಲದಿದ್ದರೆ 'ಅರ್ಥವಿಲ್ಲದ ಹಾಡು ವ್ಯರ್ಥ ಸಾಸಿರವಿದ್ದ' ಹಾಗೆ ಏನೂ ಫಲವಿಲ್ಲವೆಂದು ಮೂದಲಿಸಿದ್ದಾನೆ.

ಪ್ರಾಸವಿಲ್ಲದ ಹಾಡು ತಾಸು ಹಾಡಿದಡೇನು
ಸಾಸುವೆ ಎಣ್ಣೆ ಹದ ಮಾಡಿ ಕಣ್ಣಿಂಗೆ
ಹೂಸಿಕೊಂಡಂತೆ ಸರ್ವಜ್ಞ.

ಸಂಗೀತ ಮೂಲಕ ಹೊರ ಹೊಮ್ಮುವ ಹಾಡು ಕೇಳುಗರಿಗೆ ಕೇವಲ ಮನೋರಂಜನೆಯನ್ನಷ್ಟೆ ನೀಡುವುದಲ್ಲದೆ, ಅಮರವಾದ ಆನಂದವನ್ನು ಕೊಡುವ ಸಾಧನವಾಗಬೇಕು. ಆದ್ದರಿಂದ ಆ ಹಾಡು ಪ್ರಾಸಬದ್ಧವಾಗಿರಬೇಕು ಹಾಗೂ ರಾಗ, ತಾಳ, ಲಯಗಳು ಸಮನ್ವಗೊಂಡಿರಬೇಕು. ಅಂತಹ ಪ್ರಾಸದಿಂದೊಡಗೂಡಿದ ಹಾಡು ಕೇಳುಗರಿಗೆ ಮಂತ್ರ ಮುಗ್ಧರನ್ನಾಗಿಸವಲ್ಲಿ ಸಫಲತೆಯನ್ನು ಪಡೆಯುತ್ತದೆ. ಇಲ್ಲದಿದ್ದರೆ ಸಾಸುವೆ ಎಣ್ಣೆಯನ್ನು ಹದವಾಗಿ ಬಿಸಿಮಾಡಿ ಕಣ್ಣಿಗೆ ಹಚ್ಚಿಕೊಂಡರೆ ಯಾವ ಗುಣವು ಕಾಣಬರುವುದಿಲ್ಲವೊ ಹಾಗೆಯೇ ಪ್ರಾಸವಿಲ್ಲದ ಹಾಡು ಬಹಳ ಸಮಯದವರೆಗೂ ಹಾಡಿದರೂ 'ಕಲ್ಲಿನ ಮೇಲೆ ಮಳೆ ಸುರಿದಂತೆ' ವ್ಯರ್ಥವೆಂಬ ಹೋಲಿಕೆಯನ್ನು ಸರ್ವಜ್ಞ ನೀಡಿದ್ದಾನೆ. ಹೀಗೆ ಸಂಗೀತ ಮತ್ತು ಸಾಹಿತ್ಯಗಳು ಸರಸ್ವತಿಯ ಎರಡು ಕಣ್ಣುಗಳಿದ್ದಂತೆ.

## ೫.೬. ಆಚರಣೆಗಳು :

ಆಚರಣೆಗಳು ಬಹುತೇಕ ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಷವನ್ನು ಪಡೆದಿರುತ್ತವೆ. ಇವು ನಂಬಿಕೆ ಗಳನ್ನಾಧರಿಸಿ ರೂಪುಗೊಂಡಿರುತ್ತವೆ. ಆಚರಣೆಗೆ ನಿರ್ಧಿಷ್ಟ ಉದ್ದೇಶ, ಫಲಾಪೇಕ್ಷೆ ಇರುತ್ತದೆ. ಇಂಗ್ಲೀಷ್‌ನ 'Ritual' ಎಂಬುದಕ್ಕೆ ಸಂವಾದಿಯಾಗಿ ಆಚರಣೆಯನ್ನು ಬಳಸಬಹುದು (ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು.೨೦). ಜೀವನ ರಕ್ಷಣೆಯೇ ಪ್ರಮುಖ ಗುರಿಯಾಗಿದ್ದ ಆದಿ ಮಾನವ ಪ್ರಕೃತಿಯ ವಿಕೋಪಕ್ಕೆ ಭಯಪಟ್ಟು ಭಕ್ತಿಯಿಂದ ಪ್ರಕೃತಿಯನ್ನು ಆರಾಧಿಸತೊಡಗಿದ. ಆಗ ಕಂಡುಕೊಂಡ ದೈವಗಳಾದವು. ಜಾನಪದ ದೈವಗಳೇ ಆದವು. ಇವುಗಳನ್ನು ಸಂದರ್ಭಾನುಸಾರ ಪೂಜಿಸುವ ಆಚರಣೆಯನ್ನಾರಂಭಿಸಿದ. ಈ ಹಿನ್ನಲೆಯಲ್ಲಿ ನಮ್ಮ ಸಂಸ್ಕೃತಿಯಲ್ಲಿ ಪ್ರಚಲಿತವಿರುವ ಆಚರಣೆಗಳೆಲ್ಲಾ ತುಂಬಾ ಮಹತ್ವಪಡೆದುಕೊಂಡಿವೆ.

ಕನ್ನಡ ಜಾನಪದದ ಸಂದರ್ಭದಲ್ಲಿ ತೀರ ಸರಳವಾದ ಅರ್ಥದಲ್ಲಿ ಈ ಆಚರಣೆ ಕುರಿತು ಹೇಳುವುದಾದರೆ, ಪದ್ಧತಿ, ಸಂಪ್ರದಾಯ, ಸಂಸ್ಕಾರ, ಆರಾಧನೆ, ಶಾಸ್ತ್ರ, ಕಾರ್ಯ ಇತ್ಯಾದಿ ಶಬ್ದಗಳಿಂದ ಬಳಸಲಾಗುವುದು. ಆಚರಣೆ ಎಂದರೆ ತಲೆ ತಲಾಂತರಗಳಿಂದ ಸಮುದಾಯದ ಅಂಗೀಕಾರ ಪಡೆದು ಬಳಕೆಯಲ್ಲಿರುವ ಧಾರ್ಮಿಕ ವಿಧಿವಿಧಾನಗಳೇ ಎನ್ನಬಹುದು (ಜಾನಪದ ದರ್ಶನ, ಪು.೧೩೩).

ನಂಬಿಕೆಯ ಕ್ರಿಯಾತ್ಮಕ ಸ್ವರೂಪವೇ ಆಚರಣೆಯಾಗಿದೆ. ನಂಬಿಕೆಯನ್ನು ಆಧರಿಸಿದ ಯಾವುದೇ ಒಂದು ಆಚರಣೆ ರೂಢಿಗತವಾಗಿ ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುತ್ತದೆ (ಅದೇ ಪು. ೧೨೫). ಆಚರಣೆಯ ಹಿಂದಿರುವ ನಂಬಿಕೆಗಳನ್ನು ಸಹ ಗಮನಿಸಬೇಕು. ''ಆಚರಣೆ ಎಂಬುದು ನಂಬಿಕೆ ಯನ್ನು ಬಿಟ್ಟಿಲ್ಲ. ನಂಬಿಕೆ ಎಂಬುದು ಆಚರಣೆಯನ್ನು ಬಿಟ್ಟಿಲ್ಲ''. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಬ್ಬ ವ್ಯಕ್ತಿ ಯಾವುದೇ ಆಚರಣೆಯನ್ನು ಕೈಗೊಳ್ಳಬೇಕಾದ ಸಂದರ್ಭದಲ್ಲಿ ಅದರ ಹಿಂದಿನ ಸತ್ಯದ ಸೂಕ್ಷ್ಮತೆಯನ್ನು ಗಮನಿಸುತ್ತಾನೆ. ಅಂತಹ ಆಚರಣೆಗಳಿಂದ ಏನು ಲಾಭವಿದೆ ? ಎಷ್ಟು ಲಾಭವಿದೆ ?ಎಂಬತಹ ಪ್ರಶ್ನೆಗಳು ಅವನಲ್ಲಿ ಉದ್ಭವಿಸತೊಡಗುತ್ತವೆ. ಆಗ ಹಿರಿಯರ ಮೊರೆ ಹೋಗಿ ಆಚರಣೆಯಿಂದಾಗುವ ಪ್ರಯೋಜನದ ಬಗೆಗೆ ತಿಳಿದುಕೊಳ್ಳುತ್ತಾನೆ. ಉದಾಹರಣೆಗೆ; ''ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ'' ಎಂಬ ದಾಸರ ವಾಣಿಯಂತೆ ಗುರುವಿನಲ್ಲಿ ಭಕ್ತಿ ಇಟ್ಟು ಸೇವೆ ಮಾಡಿದರೆ, ಒಳ್ಳೆ ಆಚಾರ ವಿಚಾರಗಳು ಲಭ್ಯವಾಗುವುವು.

ಸಾಮಾನ್ಯವಾಗಿ ಜನಪದರು ಶಕ್ತಿ ದೇವತೆ ಅಥವಾ ಗ್ರಾಮ ದೇವತೆಗಳಾದ ದುರುಗಮ್ಮ, ಹೊಸೂರಮ್ಮ, ಚೌಡಮ್ಮ, ಹುಲಿಗೆಮ್ಮ ಮುಂತಾದ ದೇವತೆಗಳನ್ನು ಪೂಜಿಸುವುದುಂಟು. ವರ್ಷಕ್ಕೊಮ್ಮೆ ಜಾತ್ರೆ ಉತ್ಸವಗಳ ಆಚರಣೆಗಳನ್ನು ಮಾಡಿಕೊಳ್ಳುತ್ತಾ ಬಂದಿದ್ದಾರೆ. ತಮ್ಮ ಇಷ್ಟಾರ್ಥ ಸಿದ್ಧಿಯಾಗುವದಕ್ಕೋ ಅಥವಾ ಊರಿನ , ಸಮಾಜದ ಉದ್ಧಾರಕ್ಕಾಗಿಯೋ ಪ್ರಾಣಿಬಲಿ ಕೊಡುವ ಸಂಪ್ರದಾಯ ಮತ್ತು ಧಾರ್ಮಿಕ ಆಚರಣೆಗಳು ಈಗಲೂ ಹಳ್ಳಿಗಳಲ್ಲಿ ಕಂಡುಬರುತ್ತವೆ. ಹಳ್ಳಿಯ ರೈತರು ಬಿಡುವಿಲ್ಲದೆ, ತಮ್ಮ ಹೊಲ ಗದ್ದೆಗಳಲ್ಲಿ ದುಡಿಯುವಾಗ ದೂರದಲ್ಲಿರುವ ದೇವತೆಗಳ ದರ್ಶನ ಪಡೆಯಲಾಗದಿದ್ದ ಸಂದರ್ಭದಲ್ಲಿ ;

ಸವದತ್ತಿ ಎಲ್ಲವ್ವ , ಕೊಲ್ಲೂರ ಮೂಕವ್ವ
ಕೆಂಗಣ್ಣ ಹುಲಗಿ ದ್ಯಾಮವ್ವ । ಇಲ್ಲಿಂದ
ನಿಮಗೆಲ್ಲ ಕೈಯ ಮುಗಿದೇನ ।
ಕಲ್ಲಾಗ ಇರವೋಕಿ । ಹನ್ನೊಂದು ನಿರಿಗ್ಯಾಕಿ
ಅರಳಿದ್ಹೂವನೆ ಮುಡಿವಾಕಿ । ಕಾಳಮ್ಮ
ಇಲ್ಲಿಂದ ಕೈಯ ಮುಗಿದೇನ. ಎನ್ನುತ್ತಾರೆ.

ಅಂದರೆ ದೇವತೆಗಳು ತಾವು ಹೇಳಿದಂತೆ ಕೇಳುತ್ತಾರೆನ್ನುವ ಕೇಳಿದ್ದನ್ನೆಲ್ಲಾ ದಯಪಾಲಿಸುತ್ತಾರೆನ್ನುವ ಭಾವನಾತ್ಮಕ ಸಂಬಂಧಗಳು ಅವರಲ್ಲಿ ಕಂಡುಬರುತ್ತವೆ. ಬೇಡಿಕೊಂಡಾಗ ದೇವತೆಗಳು ದಯಪಾಲಿಸದಿದ್ದಾಗ ಈ ಜನಪದರು ಚೆನ್ನಾಗಿ ಬೈಯುತ್ತಾರೆ. ಹೀಗೆ ಜೀವನಾತ್ಮಕವಾದ ಆಚರಣೆಗಳನ್ನು ದಿನನಿತ್ಯ ನಡೆಸದಿದ್ದಾರೆ, ಯಾವುದೋ ಅನಿಷ್ಟ ಸಂಭವಿಸಬಹುದೆಂಬ ನಂಬಿಕೆ ಜನಪದರಲ್ಲಿ ಕಾಣುತ್ತೇವೆ (ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು.೨೬).

ಗ್ರಾಮೀಣ ಜನಜೀವನವನ್ನು ಧರ್ಮಾಚರಣೆಗಳ ದೃಷ್ಟಿಯಿಂದ ಪರಿಶೀಲಿಸಿದಾಗ ಕನ್ನಡಿಗರ ಪ್ರಧಾನವಾದ ಧರ್ಮ ವೀರಶೈವವೇ ಆಗಿದೆ. ಆದರೆ ಅವರದು ಶುದ್ಧ ವೀರಶೈವ ಆಚರಣೆಯಲ್ಲ. ಸರ್ವಜ್ಞನ ಧೋರಣೆ ಶುದ್ಧ ವೀರಶೈವವಾಗಿಯೇ ಕಂಡುಬರುತ್ತದೆ. ಧರ್ಮಾಚರಣೆಯಲ್ಲಿ ಅವರು ಇಡೀ ಸಮಾಜದ ವಿಭಿನ್ನ ಸಮೂಹಗಳ ನಡುವೆ ಬಾಳುವಂಥವರಾದ್ದರಿಂದ ಬೇರೆಯವರ ಧರ್ಮಾಚರಣೆಗಳನ್ನು ದ್ವೇಷಿಸದೇ, ತಮ್ಮ ನಂಬಿಕೆಗಳನ್ನೂ ಬಿಡದೆ, ಒಂದು ಬಗೆಯ ಸಮನ್ವಯಗಳ ಧರ್ಮವನ್ನು ಅವರು ಆಚರಿಸುತ್ತಿರುವುದು ಕಂಡುಬರುತ್ತದೆ.

ಗ್ರಾಮೀಣ ಜನರು ಆದಿಮಾನವನ ಕಾಲದಿಂದಲೂ ಬಂದಿರುವ ಮಾರೆಮ್ಮ, ದುರುಗಮ್ಮ, ಊರಮ್ಮ ಮುಂತಾದವನ್ನೂ ಆಚರಿಸುತ್ತಾರೆ. ಶೈವ ಪುರಾಣಗಳ ಹಿನ್ನೆಲೆಯಲ್ಲಿ ಬೆಳೆದು ಬಂದ ಶಿವ, ಗಣಪತಿ, ಷಣ್ಮುಖ, ವೀರಭದ್ರ, ಪಾರ್ವತಿ ಮುಂತಾದವರೂ ವೈಷ್ಣವ ಪುರಾಣ ಪರಂಪರೆಯಲ್ಲಿ ಬೆಳೆದು ಬಂದ ವಿಷ್ಣು, ಕೃಷ್ಣ, ನಾರಾಯಣ, ಲಕ್ಷ್ಮಿ, ವಿಠ್ಠಲ, ರಾಮ, ಸೀತೆ, ಧರ್ಮರಾಯ, ಭೀಮ, ಹನುಮಂತ, ಗರುಡ ಮುಂತಾದವರೂ ಅವರು ಭಕ್ತಿ ಆಚರಣೆಯಲ್ಲಿ ಜಾಗ ಪಡೆದಿದ್ದಾರೆ. ಇವರು ಸಾಲದೆಂಬಂತೆ ಮಧ್ಯಯುಗದಲ್ಲಿ ಬಂದು ಸೇರಿದ ಮುಸ್ಲೀಮರ ಪೀರಲದೇವರು ಆಗ ಆಗಿ ಹೋದ ಶರಣರು ಸಂತರು, ಬಸವೇಶ, ಸಿದ್ಧರಾಮೇಶ್ವರ, ಶರಣ ಬಸವೇಶ್ವರ, ಕೊಟ್ಟೂರ ಬಸವೇಶ್ವರ, ತಿಪ್ಪೇಸ್ವಾಮಿ, ಮೌನೇಶ್ವರ, ಸಿದ್ಧಾರೂಢ, ನಾಗಲಿಂಗಸ್ವಾಮಿ, ಮಡಿವಾಳೇಶ್ವರ, ಯಂಕಪ್ಪ ತಾತ, ಎರ್ರಿತಾತ ಇತ್ಯಾದಿ ಅಸಂಖ್ಯ ಶರಣರು ಐತಿಹಾಸಿಕ ವ್ಯಕ್ತಿಗಳಾಗಿದ್ದರೂ ಜಾನಪದರ ಪಾಲಿಗೆ ದೈವಗಳೇ ಆಗಿದ್ದಾರೆ.

ಆದರೆ ಇವೆಲ್ಲದರ ನಡುವೆ ಇವೆಲ್ಲವುಗಳ ತಳದಲ್ಲಿ ಪರಮಾತ್ಮನ ಏಕತ್ವದ, ನಿರಾಕಾರತ್ವದ ನಂಬಿಕೆ ಕೆಲಸ ಮಾಡುತ್ತಿದೆ. ಅವರ ಆಧ್ಯಾತ್ಮಿಕ ತಳಹದಿ ಬಹಳ ವಿಶಾಲವಾಗಿದೆ. ಬಹಳ ವಾಸ್ತವಿಕ ನೆಲೆಯ ಮೇಲೆ ನಿಂತಿರುವುದಾಗಿದೆ. ದೈವಗಳೆಲ್ಲಾ ಮನುಜರ ಸೃಷ್ಟಿ. ಆದರೆ ಸಮಾಜ ವೈವಿಧ್ಯಪೂರ್ಣವಾದ ಅನೇಕ ಮುಖಿಯಾದ ಅವರ ಬದುಕಿನ ಮುಖ್ಯ ನೆಲೆ. ಕೂಡಿಬಾಳುವುದು ಅನಿವಾರ್ಯವಿರುವಾಗ ಎಲ್ಲಾ ವೈವಿಧ್ಯಗಳಲ್ಲಿ ಸಾಮರಸ್ಯವನ್ನು ಕಂಡುಕೊಂಡು ಬಾಳುವುದು ಜಾಣತನವಲ್ಲವೇ?.

ಜಾನಪದರ ಧಾರ್ಮಿಕ ಆಚರಣೆಗಳು ಅಸಂಖ್ಯವಾಗಿವೆ. ಹಿಂದುಳಿದ ವರ್ಗಗಳ ಬುಡಕಟ್ಟುಗಳ ದೈವಗಳು- ಆಚರಣೆಗಳು ಬೇಕಾದಷ್ಟಿವೆ. ಇವುಗಳಿಗೆ ಭಿನ್ನವಾಗಿ ಮೇಲ್ವರ್ಗದವರವು ಎನ್ನಬಹುದಾದ ಶಿಷ್ಟ ಆಚರಣೆಗಳ ಪರಂಪರೆಯೂ ಇದೆ. ವೀರಶೈವ, ಬ್ರಾಹ್ಮಣ, ಜೈನಮತಗಳ ಆಚರಣೆಗಳು ಶಿಷ್ಟ ಪರಂಪರೆಯಲ್ಲಿ ಸೇರುವಂತಹವು. ವಚನಕಾರರು ಹಿಂದುಳಿದ ಕೆಳವರ್ಗಗಳ ಆಚರಣೆಗಳನ್ನು ಅನೇಕ ದೈವೋಪಾಸಾನೆಯನ್ನು ಖಂಡಿಸಿ, ಮೌಢ್ಯಗಳನ್ನು ವಿರೋಧಿಸಿ ಏಕದೇವೋಪಾಸನೆಯ ಪರಿಶುದ್ಧ ಮಾರ್ಗವನ್ನು ಅನುಸರಿಸಿದರು. ಸರ್ವಜ್ಞನೂ ವಚನಕಾರರ ಈ ಪರಂಪರೆಯನ್ನು ಎತ್ತಿ ಹಿಡಿಯುವವನಾದ್ದ ರಿಂದ ಈತನ ವಚನಗಳಲ್ಲಿ ವೀರಶೈವದ ಪರಿಭಾಷೆಗಳು ಹಾಗೂ ಆಚರಣೆಗಳು ಮಹತ್ವದ ಸ್ಥಾನ ಪಡೆಯುತ್ತವೆ.

ಜಾನಪದರ ಜೀವನದಲ್ಲಿ ಉಳಿದೆಲ್ಲ ವೈವಿಧ್ಯಗಳ ಜೊತೆಗೆ ವೀರಶೈವ ಮಾರ್ಗವೂ ಸೇರಿಹೋಯಿತು. ಅಷ್ಟೇ ಅಲ್ಲ, ಸಮಗ್ರ ಗ್ರಾಮೀಣ ಧಾರ್ಮಿಕ ವಾತಾವರಣವನ್ನೇ ಪ್ರಭಾವಿತಗೊಳಿಸಿತು. ಹೀಗೆ ನೋಡಿದಾಗ ಜಾನಪದರ ಸಾಹಿತ್ಯ ಸಂಸ್ಕೃತಿಗಳಲ್ಲಿ ವೀರಶೈವದ ಪರಿಕಲ್ಪನೆಯನ್ನು ದೂರವಿಟ್ಟು ಯೋಚಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸರ್ವಜ್ಞನ ವಚನಗಳಲ್ಲಿ ಇಂತಹ ಒಂದು ಜಾನಪದದ ಸ್ವರೂಪವೊಂದು ಪ್ರತಿಬಿಂಬಿತ ವಾಗಿರುವುದನ್ನು ಗುರುತಿಸಬಹುದು.

ಸರ್ವಜ್ಞನ ದೃಷ್ಟಿಯಲ್ಲಿ ಶಿವನ ಪೂಜೆ ಮಾಡಿದರೆ, ಶಿವಲೋಕ, ಕೈಲಾಸ ಪ್ರಾಪ್ತಿಯಾಗುವುದೆಂಬ ನಂಬಿಕೆ. ಕಾರಣ ಸರ್ವಜ್ಞ ವೀರಶೈವದವನಾಗಿರುವುದರಿಂದ ಅಂಗಲಿಂಗದ ಬಗೆಗೆ, ಅವುಗಳ ಆಚರಣೆಗಳ ಬಗೆಗೆ ವಚನಗಳಲ್ಲಿ ಅಭಿವ್ಯಕ್ತಿಸಿದ್ದಾನೆ.

ಲಿಂಗವಿಲ್ಲದ ಅಂಗ ಅಂಕೆ ಇಲ್ಲದ ಪುರುಷ
ಗಂಗೆ ಇಲ್ಲದ ಶಿವ ಪೂಜೆ ಇವರು ಮೂರು
ಭಂಗ ಕಾಣಯ್ಯ ಸರ್ವಜ್ಞ.

ಲಿಂಗವಿರಹಿತನಾಗಿ ನುಂಗದಿರು ಏನುವನು
ತಿಂಗಳಲಿ ಸತ್ತ ಹಳೆ ನಾಯಿ ಮಾಂಸವನು
ನುಂಗಿದಂತಕ್ಕು ಸರ್ವಜ್ಞ.

ಶಿವಭಕ್ತನಾದವನು ಅಥವಾ ವೀರಶೈವನಾದವನು ಸದಾ ಅಂಗದ ಮೇಲೆ ಲಿಂಗ ಕಟ್ಟಿಕೊಂಡಿರಬೇಕು. ಇದು ಶುದ್ಧ ಆಚರಣೆಯ ಸಂಕೇತವಾಗಿರುತ್ತದೆ. ಅಂಗದ ಮೇಲೆ ಲಿಂಗವಿಲ್ಲದೆ, ಉಳಿದ ನೇಮ ನಿತ್ಯಗಳೆಲ್ಲ ವ್ಯರ್ಥವೆಂಬ ಭಾವನೆ ಸರ್ವಜ್ಞನದು. ನಿತ್ಯವೂ ಲಿಂಗಕ್ಕೆ ನೀರು ಹಾಕಿ ಪೂಜಿಸುವ ಆಚರಣೆ ಮಾಡದೇ ಪ್ರಸಾದ ಸೇವಿಸಿದ್ದೇ ಆದರೆ 'ಸತ್ತ ಹಳೇ ನಾಯಿಯ ಮಾಂಸವನ್ನು ನುಂಗಿದಂತೆ' ಎಂಬ ಕೋಪದ ನುಡಿಯನ್ನು ಹೇಳಿದ್ದಾನೆ.

ಉಂಡುಂಡು ತಿರುಗುತಿಹ ಭಂಡರ ಕೆಳೆಬೇಡ
ಕಂಡು ಲಿಂಗವನು ಪೂಜಿಸದವಗೆ ಯಮ
ದಂಡ ಕಾಣಯ್ಯ ಸರ್ವಜ್ಞ.

ಯಾವ ಧಾರ್ಮಿಕ ಆಚರಣೆಗಳನ್ನೂ ಜೀವನದಲ್ಲಿ ಪರಿಪಾಲಿಸದೇ, ಉಂಡುಂಡು ತಿರುಗುವಂತಹವನ ಗೆಳೆತನ ಸರಿಯಲ್ಲ. ಲಿಂಗವನ್ನು ನೇಮ ನಿಷ್ಠೆಗಳಿಂದ ಪೂಜಿಸದಿದ್ದರೆ, ಅಂಥವನಿಗೆ ನರಕ ಪ್ರಾಪ್ತಿಯಾಗುವು ದೆಂಬ ಭಾವನೆ ಜನಪದರಲ್ಲಿ ಕಾಣುತ್ತೇವೆ. ಸರ್ವಜ್ಞನ ವಚನ ಸಾಹಿತ್ಯ ಮಾನವನ ಜನಾಂಗಕ್ಕೊಂದು ಶ್ರೇಷ್ಠ ವರದಾನವಾಗಿದೆ. ವಿಶ್ವಮಾನ್ಯವಾದ ವೀರಶೈವ ಧರ್ಮದ ವಿಶಾಲ

ತತ್ವದ ಆಚರಣೆಗಳನ್ನು ತನ್ನ ತ್ರಿಪದಿಗಳ ಮೂಲಕ ತುಂಬಾ ಸೊಗಸಾಗಿ ತಿಳಿಸಿದ್ದಾನೆ. ಅವನ ವಚನಗಳಿಂದ ವಿದ್ವಾಂಸರು ಆತನು ವೀರಶೈವ ನಿರಬೇಕೆಂದು ನಿಶ್ಚಿತ ನಿಲುವನ್ನು ತಾಳಿದ್ದಾರೆ.

ವೀರಶೈವ ಧರ್ಮ ಜೀವನ ಸಿದ್ಧಾಂತವಾಗಿದೆ. ಇದು ಜಾತಿವಾಚಕವಾಗಿರದೇ ನೀತಿ ಕ್ರಿಯಾಚರಣೆಯ ಸಾಧನವಾಗಿದೆ. ಈ ಧರ್ಮದಲ್ಲಿ ಅಷ್ಟಾವರ್ಣದ ಬಗೆಗಿರುವ ವಚನಗಳನ್ನು ಸರ್ವಜ್ಞನಲ್ಲಿ ಕಾಣಬಹುದು. 'ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲವೇ ಆತ್ಮವಾಗಿರುವುದೇ' ವೀರಶೈವ ಧರ್ಮದ ತಿರುಳಾಗಿದೆ. ವೀರಶೈವ ಆಧ್ಯಾತ್ಮಿಕ ಆಚರಣೆಗಳು 'ಅಷ್ಟಾವರಣ' ರೂಪದಲ್ಲಿ ಗಟ್ಟಿಕೊಂಡಿವೆ. ವೀರಶೈವ ಸಾಧಕನು ಪ್ರತಿನಿತ್ಯ ಅಷ್ಟವಿಧದ ಆಚರಣೆಗಳನ್ನು ಮಾಡಿದಾಗ ಭವರೋಗ ಕಳೆಯುವವು ಎಂಬುದು ನಂಬಿಕೆಯಾಗಿದೆ. ಉದಾಹರಣೆಗೆ : ಸೈನಿಕನೊಬ್ಬನು ಯುದ್ಧದಲ್ಲಿ ಎದುರಾಳಿಯ ಆಯುಧಗಳಿಂದ ತನಗೆ ಪೆಟ್ಟುಗಳು ತಗುಲಬಾರದೆಂದು ತನ್ನ ಮೈಮೇಲೆ ಕವಚ-ಶಿರಸ್ತ್ರಾಣಗಳನ್ನು ಹೇಗೆ ಧರಿಸಿಕೊಂಡಿರುತ್ತಾನೆಯೋ ಹಾಗೆಯೇ ವೀರಶೈವನಾದವನು ಭವಬಂಧನಕ್ಕೆ ಕಾರಣವಾದ ಮಾಯೆಗಳೆಂಬ ಪಾಶಗಳಿಂದ ಪೀಡೆಯಾಗಬಾರದೆಂದು ಗುರು,ಲಿಂಗ,ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ ಮಂತ್ರಗಳೆಂಬ ಆವರಣದಿಂದ ರಕ್ಷಿಸಿಕೊಳ್ಳಬೇಕು. ಹೀಗೆ ಉತ್ತಮ ಆಚರಣೆಗಳಿಗೆ ಆವರಣವೆಂಬ ಸಂಜ್ಞೆ ಅರ್ಥಪೂರ್ಣವಾಗಿದೆ (ಸರ್ವಜ್ಞಮೂರ್ತಿಯ ವಚನಗಳು,ಪು.೪೬). ಇದಕ್ಕೆ ಸಂಬಂಧಿಸಿದ ವಚನಗಳನ್ನು ಸರ್ವಜ್ಞನಲ್ಲಿ ಕಾಣಬಹುದಾಗಿದೆ.

ಗುರುಲಿಂಗ ಜಂಗಮವು ಹರನೊಲಿದ ರೂಪೆಂದು
ಅರಿದು ನಿಶ್ಚಯಿಸಿ ನಡೆಯು ಭಕ್ತಂಗೆ
ಪರಮ ಪರವಹುದು ಸರ್ವಜ್ಞ.

ಇಡೀ ಸೃಷ್ಟಿಯೇ ಗುರು ಸ್ವರೂಪದಲ್ಲಡಗಿದೆ. ಅದಕ್ಕೆಯ್ದ ಹೇಳುವ 'ಗುರುಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರ..... ಎಂಬ ಪ್ರಾರ್ಥನ ಮಂತ್ರದಂತೆ ಗುರು ಪರಿಪೂರ್ಣ ನಾಗಿರುವನು . ವಿಷಯಾ ಸಕ್ತವನ್ನೆಲ್ಲ ಗೆದ್ದವನು . ನಿಷ್ಕಾಮ ಪ್ರೇಮಿಯಾದ ಗುರುವು ಸಮಾಜದ ಲೋಪ-ದೋಷಗಳನ್ನು ತಿದ್ದಿ ಜ್ಞಾನದಾಹವನ್ನು ನೀಗಿಸುವನು. ಸಾಮಾನ್ಯ ವ್ಯಕ್ತಿಯ ವಿಕಾಸಕ್ಕೆ ಗುರು ಮುಖ್ಯ ಕಾರಣವೆಂಬುದು ಜಾನಪದರಿಗೆ ತಿಳಿದ ವಿಷಯವೆ. ಗುರುವಿಲ್ಲದೆ ಹರನ ಕರುಣೆ ಸಾಧ್ಯವಿಲ್ಲವೆಂಬ ದೃಢವಿಶ್ವಾಸ ಅವರದು. ಜನಪದರಲ್ಲಿ ಪರಂಪರೆಯಿಂದ ಬಂದ ತಮ್ಮ ಮನೆತನಕ್ಕೆ ಸಂಬಂಧಿಸಿದ ಗುರು ಒಬ್ಬನಿರುತ್ತಾನೆ. ಆ ಗುರುವನ್ನು ಆಗಾಗ ತಮ್ಮ ಮನೆಗೆ ಕರೆದು ಸತ್ಕರಿಸುವ ಸಂಪ್ರದಾಯದ ಆಚರಣೆಯನ್ನು ಈಗಲೂ ನಾವು ಗ್ರಾಮೀಣ ಪ್ರದೇಶದಲ್ಲಿ ಕಾಣುತ್ತೇವೆ. ''ಗುರುವಿಲ್ಲದ ಮಠ, ಹಿರಿಯರಿಲ್ಲದೆ ಮನೆ, ದೇವರಿಲ್ಲದ ಗುಡಿ'' ಇವು ಮೂರು ಯಾತಕ್ಕೂ ಪ್ರಯೋಜನವಿಲ್ಲ. ತಮ್ಮ ನಡೆ-ನುಡಿಗಳನ್ನು ಜನಪದರು ಸಮರ್ಥವಾದ ಗುರುವಿನ ಮೂಲಕ ತಿದ್ದಿಕೊಳ್ಳುತ್ತಾರೆ. ಅವರ ಮಾತುಗಳನ್ನು ಬಹಳ ಶ್ರದ್ಧಾ-ಭಕ್ತಿಗಳಿಂದ ಪರಿಪಾಲಿಸುತ್ತಾರೆ.

ಇಂತಹ ಗುರುವಿನ ಶಿಷ್ಯನಾದವನು ನಿಷ್ಠೆಗಳಿಂದ ಸೇವೆ ಮಾಡಿ ಧನ್ಯನಾಗಬೇಕು. ಗುರುವು ಶಿಷ್ಯನ ಅಂಧಕಾರ ತೊಲಗಿಸಿ, ಜ್ಯೋತಿ ಬೆಳಗಿಸುವನು. ಶಿಷ್ಯನಿಗೆ ದೈವತ್ವದ ಕಲ್ಪನೆ ಮೂಡಿಸುವವನೇ ಗುರು (ಪ್ರಸಾದ, ಪು. ೨೬). ವೀರಶೈವರು ಪೂಜಿಸುವಂತಹ ಲಿಂಗವೆಂಬುದು ಕೇವಲ ಶಿಲೆಯಲ್ಲ. ಅದು ವಿಶ್ವವ್ಯಾಪಿ ಚೈತನ್ಯದ ಕುರುಹು; ಲಿಂಗವು ಜಗದ್ವ್ಯಾಪಿಯಾಗಿದೆ. ಅನುರೇಣು ತೃಣಕಾಷ್ಠಗಳಲ್ಲಿ ಅದರ ಶಕ್ತಿ ಅಡಗಿದೆ. ಇದನ್ನು ಅಂಗದ ಮೇಲೆ ಧರಿಸಿರಬೇಕು. ನಿತ್ಯವೂ ಪೂಜಿಸಬೇಕು. ಇದರಿಂದ ಕಷ್ಟಗಳು ದೂರವಾಗಿ ಇಷ್ಟಾರ್ಥಗಳು ಈಡೇರುತ್ತವೆಂಬ ಕಲ್ಪನೆ ವೀರಶೈವ ಜನಪದರಲ್ಲಿದೆ.

ಕೆಲ ವೀರಶೈವ ಜನಪದರು ಸದಾ ಅಂಗದ ಮೇಲೆ ಲಿಂಗವನ್ನು ಧರಿಸಿರುತ್ತಾರೆ. ದಿನಕ್ಕೆ ಮೂರು ಹೊತ್ತು ಪೂಜೆ ಮಾಡುತ್ತಾರೆ. ಅವರದು ಬಹಳ ಕಟ್ಟುನಿಟ್ಟಿನ ಆಚರಣೆಯಾಗಿರುತ್ತದೆ. ಅಲ್ಲದೆ, ತಮ್ಮ ಮಕ್ಕಳಿಗೆ ದೀಕ್ಷೆ ನೀಡಿ ಲಿಂಗ ಸಂಸ್ಕಾರ ನೀಡಿ ಪೂಜೆ ಮಾಡುವುದನ್ನು ಕಲಿಸಲು ಅವರು ಮರೆಯುವುದಿಲ್ಲ. ಹಾಗೆಯೇ ಲಿಂಗದ ಮುಖವೆಂಬುದು ಜಂಗಮವಾಗಿದೆ. ಸರ್ವಸಂಗ ಪರಿತ್ಯಾಗ ಮಾಡಿ ದೈವ ಸ್ವರೂಪಿಯಾದ ಜಂಗಮನನ್ನು ಶಿವನ ಸ್ವರೂಪದಲ್ಲಿ ಕಂಡು, ಆತನನ್ನು ಮನೆಗೆ ಕರೆಯಬೇಕು (ಸರ್ವಜ್ಞ ಮೂರ್ತಿ ವಚನಗಳು, ಪು.೪೮).

ಜಂಗಮನಾದವನು ಜಾತಿ ,ಭ್ರಾಂತಿಯನ್ನು ಬಿಟ್ಟು ಆತ್ಮದ ನೆಲೆ ಅರಿತ ಜೀವಿಯಾಗಿರುವನು. ಗುರು ಲಿಂಗ ಜಂಗಮರ ಪಾದೋಧಕವು ವೀರಶೈವನ ಜೀವನವನ್ನು ಉತ್ಕರ್ಷಗೊಳಿಸಲು ಉತ್ತಮವಾಗಿವೆ (ಪ್ರಸಾದ, ಪು. ೨೯).

ಅರ್ಪಿತಾರ್ಚನೆಯನು ತಪ್ಪದೆ ಕೊಡುವಾತ
ಸರ್ಪಭೂಷಣನ ನಿಲುವುಹನು । ನಿಜಸುಖಿ, ದೊ
ರೆಪ್ಪುತಿಹನು ಸರ್ವಜ್ಞ.

ಲಿಂಗಪೂಜೆಯಾದ ನಂತರ ಲಿಂಗೋದಕ ಮತ್ತು ಜಂಗಮ ಪಾದೋದಕವನ್ನು ಭಕ್ತಿಯಿಂದ ಸ್ವೀಕರಿಸಿದರೆ, ಆತ್ಮ ಶಕ್ತಿಯ ವಿಕಾಸವಾಗುತ್ತದೆ. ಪಾದೋದಕವೆಂಬುದು ಸಮೃದ್ಧಿಗೆ ಶ್ರೇಷ್ಠ ಸಾಧನವಾಗಿದೆ ( ಅದೇ ಪು. ೨೯) ಎಂದು ತಿಳಿಸಿದ್ದಾನೆ. ಜನಪದರು ತಮ್ಮ ಮನೆಗೆ ಆಗಮಿಸಿದ ಯಾವ ವ್ಯಕ್ತಿಯೇ ಆಗಿರಲಿ , ಮೊದಲು ಗೌರವಿಸುವುದು ಅವರ ಕರ್ತವ್ಯವಾಗಿರುತ್ತದೆ. ಅದರಲ್ಲೂ ಜಂಗಮರು ಮನೆಗೆ ಬಂದರೆ ಅತ್ಯಂತ ದೈವೀ ಭಕ್ತಿಗಳಿಂದ ಕಾಣುತ್ತಾರೆ. ಅವರ ಪಾದ ತೊಳೆದು ಮನೆಯಲ್ಲೆಲ್ಲಾ ಸಿಂಪಡಿಸುತ್ತಾರೆ. ಇದರಿಂದ ಮನೆಗೆ ಯಾವ ಗಾಳಿ, ಕೆಡಕು ಸಂಭವಿಸುವುದಿಲ್ಲವೆಂಬ ಭಾವನೆ ಅವರದು. ಜಂಗಮರ ಪಾದ ತೊಳೆದು ಆ ಪವಿತ್ರ ತೀರ್ಥವನ್ನು ಸೇವಿಸುವುದುಂಟು. ಇದರಿಂದ ದೇಹಕ್ಕೆ ಯಾವ ಹಾನಿಯಾಗಲಾರದೆಂಬ ನಂಬಿಕೆ ಈಗಲೂ ವೀರಶೈವ ಜನಪದರಲ್ಲಿದೆ.

ಈಶ ಪ್ರಸಾದವನು ಸೂಸದಲೆ ತಾ ಕೊಳ್ಳೆ
ಶಾಶ್ವತವಪ್ಪ ಪದವಕ್ಕು ಜಗಕ್ಕೆಲ್ಲ
ಈಶ್ವರನೇ ಅಕ್ಕು ಸರ್ವಜ್ಞ.

ಪ್ರಸಾದವೆಂಬದು ಅಮೃತವನ್ನೂ ಮೀರಿಸುವಂತಹುದಾಗಿದೆ. ತಯಾರು ಮಾಡಿದ ಪದಾರ್ಥಕ್ಕೆ ಗುರು ಲಿಂಗ ಜಂಗಮರ ಮುಖಾಂತರ ಅದಕ್ಕೆ ಸಂಸ್ಕಾರ ಬಂದಿರುತ್ತದೆ. ಗುರುಲಿಂಗ ಜಂಗಮರನ್ನು ಪೂಜಿಸಿದ ಮೇಲೆ ಪ್ರಸಾದ ಪಡೆಯುವುದು ವೀರಶೈವಾಚರಣೆಗಳಲ್ಲಿ ಪ್ರಮುಖವಾದುದು. ವಚನದಲ್ಲಿ ತಿಳಿಸಿದಂತೆ ಪ್ರಸಾದವನ್ನು ಕೈಗೊಳ್ಳುವಾಗ ಒಂದಗಳನ್ನು ಸಹ ಕೆಳಗೆ ಚೆಲ್ಲದೆ ಸ್ವೀಕರಿಸಬೇಕು. ಅನ್ನವೆಂಬುದು ಭೌತಿಕ ಜಡತೆಯ ಸಂಕೇತವಾದರೆ, ಪ್ರಸಾದವು ಆಂತರಿಕ ಶಿವಮಯ ಪರಿಮಾಣದ ಪ್ರಸನ್ನತೆಯ ಕುರುಹಾಗಿದೆ ಎಂದು ಸರ್ವಜ್ಞ ಹೇಳಿದ್ದಾನೆ(ಸರ್ವಜ್ಞ ಮೂರ್ತಿಯ ವಚನಗಳು,ಪು. ೪೯).

ವೀರಶೈವಾಚರಣೆಯ ಜನಪದರು ಪ್ರಸಾದಕ್ಕೆ ತುಂಬಾ ಮಹತ್ವವನ್ನು ನೀಡಿದ್ದಾರೆ. ತುಂಬಾ ಮಡಿಯಿಂದ ಮಾಡಿರುವ ಪದಾರ್ಥವನ್ನು ದೇವರ ಪೂಜೆ ಮಾಡಿದ ನಂತರ ನೈವೇದ್ಯ ಮಾಡುತ್ತಾರೆ. ಆಗ ಅದು ಪ್ರಸಾದವಾಗುತ್ತದೆ. ಅದನ್ನು ಮನೆಯಲ್ಲಿ ಹಂಚಿಕೊಂಡು ತಿನ್ನುತ್ತಾರೆ. ಅದೇರೀತಿ ಹಬ್ಬ, ಜಾತ್ರೆ, ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಸಂಭ್ರಮದಿಂದ ದೇವರನ್ನು ಪೂಜಿಸಿ, ನೈವೇದ್ಯ ಮಾಡಿ , ಪ್ರಸಾದವನ್ನು ಹಂಚಿ ಕೊಳ್ಳುವುದುಂಟು. ಇದರಿಂದ ಶುದ್ಧಬುದ್ಧಿ ಹಾಗೂ ಸುಖವು ಸಮೃದ್ಧಿಯಾಗುತ್ತದೆಂದು ಸರ್ವಜ್ಞ ನಿರೂಪಿಸಿದ್ದಾನೆ.

ರುದ್ರಾಕ್ಷಿ ಭಸಿತವನು ಹೊದ್ದಿರಲು ದೇಹದೊಳು
ಗಿದ್ದ ಪಾಪಗಳು ಬಯಲಾಗಿ ಶಿವನು ತಾ
ನಿದ್ದಲ್ಲಿ ಬರುವ ಸರ್ವಜ್ಞ.

ಈ ಅಷ್ಟಾವರ್ಣಗಳಾಚರಣೆಯ ಸಂದರ್ಭದಲ್ಲಿ ಬಹುಮುಖ್ಯವಾದವುಗಳೆಂದರೆ; ವಿಭೂತಿ ಮತ್ತು ರುದ್ರಾಕ್ಷಿ. ಇವುಗಳನ್ನು ನಿತ್ಯ ಅಂಗದ ಮೇಲೆ ಧರಿಸಿರಬೇಕೆಂದು ಸರ್ವಜ್ಞ ಹೇಳಿದ್ದಾನೆ. ಇದರಿಂದ ದೇಹದೊಳಗಿರುವ ಪಾಪಗಳು ಪರಿಹಾರವಾಗಿ ಶಿವ ನೆಲೆಸುವನೆಂಬುದು ನಂಬಿಕೆ. ವಿಭೂತಿ ಮಾನವನ ತ್ರಿಮಲಗಳನ್ನು ಸುಟ್ಟು, ತ್ರಿಕರಣ ಶುದ್ಧಿಗೆ ಸಹಕಾರಿಯಾಗಿದೆ. ಶಿವನ ತೇಜಸ್ಸನ್ನು ದಯಪಾಲಿಸುವ ವಿಭೂತಿ ಸನ್ಮತಿಗೆ ಮತ್ತು ಸದ್ಗತಿಗೆ ಸೋಪಾನವಾಗಿದೆ(ಪ್ರಸಾದ, ಪು. ೩೦). ವೀರಶೈವ ಜನಪದರು ದಿನನಿತ್ಯ ಸ್ನಾನಾದಿಗಳ ನಂತರ ವಿಭೂತಿಯನ್ನು ಹಣೆಯ ಮೇಲೆ ಧರಿಸಿಕೊಳ್ಳುತ್ತಾರೆ. ವಿಭೂತಿಯನ್ನು ಜನಪದರು ತಮ್ಮ ಮನೆಗಳಲ್ಲಿ ಪವಿತ್ರವಾದ ಸ್ಥಳದಲ್ಲಿಟ್ಟಿರುತ್ತಾರೆ. ಈ ಭಸ್ಮ ಹಚ್ಚಿಕೊಳ್ಳುವುದರಿಂದ ಕೋಪ, ತಾಪ, ಪಾಪಗಳೆಲ್ಲ ಭಸ್ಮವಾಗಿ ಪುಣ್ಯ ಲಭಿಸುತ್ತದೆಂಬುದು ಜನಪದರಂತೆ ಸರ್ವಜ್ಞನಲ್ಲಿಯೂ ನಂಬಿಕೆ ಕಂಡು ಬರುತ್ತದೆ(ಅದೇ ಪು. ೩೧).

ಇನ್ನು ರುದ್ರ (ಶಿವ)ನ ಕಣ್ಣೀ ರುದ್ರಾಕ್ಷಿಯಾಗಿದೆ. ರುದ್ರಾಕ್ಷಿ ಮಾಲೆ ಧರಿಸಿದವನ ಭವ ಮಾಲೆ ತೊಲಗುತ್ತದೆ. ಶಿವನ ಕರುಣೆ ಉಂಟಾಗುತ್ತದೆ. ಈ ರುದ್ರಾಕ್ಷಿ ಮಾಲೆ ಧರಿಸುವುದರಿಂದ ಇಂದಿನ ವ್ಯಾದಿಗಳಾದ ಮಧುಮೇಹ ಮತ್ತು ರಕ್ತದೊತ್ತಡ ಬರುವುದಿಲ್ಲವೆಂಬ ವೈಜ್ಞಾನಿಕ ಸತ್ಯಸಂಗತಿ (ಪ್ರಸಾದ, ಪು. ೩೧) ಜನಪದರಿಗೆ ತಿಳಿಯದಿದ್ದರೂ ಶಿವನ ಕಣ್ಣುಗಳೆಂದು ಭಾವಿಸಿ ತಮ್ಮ ಕೊರಳಲ್ಲಿ ಧರಿಸಿರುತ್ತಾರೆ. ಅಷ್ಟಾವರಣದ ಕೊನೆಯಲ್ಲಿ ಬರುವುದೇ ಮಂತ್ರ.

ಪ್ರಣವ ಪಂಚಾಕ್ಷರಿಯ ತ್ರಿಣಯ ತಾನೆಂದರಿದು
ಪ್ರಣಯದಿ ಸ್ಮರಿಸಿ ಜಪಿಸುತಿರಲು
ಗ್ರಣಿ ತ್ರಿಣಯನು ತಾನೆ ಸರ್ವಜ್ಞ.

ಸಪ್ತಕೋಟಿ ಮಂತ್ರಗಳೆಲ್ಲಾ 'ಶಿವ-ಹರ' ಎಂಬೆರೆಡು ಅಕ್ಷರಗಳ ಮಂತ್ರವ ಮೇಲಾದುದೆಂದು ಹಾಗೂ ಇದು ಕಾಮಧೇನು ಕಲ್ಪವೃಕ್ಷವಾಗಿದೆಂದು, ಪ್ರಪಂಚವನ್ನು ಪಾರಮಾರ್ಥದ ಆಗರವಾಗಿ ಮಾಡುವ ಶಕ್ತಿ ಈ ಮಂತ್ರದಲ್ಲಿದೆಯೆಂದು ಸರ್ವಜ್ಞ ತನ್ನ ವಚನಗಳಲ್ಲಿ ಹೇಳಿದ್ದಾನೆ (ಪ್ರಸಾದ, ಪು.೩೨). ವೀರಶೈವ ಜನಪದರು ಪೂಜಾ ಸಂದರ್ಭದಲ್ಲಿ ಶಿವನ ಪಂಚಾಕ್ಷರಿ ಮಂತ್ರ ಹೇಳುತ್ತಾರೆ. ಹೀಗೆ ವೀರಶೈವ ಜನಪದರಲ್ಲಿ ಕಂಡುಬರುವ ಅಷ್ಟಾವರ್ಣಗಳ, ಆಚರಣೆಗಳ ಬಗೆಗೆ ಸರ್ವಜ್ಞ ಬಹಳ ವಿಶ್ಲೇಣಾತ್ಮಕವಾಗಿ ತಿಳಿಸಿದ್ದಾನೆ. ಈತನು ಹೇಳಿರುವ ಅಷ್ಟಾವರ್ಣಗಳ ಆಚರಣೆಗಳು ಈಗಲೂ ವೀರಶೈವ ಜನಪದರ ಅನೇಕ ಕುಟುಂಬಗಳಲ್ಲಿ ಕಾಣುತ್ತೇವೆ.

## ೫.೭. ನಂಬಿಕೆಗಳು :

ಮಾನವ ಜಾತಿಯ ಸಾವಿರಾರು ವರ್ಷಗಳ ಬಾಳಿನ ಅನುಭವ, ಆಲೋಚನಾ ಫಲ, ನಂಬಿಕೆಗಳು, ನಡಾವಳಿಕೆಗಳು ಮುಂತಾದವುಗಳನ್ನು ನಾವು ಸಂಸ್ಕೃತಿಯ ಮೂಲವೆಂದು ತಿಳಿಯಬಹುದು. ಸಂಸ್ಕೃತಿ ಎಂಬುದು ಮಾತಿಗೆ ನಿಲುಕದೆ, ಜನರ ಆಚರಣೆಯ ರೀತಿನೀತಿಗಳಿಂದ ಅನುಭವಕ್ಕೆ ಗೋಚರವಾಗುವ ವಿಷಯ ವಾಗಿದೆ. ಒಂದು ಹೇಳಿಕೆ ಅಥವಾ ವಸ್ತುಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿಯನ್ನು 'ನಂಬಿಕೆ' ಎನ್ನಬಹುದು.

ಜನರಿಗಿರುವ ಅತಿಮಾನುಷ ಭಯದಿಂದಾಗಿ ದೆವ್ವ ದೇವರುಗಳಿಗೆ ಸಂಬಂಧಿಸಿದ ನಂಬಿಕೆಗಳು ಹುಟ್ಟಿಕೊಂಡಿವೆ. ನಂಬಿಕೆ ಮತ್ತು ಆಚರಣೆಗಳಲ್ಲಿ ನಂಬಿಕೆಯು ಮಾನಸಿಕ ಪರಿಕಲ್ಪನೆಯಾಗಿದ್ದು, ಅದರ ಕ್ರಿಯಾತ್ಮಕ ರೂಪ ಆಚರಣೆ ಎನಿಸಿಕೊಳ್ಳುತ್ತದೆ. ಅಂದರೆ ಯಾವುದೇ ಒಂದು ಆಚರಣೆಯ ಹಿನ್ನೆಲೆಯಲ್ಲಿ ನಂಬಿಕೆ ಇದ್ದೇ ಇರುತ್ತದೆ (ಜಾನಪದ ದರ್ಶನ, ಪು. ೧೩೦).

ಜನಪದರ ನಂಬಿಕೆಗಳಲ್ಲಿ ಎರಡು ಪ್ರಕಾರಗಳನ್ನು ಕಾಣಬಹುದಾಗಿದೆ. ೧) ಒಬ್ಬ ವ್ಯಕ್ತಿ ತಾನು ಒಪ್ಪಿ ಕೊಂಡ, ತನ್ನ ಬದುಕಿಗಿರುವ ಸಮಾಜದಲ್ಲಿನ ಆಧಾರ ರಹಿತ ನಂಬಿಕೆಗಳು, ೨) ಆತನು ಒಪ್ಪಿಕೊಂಡ ಆಧಾರ ಸಹಿತ ನಂಬಿಕೆಗಳು. ಈ ಆಧಾರ ರಹಿತ ನಂಬಿಕೆಗಳನ್ನು ಮೂಢ ನಂಬಿಕೆಗಳೆಂತಲೂ ಕರೆಯುತ್ತಾರೆ. ಆದರೆ ನಂಬಿಕೆಗಳೆಲ್ಲಾ ಮೂಢನಂಬಿಕೆಗಳಲ್ಲ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೦೫).

ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ತಿಳುವಳಿಕೆಯನ್ನು ನಂಬಿಕೆ ಎನ್ನಬಹುದು. ನಂಬಿಕೆಗಳನ್ನು ಜಾನಪದ ವಿದ್ವಾಂಸರು 'ಜನಪದರ ನಂಬಿಕೆಗಳು' (Flok beliefs)ಎಂದು ಹೆಸರಿಸಿದ್ದಾರೆ. ನಂಬಿಕೆಗಳು ಕಾರ್ಯಕಾರಣ ಸಂಬಂಧದ ಅರಿವಿಲ್ಲದಾಗ ಹುಟ್ಟಿಕೊಂಡಂತಹ ಹೇಳಿಕೆಗಳಾಗಿವೆ. ನಂಬಿಕೆಗಳು ಯಾವುದೋ ಒಂದು ಅವ್ಯಕ್ತ ಭಯ ಅಥವಾ ಆತಂಕವನ್ನು ಸೂಚಿಸುತ್ತವೆ. ಆದ್ದರಿಂದ ಇವು ಮಾನಸಿಕ ಸ್ಥಿತಿಗೆ ಸಂಬಂಧಿಸಿದಂಥವು ಯಾವುದೇ ವಿಷಯವನ್ನು ಕುರಿತ ಪರಿಮಿತ ತಿಳುವಳಿಕೆ ಬಹುತೇಕ ನಂಬಿಕೆಗಳ ಹುಟ್ಟಿಗೆ ಕಾರಣ. ಪ್ರಾಚೀನ ಮಾನವನ ಪರಿಮಿತ ತಿಳುವಳಿಕೆಯೇ ನಂಬಿಕೆಗಳಿಗೆ ಮೂಲ. ತಪ್ಪು ತಿಳುವಳಿಕೆ ಮತ್ತು ಅಜ್ಞಾನದಿಂದ ನಂಬಿಕೆಗಳು ಜನ್ಮ ತಾಳುತ್ತವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ (ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು. ೨೭).

''ಯಾವುದೋ ಒಂದು ಅನುಭವದ ಹಿನ್ನೆಲೆಯಲ್ಲಿ ಮೂಡಿಬಂದ ಜ್ಞಾನವೇ ಹೇಳಿಕೆಯ ರೂಪ ಪಡೆದುಕೊಂಡು ಪರಂಪರೆಯಲ್ಲಿ ನಂಬಿಕೆಯಾಗಿ ರೂಪುಗೊಂಡಿರುತ್ತವೆ''. ನಂಬಿಕೆಗಳು ಇಂಥವೇ ಹಿನ್ನೆಲೆ ಯಿಂದ ಹುಟ್ಟುತ್ತವೆಂದು ನಿರ್ಧರಿಸುವುದು ಕಷ್ಟ. ಕೆಲವೊಂದು ನಂಬಿಕೆಗಳಿಗೆ ಕಾಕತಾಳೀಯವಾದ ಕಾರಣಗಳಿರಬಹುದು. ಉದಾಹರಣೆಗೆ : ಹೋಗುವಾಗ 'ಎಲ್ಲಿಗೆ' ಎಂದು ಕೇಳಬಾರದು. ಬೆಕ್ಕು ಅಡ್ಡ ಬಂದರೆ ಹೋಗುವ ಕೆಲಸ ಫಲಪ್ರದವಾಗುವುದಿಲ್ಲ, ರಾತ್ರಿಯ ಹೊತ್ತು ಕಸವನ್ನು ಹೊರಗೆ ಹಾಕಬಾರದು, ರಾತ್ರಿಯ ಹೊತ್ತು ಸುಣ್ಣದ ಗಡಿಗೆಗೆ ಕೈ ಹಾಕಬಾರದು ಮುಂತಾದವುಗಳು.

ನಂಬಿಕೆಗಳ ಹಿನ್ನೆಲೆಯಲ್ಲಿ ಆಯಾ ಸಂಸ್ಕೃತಿಯ ದಟ್ಟವಾದ ಪ್ರಭಾವವಿರುತ್ತದೆ. ಹೆಣ್ಣಿಗೆ ಎಡಗಣ್ಣು ಅದುರಿದರೆ ಶುಭ, ದೇವರು ಬಲಕ್ಕೆ ಹೂ ಕೊಟ್ಟರೆ ಶುಭ, ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ ಆ ಮಾತು ನಿಜವಾಗುತ್ತದೆ, ಹೋಗುವಾಗ ಎದುರಿಗೆ ತುಂಬಿದ ಕೊಡ ಬಂದರೆ ಶುಭ ಸೂಚನೆ ಇತ್ಯಾದಿಗಳು ಭಾರತೀಯ ಸಂಸ್ಕೃತಿಯಲ್ಲಿ ಬೇರುಬಿಟ್ಟಿವೆ (ಜಾನಪದ ಸ್ವರೂಪ ಮತ್ತು ಸಾಹಿತ್ಯ, ಪು. ೨೮).

ಮಾನವ ತನ್ನ ಉಳಿವಿಗಾಗಿ ಕೆಲವೊಂದು ನಂಬಿಕೆಗಳನ್ನು ಸೃಷ್ಟಿಸಿದ್ದಾನೆ. ಹೀಗೆ ಸೃಷ್ಟಿಸಿರುವ ಮಾನವನ ಸ್ವಭಾವವಷ್ಟೇ ಅಲ್ಲದೆ, ಆತನ ಸಂಸ್ಕೃತಿಯ ಸ್ವಭಾವವೂ ಆಗಿದೆ. ಪುರಾತನ ಕಾಲದಿಂದ ಮಾನವನ ನಾಗರಿಕತೆ, ಪ್ರೌಢಜ್ಞಾನ ಮತ್ತು ಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಮಾನವನ

ಅವಿರತ ಮುನ್ನಡೆಯ ಹಾದಿಯಲ್ಲಿ ನಂಬಿಕೆಗಳು ಬಹುಕಾಲದಿಂದಲೂ ಬೆಳೆದುಬಂದಿವೆ. ವಾಸ್ತವಿಕವಾಗಿ ಸಂಸ್ಕೃತಿಯಿಂದ ನಂಬಿಕೆಗಳನ್ನು ಬೇರ್ಪಡಿಸಿಕೊಂಡು ನೋಡುವುದು ಕಷ್ಟ. ಸಂಸ್ಕೃತಿಯು ತಾನು ಉತ್ತಮಗೊಳ್ಳಲು ಪ್ರಯತ್ನಿಸಿ ದಂತೆಲ್ಲಾ ತನ್ನ ಸಂಸ್ಕೃತಿಯನ್ನು ತನ್ನದೇ ಆದ ರೀತಿಯಲ್ಲಿ ಕಟ್ಟಲು ಯೋಚಿಸಿದಂತೆಲ್ಲಾ ಈ ಬಗೆಯ ಹಲವು ನಂಬಿಕೆಗಳು ಹುಟ್ಟಿಕೊಂಡಿರಬೇಕು. ಸಂಸ್ಕೃತಿಯ ಒಂದು ಅಂಗವಾಗಿ ನಂಬಿಕೆಗಳು ಹುಟ್ಟುತ್ತವೆ. ನಂಬಿಕೆಗಳು ಆಯಾ ಸಂಸ್ಕೃತಿಯ ಮೌಲ್ಯ, ನೈತಿಕತೆ, ಆದರ್ಶ, ಆಸಕ್ತಿ, ನಿಷ್ಠೆಗಳಾಗಿರಬಹುದು. ಪ್ರತೀ ಸಂಸ್ಕೃತಿಯು ಒಂದು ನಂಬಿಕೆಗಳನ್ನಿಟ್ಟುಕೊಂಡಿವೆ. ಹಾಗಾಗಿ ಜೀವನಕ್ಕೂ ಮತ್ತು ನಂಬಿಕೆಗೂ ನಿಕಟವಾದ ಸಂಬಂಧವಿದ್ದು, ಅವೆರಡೂ ಹಾಸುಹೊಕ್ಕಾಗಿವೆ. ''ನಂಬಿಕೆ ಬೆಟ್ಟವನ್ನಾದರೂ ಕದಲಿಸಬಲ್ಲದು'' ಎಂಬುದು ನಂಬಿಕೆಗಳ ಬಗೆಗಿರುವ ಪ್ರಸಿದ್ಧ ನಾಣ್ಣುಡಿಯಾಗಿದೆ (ಜನಪದ ನಂಬಿಕೆಗಳು, ಪು. ೧೪).

ನಂಬಿಕೆಗಳಿಗೆ ಆಯಾ ಪ್ರಾದೇಶಿಕ, ಸಾಂಸ್ಕೃತಿಕ ಹಿನ್ನೆಲೆ ಇರುತ್ತದೆ. ಭಾರತೀಯ ಜನಪದರು ತಮ್ಮ ಜೀವನದಲ್ಲಿ ತಲೆ ತಲಾಂತರದಿಂದ ಬಂದ ಸಾಂಸ್ಕೃತಿಕವಾದ ನಂಬಿಕೆಗಳನ್ನು ಬಲವಾಗಿ ನಂಬುತ್ತಾರೆ. ಇಂತಹ ನಂಬಿಕೆಗಳ ಬಗೆಗೆ ಸರ್ವಜ್ಞ ಏನು ಹೇಳಿದ್ದಾನೆಂಬುದನ್ನು ನೋಡೋಣ;

## ೫.೭.೧. ದೇವರ ಬಗೆಗಿರುವ ನಂಬಿಕೆ :

ನಮ್ಮ ದೇವರುಗಳೆಲ್ಲಾ ಧರ್ಮದ ಮೂಲಕ ಹುಟ್ಟ ತೊಡಗಿವೆ. ಸಾಹಿತ್ಯವಿರಲಿ, ಸಂಗೀತವಿರಲಿ, ಶಿಕ್ಷಣ, ನೃತ್ಯ ಕಲೆಯೇ ಇರಲಿ ಎಲ್ಲವೂ ದೇವರಿಗಾಗಿಯೇ ಹುಟ್ಟಿದ್ದಾಗಿವೆ. ಈ ಜಗತ್ತಿನಲ್ಲಿ ಪ್ರತಿಯೊಂದು ಜೀವಿಯಲ್ಲಿಯೂ ದೇವರು ವ್ಯಾಪಿಸಿರುವನೆಂಬ ನಂಬಿಕೆ ಜನಪದರಲ್ಲಿ ಕಾಣುತ್ತೇವೆ. ಇದೇರೀತಿ ಎಲ್ಲಾ ಕಡೆ ಗಳಲ್ಲಿಯೂ ದೇವರರಿರುವನೆಂಬ ಸತ್ಯವನ್ನು ಹಾಗೂ ನಂಬಿಕೆಯನ್ನು ಸರ್ವಜ್ಞನ ವಚನಗಳಲ್ಲಿ ಕಾಣುತ್ತೇವೆ.

ಕಲ್ಲು ಕಾಷ್ಟದೊಳಿರುವ ಮುಳ್ಳು ಮೊನೆಯಲ್ಲಿರುವ
ಸುಳ್ಳು ಈ ಮಾತು ಎನಬೇಡ ಪರಮಾತ್ಮ
ನೆಲ್ಲೆಲ್ಲೂ ಇರುವ ಸರ್ವಜ್ಞ.

ಕಳ್ಳಿನೊಳು ಹಾಲು,ಮುಳ್ಳು।ಗಳ್ಳಿಯೊಳು ಹೆಜ್ಜೇನು
ಎಳ್ಳಿನೊಳಗೆಣ್ಣೆ ಹರಿದಿರಲು, ಶಿವಲೀಲೆ
ಸುಳ್ಳೆನಬಹುದೆ ? ಸರ್ವಜ್ಞ.

ಇಂಗಿನೊಳು ನಾತವನು, ತೆಂಗಿನೊಳು ನೀರ
ಭೃಂಗ ಕೋಕಿಲೆಯ ಕಂಠದೊಳು ಗಾಯನವ
ತುಂಬಿದವರಾರು ? ಸರ್ವಜ್ಞ.

ಪ್ರಕೃತಿಯಲ್ಲಡಗಿರುವ ಈ ವಿಸ್ಮಯಕ್ಕೆ ಮನುಷ್ಯ ಆಶ್ಚರ್ಯ ಚಕಿತನಾಗಿರುವನು. ದೇವರು ಕಲ್ಲು, ಕಟ್ಟಿಗೆ, ಮುಳ್ಳಿನ ಮೊನೆಯಲ್ಲಿರುವವನಲ್ಲದೆ, ಕಳ್ಳಿನೊಳಗೆ ಹಾಲು, ಮುಳ್ಳಿನ ಹೂವಿನೊಳಗೆ ಪರಿಮಳ, ಎಳ್ಳಿ ನೊಳಗೆ ಎಣ್ಣೆ, ತೆಂಗಿನ ಕಾಯೊಳಗೆ ನೀರು, ಕೋಗಿಲೆಯಲ್ಲಿ ಸಿರಿ ಕಂಠ ಮುಂತಾದವುಗಳನ್ನೆಲ್ಲಾ ಕರುಣಿಸಿದ್ದಾನೆ. ಇದರಿಂದ ಆ ಸೃಷ್ಟಿಕರ್ತನ ಬಗೆಗೆ ಮನುಷ್ಯನ ನಂಬಿಕೆಗಳು ಹೆಚ್ಚಾಗಿವೆ. ಆದರೆ 'ದೇವರು' ಎಂಬ ಸತ್ಯ ನಮ್ಮ ನಮ್ಮ ಅನುಭಾವದಲ್ಲಡಗಿದೆ. ವಿಚಾರಗಳ ತುದಿಯಲ್ಲಿ ರೂಪುಗೊಂಡುದೇ ನಂಬಿಕೆ. (ನೂರೊಂದು ಚಿಂತನ, ಪು. ೮೬). ದೇವರು ಇರುವ, ಇಲ್ಲದಿರುವ ಬಗೆಗೆ ತಾರ್ಕಿಕವಾಗಿ ಜಾನಪದರು ವಾದ- ವಿವಾದ ಮಾಡಲಾರರು. ಜಗತ್ತಿನ ವಿಸ್ಮಯವನ್ನೆಲ್ಲಾ ಶಿವಲೀಲೆಯಿಂದಾಗಿರುವುದೇ ಎಂಬ ಮಾತನ್ನು ಯಾರೂ ತಳ್ಳಿ ಹಾಕುವಂತಿಲ್ಲ. ಅವರ ನಂಬಿಕೆಗೆ ಆದಿ-ಅಂತ್ಯಗಳಿರುವುದಿಲ್ಲ. ಹೀಗಾಗಿ ಪರಮಾತ್ಮ ಜಗದ್ಭರಿತನಾಗಿಯೂ, ಜಗದಾದಿ ತೀತನಾಗಿಯೂ ವ್ಯಾಪಿಸಿಕೊಂಡಿದ್ದಾನೆಂಬ ಭಾವನೆಯೂ ಸರ್ವಜ್ಞನದು.

ಅಲ್ಲಿಪ್ಪನಿಲ್ಲಿಪ್ಪ ನೆಲ್ಲಿಪ್ಪನೆನಬೇಡ
ಕಲ್ಲಿನಂತಿಪ್ಪ ಮಾನವರ ಮನ ಕರಗೆ
ಅಲ್ಲಿಪ್ಪನೋಡ ಸರ್ವಜ್ಞ.

ಅಮೂರ್ತನಾದ ಶಿವನ ಸ್ವರೂಪ ಅಲ್ಲಿ, ಇಲ್ಲಿ, ಎಲ್ಲಿದ್ದಾನೆಂದು ಪ್ರಶ್ನಿಸಿದೇ ಮಾನವರ ಹೃದಯದಲ್ಲಿ ಕಲ್ಲಿನಂತಿದ್ದಾನೆ. ಈ ದೇವರನ್ನು ಕಾಣಲು ಮನ ಕರಗುವಂತಹ ಜೀವದಯೆಯ ನಂಬಿಕೆ ಬೇಕು. ಇಂತಹ ಶಿವನಿಗೆ ' ಆಗು-ಹೋಗು'ಗಳಿಲ್ಲ, 'ಮೇಲು-ಕೆಳಗೂ' ಇಲ್ಲ. ಹಾಗೂ ಸರಿಸಮಾನವಾದ ಶಕ್ತಿ ಇನ್ನೊಂದಿಲ್ಲ. ತಪ್ಪು ತಡೆಗಳೂ ಇಲ್ಲವೆಂಬ ನಂಬಿಕೆಗಳನ್ನು ಸರ್ವಜ್ಞ ಅಭಿವ್ಯಕ್ತಿಸಿದ್ದಾನೆ.

ಜನಪದರ ದೇವತೆಗಳೆಂದರೆ ಶಕ್ತಿಮೂಲವಾದ ಪ್ರಮುಖ ಹೆಣ್ಣು ದೇವತೆಗಳೆ. ಈ ದೇವತಗಳ ಮೂಲಕ ತಮ್ಮ ಜೀವನ ವಿಧಾನಗಳನ್ನು ಜೀವಂತವಾಗಿರಿಸಿಕೊಂಡಿದ್ದಾರೆ (ಜನಪದ ದೇವತೆಗಳು ಮತ್ತು ಶಿಷ್ಟ ದೇವತೆಗಳು, ಪು. ೯) . ಸರ್ವಜ್ಞ ತನ್ನ ವಚನದಲ್ಲಿ ದುರ್ಗಿ , ಮಾರಿ, ಚಂಡಿಯಂತಹ ಶಕ್ತಿಗಳ ಹೆಣ್ಣು ದೇವತೆಗಳ ಬಗೆಗೆ ಹೇಳಿದ್ದಾನೆಯೇ ಹೊರತು, ಇದಕ್ಕಿಂತ ಹೆಚ್ಚೇನನ್ನೂ ತಿಳಿಸಿಲ್ಲ. ಈತನೊಬ್ಬ ಶಿವಭಕ್ತ ನಾಗಿರುವುದರಿಂದ ಆತನನ್ನು ನಂಬಿರುವುದರಿಂದ; ಇತರ ದೇವತೆಗಳ ಬಗ್ಗೆ ಹೇಳಿಲ್ಲ.

ನಿಷ್ಠೆ ಇದ್ದಡೆ ಶಿವನು ಗಟ್ಟಿಗೊಂಡೊಳಗಿಪ್ಪ
ನಿಷ್ಠೆ ಇಲ್ಲದಲೆ ಭಜಿಸಿದಡೆ ಶಿವನವನ
ಬಿಟ್ಟು ಬಯಲಪ್ಪ ಸರ್ವಜ್ಞ.

ದೇವರಲ್ಲಿ ನಿಷ್ಠೆಯಿಂದ ಪೂಜಿಸಿದೊಡನೆ ನಮ್ಮ ಇಷ್ಟಾರ್ಥಗಳು ಸಿದ್ಧಿಸುವವು ಎಂಬ ನಂಬಿಕೆ ಜಾನಪದರಲ್ಲಿ ಯಾವತ್ತೂ ಇದೆ. ನಮ್ಮ ಬುದ್ಧಿಗೆ ನಿಲುಕಿದಷ್ಟು ಶಿವನ್ನು ನಂಬಿ ಬಾಳಿದರೆ ಎಂದಿಗೂ ಕೈಬಿಡ ಲಾರನೆಂಬ ನಂಬಿಕೆಯೂ ಸಹ ಸರ್ವಜ್ಞನದು. ''ನಂಬದೇ ನೆಚ್ಚದೇ ಕರೆದರೆ ಓ ಎನ್ನನು ನಮ್ಮ ಶಿವನು, ನಂಬಿ ಕರೆದರೆ ಓಡುತ ಬರುವನು'' ಎಂಬಂತೆ ದೇವರಲ್ಲಿ ನಂಬಿಕೆ ಇಟ್ಟು ಸನ್ಮಾರ್ಗದಲ್ಲಿ ನಡೆಯಬೇಕು. ಒಬ್ಬರಿಗೆ ಒಳಿತನ್ನು ಮಾಡದಿದ್ದರೂ ಕೆಡುಕನ್ನು ಮಾಡದಿರುವುದೇ ಆ ದೇವರನ್ನು ಒಲಿಸಿಕೊಳ್ಳುವ ಬಹು ದೊಡ್ಡ ಗುಣವಾಗಿದೆ (ನೂರೊಂದು ಚಿಂತನ, ಪು.೧೮೪).

ನಂಬಿದವನು ನಂಬದಿರುವವನ್ನು ಗುಮಾನಿಯಿಂದ ನೋಡುವುದು; ನಂಬದವನು ನಂಬಿದವನನ್ನು ಮೂಢನೆಂದು ಭಾವಿಸುವುದು ಈ ಎರಡರ ನಡುವೆ ಸಿಕ್ಕಿ ತೊಳಲಾಡುವುದು ಎಷ್ಟರ ಮಟ್ಟಿಗೆ ಸರಿ ? ಶ್ರದ್ಧೆ ನಂಬಿಕೆಗಳ ಕೊರತೆಯಿಂದಾಗುವ ಬಹುದೊಡ್ಡ ಆಘಾತವೆಂದರೆ; ಅನಾವಶ್ಯಕ ಮನಸ್ತಾಪ ಹಾಗೂ ಘರ್ಷಣೆ ಗಳೇ. ಆದ್ದರಿಂದ ನಾಗರೀಕ ಸಮಾಜ ಎಚ್ಚೆತ್ತು ನಂಬಿಕೆಗಳಿಂದಾಗುವ ಮಹತ್ವವನ್ನು ಅರಿತು ಸುಖದಿ ಬಾಳು ವಂತಾಗಲು ಸರ್ವಜ್ಞನ ವಚನಗಳು ಇಂದಿಗೂ ಪ್ರಸ್ತುತವಾಗಿವೆ.

### ೫.೭.೨. ಮಳೆ ಬಗೆಗಿರುವ ನಂಬಿಕೆ :

ಮಳೆಗೆ ಸಂಬಂಧಿಸಿದಂತ ಸರ್ವಜ್ಞನ ನಂಬಿಕೆ ಹೀಗಿದೆ;

ತೆಂಕಲಿಗೆ ಮುಗಿಲಡರೆ ಶಂಕರನ ದೆಸೆಮಿಂಚು
ಪಂಕಜಾರತಿ ಗುಡಿಕಟ್ಟೆ ಮಳೆಯು ತಾ
ಭೋಂಕನೇ ಬಕ್ಕು ಸರ್ವಜ್ಞ.

ದಕ್ಷಿಣ ದಿಕ್ಕಿಗೆ ಕಪ್ಪು ಮೋಡಗಳು ಹರಡಿದರೆ, ಮಿಂಚು ಗುಡುಗುಗಳೆಲ್ಲ ಸೇರಿದರೆ, ಇದ್ದಕ್ಕಿದ್ದಂತೆ ಮಳೆ ಬರಬಹುದೆಂಬ ನಂಬಿಕೆಯನ್ನು ತಿಳಿಸಿದ್ದಾನೆ. ಇದೇರೀತಿ ಜನಪದರಲ್ಲಿ ನಂಬಿಕೆಗಳು ಹೀಗಿವೆ; ಅಶ್ವಿಯುಜದಲ್ಲಿ ಪಡುವಣಕ್ಕೆ ಗಾಳಿ ಬೀಸಿದರೆ ಮಳೆ ವಿಪುಲ ; ಮಾರ್ಗಶಿರ ದಲ್ಲಿ ಮಳೆ ಹುಯ್ದರೆ ವರಿಷ್ಠ ಪ್ರಮಾಣದ ಮಳೆ ಸಂಭವ; ಫಾಲ್ಗುಣದಲ್ಲಿ ಹುಯ್ದರೆ ನಷ್ಟ. ಆಗಸದಲ್ಲಿ ಕೆಂಪು ಬಣ್ಣ ಹರಡಿದರೆ ಮಳೆ ಇಲ್ಲ ಮುಂತಾದವು (ಜಾನಪದ ಅಧ್ಯಯನ, ಪು. ೩೬೧).

ಇನ್ನು ಕೆಲವು ವೃತ್ತಿಗಳ ಬಗೆಗೆ ಸರ್ವಜ್ಞನಲ್ಲಿ ನಂಬಿಕೆ ಕಂಡುಬರುವುದಿಲ್ಲ. ಉದಾಹರಣೆಗೆ : ಸುಳ್ಳು ಸಿಂಪಿಗ ಬಲ್ಲ, ಹರದನಾ ಮಾತನ್ನು ಹಿರಿದು ನಂಬಲು ಬೇಡ, ಅಕ್ಕಸಾಲಿಗನಲ್ಲಿ ನಂಬಿಗೆ ಇಲ್ಲ ಮುಂತಾದವನ್ನು ನೋಡಿದಾಗ ಅವರು ಜನರಲ್ಲಿ ಪ್ರೀತಿ ವಿಶ್ವಾಸವನ್ನು ಕಳೆದುಕೊಂಡು ಅಪನಂಬಿಕೆಗಳಿಗೆ ಗುರಿಯಾಗಿರುವವ ರೆಂದು ತಿಳಿದುಬರುತ್ತ ದೆ.

ಹಣದ ಬಗ್ಗೆ ಅತಿಯಾದ ವ್ಯಾಮೋಹ ಸರಿಯಲ್ಲ ಇದರಿಂದಾಗುವ ಪ್ರಭಾವದ ಬಗೆಗೆ;

ತುಂಬಿದ ಕೆರೆಬಾವಿ । ತುಂಬಿದಂತಿರುವುದೆ ?
ನಂಬಿರಬೇಡ ಲಕ್ಷ್ಮಿ ಯನು ಬಡತನವು
ಬೆಂಬಿಡದೆ ಬಹುದು ಸರ್ವಜ್ಞ.

ಈ ವಚನದಲ್ಲಿ ವಿವೇಕಯುತವಾದ ನಂಬಿಕೆ ಕಂಡುಬರುತ್ತ ದೆ. ತುಂಬಿದ ಕೆರೆಬಾವಿ ತುಂಬಿದಂತಿ ರುವುದೇ ಎಂಬ ದೃಷ್ಟಾಂತ ಸಂಚಿತವಾದ ಧನದ ಅಸ್ಥಿರತೆ- ಅಶಾಶ್ವತೆಯನ್ನು ಸೂಚಿಸುವುದರೊಂದಿಗೆ ಅದನ್ನು ಹಿತಮಿತವಾಗಿ ಬಳಸುವುದರ ಬಗೆಗೆ ಎಚ್ಚರಿಕೆ ನೀಡುತ್ತ ದೆ. ಅಂದರೆ; ಯಾವಾಗಲೂ ಸಂಪತ್ತು ಕರಗದೇ ಇರುತ್ತದೆಂಬ ಹುಸಿ ನಂಬಿಕೆ ಜೀವನದಲ್ಲಿ ತರವಲ್ಲವೆಂಬ ಸತ್ಯವನ್ನು ಸಾರಿದ್ದಾನೆ. 'ಅತಿಯಾದರೆ ಅಮೃತವೂ ವಿಷ' ಎಂಬಂತೆ ಯಾವುದೇ ಆಸೆಗಳಿರಲಿ, ಅತಿಯಾದಾಗ ಅದರಿಂದ ಕೆಡಕನ್ನು ತಂದುಕೊಂಡಂತೆ.

ಹೀಗೆ ಜಗತ್ತನ್ನಾಳುವ ಸಮಸ್ತ ಜೀವನಾತ್ಮಕವಾದ ನಂಬಿಕೆಗಳೇ ಮುಂದೆ ಆಚರಣೆಗಳಾಗಿ ಉಳಿಯುತ್ತವೆ. ನಂಬಿಕೆಗಳೆಂದ ಕೂಡಲೇ ಬುದ್ಧಿ ಭಾವಗಳು, ಗೈರು ಹಾಜರಿ ಎಂದು ತಿಳಿಯಕೂಡದು. ಮನಸ್ಸಿನ ಇಷ್ಟಾನಿಷ್ಟಗಳ ಅಭಿವ್ಯಕ್ತಿಗೆ ಈ ನಂಬಿಕೆಗಳು ಮಾಧ್ಯಮವಾಗುತ್ತವೆ (ಜಾನಪದ ಅಧ್ಯಯನ, ಪು.೩೫೧). 'ನೀರು ಬೆಂಕಿಯನ್ನಾರಿಸುವುದು ದಿಟದ ನಂಬಿಕೆ ಹೌದು, ಅನುಭವವೂ ಹೌದು. ನಂಬಿಕೆಗಳಿಗೆ ಅನುಭವವೆಂತ ಮೂಲವೋ ಅಂತೆಯೇ ಅಂತರ್ಭೋದೆಯೂ ; ಕಲ್ಪನೆಗಳು ಮೂಲವಾಗುತ್ತವೆ (ಅದೇ ಪು. ೩೫೨).

## ೫.೭.೩. ಹೆಣ್ಣಿನ ಬಗೆಗಿರುವ ನಂಬಿಕೆ :

ಸ್ವತಃ ವಿರಾಗಿಯಾಗಿ ಬದುಕಿರಬಹುದಾದ ಸರ್ವಜ್ಞ ಇತರರ ವಿರಕ್ತಿಯಂತೆ ಅವಾಸ್ತವಕ್ಕೆ ಒತ್ತುಕೊಟ್ಟು, ಸಾಂಸಾರಿಕ ಜೀವನವನ್ನು ನಂಬದೇ ಕಡೆಗಣಿಸಿ, ಖಂಡಿಸುವಂತಹ ಸಮತೂಕದ ನಿಲುಮೆಗೆ ಬದುಕಿನ ನಿಷ್ಠೆಗೆ ನಿದರ್ಶನವಾಗಿದೆ. ಭಾವಾವೇಷಕ್ಕೊಳಗಾಗಿಯೋ, ಯಾವುದೋ ಒಂದು ಆದರ್ಶದ ಬೆನ್ನು ಹತ್ತಿಯೋ ದುರ್ಬಲವಾದ ಗಳಿಗೆಯಲ್ಲಿ ಸಂಸಾರದ ನೂರೆಂಟು ಎಳೆತ-ಸೆಳೆತಗಳಿಗೆ ಬಲಿಬಿದ್ದು ಒದ್ದಾಡುವವರನ್ನು ಕಂಡಿರಬಹುದಾದ ಸರ್ವಜ್ಞ;

ಸಿರಿ ಸಂಸಾರವನು ಸ್ಥಿರವೆಂದು ನಂಬದಿರು
ಹಿರಿದೊಂದು ಸಂತೆ ನೆರೆದೊಂದು, ಜಾವಕ್ಕೆ
ಹರಿದುಹೋದಂತೆ ಸರ್ವಜ್ಞ.

ವೈರಾಗ್ಯದ ಬದುಕು ಎಲ್ಲರಿಗೂ ಹೇಳಿಮಾಡಿಸಿದಂಥದ್ದಾಗಲಿ ಹಾಗೂ ನಿಲುಕುವಂಥದ್ದಾಗಲಿ ಅಷ್ಟು ಸುಲಭದ ಮಾತಲ್ಲ. ಇಂತಹ ಆರೋಗ್ಯಕರವಾದ ನಿಲುಮೆಯನ್ನು ಸರ್ವಜ್ಞ ತಿಳಿದುಕೊಂಡಿರಬಹುದು. ಬದುಕಿನ ಸರ್ವ ಗ್ರಾಹಿಯೂ, ವಸ್ತುನಿಷ್ಠವೂ ಆದ ನಿರೀಕ್ಷಣೆಯ ಫಲವಾಗಿಯೇ ಅದು ಆತನಿಗೆ ಸಾಧ್ಯವಾಗಿದ್ದಿತ್ತು. ಈ 'ಸಂಸಾರವೆಂಬುದು ಗಾಳಿಯ ಸೊಡರು' ಎಂಬ ಬಸವಣ್ಣನವರ ಪ್ರಸಿದ್ಧ ವಚನದಂತೆ ಎಲ್ಲ ಆಸೆ ಆಮಿಷಗಳ ಜಾಲಕ್ಕೆ ಸಿಲುಕಿ ತನ್ನತನವನ್ನು ಮರೆತು ಈ ನೀರ ಮೇಲಿನ ಗುಳ್ಳೆಯಂತಿರುವ ಸಂಸಾರವನ್ನು ನಂಬಬೇಡೆಂದು ಸರ್ವಜ್ಞ ತಿಳಿಸಿದ್ದಾನೆ.

ಈ ಸಂಸಾರವೆಂಬುದು ಸಂತೆ ಇದ್ದಂತೆ. ಸಂತೆಯಲ್ಲಿ ಎಲ್ಲರೂ ನೆರೆದು, ಸಂಜೆಯಾಗುತ್ತಲೇ ಮಾಯ ವಾಗಿಬಿಡುತ್ತಾರೆ. ಆದ್ದರಿಂದ ಸಂಸಾರದ ಬೆನ್ನು ಹತ್ತಿ, ಅದನ್ನು ನಂಬಿ ದುರ್ಬಲನಾಗುವುದಕ್ಕಿಂತ ಆತ್ಮೋನ್ನತಿ ಗಾಗಿ ಶಿವಪಥವನ್ನರಿಯಬೇಕೆನ್ನುವುದು ಸರ್ವಜ್ಞನ ಅಭೂತಪೂರ್ವ ನಂಬಿಕೆಯ ಅಭಿಮತವಾಗಿದೆ.

ಎಲ್ಲವೂ ಶಿವನೆಂದರೆಲ್ಲಿಹುದು ಭಯವಯ್ಯ
ಎಲ್ಲರೂ ಶಿವನ ನೆನದಿಹರೆ ಕೈಲಾಸ
ವಿಲ್ಲಿಯೇ ನೋಡ ಸರ್ವಜ್ಞ.

ಸಂಸಾರದ ಸಾಗರದಲ್ಲಿ ದಡವೆನ್ನುವುದು (ಮೋಕ್ಷ) ಬಹಳ ದೂರ. ಅಂದರೆ ಸಂಸಾರಿಗಳೆಲ್ಲರೂ ವೈರಾಗ್ಯದ ಹಾದಿ ಹಿಡಿಯಬೇಕೆಂಬ ಧೋರಣೆ ಸರ್ವಜ್ಞನದಲ್ಲ. ಮಾಡುವ ಕೆಲಸದಲ್ಲಿ,ನೋಡುವ ನೋಟದಲ್ಲಿ ಶಿವನನ್ನು ಕಾಣುವಂತಾಗಬೇಕು. ಇದೇ ರೀತಿ ವ್ಯಷ್ಟಿಯಿಂದ ಸಮಷ್ಟಿಯ ಕಡೆಗೆ ಈ ಶಿವ ಚಿಂತನೆ ಸಾಗಿದಾಗ ಕೈಲಾಸವೆಂಬುದು ಈ ಭೂಮಿಯಲ್ಲಿಯೇ ಸೃಷ್ಟಿಸಿದಂತಾಗುತ್ತದೆಂಬ ನಂಬಿಕೆ ಈತನದು.

ನಂಬಿಕೆಗಳ ಬಗೆಗೆ ಸರ್ವಜ್ಞನಲ್ಲಿ ಒಮ್ಮತವಿಲ್ಲ. ತನ್ನ ಕೆಲವು ವಚನಗಳಲ್ಲಿ ಹೆಣ್ಣನ್ನುಹೊಗಳುತ್ತಾನೆ. ಇನ್ನೂ ಕೆಲವು ವಚನಗಳಲ್ಲಿ ನಂಬಬಾರದೆಂದು ಹೇಳಿದ್ದಾನೆ. ಉದಾಹರಣೆಗೆ;

ಹೆಣ್ಣಿಗೂ ಮಣ್ಣಿಗೂ ಉಣ್ಣ ದುರಿಯಲು ಬೇಡ
ಹೆಣ್ಣಿಂದ ಕೆಟ್ಟ ದಶಕಂಠ, ಕೌರವನು
ಮಣ್ಣಿಂದ ಕೆಡನೇ ಸರ್ವಜ್ಞ.

ಎಂತಿರಲು ಪರರನೀ ಮುಂದೆ ನಂಬಲು ಬೇಡ
ಕುಂತಿ ಹೆಮ್ಮಗನ ಕೊಲಿಸಿದಳು, ಮಾನವರ
ನೆಂತು ನಂಬುವುದು ಸರ್ವಜ್ಞ.

ಎಂದು ಪ್ರಶ್ನಿಸಿರುವನು. ''ಹೆಣ್ಣಿಗಾಗಿ ಸತ್ತವರು ಕೋಟಿ ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿ ಕೋಟಿ, ನಿನಗಾಗಿ ಸತ್ತವರನ್ನು ಒಬ್ಬರನ್ನೂ ಕಾಣೆ'' ಎಂಬ ಬಸವಣ್ಣನವರ ವಚನ ಸರ್ವಜ್ಞನಿಗೆ ಗೊತ್ತಾಗಿರಬಹುದು. ಈತನೂ ಸಹ ಹೆಣ್ಣು ಮತ್ತು ಮಣ್ಣಿನ ಬಗೆಗೆ ತಿಳಿಸುತ್ತಾ 'ಹೆಣ್ಣಿನ ನೆಲೆ ಸಿಕ್ಕದು' ಎಂಬ ಜಾನಪದ ಮಾತಿನಂತೆ ಹಣ್ಣಿಗಾಗಿ ಅತಿಯಾಸೆ ಪಡಬಾರದು. ಇವುಗಳಿಂದ ದುಃಖವನ್ನು ಎದುರಿಸಬೇಕಾಗಬಹುದು. ರಾಮಾಯಣ -ಮಹಾಭಾರತಗಳು ನಮ್ಮ ಜೀವನದಲ್ಲಿ ಆದರ್ಶಗಳೇ. ಆ ಗ್ರಂಥಗಳೇ ಹೇಳಲಾಗಿರುವ, ಹೆಣ್ಣಿನ ಮೋಹಕ್ಕೊಳಗಾದ ರಾವಣ, ಮಣ್ಣಿನ ಮೋಹಕ್ಕೊಳಗಾದ ಕೌರವ ಇವರಿಬ್ಬರೂ ಕೊನೆಗೆ ಸೋತು ಸಾವನ್ನಪ್ಪಿದರು. ಹೀಗಾಗಿ ಹುಲುಮಾನವರಾದ ನಾವು ಜಾಗೃತಿಯಿಂದಿರಬೇಕೆಂದು ಸರ್ವಜ್ಞ ತಿಳಿಸಿದ್ದಾನೆ. ಹಾಗೆಯೇ ಬೇರೆಯವರನ್ನು ಬದುಕಿನಲ್ಲಿ ಬಹು ಬೇಗನೆ ನಂಬಬಾರದು. ''ಬೆಳ್ಳಗಿದ್ದದ್ದೆಲ್ಲಾ ಹಾಲಲ್ಲ'' ಎಂಬ ಜನಪದರ ಮಾತಿನಂತೆ ನಂಬಿಕೆಯಿಂದಾಗುವ ಮೋಸತನವನ್ನು ಸರ್ವಜ್ಞ ದೃಷ್ಟಾಂತದ ಮೂಲಕ ಅರುಹಿದ್ದಾನೆ.

ಮಹಾಭಾರತದಲ್ಲಿ ಕುಂತಿ ಕರ್ಣನಿಗೆ 'ನಾನು ನಿನ್ನ ತಾಯಿ' ಎಂದು ಹೇಳಿ ಅವನನ್ನು ಸಾವಿನ ದವಡೆಗೆ ನೂಕುವಳು. ಆದ್ದರಿಂದ ನಂಬಿಕೆ ಎಂಬುದು ಎಂಥವರನ್ನೂ ಅಲುಗಾಡಿಸದೇ ಬಿಟ್ಟಿಲ್ಲ.

ನಂಬದಂತಿರಬೇಕು ನಂಬದಲಿರಬೇಕು
ಇಂಬರಿದು ಎಚ್ಚರಿರಬೇಕು ಹೆಣ್ಣನ್ನು
ನಂಬಿದವರ ಕೆಟ್ಟ ಸರ್ವಜ್ಞ.

ಮೇಡಿನ ಹೊಲನಾಗಿ। ಜೋಡಿಲ್ಲದೆತ್ತಾಗಿ
ಕಾಡಿಗೆಯ ಕಣ್ಣು ಸೊಸೆಯಾದರಾಮನೆಗೆ
ಕೇಡು ಬಿಡದೆಂದ ಸರ್ವಜ್ಞ.

ಹೆಣ್ಣನ್ನು ನಂಬುವುದು ಅನರ್ಥವನ್ನು ಬರಮಾಡಿಕೊಂಡಂತೆಯಾದರೂ ಹೆಣ್ಣಿಲ್ಲದೇ ಬಾಳುವುದು ಸಂಸಾರಿಗಳಿಗೆ ಸಾಧ್ಯವಿಲ್ಲ. ಆದ್ದರಿಂದ ಹೆಣ್ಣನ್ನು ನಂಬಿಯೂ ನಂಬದಂತಿರಬೇಕು ಎಂದು ಎಚ್ಚರಿಸಿದ್ದಾನೆ. ಮುಂದಿನ ವಚನದಲ್ಲಿ, ಬೆಟ್ಟದಲ್ಲಿ ಹೊಲಮಾಡಿ ಬಿತ್ತುವುದಕ್ಕೆ ಒಂದೇ ಎತ್ತಿನಿಂದ ಹೊಲ ಉಳುವುದಕ್ಕೆ ಕಷ್ಟ ಸಾಧ್ಯಗಳು ಹೇಗೋ ಹಾಗೆಯೇ ಕಾಡಿಗೆ ಕಣ್ಣುಳ್ಳ ಸೊಸೆ ಮನೆಗೆ ಬಂದರೆ ಕೇಡು ಸಂಭವಿಸಬಹುದೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.

ಏರಿ ಮೇಲಣ ಪಂಜು ನೀರೊಳಗೆ ಉರಿದಂತೆ
ನಾರಿಯರೊಲುಮೆ ತನಗೆಂಬ ಮರುಳಂಗೆ
ಮಾರಿ ಹಿಡಿದಿಹುದು ಸರ್ವಜ್ಞ.

ಮನೆಯ ಮೇಲಿನ ಜೋಳ । ತೆನೆಯಾಗಬಲ್ಲುದೇ ?
ವನಿತೆಯೊನಗೊಲಿದಳೆನಬೇಡ, ಬೆಳ್ಳಕ್ಕಿ
ದನವ ಕಾದಂತೆ ಸರ್ವಜ್ಞ.

ಹೆಣ್ಣಿನ ಗುಣದ ಬಗೆಗೆ ವಿಮರ್ಶಿಸುವ ಸರ್ವಜ್ಞ, ಹೆಣ್ಣನ್ನು ನಂಬುವುದರ ಬಗೆಗೆ ಸಂಕೇತಗಳ ಮೂಲಕ ವಿವರಿಸಿದ್ದಾನೆ. ಕೆರೆಗೂ, ಕೆರೆದಂಡೆಗೂ ಇರುವ ಹತ್ತುಗಡೆಯು, ಗಂಡುಹೆಣ್ಣಿನ ಪರಸ್ಪರ ಅವಲಂಬನೆ ದೈಹಿಕ ಸಂಬಂಧವನ್ನು ಸೂಚಿಸುತ್ತದೆ. ಏರಿ ಅಂದರೆ ಕೆರೆಯ ದಂಡೆಯ ಮೇಲಿನ ಪಂಜು, ಈ ಪಂಜಿನ ಪಡಿನೆಳಲು ನೀರಿನಲ್ಲಿ ಒಂದೇ ಕಡೆಗೆ ಇರುವುದಿಲ್ಲ. ಗಾಳಿಗೆ ನೀರಿನ ಅಲೆಗಳು ಬಂದಂತೆಯೇ, ಪಂಜಿನ ಬೆಳಕು ಕುಣಿದಾಡುತ್ತದೆ. ಆ ಪಂಜನ್ನು ಹೆಣ್ಣಿನ 'ಚಂಚಲ ಚಿತ್ತತೆ'ಯನ್ನು ಪ್ರತಿನಿಧಿಸುತ್ತದೆ. ಅವಳ ಒಲವು ತನಗಾಗಿಯೇ ಮಾತ್ರ ಮೀಸಲು ಎಂದು ನಂಬುವ ಗಂಡಿನ ಮರುಳುತನವನ್ನು ಹೊಳೆಯಿಸುತ್ತದೆ. ಮುಂದಿನ ವಚನದಲ್ಲಿ; ಮಾಳಿಗೆ ಇರುವ ಮನೆಯ ಮೇಲೆ ಒಣ ಹಾಕಿದ ಜೋಳ ಬಿಸಿಲಿಗೆ ಮೊಳೆತು ತೆನೆಯಾಗುವುದೇ? ಅದೇರೀತಿ ಒಂದು ಹೆಣ್ಣು ತನ್ನನ್ನೇ ಮೆಚ್ಚಿರುವಳೆಂದು ಆಕೆಯ ಬೆನ್ನು ಹತ್ತಿ ತಿರುಗುವವನು ಉಣ್ಣೆಗೋಸ್ಕರ ದನ ಬೆನ್ನುಹತ್ತಿ ತಿರುಗುವ ಬೆಳ್ಳಕ್ಕಿಯಂತೆ ಎಂದು ಉಪಮೆ ನೀಡಿದ್ದಾನೆ.

ಅಲ್ಲ ಸಿಹಿಯಾದಂದು ನೆಲ್ಲಿ ಹಣ್ಣಾದಂದು
ಕಲ್ಲು ಪ್ರತಿಮೆಗಳು ಕುಣಿದಂದು, ಸತಿಯರ
ಸೊಲ್ಲು ನಂಬುವುದು ಸರ್ವಜ್ಞ.

ನೀರಿನಲ್ಲಿ ಮೀನಿನ ಹೆಜ್ಜೆಯನ್ನು, ಕೈಯಲ್ಲಿ ಗಾಳಿಯನ್ನು ಹಿಡಿಯಬಹುದೇ ವಿನಃ ಹೆಣ್ಣಿನ ಮನಸ್ಸನ್ನು ಅರ್ಥೈಸಿಕೊಳ್ಳಲಾಗದೆಂದು ಜನಪದರ ಅಭಿಪ್ರಾಯವನ್ನು ಇಲ್ಲಿ ಸರ್ವಜ್ಞ ಇನ್ನೊಂದು ಬಗೆಯಲ್ಲಿ ತಿಳಿಸಿದ್ದಾನೆ. ತಿನ್ನಲು ಬಳಸಬಹುದಾದ 'ಅಲ್ಲ' ಪದಾರ್ಥವು ಸಿಹಿಯಾಗಲೂಬಹುದು, ನೆಲ್ಲೀಕಾಯಿ ಹಣ್ಣಾಗಲೂ ಬಹುದು, ಕಲ್ಲಿನ ಪ್ರತಿಮೆಗಳು ಕುಣಿದಾಡಬಹುದು ಆದರೆ ಹೆಣ್ಣಿನ ಮಾತನ್ನು ನಂಬಲು ಸಾಧ್ಯವಿಲ್ಲವೆಂದ ಹೇಳಿದ್ದಾನೆ.

## ೫.೮. ಶಕುನಗಳು :

ಶಕುನ ನಿಮಿತ್ತಾದಿ ಸಂಗತಿಗಳು ಮೂಢನಂಬಿಕೆಗಳಲ್ಲಿ ಬಹುಭಾಗವನ್ನೊಳಗೊಳ್ಳುತ್ತವೆ. ಮತದ ಪರಿಧಿಯಲ್ಲಿ ಬರುವ ಶಕುನಗಳು ಕೆಲವು; ಆದರ ಗಡಿಯಾಚೆಗೆ ನಿಲ್ಲುವವು ಕೆಲವು; ವಸ್ತುವಿಸ್ತಾರವಾದಷ್ಟೇ ಶಕುನಗಳ ವಿಸ್ತಾರವೂ ಕಣ್ಣು ಕುಕ್ಕುವಂತಹದ್ದಾಗಿವೆ. ಪಶು-ಪಕ್ಷಿ, ಗಿಡ-ಬಳ್ಳಿ, ಬೆಂಕಿ ಮೊದಲಾದ ತಿರೆಯ ಮೇಲಣ ವಸ್ತು ಜೀವರಾಶಿಗಳೆಲ್ಲಾ ಶಕುನ ಮಾಧ್ಯಮಗಳಾಗಬಹುದು. ಶುಭ ಶಕುನದಿಂದ ಕೊನೆಗೆ ಸತ್ತವರಿಗೆ ಭವಿಷ್ಯ ಜ್ಞಾನ ಲಭಿಸುತ್ತದೆಂಬ ನಂಬಿಕೆಯುಂಟು.

ವ್ಯಕ್ತಿಯ ಆಸೆ, ಆಮಿಷ, ಕೊರತೆ, ಧೈರ್ಯ, ಭಯ, ಭೀತಿ ಇತ್ಯಾದಿಗಳ ಮಾನಿಸಿಕ ಸ್ಥಿತಿಗತಿಗಳು ಶಕುನಗಳ ಉಗಮಕ್ಕೆ ಕಾರಣವಾಗಿವೆ. ಆಗಿ ಹೋದ ಮತ್ತು ಆಗಬಹುದಾದ ಘಟನೆಗಳ ಜಯಾಪಜಯಗಳ ಸೂಚನೆಗಳನ್ನು ಈ ಶಕುನಗಳು ಪ್ರತಿಬಿಂಬಿಸುತ್ತವೆ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೧೦೮). ಜನಪದರು ಶಕುನಗಳಲ್ಲಿ;೧)ಶುಭ ಶಕುನ,೨)ಅಶುಭ ಶಕುನ ಎಂಬ ಎರಡು ವಿಧಗಳನ್ನು ಕಂಡುಕೊಂಡಿದ್ದಾರೆ.

ಶುಭ ಶಕುನಕ್ಕೆ ಉದಾಹರಣೆಗಳು: ಗುಬ್ಬಿ ಮಣ್ಣಿನ ಸ್ನಾನ ಮಾಡಿದರೆ ಮಳೆ ಬರುವುದು, ಹೆಣ ಮತ್ತು ತುಂಬಿದ ಕೊಡ ಎದುರಿಗೆ ಬರುವುದು, ಮಾತನಾಡುವಾಗ ಹಲ್ಲಿ ಲೊಚಗುಟ್ಟುವುದು ಮುಂತಾದವು. ಅಶುಭ ಶಕುನಕ್ಕೆ ಉದಾಹರಣೆಗಳು : ಶ್ರಾದ್ಧಾದಿನ ಕಾಗೆಗಳು ಹಿಂಡೆ ಕೂಳು ತಿನ್ನಲಿಲ್ಲವೆಂದರೆ; ಸತ್ತವರು ಬದುಕಿದ್ದಾಗ ಧಾರಾಳಿಗಳಾಗಿರಲಿಲ್ಲವೆಂಬ ಅರ್ಥ ಮಾಡುವುದು, ಪ್ರಯಾಣ ಕಾಲದಲ್ಲಿ ಕಾಗೆ ಎಡದಿಂದ ಬಲಕ್ಕೆ ಹಾರಿ ಹೋಗುವುದು, ಬರಿದಾದ ಪಾತ್ರೆ ಎದುರಾಗುವುದು, ಮದುವೆಯಲ್ಲಿ ಬಾಸಿಂಗ ಮುರಿಯುವುದು, ಮಾತನಾಡುವಾಗ ಯಾರಾದರೂ ಮಧ್ಯ ಬಾಯಿ ಹಾಕುವುದು, ಗಂಡಸಿಗೆ ಎಡಗಣ್ಣು ಹಾರುವುದು ಮುಂತಾದವುಗಳು (ಜಾನಪದ ಅಧ್ಯಯನ,ಪು. ೩೫೪).

ಸರ್ವಜ್ಞನ ವಚನಗಳಲ್ಲಿ ಕೇವಲ ಶೀನಿಗೆ ಸಂಬಂಧಿಸಿದ ಶಕುನಗಳು ವ್ಯಕ್ತವಾಗಿರುವುದನ್ನು ನೋಡ ಬಹುದು.

ಏನು ಮನ್ನಿಸದಿರಲು ಶೀನು ಮನ್ನಿಸಬೇಕು
ಶೀನು ಮನ್ನಿಸದೇ ಹೋಗಿಹರೇ । ಇಹದಲ್ಲಿ
ಹಾನಿಯೇ ಬಕ್ಕು ಸರ್ವಜ್ಞ.

ಜೀವನದಲ್ಲಿ ಯಾವುದನ್ನು ನಂಬದಿದ್ದರೂ ಪರವಾಗಿಲ್ಲ ಆದರೆ, ಮೂಗಿನಿಂದ ಬರುವ ಶೀನುಗಳನ್ನು ನಂಬಲೇ ಬೇಕು; ಒಂದು ವೇಳೆ ಶೀನಿನಿಂದಾಗುವ ಶಕುನ-ಅಪಶುಕನಗಳ ಕಡೆಗೆ ಗಮನಹರಿಸಿ, ನಂಬದಿದ್ದರೆ ಕೆಲವೊಮ್ಮೆ ಒಳಿತು ಅಥವಾ ಕೆಡುಕುಗಳು ಸಂಭವಿಸುವುದುಂಟು. ಆದ್ದರಿಂದ ಶೀನಿನ ಬಗೆಗೆ ನಂಬಿಕೆ ಅಗತ್ಯವೆಂದಿದ್ದಾನೆ.

ಒಮ್ಮೆ ಶೀತರೆ ಹೊಲ್ಲ ಇಮ್ಮೆ ಶೀತರೆ ಲೇಸು
ಕೆಮ್ಮಿ ಕೇಕರಿಸಿ ಉಗುಳುವಾ ಲೇಸು । ಆ
ಬೊಮ್ಮಗೂ ಇಲ್ಲ ಸರ್ವಜ್ಞ.

ಸಾಮಾನ್ಯವಾಗಿ ಕೆಲಸ ಕಾರ್ಯಗಳಿಗೆಂದು ಹೊರಟಾಗ ಯಾರಾದರೊಬ್ಬರು ಒಮ್ಮೆ ಶೀನಿದರೆ ಅಶುಭ. ತಕ್ಷಣ ಎರಡು ಬಾರಿ ಶೀನಿದರೆ ಶುಭವಾಗುತ್ತದೆಂಬುದು ನಂಬಿಕೆಯುಂಟು. ಇಂತಹ ಶೀನುವ ಸಹಜ ಕ್ರಿಯೆ ಯಾದ ಶಕ್ತಿಯು ಹಾಗೂ ಕ್ಯಾಕರಿಸಿ ಉಗುಳುವ ಆನಂದ ಆ ಬ್ರಹ್ಮದೇವನಿಗೂ ಇಲ್ಲದಿರುವುದನ್ನು ಕಂಡು ಕೊಂಡ ಸರ್ವಜ್ಞ ಬಹಳ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾನೆ.

ತಾನಕ್ಕು, ಪರರಕ್ಕು ಶ್ವಾನಗಾರ್ಧಭನಕ್ಕು
ವಾನರನು ಅಕ್ಕು ಪಶುವಕ್ಕು ಪಯಣದಲಿ ।
ಶೀನೆ ಭಯವಕ್ಕು ಸರ್ವಜ್ಞ.

ಎಡಬಲವು ಎನಬೇಡ । ಒಡನೆ ಬಹನೆನಬೇಡ
ಕಡುದೂರ ಸಾರ್ದೆನೆನಬೇಡ । ಶೀತ ರೊಂ
ದಡಿಯನಿಡಬೇಡ ಸರ್ವಜ್ಞ.

ಪ್ರಯಾಣಕ್ಕೆಂದು ಹೊರಟು ನಿಂತ ವ್ಯಕ್ತಿಯಾಗಲಿ ಅಥವಾ ಇತರರಾಗಲಿ ಎದುರಿಗೆ ನಾಯಿ, ಕತ್ತೆ ಮುಂತಾದ ಪಶುಗಳಾಗಲಿ ಶೀನಿದರೆ ಅಪಾಯ ಉಂಟಾಗುವುದರಲ್ಲಿ ನಿಜವಿಲ್ಲದಿಲ್ಲ. ಆಗ ತುಸುಹೊತ್ತು ಪ್ರಯಾಣ ನಿಲ್ಲಿಸಬೇಕೆಂಬುದು ಸರ್ವಜ್ಞನ ನಂಬಿಕೆ. ಎರಡನೆಯ ವಚನದಲ್ಲಿ ಇದೇ ಆಶಯವು ಅಭಿವ್ಯಕ್ತ ವಾಗಿರುವುದನ್ನು ನೋಡಿದಾಗ ನಾವು ಪ್ರಯಾಣ ಮಾಡುವಾಗ ಎಡಭಾಗದಲ್ಲಿ ಯಾರಾದರೂ ಶೀನಿದರೂ ಅದು ಅಪಶಕುನವೆಂಬುದೇ ಅರ್ಥ.

ಸರ್ವಜ್ಞ ಶಕುನಗಳನ್ನು ನಂಬುತ್ತಾನೆಂದು ಹೇಳಬಹುದು. ಅದೇರೀತಿ ಜನಪದರು ಅನೇಕ ಶಕುನಗಳನ್ನು ನಂಬುತ್ತಾ ಬಂದಿದ್ದಾರೆ. ವಾಸ್ತವಿಕತೆ ಮತ್ತು ಯಥಾರ್ಥತೆಯ ದೃಷ್ಟಿಯಿಂದ ನೋಡಿದಾಗ ಶಕುನಗಳಲ್ಲಿ ಕೆಲವು ದಿಟವೆಂದು ಕೆಲವು ಸಟೆಯೆಂದೂ ಒಪ್ಪಿ ಕೊಳ್ಳಬೇಕಾಗುತ್ತದೆ. ಎಲ್ಲೆಲ್ಲಿ ಕಾರ್ಯಕಾರಣ ಸುಸಂಬದ್ಧವಾಗಿ ತೋರುತ್ತದೆಯೋ ಅವೆಲ್ಲಾ ದಿಟ ಶಕುನ ಗಳೆಂದು ಅವು ತೋರದಿದ್ದರೆ ಸಟೆಯ ಶಕುನಗಳೆಂದೂ ಕರೆಯಬಹುದು.

## ೫.೯. ನಡಾವಳಿಕೆಗಳು :

ಬದುಕಿನಲ್ಲಿ ಉತ್ತಮ ಸಂಸ್ಕಾರದ ಎಲ್ಲಾ ಘಟ್ಟಗಳನ್ನು ಹಾಗೂ ಪರಂಪರೆಯಿಂದ ಬಂದ ಸಂಸ್ಕೃತಿಗಳನ್ನು ರೂಢಿಸಿಕೊಂಡ ಮನುಷ್ಯ ಯೋಗ್ಯ ನಡುವಳಿಕೆಯವನಾಗಿ ರೂಪುಗೊಂಡಿರುತ್ತಾನೆ. ಆಯಾ ಕಾಲದ ರೀತಿನೀತಿ, ಧರ್ಮ ಮುಂತಾದವುಗಳು ಮನುಷ್ಯನ ನಡಾವಳಿಕೆಗಳಲ್ಲಿ ಬದಲಾವಣೆಯನ್ನು ತರುತ್ತವೆ. ಹೀಗಾಗಿ ವ್ಯಕ್ತಿಯ ಬದುಕು ಹುಟ್ಟಿನಿಂದ ಹಿಡಿದು, ಸ್ಮಶಾನದವರೆಗೆ ಒಂದಲ್ಲಾ ಒಂದು ಆಚರಣೆಯಲ್ಲಿ ಬದ್ಧ ವಾಗಿರುತ್ತದೆ. ಇಂತಹ ನಿಯಮಬದ್ಧ ನಡಾವಳಿಕೆಗಳ ಬದುಕು ಸರ್ವಜ್ಞನ ವಚನಗಳಲ್ಲಿ ಹೇಗೆ ಅಭಿವ್ಯಕ್ತವಾಗಿದೆಯೆಂಬುದನ್ನು ಜಾನಪದ ಅಂಶಗಳೊಂದಿಗೆ ನೋಡುವುದು ಇಲ್ಲಿಯ ಕುತೂಹಲದ ವಿಚಾರವಾಗಿದೆ.

ಈ 'ನಡಾವಳಿಕೆ' ಎಂಬುದಕ್ಕೆ ಪರಂಪರೆಯಿಂದ ಬಂದ ನಡತೆ, ನಡೆ-ನುಡಿ, ಆಚಾರ, ವ್ಯವಹಾರ, ವರ್ತನೆ, ರೂಢಿಪದ್ಧತಿ, ಸಂಪ್ರದಾಯ ಮುಂತಾದ ಅರ್ಥಗಳೊಂದಿಗೆ ಹೋಲಿಸಬಹುದಾಗಿದೆ. ನಡತೆಯೇ ಸಂಪತ್ತು. ಇದು ಎಲ್ಲಾ ಸಂಪತ್ತಿಗಿಂತ ಶ್ರೇಷ್ಠ. ಮಾನವ ಸಮಾಜದಲ್ಲಿ ಇತರರೊಡನೆ ಕೂಡಿ, ಬೆರೆದು ಬದುಕು ಸಾಗಿಸುವಾಗ ಅವನ ನಡತೆಯಲ್ಲಿ ಒಂದು ಕ್ರಮಬದ್ಧತೆ ಇರುತ್ತದೆ (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೨೪೬).

'ಜೀವನದಲ್ಲಿ ನೀತಿಯನ್ನು ಉಪದೇಶಿಸಬಹುದು. ಆದರೆ ನಡತೆಯನ್ನು ಕೊಡಲಾರೆವು' ಎಂಬ ಲೋಕೋಕ್ತಿಯಂತೆ ಬದುಕಿನಲ್ಲಿ ಒಬ್ಬರ ನಡುವಳಿಕೆ ಮತ್ತೊಬ್ಬರಲ್ಲಿ ಇರಲಾರದು. ಪ್ರತಿಯೊಬ್ಬರ ನಡುವಳಿಕೆಯು ಅವನ ಕಲಿಕೆ, ಪರಿಸರ, ನಂಬಿಕೆ,ಮನೋಭಾವಗಳನ್ನು ಅವಲಂಬಿಸಿರುತ್ತದೆ (ಬದುಕು ನನ್ನ ದೃಷ್ಟಿಯಲ್ಲಿ, ಪು.೭೩). ಜನಪದ ನಡಾವಳಿಗಳನ್ನು ಕುರಿತು W.G. Sumner ಅವರು "The folkways at a time provide for all the needs of life them and there. They are uniform, universal in the group imperative and invariable. As time goes on, the folkways become more and more arbitrary, poritive and imperative (W.G. Sumner, Folkways, P.2, 1940). ನಡಾವಳಿಗಳು ಮನುಷ್ಯನಿಗೆ ಅಂದಂದಿನ ಅವಶ್ಯಕತೆಗಳನ್ನು ಪೂರೈಸುವುದರ ಜೊತೆಗೆ ಅವನ ಬದುಕನ್ನು ನಿಯಂತ್ರಿಸುತ್ತವೆ. ಅವನನ್ನು ಸಾಮಾಜಿಕ ಬದ್ಧತೆಗೆ ಒಳಪಡಿಸುತ್ತವೆ (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೨೪೭).

ಜಾನಪದರ ಸಮಾಜದಲ್ಲಿ ಯಾವ್ಯಾವ ಕೆಲಸಗಳನ್ನು ಯಾರು ಯಾರು ಮಾಡಬೇಕೆಂಬ ಕಟ್ಟುನಿಟ್ಟಿನಲ್ಲಿ ಅವರ ನಡುವಳಿಕೆಗಳು ಹೊರಬರುತ್ತವೆ. ಪರಸ್ಪರ ಹೊಂದಾಣಿಕೆ, ಒಡಂಬಡಿಕೆ, ಸಹಕಾರ, ಸಹಜೀವನ ಮುಂತಾದವುಗಳು ಮನುಷ್ಯನ ನಡಾವಳಿಯಲ್ಲಿ ಇರಬೇಕೆಂಬುದು ಅವರ ಆಶಯಗಳಲ್ಲೊಂದು.

ಜಾನಪದರು ಕುಶಲೋಪಚಾರ ಮಾತನಾಡುವಾಗ ಸಹಜವಾಗಿಯೇ ಮತ್ತೊಬ್ಬನ/ಳನ್ನು ಕುರಿತು ಅವನ/ಳ ನಡತೆ ಚೆನ್ನಾಗಿಲ್ಲ ಅಥವಾ ಚೆನ್ನಾಗಿದೆ; ಎಂದೆಲ್ಲಾ ಮಾತನಾಡುವುದನ್ನು ನಾವು ಕೇಳಿರುತ್ತೇವೆ. ಹಿರಿಯರಿಗೆ ಕಿರಿಯರು ಗೌರವಾದರಗಳನ್ನು ನೀಡಬೇಕೆಂಬುದು ಅವರ ಕಟ್ಟುನಿಟ್ಟು. ಇಲ್ಲಿ ವ್ಯಕ್ತಿಯ ಜ್ಞಾನ, ಸ್ಥಾನಮಾನ, ಆರ್ಥಿಕ ಪರಿಸ್ಥಿತಿ ಬರುವುದಿಲ್ಲ. ಉತ್ತಮ ನಡುವಳಿಕೆಯುಳ್ಳವನಿಗೆ ಗ್ರಾಮೀಣ ಪ್ರದೇಶದಲ್ಲಿ ಜನರು ತುಂಬಾ ಗೌರವಾಧರಗಳನ್ನು ತೋರಿಸುತ್ತಾರೆ. ಆದ್ದರಿಂದ ನಡತೆಯೇ ಮನುಷ್ಯನ ಯೋಗ್ಯತೆಯ ನಿರ್ಣಯದ ಒರೆಗಲ್ಲು, ಧನ ಸಂಪಾದನೆಗಿಂತಲೂ ಈ ನಡತೆ ಸಂಪಾದನೆ ಬಹಳ ಕಷ್ಟ. ಜನಪದರಲ್ಲಿನ ವ್ಯಕ್ತಿಗಳಲ್ಲಿನ ಸಂಬಂಧಗಳು ಸಾಮೂಹಿಕತೆಯ ಮೂಲಭೂತ ಸತ್ಯಗಳು. ಪ್ರೀತಿ, ವಿಶ್ವಾಸ, ಸಹನೆ, ಸೌಹಾರ್ದಗಳನ್ನು ಒಬ್ಬರಿಂದೊಬ್ಬರಲ್ಲಿ ಕಂಡುಕೊಂಡು ಆಂತರಿಕ ಬದುಕನ್ನು ಎಚ್ಚರಿಸಿಕೊಳ್ಳುತ್ತಾರೆ. ಪರಕ್ಕೆ ಹೊರತಾದ ಇಹದ ಉತ್ತಮ ನಡುವಳಿಕೆಗೆ ಜಾನಪದರ ಮೊದಲ ಆದ್ಯತೆ. ''ಮಣ್ಣಾಗಿಯೇ ಈ ಜಲುಮ ಮರ್ತ್ಯಗೆದ್ದಿರಬೇಕು'' ಎನ್ನುವ ಛಲ ಅವರದ್ದಾಗಿದೆ.

ಮಂದಿಮಕ್ಕಳೊಳಗ ಛಂದಾಗಿ ಹೊಂದಿರಬೇಕು  
ನಂದಿಯ ಶಿವನ ದಯದಿಂದ ಹೋಗ್ವಾಗ  
ಮಂದಿ ಬಾಯಾಗ ಇರಬೇಕು.

ಲೋಕದಾಗಿರುವನಕ ಬೇಕಾಗಿ ಇರಬೇಕ  
ಸಾಕಾಗಿ ಶಿವನ ಸದರೀಗೆ ಹೋಗ್ವಾಗ  
ಎಲ್ಲರೂ ಬರತಾರ ಕಳಿಸಾಕ.

ಬದುಕಿನಲ್ಲಿ ಪ್ರತಿಯೊಬ್ಬರ ಬಾಯಾಗ ಕೊಂಡಾಡಿ ಹರಸುವಂತೆ ಹಾಗೂ ಮನದೊಳಗೆ ನೆನೆಯುವಂತೆ ಬಾಳಬೇಕು '' ಸತ್ತಾಗ ಏನೂ ಹೊತ್ತಕೊಂಡು ಹೋಗಲ್ಲ, ನಮ್ಮಿಂದೆ ಬರೋದ ಬರೀ ಒಳ್ಳೇದು ಕೆಟ್ಟದ್ದು ಅಷ್ಟೆ'' ಎಂಬ ಮಾತುಗಳಂತೆ ಮೂರುದಿನು ಬವಣೆ ಬದುಕಿನಲ್ಲಿ ಎಲ್ಲರಿಗೂ ಚೆಂದಾಗಿರಬೇಕು ಎಂಬತಂಹ ಮಾತುಗಳನ್ನು ಜನಪದ ಸಮಾಜದಲ್ಲಿ ಹೆಚ್ಚಾಗಿ ಕೇಳುತ್ತೇವೆ. ಇಂದಿನ ಸಂದರ್ಭದಲ್ಲಿ ಜನಪದರ ಗೀತೆಗಳು ಹಾಗೂ ಸರ್ವಜ್ಞನ ವಚನಗಳು, ನಡಾವಳಿಕೆಯ ಬಗ್ಗೆ ಹೆಚ್ಚು ಉಪಯುಕ್ತವಾಗಿವೆ. ಮನುಷ್ಯ ಸತ್ತ ನಂತರ ಆತ ಎಲ್ಲರೂ ಹೊಗಳು ವಂತಹ ಕೆಲಸ ಮಾಡಿದ್ದರೆ, ಅವನ ನಡುವಳಿಕೆಯ ಗುಣಗಾನ ಮಾಡುತ್ತಿರೆ. ಇಲ್ಲದಿರೆ ತೆಗಳುತ್ತಾರೆ. ಸರ್ವಜ್ಞನು ಶಿಷ್ಟ ಧರ್ಮದ ತತ್ವಗಳ ಹಿನ್ನೆಲೆಯಲ್ಲಿ ತ್ರಿಪದಿ ಸಾಹಿತ್ಯ ಸೃಷ್ಟಿಸಿದ್ದರೂ ಪರಂಪರೆಯಿಂದ ಬಂದ ಅನೇಕ ನಿಯಮ,ನಂಬಿಕೆ, ನಡವಳಿಕೆಯ ಗುಣಗಳ ಬಗೆಗಿರುವ ಕಾಳಜಿಯನ್ನು ವ್ಯಕ್ತಮಾಡಿದ್ದಾನೆ. ಸರ್ವಜ್ಞನ ವಚನಗಳು ಸೃಷ್ಟಿಯಾಗಿರುವುದೇ ಜನಸಾಮಾನ್ಯರಿಗಾಗಿ ಹೀಗಾಗಿ ಆತನು ಜನಸಾಮಾನ್ಯರ ನಡಾವಳಿಕೆಗಳನ್ನು ತಿದ್ದಲು ಯತ್ನಿಸಿದ್ದಾನೆ. ಕೆಲವು ಕಡೆ ಟೀಕಿಸಿ ದ್ದಾನೆ. ಮತ್ತು ಕೆಲವು ಕಡೆ ಪ್ರೋತ್ಸಾಹದ ಮಾತುಗಳನ್ನಾಡಿದ್ದಾನೆ.

ತಂದೆ ತಾಯಿಗಳ ಘನದಿಂದ ವಂದಿಸುವಂಗೆ
ಬಂದ ಕುತ್ತುಗಳು ಬಯಲಾಗಿ ಸ್ವರ್ಗವದು
ಮುಂದೆ ಬಂದಕ್ಕು ಸರ್ವಜ್ಞ.

ಮುನಿವಂಗೆ ಮುನಿಯದಿರು ಕಿನಿವಂಗೆ ಕಿನಿಯದಿರು
ಮನಸಿಜಾರಿಯನು ಮರೆಯದಿರು, ಶಿವ ಕೃಪೆಯು
ಘನಕ್ಕೆ ಘನವಕ್ಕು ಸರ್ವಜ್ಞ.

ಕಾಣದ ದೇವರನ್ನು ಪೂಜಿಸುವುದಕ್ಕಿಂತ ಕಣ್ಣೆದುರಿಗಿರುವ ಜನ್ಮ ನೀಡಿದ ತಂದೆ-ತಾಯಿಗಳೇ ಪ್ರತ್ಯಕ್ಷ ದೇವರೆಂದು ದಿನನಿತ್ಯ ಅವರ ಪಾದಗಳನ್ನು ಮುಟ್ಟಿ ನಮಸ್ಕರಿಸಬೇಕೆಂಬುದೇ ಮನುಷ್ಯನ ಉತ್ತಮ ನಡತೆಗಳಲ್ಲೊಂದು. ಅದೇರೀತಿ ಅಪಕಾರ ಮಾಡಿದವಗೆ ಪ್ರತಿಯಾಗಿ ಪ್ರತಿಕ್ರಿಯೆ ತೋರದೆ, ಉಪಕಾರ ಮಾಡಬೇಕು. ಕೋಪಿಸಿಕೊಂಡವರ ಮೇಲೆ ಕೋಪಿಸಿಕೊಳ್ಳದಿರಬೇಕೆಂಬ ಸಿದ್ಧಾಂತಗಳನ್ನು 'ತಾಳಿದವನು ಬಾಳಿಯಾನು', 'ನಿಧಾನವೇ ಪ್ರಧಾನ' ಎಂಬ ನಾಣ್ನುಡಿಗಳ ಹಿನ್ನೆಲೆಯಲ್ಲಿ ಸರ್ವಜ್ಞ ಹೇಳಿದ್ದಾನೆ.

ನಾವಾಡುವ ಮಾತುಗಳು ನಮ್ಮ ನಡವಳಿಕೆಗಳನ್ನು ಪ್ರತಿಬಿಂಬಿಸುತ್ತವೆ. ಹಾಗಾದರೆ ನಾವಾಡುವ ಮಾತುಗಳು ಹೇಗಿರಬೇಕು ? ಅಂದರೆ; ''ಮಾತಾಡಿದರೆ ಹೋಯ್ತು, ಮುತ್ತು ಜಾರಿದರೆ ಹೋಯ್ತು'', ''ನಾಲಿಗೆ ಒಳ್ಳೆಯದಿದ್ದರೆ ನಾಡೆಲ್ಲಾ ಒಳ್ಳೆಯದು'' ಎಂಬ ಜನಪದರ ನಾಣ್ನುಡಿಗಳಂತೆ ಸರ್ವಜ್ಞನೂ ಸಹ;

ಮಾತಿನಿಂ ನಗೆನುಡಿಯು, ಮಾತಿನಿಂ ಹಗೆ ಕೊಲೆಯು
ಮಾತಿನಿಂ ಸರ್ವ ಸಂಪದವು ಲೋಕಕ್ಕೆ
ಮಾತೇ ಮಾಣಿಕವು ಸರ್ವಜ್ಞ.

ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ
ಹೊತ್ತಾಗಿ ನುಡಿದ ಮಾತು ಕೈಜಾರಿದ
ಮುತ್ತಿನಂತಿಹುದು ಸರ್ವಜ್ಞ.

ವಿಶೇಷವಾಗಿ ಲೋಕದಲ್ಲಿ ಜನರು ಎಚ್ಚರವಿಲ್ಲದೆ ಮಾತನಾಡುವಾಗ ಮುಂದೊದಗಬಹುದಾದ ತೊಂದರೆಗಳಿಗೆ ಗುರಿಯಾಗುತ್ತಾರೆ. ಕೆಲವೊಮ್ಮೆ ಮಾತುಗಳು ಕೋಪದ ಕಿಡಿಯಾಗಿ ಸಂಘರ್ಷಕ್ಕೆಳೆಯುತ್ತವೆ. ಕೊನೆಗೆ ಸಾವಿನ ದವಡೆಗೆ ನೂಕುತ್ತವೆ. ಉತ್ತಮ ನಡೆನುಡಿ ಸಂಸ್ಕೃತಿಯನ್ನು ಬಲ್ಲವನು ಮಾತಿನಿಂದಾಗುವ ಅನಾಹುತವನ್ನು ತಪ್ಪಿಸಬಲ್ಲನು.

ಕತ್ತಿಲಾದ ಗಾಯ, ಮತ್ತಿರದೆ ಮಾಯುವುದು
ಸುತ್ತಲಾಡುತಿಹ ಜಿಹ್ವೆಯ ಗಾಯವು
ನಿತ್ಯಕು ಬಿಡದು ಸರ್ವಜ್ಞ.

ಸುರಿಗೆಯಲಿ ಇರಿದೇರು । ಬರಿಯೆ ಒಂದೆಡಗಹುದು
ಜರಿವ ನಾಲಿಗೆಯಲಿರಿದರೆ ಸರ್ವಾಂಗ
ಬರೆಯ ಕೊಟ್ಟಂತೆ ಸರ್ವಜ್ಞ.

ನಮ್ಮ ನಡುವಳಿಕೆಗಳು ನಾವಾಡುವ ಮಾತುಗಳಲ್ಲಡಗಿದೆಂಬುದರ ಕುರಿತು ಈ ಮೇಲಿನ ವಚನಗಳನ್ನು ಗಮನಿಸಲಾಗಿದೆ. ಇತರರನ್ನು ಹೀನಾಯವಾಗಿ ನಿಂದಿಸುವ ನಾಲಿಗೆ ಮಾಡುವ ಹಿಂಸೆ ಎಷ್ಟು ಘನಘೋರವಾದುದೆಂಬ ವಿಚಾರ ಮೇಲಿನ ವಚನಗಳಲ್ಲಿ ಪ್ರತಿಫಲಿತವಾಗಿದೆ. ಚೂರಿಯೊಂದರ ಗಾಯ ದೇಹದ ಒಂದೆಡೆ ಯಲ್ಲಿ ಮಾತ್ರವಾದರೆ, ಜರಿವ ನಾಲಿಗೆಯ ಆಘಾತ ಅದಕ್ಕೆ ಬಲಿಯಾದ ವ್ಯಕ್ತಿಯ ಮನಸ್ಸನ್ನೆಲ್ಲಾ ಆವರಿಸುತ್ತದೆ. ಸರ್ವಾಂಗವೂ ಬರೆಯ ಕೊಟ್ಟಂತಾಗುತ್ತದೆ (ಸರ್ವಜ್ಞ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು. ೧೭೮). ಹೀಗೆ ಹಿಂಸೆಕೊಡುವ ಹೀನ ನಡುವಳಿಕೆ ಮನುಷ್ಯನಲ್ಲಿರಬಾರದೆಂಬುದು ಸರ್ವಜ್ಞನ ಅಭಿಮತ.

ಕಣ್ಣುನಾಲಿಗೆ ಮನವು ತನ್ನದೆಂದೆನಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನ ಕೊಲ್ಲುವವು ಸರ್ವಜ್ಞ.

ಜನ್ಮ ಜಾತವಾಗಿ ಬಂದಿರುವ ಕಣ್ಣು,ನಾಲಿಗೆ ಮನದಲ್ಲಿ ವಿಶೇಷ ಶಕ್ತಿಗಳಿವೆ (ಸರ್ವಜ್ಞ ಸಮಾಜ ದರ್ಶನ, ಪು. ೧೮೬). ಇವುಗಳನ್ನು ಬೇಕಾದೆಡೆಗೆ ಹರಿಯಬಿಟ್ಟರೆ ಕೇಡುತಪ್ಪಿದ್ದಲ್ಲ. ಇವುಗಳನ್ನು ಪುಣ್ಯ ಕೃತ್ಯಗಳಿಗೆ ಪ್ರೇರಕವಾಗುವಂತೆ ಬಳಸಿಕೊಂಡಲ್ಲಿ, ಸದ್ಗತಿಗೆ ಸಹಾಯಕವಾಗುತ್ತದೆ. ವ್ಯಕ್ತಿ ಕುಟುಂಬದ ನಿಯಮಗಳನ್ನು ಮೀರಿ, ಅನೈತಿಕ ನಡುವಳಿಕೆಯಲ್ಲಿ ತೊಡಗಿದ್ದರೆ, ಭ್ರಷ್ಟನೆಂದು, ಕುಲದ ಹೆಸರನ್ನು ಕೆಡಿಸಿದವನೆಂದು ಜನಪದರು ಗುರುತಿಸಿ, ಅವನನ್ನು ಸಮಾಜದಿಂದ ಬಹಿಷ್ಕರಿಸುತ್ತಾರೆ. ಇಂತಹ ವ್ಯಕ್ತಿಗಳು ಸಾಮಾನ್ಯವಾಗಿ ಮಧ್ಯಪಾನ ಮಾಡುವುದು, ಪರಸ್ತ್ರೀಯರ ಸಂಗ ಬೆಳೆಸುವುದಾಗಿದೆ. ಅಂಥವರ ಸ್ಥಿತಿಯನ್ನು ಸರ್ವಜ್ಞ ಹೀಗೆ ಹೇಳುತ್ತಾ,

ಮಧ್ಯಪಾನವ ಮಾಡಿ, ಇದ್ದುದೆಲ್ಲವ ನೀಗಿ
ಬಿದ್ದು ಬರುವವನ ಸದ್ದಡಗಿ ಸಂತಾನ
ವೆದ್ದು ಹೋಗುವುದು ಸರ್ವಜ್ಞ.

ಪರಸ್ತ್ರೀಯ ಗಮನದಿಂ, ಪರಲೋಕದವರು ಹಾನಿ
ಸಿರಿ ತಗ್ಗಿ, ತಲೆಯು ತೊಲಗಿ ತಾ ರಾವಣಗೆ
ನರಲೋಕದಲ್ಲಿ ಸರ್ವಜ್ಞ.

ಮನುಷ್ಯನಿಗೆ ಮಧ್ಯಪಾನ ಎಂದಿನಿಂದ ಅಂಟಿದವು ಎಂದು ನಿರ್ಧರಿಸುವುದು ಬಿಕ್ಕಟ್ಟಿನ ಕೆಲಸ. ಈ ಮಧ್ಯಪಾನ ಮಾಡುವುದರಿಂದ ದೇಹದಲ್ಲಿರುವ ಹಲವಾರು ಅಂಗಾಂಶಗಳು ಘಾಸಿಗೊಳ್ಳುತ್ತವೆ. ವ್ಯಕ್ತಿಯಲ್ಲಿ ಪುರುಷ ಲಕ್ಷಣಗಳು ಅಳಿಸಿ, ಸಂತಾನ ಶಕ್ತಿಯು ಕಳೆದು ಹೋಗುವುದು. ಅಲ್ಲದೆ ನಂಬಿರುವ ಕುಟುಂಬಗಳೆಲ್ಲಾ ಬೀದೀಪಾಲಾಗುವುದುಂಟು. ಅದೇರೀತಿ ಹೆಣ್ಣಿನ ಆಸೆಗೊಳಗಾದ ಗಂಡು ಬೆಂಕಿಯಿಂದ ಸುಟ್ಟು ಕರಕಲಾದ ಬೆಣ್ಣೆಯಂತಾಗುವನು. ಅರಿತೂ ಅರಿತು ಒಮ್ಮೆ ಚಪಲಕ್ಕೆ ಬೆನ್ನು ಹತ್ತಿದರೆ, ಅಪಾರ ಅನರ್ಥಕ್ಕೆ ಆಮಂತ್ರಣ ನೀಡಿದಂತೆ ಇಂತಹ ನಡುವಳಿಕೆಯುಳ್ಳವರನ್ನು ವಿವೇಕವುಳ್ಳ ಜನರು ಎಂದಿಗೂ ಮೆಚ್ಚಿಕೊಳ್ಳುವುದಿಲ್ಲ.

ಸತ್ಯರಾ ನುಡಿ ತೀರ್ಥ ನಿತ್ಯರಾ ನಡೆ ತೀರ್ಥ
ಉತ್ತಮರ ಸಂಗವದು ತೀರ್ಥ ಹರಿವ ನೀ
ರೆತ್ತಣದು ತೀರ್ಥ ಸರ್ವಜ್ಞ.

ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ
ದುರ್ಜನರ ಸಂಗದೊಡನಾಟ ಬಚ್ಚಲಿನ
ರೊಜ್ಜಿನೊಳು ಬಿದ್ದಂತೆ ಸರ್ವಜ್ಞ.

ಸಮಾಜದಲ್ಲಿ ವ್ಯಕ್ತಿಯ ನಡುವಳಿಕೆ ನಿಗದಿಯಾಗುವುದು ಬಹುಮಟ್ಟಿಗೆ ಸಂಗ-ಸಹವಾಸ ಗಳಿಂದ. ಮನುಷ್ಯ ಸಂಘಜೀವಿ ಇತರರ ಸಹಾಯವಿಲ್ಲದಿದ್ದರೆ ಬದುಕು ನೀರಸವಾಗುವುದು. ಹಾಗಾದರೆ, ನಮ್ಮ ನಡುವಳಿಕೆಗಳನ್ನು ತಿದ್ದಿಕೊಳ್ಳಲು ಎಂಥವರ ಸಹವಾಸ ಬೇಕೆಂಬುದರ ಬಗೆಗೆ ಸರ್ವಜ್ಞ ಹೇಳಿದ್ದಾನೆ. ನದಿ ನೀರಿನಲ್ಲಿ ಮುಳುಮುಳುಗಿ ಶುದ್ಧ ತೀರ್ಥ ಸ್ನಾನವಾಯಿತೆಂದುಕೊಳ್ಳುವುದಕ್ಕಿಂತ ನಾವು ಸತ್ಯವಂತರ ಸಹವಾಸ ಮಾಡಿದಾಗ ಮನಸ್ಸು ಶುದ್ಧವಾಗುತ್ತದೆ (ನೂರೊಂದು ಚಿಂತನ, ಪು.೫೩).

ಅದೇರೀತಿ ಮುಂದಿನ ವಚನ; ಸಜ್ಜನರ ಸಹವಾಸದಿಂದ ಒಳ್ಳೆಯ ಸ್ಥಾನಮಾನಗಳು ಲಭಿಸುವವು. ಅನುಭಾವ ಹೆಚ್ಚಾಗುವುದು. ಜನಪದರು ಸಹ ಸಮಾಜದಲ್ಲಿನ ಉತ್ತಮ ವ್ಯಕ್ತಿಗೆ ಗೌರವಿಸುವುದನ್ನು ನೋಡಿದ್ದೇವೆ. ಅಲ್ಲದೆ ಮಾನಾಪಮಾನ ಮಾಡುವವರನ್ನು ಕಡೆಗಣಿಸಿರುವುದು ಕಂಡಿದ್ದೇವೆ. ಅವರು

ನೈತಿಕ ಮೌಲ್ಯಗಳನ್ನು ಹಣ, ಅಂತಸ್ತುಗಳಿಂದ ಅಳೆಯದೇ ಸುವಿಚಾರಗಳಿಂದೊಡಗೂಡಿದ ವ್ಯಕ್ತಿಯನ್ನು ಅವನ ನಡುವಳಿಕೆಯಿಂದ ಅಳೆಯುತ್ತಾರೆ. ಆದ್ದರಿಂದ ದುರ್ಜನರ ಸಹವಾಸ ದುಃಖದ ಮಡಿಲಿಗೆ ತಳ್ಳಿದರೆ, ಸಜ್ಜನರ ಸಹವಾಸ ಸಂತೋಷದ ನಗೆಗಡಲಿನಲ್ಲಿ ತೇಲಿಸುತ್ತದೆಂಬ ಭಾವನೆಯನ್ನು ಸರ್ವಜ್ಞ ಇಲ್ಲಿ ಸ್ಪಷ್ಟಪಡಿಸಿದ್ದಾನೆ (ನೂರೊಂದು ಚಿಂತನ, ಪು.೫೪).

ಹೀಗೆ ಅಂದಿನ ಜನ ಜೀವನದ ಬಗೆಗೆ ಸರ್ವಜ್ಞನ ಅರಿವು ಅಗಾಧವಾದುದು. ಆತನು ನಡಾವಳಿಕೆಗಳನ್ನು ತಿದ್ದುವಲ್ಲಿ ಅನುಭವದ ವಿವೇಕವನ್ನು ಬೋಧಿಸಿದ್ದಾನೆ. ತನ್ನ ಕಾಲದಲ್ಲಿದ್ದ ಜನರ ನಡವಳಿಕೆಯನ್ನು ತಿದ್ದಲು ಹೆಣಗಾಡಿದ್ದಾನೆ. ಆತ ವಿರಕ್ತನಾಗಿದ್ದರೂ ಖಂಡಿತವಾದಿ, ನ್ಯಾಯನಿಷ್ಠೂರಿ. ಅಂತೆಯೇ ಲೋಕವಿರೋಧಿಯಾಗಿದ್ದರೂ ನಡಾವಳಿಕೆಯನ್ನು ತಿದ್ದುವಲ್ಲಿ ಹಿಂಜರಿದವನಲ್ಲ. ದುರುಳರ ಸರಸವೇ ನಂಜು, ದುರ್ಜನರ ಕರಮುಖವು ಶಿರಪಾದ ನಿತ್ಯವೂ ನಂಜು ಹಾಗೂ ಅವರ ಇರವೆಲ್ಲವೂ ನಂಜಾಗಿರುವುದರಿಂದ ಅಲ್ಲಿ ಅಲ್ಲದಹುದೆಂಬ ಅಜ್ಞಾನಿಯೊಡನಾಟಕ್ಕಿಂತ ಬಲ್ಲವರೊಡನಿದ್ದು ಬೆಲ್ಲ ಸವಿ ಬೇಕು. ಹಾಗೆಯೇ ಬಾಳೆಹಣ್ಣಿನಂತೆ ಸಜ್ಜನರು ಡೊಂಕಾಗಿದ್ದರೂ ಸಿಹಿಯಾಗಿರುತ್ತಾರೆ. ಅದಕ್ಕಾಗಿ ಬಚ್ಚಲಿನ ರೊಜ್ಜಿನಂತಿಹ ದುರ್ಜನರ ಸಹವಾಸ ಮಾಡಿ ಕೆಟ್ಟ ನಡುವಳಿಕೆಗೆ ಗುರಿಯಾಗದೇ ಒಳ್ಳೆಯ ಗುಣಗಳೊಡನೆ ಕಾಲ ಕಳೆಯಬೇಕು. ''ಮಾನಹೀನರ ಸಂಗ ಏನು ಕೊಟ್ಟರೂ ಬೇಡ '' ಆದ್ದರಿಂದ ''ನಿಂದೆಯನು ನುಡಿದರೂ, ಸಂದ ಸಜ್ಜನರೇ ಲೇಸು'' ಅದಕ್ಕಾಗಿ ಅಂಥವರ ಸಹವಾಸದಿಂದ ನಡುವಳಿಕೆಗಳೆಲ್ಲಾ ಶುದ್ಧವಾಗುವವೆಂಬ ಸರ್ವಜ್ಞನ ಮಾತುಗಳು ಸಮಾಜದಲ್ಲಿ ತುಂಬಾ ಪ್ರಭಾವಬೀರಿವೆ.

# ಅಧ್ಯಾಯ - ೬

# ಜಾನಪದೀಯ ಮೌಲ್ಯಗಳು

೬.೧. ಪ್ರವೇಶ

೬.೨. ಹೆಣ್ಣಿನ ಬಗೆಗಿರುವ ಮೌಲ್ಯ

೬.೨.೧. ಮಕ್ಕಳ ಭಾಗ್ಯ

೬.೨.೨. ಸಂಸಾರದಲ್ಲಿ ಹೆಣ್ಣು

೬.೩. ದಾನ-ಧರ್ಮ

೬.೪. ನೀತಿ-ನಿಯಮ

೬.೫. ದೈವೀ ಶ್ರದ್ಧೆ

## ೬.೧. ಪ್ರವೇಶ :

ಸರ್ವಜ್ಞನ ಸಾಹಿತ್ಯದಲ್ಲಿಯ ಜಾನಪದೀಯ ಮೌಲ್ಯಗಳೆಂದು ಹೇಳುವ ಪೂರ್ವದಲ್ಲಿ ಆ ಬಗೆಗೆ ವಿವೇಚಿಸುವುದು ಅಗತ್ಯವೆನಿಸುತ್ತದೆ. ಮೌಲ್ಯವೆನ್ನುವುದು ನಿರ್ದಿಷ್ಟವಾದುದುಲ್ಲ. ಒಂದು ಕಾಲಕ್ಕೆ ಶ್ರೇಷ್ಠವಾದ ಮೌಲ್ಯ, ಮತ್ತೊಂದು ಕಾಲಕ್ಕೆ ಕನಿಷ್ಠವಾಗಬಹುದು. ಎಲ್ಲಾ ಮೌಲ್ಯಗಳನ್ನು ಸಾರ್ವಕಾಲಿಕ ಸತ್ಯವಾದವುಗಳೆನ್ನ ಲಾಗುವುದಿಲ್ಲ. ವ್ಯಕ್ತಿ ಮತ್ತು ಸಮಾಜದ ಬೆಳವಣಿಗೆಯೊಂದಿಗೆ ಮೌಲ್ಯಗಳೆಲ್ಲಾ ಬದಲಾಗುತ್ತವೆ (ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು, ಪು. ೫). ಮೌಲ್ಯಗಳನ್ನು ನಡೆನುಡಿಗಳಲ್ಲಿ ತರುವುದು ಜನಪದರ ವೈಶಿಷ್ಟ್ಯ. 'ಏನ್ ಸುಡತೀ ನಿನ ನಡತೀ', 'ನಡತಿ ಕೆಟ್ಟಮ್ಯಾಲ ನಾಕದಿನಾ ಇರಬಾರ್ದ' ಎನ್ನುವ ಮಾತುಗಳು ಹಾಗೂ 'ಅವರ ನಡತಿ ಚಲೋ ಇಲ್ಲ', 'ಮಗಳು ಅತ್ತಿ ಮನಿಗೆ ನಡೀಲಾಕ ಹೋಗ್ಯಾಳ' ಮೊದಲಾದ ಮಾತುಗಳನ್ನು ಗಮನಿಸಿದರೆ ಇಲ್ಲಿ ಬರೀ ನೀತಿಗಿಂತ ನಡತೆಯ ವಿಶೇಷತೆಯಲ್ಲಿ ಒತ್ತಡ ಎದ್ದು ಕಾಣುತ್ತದೆ. ಮೌಲ್ಯವೆನ್ನುವುದು ಸಾಮಾಜಿಕ ಅಪೇಕ್ಷೆಯೇ ಹೊರತು ವೈಯಕ್ತಿಕ ಅಭೀಪ್ಸೆಯಲ್ಲ. ಅದು ಸಾರ್ವಕಾಲಿಕ ಮುದ್ರೆಯನ್ನು ಪಡೆದುಕೊಳ್ಳುತ್ತದೆ.

ಯಾವ ಮೌಲ್ಯಗಳಿಗೆ ಮಾನವೀಯ ಮೌಲ್ಯವೆನ್ನುತ್ತಾರೋ ಅವು ಆರ್ಥಿಕ, ಸಾಮಾಜಿಕ, ರಾಜಕೀಯ ವಿರುವುದಿಲ್ಲ. ಇವು ಪಾರಮಾರ್ಥಿಕವಿರುತ್ತವೆ (ಮುತ್ತಿನಂಥ ಮಾತುಗಳು, ಪು. ೧೩೩). ದೇಹ ಅಳಿಯುತ್ತದೆ; ಕೀರ್ತಿ ಉಳಿಯುತ್ತದೆ. ಯಾವುದು ಹುಟ್ಟಿದೆಯೋ ಅದು ಸಾಯುತ್ತದೆ. ಮನುಷ್ಯ ಉಳಿದ ಪ್ರಾಣಿಗಳಂತೆ ಹುಟ್ಟಿ ಸಾಯದೇ, ತನ್ನ ಗುರುತನ್ನು ಬಿಟ್ಟುಹೋಗುವವನಾಗಬೇಕು. ಅದನ್ನೇ ಮೌಲ್ಯವೆಂದು ಕರೆಯಲಾಗುತ್ತದೆ. ಈ ಹಿನ್ನೆಲೆಯಲ್ಲಿ ಜನಪದರು ತಮಗೆ ಸರಿಯೆನಿಸಿದ ಜೀವನದ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ. ಸರ್ವಕಾಲಕ್ಕೂ, ಸರ್ವರೂ ಅನುಸರಿಸಬೇಕಾದ ಆದರ್ಶಗಳನ್ನು ಮೆಚ್ಚಿಕೊಂಡಿದ್ದಾರೆ (ಕನ್ನಡ ಸಾಹಿತ್ಯ ಹಾಗೂ ಜೀವನಮೌಲ್ಯ, ಪು. ೧೨-೧೩).

ಸರ್ವಜ್ಞನೂ ಸಹ ಸಾಂಸ್ಕೃತಿಕ ವ್ಯಕ್ತಿಯಾಗಿ ಬೆಳೆದುಬಂದಿರುವನಾಗಿರುವುದರಿಂದ ತನ್ನ ವಚನಗಳಲ್ಲಿ ಬದುಕಿನಲ್ಲಿರಬೇಕಾದ ಮೌಲ್ಯಗಳ ಬಗೆಗೆ ವಿವರಿಸಿದ್ದಾನೆ. ಕನ್ನಡ ಸಂಸ್ಕೃತಿಯ ಕಾಲವಾಹಿನಿಯಲ್ಲಿ ತೇಲಿ ಬಂದ ಜೀವನ ಮೌಲ್ಯಗಳನ್ನು ಸಮಕಾಲೀನ ಸಮಾಜದ ಸೃಜನ ಶೀಲ ಸಮೀಕ್ಷಕನಾಗಿ ಪರಿಶೀಲಿಸಿ, ಪರಿಶೋಧಿಸುವ ಒಂದು ಪ್ರಾಮಾಣಿಕ ಪ್ರಯತ್ನವನ್ನು ಸರ್ವಜ್ಞ ಮಾಡಿದ್ದಾನೆ.

ಬದುಕಿನಲ್ಲಿರಬೇಕಾದ ಹೆಣ್ಣಿನ ಬಗೆಗಿರುವ ಮೌಲ್ಯ, ದಾನಧರ್ಮ, ನೀತಿನಿಯಮ, ನಡೆ-ನುಡಿ, ದೈವೀಶ್ರದ್ಧೆ ಮುಂತಾದ ಮೌಲಿಕವಾದ ಮೌಲ್ಯಗಳ ಚಿಂತನೆಯನ್ನು ಸರ್ವಜ್ಞ ತನ್ನ ವಚನಗಳಲ್ಲಿ ಹರಳುಗಟ್ಟಿ ಸಿದ್ದಾನೆ. ಆತನ ಈ ವಿವೇಕಯುತವಾದ ಮನನ, ಮಂಥನ ಇಂದಿಗೂ ಬೆಳಕನ್ನು ನೀಡಬಲ್ಲುದಾಗಿದೆ (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು.೯೨) ಎಂಬುದರ ಬಗೆಗೆ ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

## ೬.೨. ಹೆಣ್ಣಿನ ಬಗೆಗಿರುವ ಮೌಲ್ಯ :

ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಬಗ್ಗೆ ಯಾವ ಪರಿಕಲ್ಪನೆಗಳು ಇವೆಯೋ ಅದೇ ಪರಿಕಲ್ಪನೆಗಳೇ ಜನಪದ ಸಾಹಿತ್ಯದಲ್ಲೂ ಇವೆ. ನಮ್ಮ ಸಂಸ್ಕೃತಿಯು ಪಾತಿವ್ರತ್ಯ, ಸಚ್ಚಾರಿತ್ರ್ಯ, ಶೀಲ, ಗುರು ಹಿರಿಯರಲ್ಲಿ ಭಕ್ತಿ, ವಿಧೇಯತೆ, ವಿನಯ ಹಾಗೂ ಯಾವುದಕ್ಕೂ ಎದುರಾಡದೆ ಬಂದದ್ದನ್ನೆಲ್ಲಾ ಮೌನವಾಗಿ ಸಹಿಸಿಕೊಳ್ಳುವ ಪರರ ಸುಖ ಸಂತೋಷಗಳಿಗಾಗಿ ಸ್ವಂತ ಸುಖವನ್ನು ತ್ಯಾಗ ಮಾಡುವ ಹೆಣ್ಣನ್ನು ಆದರ್ಶ ಸ್ತ್ರೀ ಎಂದು ಪುರಸ್ಕರಿಸುತ್ತದೆ. ಈ ಗುಣಗಳಲ್ಲಿ ಶೀಲ, ಚಾರಿತ್ರ್ಯ, ಪತಿವ್ರತ್ಯಗಳನ್ನು ಹೆಣ್ಣಿನ ಪರಮೋಚ್ಚ ಆದರ್ಶವೆಂದು ಭಾವಿಸಲಾಗಿದೆ. ಶೀಲ, ಪಾತಿವ್ರತ್ಯಗಳಿಗೆ ನಮ್ಮ ಸಂಸ್ಕೃತಿಯಲಿ ಕೊಟ್ಟಷ್ಟು ಬೆಲೆಯನ್ನು ಜಗತ್ತಿನ ಬೇರಾವ ಸಂಸ್ಕೃತಿಯಲ್ಲೂ ಕೊಟ್ಟಿಲ್ಲ. ನಮ್ಮ ಪುರಾಣ,ಮಹಾ ಕಾವ್ಯ ಹಾಗೂ ಜನಪದ ಸಾಹಿತ್ಯವು ಸ್ತ್ರೀಯರ ಬಗ್ಗೆ ತುಂಬಾ ಮೌಲ್ಯಯುತ ಕಾಳಜಿಯನ್ನು ವಹಿಸಿದೆ.

ಸರ್ವಜ್ಞನಂತೆ ಸಮಾಜದಲ್ಲಿ ಸ್ತ್ರೀಯರಿಗಿರುವ ಒಳಿತು ಕೆಡಕುಗಳನ್ನು ಕುರಿತು ಹೇಳಿದವರು ಅನೇಕರಿದ್ದಾರೆ. ಅವರಲ್ಲಿ ಅಲ್ಲಮಪ್ರಭು: ''ಹೆಣ್ಣು ಮಾಯೆಯಲ್ಲ, ಹೊನ್ನು ಮಾಯೆಯಲ್ಲ, ಮಣ್ಣು ಮಾಯೆಯಲ್ಲ, ಮನದ ಮುಂದಣಾಸೆಯೇ ಮಾಯೆ'' ಹೇಳಿದ್ದಾನೆ. ಸಿದ್ಧರಾಮನು ತನ್ನ ವಚನದಲ್ಲಿ ''ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ'' ಎಂದು ನುಡಿದಿದ್ದಾನೆ. ಜನ್ನ ಕವಿಯು ತನ್ನ 'ಅನುಭವ ಮುಕುರ'ದಲ್ಲಿ ''ಸ್ತ್ರೀಯಿಂದಂ ಸರ್ವ ಸೌಖ್ಯಂ ಸಮನಿಪುದ ಬಲೆ ಮುಕ್ತಿಗಂ ಭಾಜನೀಯಂ'' ಎಂದು ಕ್ರಾಂತಿಕಾರಕವಾದ ರೀತಿಯಲ್ಲಿ ಹೇಳಿದ್ದಾನೆ. ಈ ರೀತಿ ಅನೇಕ ಕವಿಗಳನ್ನು ಸ್ತ್ರೀಯರ ಬಗೆಗೆ ಹೇಳಿದಾಗ್ಯೂ ಸರ್ವಜ್ಞನಷ್ಟು ಮಾರ್ಮಿಕವಾಗಿ ನುಡಿದವರಿಲ್ಲ. ಸ್ತ್ರೀಯರನ್ನು ಸರಿಯಾಗಿ ಬಾಳಿಸಿಕೊಳ್ಳು ವುದರ ಅಗತ್ಯವನ್ನು, ಇಲ್ಲದಿದ್ದರೆ ಅವರಿಂದಾಗುವ ಗಂಡಾಂತರವನ್ನು ಎದುರಿಸಬೇಕಾಗುತ್ತದೆಂಬ

ಮಾತನ್ನು ಎಲ್ಲಾ ಕಾಲಕ್ಕೂ ಅನ್ವಯವಾಗುವಂತೆ ಹೇಳಿದ್ದಾನೆ. ಹೆಣ್ಣು ಪ್ರತಿಯೊಬ್ಬರ ಜೀವನವನ್ನು ಬೆಳಗುವ ಜ್ಯೋತಿ ಇದ್ದಂತೆ. 'ಹೆಣ್ಣು ಹೆತ್ತವರ ಮನೆ ತಣ್ಣಗ' ಎಂಬ ಜಾನಪದರ ಮಾತು ಎಷ್ಟೊಂದು ಅರ್ಥಪೂರ್ಣ. ಈ ಕುರಿತು ಸರ್ವಜ್ಞ;

ಮಗಳಕ್ಕತಂಗಿಯು । ಮಿಗೆ ಸೊಸೆಯು ನಾದಿನಿಯು
ಜಗದ ವನಿತೆಯರು, ಜನನಿಯು, ಇವರೊಳಗೆ
ಜಗಕ್ಕೊಬ್ಬಳೈಸೆ ಸರ್ವಜ್ಞ.

ಹೆಣ್ಣು ಅತ್ತಿಗೆಯಾಗಿ, ಸೋದರಿಯಾಗಿ, ಮಗಳಾಗಿ, ಮಡದಿಯಾಗಿ, ಅತ್ತೆಯಾಗಿ, ಸೊಸೆಯಾಗಿ ಇಡೀ ಕುಟುಂಬದ ಅವಿಭಾಜ್ಯ ಅಂಗವಾಗಿದ್ದಾಳೆಂದು ಸರ್ವಜ್ಞ ತಿಳಿಸಿದ್ದಾನೆ. ಆದರೆ ಕುಟುಂಬದಲ್ಲಿ ಹೆಚ್ಚಿನ ಸ್ಥಾನವನ್ನು 'ತಾಯಿ'ಗೆ ನೀಡಲಾಗಿದೆ. ಆಕೆ ತೋರುವ ಮಕ್ಕಳ ಮೇಲಿನ ಪ್ರೀತಿ ಹಿರಿದಾದುದು; ಆಕೆ ವಾತ್ಸಲ್ಯಮಯಿ. ಅಂತೆಯೇ 'ಹೆತ್ತವಳಿಗೆ ಹೆಗ್ಗಣ ಮುದ್ದು' ಎಂಬ ಗಾದೆಯಂತೆ ಹೆತ್ತ ಮಗುವಿಗೆ ತಾಯಿಗಿಂತ ಹಿತರಾದವರು ಜಗತ್ತಿನಲ್ಲಿ ಮತ್ತೊಬ್ಬರಿರುವುದು ಅಸಾಧ್ಯ (ಹೆಣ್ಣು ಸರ್ವಜ್ಞನ ದೃಷ್ಟಿಯಲ್ಲಿ, ಪು. ೧೪). ''ತಾಯವ್ವನೆಂಬೋಳು ದೇವಲೋಕದ ಮನಸ್ಸು'' ಎಂಬಂತೆ ಜನಪದರು ತಮ್ಮ ಬಾಳಿನಲ್ಲಿ 'ತಾಯಿ'ಯ ಮಹತ್ವ ಎಷ್ಟೆಂಬುದನ್ನು ಹೇಳಿರುವ ನುಡಿ ಹೃದಯಾಂಗಮವಾಗಿದೆ.

ಯಾರ ಇದ್ದರೂ ನನ್ನ ತಾಯವ್ವ ನೋಲರ
ಸಾವಿರ ಕೊಳ್ಳಿ ಒಲಿಯಾಗ । ಇದ್ದರ
ಜ್ಯೋತಿ ನಿನ್ಯಾರು ಹೋಲ್ಯಾರ.

ಒಂಭತ್ತು ತಿಂಗಳು ಹೊತ್ತು, ಹೆತ್ತು, ಉಣಿಸಿ, ಬೆಳೆಸಿದ ತಾಯಿಯ ಕರುಳಿನ ಬಳ್ಳಿಯಾದ ಈ ಮಗ ಅಥವಾ ಮಗಳು ತನ್ನ ಜೀವನದಲ್ಲಿ ತಾಯಿಯನ್ನು ಮರೆಯುವುದು ಸಾಧ್ಯವಾಗದು. ತಾಯಿಯಷ್ಟೇ ವಯಸ್ಸಾದವರು ಅಥವಾ ಹೋಲಿಕೆಯುಳ್ಳವರು ಬೇಕಾದಷ್ಟು ಹೆಣ್ಣು ಮಕ್ಕಳಿರಬಹುದು. ಆದರೆ ಅವರ್‍ಯಾರೂ ಹಡೆದ ತಾಯಿಯ ಕರುಳನ್ನು ಪಡೆದಿರಲಾರರು. 'ಸಾವಿರ ಕೊಳ್ಳಿಗಳು ಒಲೆಯಲ್ಲಿ ಉರಿದರೆ ಅವು ಕೊಳ್ಳಿಗಳೇ ಹೊರತು ಜ್ಯೋತಿಯಾಗಿ ಮನೆಯನ್ನು ಬೆಳಗಲಾರವು'. ಕೊಳ್ಳಿಗೆ ಗಾಳಿ ಬೀಸಿದಾಗ ಬಗ್ಗನೆ ಉರಿದು, ಕಾರ್ಯ ಮುಗಿದ ಕೂಡಲೇ ಕ್ರಿಯಾ ಶೂನ್ಯವಾಗುತ್ತದೆ. ಸ್ಪಷ್ಟವಾದ ಬೆಳಕು ನೀಡದೇ ಬೂದಿಯಲ್ಲಿ ಮರೆಯಾಗುವ ಸ್ವಾರ್ಥ ಸಂಕೇತವಿರುತ್ತದೆ. ಆದರೆ ಜ್ಯೋತಿ ಎಣ್ಣೆ, ಬತ್ತಿ ತೀರುವವರೆಗೆ ಪ್ರಶಾಂತವಾಗಿ ಉರಿದು ಮನೆಗೆ ಸ್ಪಷ್ಟವಾದ ಬೆಳಕು ನೀಡಿ, ಶಾಂತಿ-ಸಂತೋಷ ಕೊಡುವ ನಿಸ್ವಾರ್ಥ ಜೀವನದ ಪ್ರತೀಕವಾಗಿರುತ್ತದೆ. 'ತಾಯಿಗಿಂತ ಬಂಧು ಎಲ್ಲ, ಉಪ್ಪಿಗಿಂತ ರುಚಿಯಿಲ್ಲ' ಎಂಬ ಗಾದೆಯೂ ಸಹ ತಾಯಿಯಾದವಳ ಸ್ಥಾನವನ್ನು ಎತ್ತಿ ಹಿಡಿಯುತ್ತದೆ.

ಕೈಗಳಿರದಿದ್ದರೆ ಹಡಗಿನ ಹುಟ್ಟಾಕಲು ಆಗಲಾರದು. ಇಂತಹ ಸದೃಢ ಕೈಗಳು ಮಾತ್ರ ಹಡಗವನ್ನು ಧರಿಸಬಲ್ಲವು. ಹಾಗೆಯೇ ತವರಿಗೆ ತಾಯಿಯೇ ಮೂಲ ದ್ರವ್ಯ. ಹಡದವ್ವನಿಲ್ಲದ ತವರು ನೀರು ಬತ್ತಿದ ಹೊಳೆಯಂತೆ. ಕೊನೆಯಲ್ಲಿ ಪ್ರಯಾಣಿಕನಿಗೆ ಅರಣ್ಯದ ಹಾದಿಯಲ್ಲೇ ಅಕಸ್ಮಾತ್ ಕತ್ತಲಾದರೆ ಅನುಭವಿಸುವ ಯಾತನೆ ತಾಯಿಯಿಲ್ಲದ ತವರಿಗೆ ಬಂದಂತಾಗುತ್ತದೆಂಬುದು ಇಲ್ಲಿ ವ್ಯಕ್ತವಾಗಿದೆ (ಜನಪದ ಸಾಹಿತ್ಯದಲಿ ಜೀವನ ಮೌಲ್ಯಗಳು, ಪು.೧೪,೧೫).

ಸಮಾಜದಲ್ಲಿ ಮೇಲು-ಕೀಳೆಂಬ ಭಾವನೆಯನ್ನು ಕಿತ್ತೊಗೆದಂತೆಯೇ ಸ್ತ್ರೀಯರ ವಿಚಾರದಲ್ಲಿ ಸರ್ವಜ್ಞನು ಜನರ ಮನೋಭಾವನೆಯನ್ನು ಬದಲಾಯಿಸುವುದಕ್ಕೆ ಪ್ರಯತ್ನಿಸಿದವನು. ಮಹಿಳೆಯರ ಸ್ಥಾನ ಪುರುಷರಿಗಿಂತ ಕೀಳಲ್ಲವೆಂದು ಪ್ರತಿಪಾದಿಸಿದ್ದಾನೆ. ಸಂಸಾರದಲ್ಲಿ ಹೆಣ್ಣೇ ಸರ್ವಸ್ವವೆಂದು ಹೇಳುತ್ತಾನೆ. ಜನಪದರು ಹೆಣ್ಣು ಕೋಮಲತೆಯಾಗಿ ಕಾಣುವುದರಿಂದ ಅಂತಹ ಹೆಣ್ಣನ್ನು ಚಿತ್ತಾರದ ಗೊಂಬಿ, ಸುಳಿಗಾಳಿಗೊಮ್ಮೆ ಬಳುಕುವಳೆಂದು ವರ್ಣಿಸಿದ್ದಾರೆ.

ಕೆಂಪಾನೆ ಹೆಣ್ಣಿಗೆ ಸಂಪಿಗೆ ಹೂವಿಗೆ
ಅಂತರದಲ್ಲಿರುವ ಗಜನಿಂಬೆ ಹೆಣ್ಣಿಗೆ
ಎಂಥೋರು ಬಾಯ ಬಿಡುತಾರ.

ಹೆಣ್ಣು ಎಂತಹ ಮೋಹಗಾತಿಯಾಗಿರುವಳೆಂಬುದು ಜನಪದರ ಈ ಮೇಲಿನ ಗೀತೆ ತಿಳಿಯಪಡಿಸುತ್ತದೆ. ಇಲ್ಲಿ ಹೆಣ್ಣು ಗಂಡಿನ ಆಕರ್ಷಣೆಗೆ ಗುರಿಯಾಗಿರುವ ಸೊಬಗಿನ ಪುತ್ಥಳಿ, ಸೌಂದರ್ಯದ ಖನಿ, ಪುರುಷನ ಕಾಮೇಚ್ಛೆಯನ್ನು ತಣಿಸುವ ರೂಪಸಿ ಆಗಿರುವುದರಿಂದ 'ಎಂಥೋರು ಬಾಯ ಬಿಡತಾರ' ಎನ್ನಲಾಗಿದೆ. ಸರ್ವಜ್ಞನೂ ಸಹ ತನ್ನ ವಚನಗಳಲ್ಲಿ ಹೆಣ್ಣನ್ನು ಕುರಿತಾಗಿ;

ಹೆಣ್ಣನ್ನು ಹೊನ್ನನ್ನು । ಹಣ್ಣನ್ನು
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ
ಅಣ್ಣಗಳು ಯಾರು ಸರ್ವಜ್ಞ.

ಹೆಣ್ಣಿಂದ ಇಹವು । ಹೆಣ್ಣಿಂದ ಪರವು
ಹೆಣ್ಣಿಂದ ಸಕಲ ಸಂಪದವು-ಹೆಣ್ಣೊಲ್ಲ
ದಣ್ಣಗಳು ಯಾರು ಸರ್ವಜ್ಞ.

ಹರೆಯದ ಹೆಣ್ಣು, ಹೊಂಬಣ್ಣದ ಬಂಗಾರ, ಮಾಗಿದ ಹಣ್ಣು ಇವು ಮೂರನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗಿದ್ದಾನೆ ಸರ್ವಜ್ಞ. ಕನಸು ಮನಸ್ಸಿನಲ್ಲೂ ಹೆಣ್ಣನ್ನು ಬಯಸದವನೇ ನಿಜವಾದ ಬ್ರಹ್ಮಚಾರಿ ಎಂದು ಹಾಗೂ ಹೆಣ್ಣಿನ ಮೋಹಕ ಶಕ್ತಿಯಿಂದ ಅನೇಕ ಋಷಿಗಳು ತಪೋಭಂಗವಾಗಿಸಿ

ಕೊಂಡಿದ್ದೂ ಸಹ ಪುರಾಣದಿಂದ ತಿಳಿಯುತ್ತದೆ (ಹೆಣ್ಣು ಸರ್ವಜ್ಞನ ದೃಷ್ಟಿಯಲ್ಲಿ, ಪು.೧೬). ಇಲ್ಲಿ ರೂಢಿಯ ಮಾತೊಂದು ನೆನಪಿಗೆ ಬರುತ್ತದೆ; 'There is a woman behind every successful man' ಎಂಬ ಮಾತಿನಲ್ಲಿ ಬಹಳಷ್ಟು ಸತ್ಯಾಂಶವಿದೆ. ಕಾರ್ಯಶೀಲನಾದ ಗಂಡಿನಲ್ಲಿ ಉತ್ಸಾಹ ತುಂಬುವವಳು, ಉತ್ತೇಜಿಸುವವಳು, ಸ್ಫೂರ್ತಿ ನೀಡುವವಳು ನಂತರ ಗಂಡಿನ ಸಾಧನೆಯನ್ನು ಮೆಚ್ಚಿಕೊಳ್ಳುವಳು.

ಗಂಡಿಗೆ ಒಂದು ಹೆಣ್ಣಿನ ಸಂಕೋಲೆ ಇಲ್ಲದಿದ್ದರೆ ಅವನು ಅಂಕುಶವಿಲ್ಲದ ಆನೆಯಂತೆ ಯಾವುದಾದರೊಂದು ಹಳ್ಳದೊಳಗೆ ಬೀಳುವುದು ದಿಟ. ಇದನ್ನು ಸರ್ವಜ್ಞ ತನ್ನ ವಚನದಲ್ಲಿ;

ಸುಣ್ಣವಿಲ್ಲದ ವೀಳ್ಯೆ । ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಬಾಳ್ವೆ ಮಳಲೊಳಗೆ ತಾ
ಎಣ್ಣೆ ಹುಯಿದಂತೆ ಸರ್ವಜ್ಞ.

ತಾಂಬೂಲದಲ್ಲಿ ಸುಣ್ಣದ ಮಹತ್ವವೇ ಮುಖ್ಯ. ಮದುವೆ, ಉತ್ಸವಗಳಲ್ಲಿ ಸಡಗರ, ಸಂಭ್ರಮ ಹೆಚ್ಚಾಗಲು ಬಣ್ಣವೆಂಬ ಸಮೃದ್ಧಿಯ ಪರಿಕರಗಳು ಇರಬೇಕು. ಅದೇರೀತಿ ಮನೆಯನ್ನು ಬೆಳಗಲು ಗುಣವುಳ್ಳ ಹೆಣ್ಣಿರಬೇಕು. ಅವಳೊಂದಿಗೆ ಸರಿಯಾದ ದಿಕ್ಕಿನಲ್ಲಿ ಬಾಳ್ವೆ ಮಾಡದೇ ಹೋದರೆ ''ಮಳಲೊಳಗೆ ಎಣ್ಣೆ''ಯನ್ನು ಹಾಕಿದಂತೆ ಬದುಕೆಲ್ಲಾ ವ್ಯರ್ಥವಾಗಿ ಹೋಗುತ್ತದೆಂದು ತಿಳಿಸಿದ್ದಾನೆ (ಸರ್ವಜ್ಞನ ದೃಷ್ಟಿಯಲ್ಲಿಹೆಣ್ಣು..ಹೆಣ್ಣು..ಹೆಣ್ಣು, ಪು. ೫).

ಈ ಜಗತ್ತಿನಲ್ಲಿ ಪ್ರತಿಕ್ಷಣದ ವ್ಯವಹಾರಗಳಿಗೆ ಮುಖ್ಯ ಆಧಾರವೆಂದರೆ; ''ಹೆಣ್ಣು-ಹೊನ್ನು-ಮಣ್ಣು'' ಇವು ಮೂರು ಬಿಟ್ಟು ಬೇರೇನಿದೆ ? ಹೆಣ್ಣೆಂಬ ಜೀವಿಯನ್ನು ಸರ್ವಜ್ಞನ ದೃಷ್ಟಿಯಲ್ಲಿ ಅವಲೋಕಿಸಿದಾಗ ಚಿನ್ನದಗಟ್ಟಿ ಇದ್ದಹಾಗೆ (ಅದೇ , ಪು. ೭). ಹೆಣ್ಣಿಲ್ಲದವನ ಬಾಳು ಒಂದು ರೀತಿಯಲ್ಲಿ ಅಂಧಕಾರವಯವಾದುದು. ಬಾಳಿನಲ್ಲಿ ಯಾವುದೇ ವಿಧವಾದ ಉತ್ಸಾಹವಿರುವುದಿಲ್ಲ. ಆಸಕ್ತಿ ಇರುವುದಿಲ್ಲ. ಉತ್ತಮ ಕುಲದ ಹೆಣ್ಣನ್ನು ಒಲಿಸಿಕೊಂಡು, ಸಲಹಿ, ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದರೆ ಪರಮಾತ್ಮನ ಅನುಗ್ರಹವೂ ಬೇಕು.

ಅಂಗನೆಯರೊಲಿವುದು, ಬಂಗಾರ ಸಿಕ್ಕುವುದು
ಸಂಗ್ರಾಮದಲಿ ಗೆಲ್ಲುವುದು ಇವು ಮೂರು
ಸಂಗಯ್ಯನೊಲುಮೆ ಸರ್ವಜ್ಞ.

ಹೆಣ್ಣಾಗಲಿ, ಐಶ್ವರ್ಯವಾಗಲಿ ಇದಕ್ಕೆ ಅಪೇಕ್ಷೆ ಮಾಡದ ಮಹಾನುಭಾವರು ಯಾರಿದ್ದಾರೆ ?. ''ಹೆಣ್ಣು ಗಂಡಿನ ಪವಿತ್ರ ಪ್ರೇಮವೆಂದರೆ; ಅದು ಆತ್ಮ ಸಂಬಂಧವೇ ಹೊರತು ಕೇವಲ ದೇಹಾಭಿಮಾನವಲ್ಲ'' (ಅದೇ,ಪು.೮). ಹೆಣ್ಣಿನ ಮೋಹವೆಂಬುದು ದೇವಾದಿ ದೇವತೆಗಳನ್ನೇ ಬಿಟ್ಟಿಲ್ಲದಿರುವಾಗ ಇನ್ನು ಸಾಮಾನ್ಯ ಮಾನವರ ಗತಿಯೇನು ?. ಇದನ್ನೇ ಸರ್ವಜ್ಞ;

ಹರಿಯ ಉರವನು ಮೆಟ್ಟಿ ಹರನ ಸಿರಿವನು ಹತ್ತಿ
ಸರಸಿಜೋದ್ಭವನ ಮೊಗ ಕೆಡಿಸಿದಳು । ಇನ್ನು
ಹಿರಿಯರಿನ್ನಾರು ಸರ್ವಜ್ಞ.

ಹೆಣ್ಣು ನಾರಿಯೂ ಹೌದು, ಮಾರಿಯೂ ಹೌದು. ಗುಲಾಬಿಯಂತಹ ಹೆಣ್ಣಿನ ಜೀವನ ಮುಳ್ಳಿನ ಮೇಲಿದ್ದಂತೆ ಅಂತಹ ಕೋಮಲ ಸ್ವಭಾವದ ಹೆಣ್ಣನ್ನು ಜೀವನದಲ್ಲಿ ಶಾಂತಿ, ಸಮಾಧಾನಗಳಿಂದ ನೋಡಿಕೊಳ್ಳಬೇಕು. ಆತುರ ಪಟ್ಟು ಆಕೆಯ ಮಾನಸಿಕಸ್ಥಿತಿಯನ್ನು ಗೊಂದಲ ಮಾಡಿದರೆ, ಆಕೆ ಮಾರಿಯಾಗುವುದರಲ್ಲಿ ಸಂಶಯವಿಲ್ಲ.

ನಾರಿ ಪರರುಪಕಾರಿ ನಾರಿ ಸ್ವರ್ಗಕ್ಕೆ ದಾರಿ
ನಾರಿ ಸಕಲರಿಗೆ ಹಿತಕಾರಿ ಮುನಿದರೆ
ನಾರಿಯೇ ಮಾರಿ ಸರ್ವಜ್ಞ.

ಹೆಣ್ಣು ಕರುಣಾಮಯಿಯೂ ಅಹುದು, ಕಠಿಣ ಮನಸ್ಕಳು ಅಹುದು. ಒಂದು ನಾಣ್ಯದ ಎರಡು ಮುಖವಿದ್ದಂತೆ. ಕರುಣಾಮಯಿಯೂ ಆದ ಹೆಣ್ಣು ಮನಸ್ಸಿಗೆ ಬಂದರೆ ಎಂತಹ ತ್ಯಾಗಕ್ಕೂ ಎತ್ತಿದ ಕೈ. ಆದರೆ ಆಕೆಯ ಮನಸ್ಸಿಗೆ ಬೇಸರವಾಗಿ ಕೈ ಎತ್ತಿದರೆ ಎಂತಹ ಗಂಡಸರನ್ನೂ ಎದುರಿಸಬಲ್ಲಳು.

## ೬.೨.೧. ಮಕ್ಕಳ ಭಾಗ್ಯ :

ಹೆಣ್ಣಾಗಿ ಹುಟ್ಟಿದ ಮೇಲೆ ಮಕ್ಕಳನ್ನು ಹಡೆಯಬೇಕು. ಇದಕ್ಕೆ ಪೂರ್ವಜನ್ಮದ ಪುಣ್ಯ ಇರಬೇಕೆಂಬುದು ಜನಪದರ ನಂಬಿಕೆ. ಮಕ್ಕಳಾಗದಿದ್ದರೆ ಅವಳು ಬಂಜೆತನದ ಪಟ್ಟವನ್ನು ಅನುಭವಿಸಬೇಕಾಗುತ್ತಿತ್ತು (ಜಾನಪದ ಸಿರಿ,ಪು. ೧). ಜನಪದರ ಸಮಾಜದಲ್ಲಿ ಹೆಣ್ಣು ಮದುವೆಯಾಗಿ ಮಗುವನ್ನು ಪಡೆಯುವವರೆಗೆ ಅವಳ ಜೀವನ ಸಾರ್ಥಕವಲ್ಲ. ಈ ಬಗೆಗೆ ಜಾನಪದರು;

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದ್ಹಾಂಗ ಬಾಳೆಲೆಯ
ಹಾಸುಂಡು ಬೀಸಿ ಒಗೆದ್ಹಂಗ.

"ಅಪುತ್ರಸ್ಯ ಗತಿರ್ನಾಸ್ತಿ" ಮಕ್ಕಳಿಲ್ಲದವರಿಗೆ ಸ್ವರ್ಗದಲ್ಲಿ ಮೋಕ್ಷವಿಲ್ಲವೆಂಬ ಕಲ್ಪನೆಯನ್ನು ಜನಪದರು ನಂಬಿದ್ದಾರೆ. ಇಲ್ಲಿ ತಾಯ್ತನದ ಮೇಲ್ಮೆಗಿಂತ ಬಂಜೆತನದ ಅವಹೇಳನವೇ ಅತಿಯಾಗಿ ಕಂಡುಬರುತ್ತದೆ (ಜಾನಪದ ಸಮಾಲೋಕನ,ಪು. ೧೨). ಒಂದು ಮಗುವನ್ನು ಪಡೆದ ಮೇಲೆಯೇ ಆ ಹೆಣ್ಣುಮಗಳು ಕೊಟ್ಟ ಮನೆಗೆ ಒಡತಿಯಾಗಲು ಅರ್ಹಳಾಗುತ್ತಾಳೆ. ಎಷ್ಟೋ ಜನ ಹಡೆಯದ ಹೆಣ್ಣು ಮಕ್ಕಳನ್ನು ತವರಿಗೆ ಅಟ್ಟಿ, ಎರಡನೆಯ ಮದುವೆ ಮಾಡಿಕೊಂಡ ಗಂಡಸರ ಉದಾಹರಣೆಗಳು ಜನಪದರ ಕಥೆಗಳಲ್ಲಿ ದೊರೆಯುತ್ತವೆ. ಇಲ್ಲಿ ಹಡೆಯದ ಹೆಣ್ಣನ್ನು ಗಂಡನ ಮನೆಯ ಬಾಡಿಗೆಯ ಎತ್ತು, ಉಂಡು ಬೀಸಾಡಿದ ಬಾಳೆಲೆಗೆ ಹೋಲಿಸಲಾಗಿದೆ (ಜಾನಪದ ಸಿರಿ, ಪು.೩). ಸರ್ವಜ್ಞನೂ ಸಹ ಹೆಣ್ಣಿನ ಜೀವನದಲ್ಲಿ ಮಗು ಪಡಿಯದಿದ್ದರೆ ಪರಿಪೂರ್ಣವಲ್ಲವೆಂದು ತಿಳಿದು;

ಮೊಸುರು ಇಲ್ಲದ ಊಟ ಕೆಸರು ಇಲ್ಲದ ಗದ್ದೆ
ಬಸುರಾಗದವಳ ಬಾಳುವೆಯು ಬೇಸಿಗೆಯ
ಬಿಸಿಲು ಕಾದಂತೆ ಸರ್ವಜ್ಞ.

ಮಕ್ಕಳಿಲ್ಲದ ಮನೆಯು ಪಕ್ಕಿಯಿಲ್ಲದ ವನವು
ದಿಕ್ಕಿಲ್ಲದವನ ಸಂಸಾರ ಕಳ್ಳನು ಮನೆ
ಹೊಕ್ಕು ಹೋದಂತೆ ಸರ್ವಜ್ಞ.

ಇಲ್ಲಿ ಮಕ್ಕಳಿಲ್ಲದ ಹೆಣ್ಣುಮಗಳ ಸ್ಥಿತಿಯನ್ನು ಹೇಳಲಾಗಿದೆ. ಮೊಸರನ್ನ ಊಟ ಮಾಡುವುದರಿಂದ ಅಲ್ಲಿಗೆ ಊಟದ ಕಾರ್ಯ ಮುಗಿದಂತೆ. ಕೆಸರಿನ ಗದ್ದೆ ಇದ್ದರೆ ಒಳ್ಳೆಯದು. ಒಣ ಗದ್ದೆಯಾಗಿದ್ದರೆ ಅದರಿಂದೇನೂ ಉಪಯೋಗವಿಲ್ಲ. ಹಾಗೆಯೇ ಹೆಣ್ಣು ತನ್ನ ಜೀವನದಲ್ಲಿ ಮಗುವನ್ನು ಪಡೆಯದೇ ಇದ್ದರೆ, ಅಂತಹವರ ಬದುಕು ಬೇಸಿಗೆಯಲ್ಲಿ ಬಿಸಿಲು ಕಾಯಿಸಿದಂತೆ ವ್ಯರ್ಥ ಹಾಗೂ ಆರೋಗ್ಯ ಹಾಳು ಮಾಡಿಕೊಂಡಂತೆಯೇ ಸರಿ (ಜಾನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು, ಪು.೨೨) ಎಂದು ಹೇಳಿದ್ದಾನೆ.

## ೬.೨.೨. ಸಂಸಾರದಲ್ಲಿ ಹೆಣ್ಣು :

ಒಂದು ಕುಟುಂಬದ ಸದಸ್ಯಳಾಗಿರುವ ಸೊಸೆಯೊಬ್ಬಳ ಮಾನಸಿಕ ನೆಮ್ಮದಿಯು ಕುಟುಂಬದ ಎಲ್ಲರ ಪ್ರೀತಿ, ವಾತ್ಸಲ್ಯ , ಸಹಾನುಭೂತಿಗಳನ್ನು ಅವಲಂಬಿಸಿದೆ. ಕೈಹಿಡಿದ ಗಂಡನ ಪ್ರೀತಿಯೊಂದರಿಂದಲೇ ಅವಳು ಸುಖ ಕಾಣಳು. ಅಂತಹ ಸೊಸೆಯೊಬ್ಬಳ ಅಳಲನ್ನು ಈ ಭಾವ ನಿರ್ಭರ ಕಾವ್ಯ ಮುಕ್ತದಲ್ಲಿ ಕಾಣಬಹುದು.

ತ್ವಾಟ ಒಳ್ಳೇದವ್ವ ಒಳಗೆ ಗೊರಜೀ ಪಲ್ಯ
ಸೀರೊಳ್ಳೇದವ್ವ ಸೆರಗಿಲ್ಲ । ಪುರುಷರ
ಮನಪಾಡು ನೋಡೆ ರಿಣಯಿಲ್ಲ (ಜನಪದ ಮುಕ್ತಕಗಳು, ಪು.೩೦).

ಕೇವಲ ಗಂಡನಿಂದ ಸಿಗುವ ದೈಹಿಕ ಸುಖವೊಂದರಿಂದಲೇ ಮನೆಯ ಸೊಸೆಗೆ ತೃಪ್ತಿ ಸಿಗಲಾರದು. ಮಾನಸಿಕ ನೆಮ್ಮದಿ ಬೇಕಾಗಿರುವ ಅವಳಿಗೆ ಕುಟುಂಬದ ಎಲ್ಲ ಪುರುಷರ ಸ್ನೇಹ, ಪ್ರೀತಿ, ವಿಶ್ವಾಸಗಳು ಬೇಕು. ಕುಟುಂಬವೆನ್ನುವ ತೋಟವೇನೋ ಚೆನ್ನಾಗಿದೆ, ಆದರೆ ಅಲ್ಲಿ ಬರೀ ಗೊರಜೀ ಪಲ್ಯ ತುಂಬಿದೆ. ಅದೇರೀತಿ ಬೆಲೆಯುಳ್ಳ ಸೀರೆ ಇದೆ. ಆದರೆ ಅದಕ್ಕೆ ಮುಖ್ಯವಾಗಿರುವ ಸೆರಗೆಂಬುದೇ ಇಲ್ಲವೆಂಬುದರ ಹಿನ್ನೆಲೆಯಲ್ಲಿ ಕುಟುಂಬ ತನ್ನ ಇತರ ಪುರುಷರ ಮನಸ್ಸು ಸರಿಯಿಲ್ಲವಾದ್ದರಿಂದ ಅಂಥವರ "ಮನಪಾಡು ನೋಡೆ ರಿಣ ಇಲ್ಲ" ಎನ್ನುವ ಜಾನಪದ ಗರತಿಯೊಬ್ಬಳ ಮಾನಸಿಕ ವೇದನೆ ಕಂಡುಬರುತ್ತದೆ.

ಸರ್ವಜ್ಞ ಕುಟುಂಬದಲ್ಲಿ ಸೊಸೆ ಎಂಬುವವಳ ಮಹತ್ವ ಎಷ್ಟು?, ಅವಳ ನಡೆ-ನುಡಿ ಹೇಗಿರಬೇಕು ? ಎಂದೆಲ್ಲಾ ತನ್ನ ವಚನದಲ್ಲಿ ಪ್ರತಿಕ್ರಿಯಿಸಿದ್ದಾನೆ;

ಹಳ್ಳ-ಗದ್ದೆಗಳಾಗಿ ಕುಳ್ಳವೆರಡೆತ್ತಾಗಿ
ಒಳ್ಳೆ ಗುಣದವಳು ಸೊಸೆಯಾದಿರಾ ಮನೆಗೆ
ಬಳ್ಳದಲಿ ಹೊನ್ನು ಸರ್ವಜ್ಞ.

ನೀರಾವರಿ ಗದ್ದೆಯಲ್ಲಿ ರಂಟೆ ಉಳುವುದಕ್ಕೆ ಕುಳ್ಳವಾಗಿರುವ ಎರಡೆತ್ತುಗಳು ರೈತನಿಗೆ ಅತ್ಯವಶ್ಯಕ. ಅದೇರೀತಿ ಮನೆಯನ್ನು ಸರಿದೂಗಿಸಿಕೊಂಡು ಹೋಗುವ, ಲಾಭ-ನಷ್ಟಗಳ ಬಗೆಗೆ ವಿಚಾರ ಮಾಡುವ ಗುಣವಂತ ಸೊಸೆ ಮನೆಯೊಳಗಿದ್ದರೆ, ಆ ಮನೆಯು ಹೊನ್ನು ತುಂಬಿದಂತಿರುತ್ತದೆಂದು ವರ್ಣಿಸಿ ವಿವರಿಸಿದ್ದಾನೆ.

ಸಹಜವಾಗಿ ಕುಟುಂಬದಲ್ಲಿ ಗಂಡಸರು ಮೈಮುರಿದು ದುಡಿದು ಮನೆಗೆ ಬೇಕಾಗುವ ಸಾಮಾನುಗಳನ್ನು ತರಬಹುದು. ಆದರೆ ಪ್ರತಿ ಹೆಜ್ಜೆ, ಹೆಜ್ಜೆಗೂ ಸಂಸಾರ ತೂಗಿಸಿಕೊಂಡುಹೋಗುವ ಜವಾಬ್ದಾರಿ ಹೆಣ್ಣಿಗಿರುತ್ತದೆ. ಇಂತಹ ''ಹೆಣ್ಣಿಲ್ಲದ ಮನೆಯು ತಲೆ ಹೋದ ಮುಂಡದಂತೆ'' ಎಂದು ಸರ್ವಜ್ಞ ಹೇಳಿದ್ದಾನೆ.

ಹೆಣ್ಣನ್ನು ಕುರಿತಾಗಿ ಬರೆದ ಸರ್ವಜ್ಞನ ಕೆಲವು ವಚನಗಳು ಜಾನಪದರ ತ್ರಿಪದಿಗಳಿಗೆ ಹೆಚ್ಚು ಹತ್ತಿರವಾಗಿವೆ. ಜಾನಪದರಂತೆ ಹೆಣ್ಣಿನ ಸ್ಥಿತಿ-ಗತಿಗಳ ಬಗೆಗೆ ಒತ್ತು ಕೊಟ್ಟು ಅವಳ ಸ್ಥಾನ-ಮಾನ ಹಾಗೂ ಮೌಲ್ಯದ ಬಗೆಗೆ ತಿಳಿಸಿದ್ದಾನೆ. ಹೆಣ್ಣಿನ ಮೌಲ್ಯ ಅಡಗಿರುವುದು ಅವಳು ಮದುವೆಯಾಗಿ, ನಂತರ ತಾಯಿಯಾಗಿ, ಅದೆಲ್ಲಕ್ಕೂ ಮುಖ್ಯವಾಗಿ ಸಮಾಜದಲ್ಲಿ ಸದ್ಗೃಹಿಣಿ ಯಾಗಿ ಬಾಳುವುದರಲ್ಲಿದೆ ಎಂಬ ತಿರುಳನ್ನು ಅಭಿವ್ಯಕ್ತಿಸಿದ್ದಾನೆ. ಹೆಣ್ಣಿಲ್ಲದ ಮನೆ ಚೆನ್ನಿಲ್ಲ; ಹೆಣ್ಣು ಮನೆಗೆ ಕಣ್ಣು (ಬೆಳದಿಂಗಳು; ಎ.ಸೀ., ಪು.೫೩). ಆದ್ದರಿಂದ ಸ್ತ್ರೀಯ ಆತ್ಮವು ಪುರುಷನ ಆತ್ಮಕ್ಕಿಂತ ಹೆಚ್ಚು ಸುಸಂಸ್ಕೃತವಾದುದೆಂಬುದರಲ್ಲಿ ಸಂದೇಹವಿಲ್ಲ.

ಮನ ಬಂದ ಹೆಣ್ಣನ್ನು ವಿನಯದಲ್ಲಿ ಕರೆದಿತ್ತು
ಮನ ಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ.

ಮನಮೆಚ್ಚಿ ಒಲಿದು ಬರುವ ಹೆಣ್ಣನ್ನು ಅಷ್ಟೇ ವಿನಯದಿಂದ ಬಾಳ್ವೆ ನಡೆಸಿದರೆ, ಅಮೃತದ ಕೆನೆ ಹಾಗೂ ಅಮೃತದ ರಸ ವಾಹಿನಿಯಲ್ಲಿ ಮಿಂದಂತಾಗುತ್ತದೆ. ಸ್ತ್ರೀ ಎಂಬುದು ಅಯಸ್ಕಾಂತದಂತೆ. ಪುರುಷನು ಕಬ್ಬಿಣದಂತೆ. ಕಬ್ಬಿಣವು ದೋಷವುಳ್ಳದ್ದಾದರೂ ಅಥವಾ ದೋಷ ವಿಲ್ಲದೆ ಬಹು

ಶುದ್ಧವಾಗಿದ್ದರೂ ಆ ಅಯಸ್ಕಾಂತದ ಕಡೆಗೆ ತಿರುಗುವುದು. ಪುರುಷನು ಎಂತಹ ವಿದ್ಯೆಗಳನ್ನು ಬಲ್ಲಿದನಾದರೂ ಸ್ತ್ರೀಯ ಕಡೆಗೆ ತಿರುಗದೇ ಇರಲಾರನು. ಹೀಗೆ ಚಾರಿತ್ರಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಮಾನಸಿಕವಾಗಿ ಹಾಗೂ ಲೈಂಗಿಕವಾಗಿ ಹೆಣ್ಣಿನ ಸ್ಥಾನವನ್ನು ನಮ್ಮ ಗ್ರಾಮೀಣ ಸಮಾಜಕ್ಕೆ ಸಂಬಂಧಿಸಿದಂತೆ ಅವಲೋಕಿಸಿದಾಗ ಹೆಣ್ಣು ಕ್ಷಮಾಮಯಿ, ಕರುಣಾಮಯಿ ಹಾಗೂ ಶಕ್ತಿ ಸ್ವರೂಪಿಣಿ. ''ಹೆಣ್ಣಿಲ್ಲದೇ ಗಂಡಿನ ರಥ ನಡೆಯುವುದಿಲ್ಲ'' ಎಂಬ ಜನಪದರ ಮಾತಿನಲ್ಲಿರುವ ಹೆಣ್ಣಿನ ಮೌಲ್ಯವನ್ನು ಸರ್ವಜ್ಞನೂ ಸಹ ;

ಪಲ್ಲಕ್ಕಿ ಏರಿದವರೆಲ್ಲಿಂದ ಬಂದಿಹರು
ನೆಲ್ಲಕ್ಕಿಯಂತ ಸುಲಿವಲ್ಲ ಹಿರಿಯರು
ನಲ್ಲಳಿಂದಲ್ಲೇ ? ಸರ್ವಜ್ಞ.

ಎಂದು ಕೇಳುವುದರ ಮೂಲಕ ಹೆಣ್ಣಿನ ಮೌಲ್ಯವನ್ನು ಎತ್ತಿ ಹಿಡಿದಿದ್ದಾನೆ.

## ೬.೩. ದಾನ-ಧರ್ಮ :

ದಾನ ಮಾಡುವುದು ಮನುಷ್ಯನ ಸಂಸ್ಕೃತಿಯ ಒಂದು ಪ್ರತೀಕ. ಇದೊಂದು ಒಳ್ಳೆಯ ಆಚಾರ. ಜನಪದರು ಈ ಬಗೆಗೆ ಬಹಳ ಒಳ್ಳೆಯ ಕಲ್ಪನೆ ಇಟ್ಟುಕೊಂಡವರು . ಹೀಗೆ ದಾನ ಮಾಡುವುದು ಅಂದಿಗೂ ಇಂದಿಗೂ ಮೌಲ್ಯದ ಸಂಗತಿಯಾಗಿದೆ .

ಸರ್ವಜ್ಞ ತಾನಿದ್ದ ಸಮಾಜವನ್ನು ಸೂಕ್ಷ್ಮವಾಗಿ ಸಮೀಕ್ಷಿಸಿದ್ದಾನೆ. ಸಾಮಾಜಿಕ ಏರುಪೇರಿನ ಬಗೆಗೆ ಅವನಿಗೆ ಅಸಮಧಾನವಿದೆ. ಮನುಷ್ಯ ಮನುಷ್ಯನ ನಡುವೆ ಅಂತರ ಹೆಚ್ಚಿದಷ್ಟೂ ಸಂಬಧಗಳು ದೂರುವಾಗುತ್ತವೆ. ಆಗ ಬದುಕು ತುಂಬಾ ಅಸಹನೀಯವಾಗುತ್ತದೆಂಬುದನ್ನು ಆತ ಬಲ್ಲ. ಇಂಥಹ ಅಸಮದಾನ ಹೆಚ್ಚಾಗಲು ಸರ್ವಜ್ಞನ ಪ್ರಕಾರ ದಾನ ಧರ್ಮವೆಂಬುದು ಕೊರತೆ. ಇದು ಅತ್ಯಂತ ಪವಿತ್ರವಾದ ಸಾಮಾಜಿಕ ಕಾರ್ಯವಾಗಿವೆ. ದಾನವೆಂಬುದು ಮೂಲತಃ ಧಾರ್ಮಿಕ ಆದರ್ಶದರೂ ಅದು ಸಮಾಜದಲ್ಲಿಯೇ ಅನುಷ್ಠಾನಕ್ಕೆತರಬಹುದಾದ ಕಾರ್ಯವಾದದ್ದರಿಂದ ಶ್ರೀಮಂತರು ಬಡವರಿಗೆ, ಮೇಲಿನವರು- ಕೆಳಗಿನವರಿಗೆ, ಉಳ್ಳವರು -ನಿರ್ಗತಿಕರಿಗೆ ದಾನ ಮಾಡಿದರೆ ಮಾತ್ರ ಸಮಾಜದಲ್ಲಿ ನೆಮ್ಮದಿ ಏರ್ಪಡುತ್ತದೆ. ಇಲ್ಲದಿದ್ದರೆ ಮತ್ಸರ, ಕಳ್ಳತನ, ದರೋಡೆ, ಮೋಸ ಮುಂತಾದ ಅನಿಷ್ಟಗಳು ಪ್ರಾರಂಭವಾಗುತ್ತವೆ. ಇದನ್ನು ಮನಗಂಡಿದ್ದರಿಂದ ಜನಪದರು ತಮ್ಮ ಗೀತೆಯೊಂದರಲ್ಲಿ :

ಹಾಲುಳ್ಳ ಕಾಲದಲ್ಲಿ ಹಬ್ಬ ಮಾಡಬೇಕು
ಗಾಳಿ ಬಂದಾಗಲೇ ತೂರಿಕೊಳ್ಳಬೇಕು
ಮೇಲಾದ ಉಡುಗೊರೆಯ ತರಿಸಿಕೊಡಬೇಕು ಎಂದಿದ್ದಾರೆ.

( ಜನಪದ ಗೀತೆಗಳು, ಪು. ೪೪)

ಇದನ್ನೇ ಸರ್ವಜ್ಞ ತನ್ನ ವಚನದಲ್ಲಿ :

ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು
ಪರಿಣಾಮವಕ್ಕು ಪದವಕ್ಕು । ಕೈಲಾಸ
ನೆರೆ ಮನೆಯೇ ಅಕ್ಕು ಸರ್ವಜ್ಞ (೬೦೭)

ಸರ್ವಜ್ಞ ಬಡವರನ್ನು, ನಿರ್ಗತಿಕರನ್ನು ಮನೆಗೆ ಕರೆದು ಊಟ ಮಾಡಿಸಿ ಉಡುಗೊರೆ ದಾನಮಾಡಬೇಕು . ಆಗ ಪುಣ್ಯ ಲಭಿಸುತ್ತದೆ ಮತ್ತು ಉನ್ನತ ಸ್ಥಾನಗಳು ಲಭಿಸುವವು. ಕಡೆಗೆ ಕೈಲಾಸ ದೊರೆಯುವುದು ಎಂದಿದ್ದಾನೆ.

ದಾನಗಳಲ್ಲಿ ಅನ್ನದಾನವೇ ಅತ್ಯಂತ ಪವಿತ್ರವಾದುದು:

ಅನ್ನದಾನಗಳಿಂದ ಇನ್ನು ದಾನಗಳಿಲ್ಲ
ಅನ್ನಕ್ಕೆ ಮೇಲು ಹಿರಿದಿಲ್ಲ - ಲೋಕಕ್ಕೆ
ಅನ್ನವೇ ಪ್ರಾಣ ಸರ್ವಜ್ಞ.

( ಬಸವ ಪಥ, ಪು.೩೮)

ಇಲ್ಲಿಯ ಅನ್ನದ ಕಲ್ಪನೆ ಶರಣರ ದಾಸೋಹದ ಕಲ್ಪನೆಗೆ ಅತ್ಯಂತ ನಿಕಟವಾಗಿದೆ. ನಮ್ಮ ಗ್ರಾಮೀಣ ಪ್ರದೇಶದಲ್ಲಿ ದಾನ-ಧರ್ಮದ ವಿಷಯವಾಗಿ ಬಹಳ ಮುಕ್ತವಾಗಿ ಮಾತನಾಡಿಕೊಳ್ಳುವುದುಂಟು. '' ಆ ಶಿವ ಕೈತುಂಬ ಕೊಟ್ಟಾಗ ದೊಡ್ಡ ಮನಸ್ಸಿನಿಂದ ದಾನ ಮಾಡಿದರೆ, ಮಕ್ಕಳು ಮರಿಯೆಲ್ಲಾ ಚೆಂದಾಗಿರ್ತಾರೆ, ಸಾಯುವಾಗ ನಮ್ಮಿಂದೇನೂ ಬರಲ್ಲ. ಇದ್ದಾಗ ಕೈಲಾದಷ್ಟು ದಾನ-ಧರ್ಮ ಮಾಡಿ ಪುಣ್ಯ ಕಟ್ಟಿಕೊಳ್ಬೇಕು'' ಎಂಬಂತಹ ಅನೇಕ ಮಾತುಗಳನ್ನು ಕೇಳುತ್ತೇವೆ. ಮನುಷ್ಯರ ನಡುವೆ ಇರುವ ಸಂಪತ್ತು ಎಲ್ಲದಕ್ಕೂ ಮೂಲ. ಇದು ಕೇವಲ ಒಂದೇ ಕಡೆ ಇದ್ದಾಗ ಸಮಾಜ ಉದ್ದಾರವಾಗುವುದಿಲ್ಲ. ಸದಾ ಚಲಾವಣೆಯಲ್ಲಿರಬೇಕೆಂಬ ದೂರಾಲೋಚನೆಯು ಇಂದಿಗಿಂತ ಅಂದೇ ಹೆಚ್ಚಾಗಿತ್ತೆಂಬುದು ಸರ್ವಜ್ಞನಿಂದ ತಿಳಿದು ಬರುತ್ತದೆ;

ಹುಟ್ಟುವಾಗಲೇ ಧನವ ಮೊಟ್ಟೆಗಿಟ್ಟಿಳಿದಿಹನೆ ?
ಕಟ್ಟ ಕಡೆಯಲಿ ಕೊಂಡೊಯ್ಯುನಿದನರಿದು
ಕೊಟ್ಟುಂಬ ದಾನಿ ಸರ್ವಜ್ಞ.

ಮನುಷ್ಯ ಹುಟ್ಟುವಾಗಲೇ ಎಲ್ಲಾ ಸಂಪತ್ತನ್ನು ಪಡೆದುಕೊಂಡು ಭೂಮಿಗೆ ಬಂದಿರುವುದಿಲ್ಲ. ಹಾಗೆಯೇ ಇಲ್ಲಿ ದೊರೆಯುವ ಸಂಪತ್ತನ್ನು ಎಷ್ಟೇ ಗಳಿಸಿದರೂ ಸಾಯುವಾಗ ಹೊತ್ತುಯ್ಯುವುದಾಗು ವುದಿಲ್ಲ. ಆದ್ದರಿಂದ ದಕ್ಕಿರುವ ಸಂಪತ್ತನ್ನು ಸ್ವಲ್ಪವಾದರೂ ಇತರರಿಗೆ ದಾನ ಮಾಡಿ ಊಟ ಮಾಡ ಬೇಕು.

ಕೊಡುವಾತನೇ ಹರನು ಪಡೆಯುವಾತನೇ ನರನು
ಒಡಲ ಒಡವೆಗಳ ಕೆಡೆದು ಪೋಗದ ಮುನ್ನ
ಕೊಡು ಪಾತ್ರವರಿದು ಸರ್ವಜ್ಞ.

ದಾನ ಕೊಡುವವನು ಶಿವನಿಗೆ ಸಮಾನನಾಗುವನು. ಅದೇ ರೀತಿ ದಾನವನ್ನು ತೆಗೆದುಕೊಳ್ಳು ವವನು ಮನುಷ್ಯನಿಗೆ ಸಮಾನನಾಗುವನು. ದೇಹವೆಂಬ ಒಡವೆ ಕೆಟ್ಟು ಹೋಗುವ ಮುನ್ನ ಬಡವರನ್ನು ಹುಡುಕಿ, ಅವರಿಗೆ ದಾನವನ್ನು ಕೊಡ ಬೇಕೆಂದು ನೆನಪಿಸಿದ್ದಾನೆ.

ಜಾನಪದ ಗೀತೆ.

ಮರ್ತ್ಯಕ್ಕ ಬಂದೀದ ಕರ್ತವ್ಯ ಮಾಡಾಕ
ಮರ್ತುರ್ ಕುಂತೀಯಾಕ ಮುರ್ತ್ಯುರ್ । ಒಯ್ದೀತು
ತುರ್ತುರ್ ಮಾಡಣ್ಣಾ ನಿನ ಕೆಲಸ.

ಸರ್ವಜ್ಞನ ವಚನ.

ಇಕ್ಕಿದಾತನು ಉಂಟು ನಕ್ಕು ಸ್ವರ್ಗಕ್ಕೆ ಹೋದ
ಇಕ್ಕದನು ಹೋದ ನರಕಕ್ಕೆ ಲೋಕದೊಳ
ಗಿಕ್ಕಲೇ ಬೇಕು ಸರ್ವಜ್ಞ.

ಭೂಮಿಗೆ ಬಂದ ಮೇಲೆ ಇದ್ದವರು ಇಲ್ಲದವರಿಗೆ ದಾನ ಮಾಡಲೇ ಬೇಕು. "ಸಂಪತ್ತಿಗೆ ದಾನವೇ ನಿಜವಾದ ಭೂಷಣ" (ಮುತ್ತಿನಂಥ ಮಾತು ಗಳು, ಪು. ೧೪೭) ಎಂಬ ನಾಣ್ಣುಡಿಯಂತೆ ನಾವು ಬರುವುದರೊಳಗೆ ವಿನಯ ಭಾವದಿಂದ, ಮಿತ್ರತ್ವ ಭಾವ ದಿಂದ ದಾನ ಮಾಡಿದಾಗ ಸ್ವರ್ಗವನ್ನು ಕಾಣಬಹುದು. ಇಲ್ಲದೇ ಹೋದರೆ ನರಕವೇ ಗತಿ ಎಂದು ಸರ್ವಜ್ಞ ಎಚ್ಚರಿಸಿದ್ದಾನೆ.

ಜನಪದ ಗೀತೆ

ಕೊಟ್ಟದ್ದು ಸಿಕ್ಕೀತು ಇಟ್ಟಿದ್ದು ಕಳದೀತು
ಕೊಟ್ಟಾತ ಕೆಡಲಿಲ್ಲ ನೋಡೆ । ಕಟ್ಟಿಟ್ಟ
ಬುತ್ತ್ಯಾಗಿ ಹೊಟ್ಟೇಗಾದೀತ.

ಸರ್ವಜ್ಞ ವಚನ

ಕೊಟ್ಟದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ
ಕಟ್ಟಿಹುದು ಬುತ್ತಿ ಸರ್ವಜ್ಞ.

ಜನಪದರ ದಾಟಿಯಲ್ಲಿ ಸರ್ವಜ್ಞನು ಸಹ ದಾನವನ್ನು ಮಾಡಿದಾಗ ಅದು ಬೇರೆ ಯಾವುದೋ ರೂಪದಲ್ಲಿ ಮರಳಿ ಬರುವುದು ಖಂಡಿತ. ಇರುವ ಸಂಪತ್ತನ್ನು ಮುಚ್ಚಿಟ್ಟರೆ, ಕಳ್ಳ ಕಾಕರರಿಂದ ರಕ್ಷಿಸುವ ಭಾರ ಹೆಚ್ಚಾಗುತ್ತದೆ. ಇಲ್ಲದವರಿಗೆ ಸಹಾಯ ಮಾಡಿದರೆ ಆ ದಾನವು ಅನ್ಯ ರೂಪದಲ್ಲಿ ಲಾಭವಾಗಿ ಮನಸ್ಸಿಗೆ ನೆಮ್ಮದಿ ದೊರೆಯುತ್ತದೆ. ಹಾಗೂ ಇಲ್ಲದವರ ಗೋಳು ನಿವಾರಣೆಯಾಗುತ್ತದೆ. ದಾನದ ಫಲ ಕೇವಲ ಬದುಕಿದ್ದಾಗ ಮಾತ್ರವಲ್ಲ, ಮರಣವಾದ ಮೇಲೂ ದೊರಕುತ್ತದೆ. ಬದುಕಿನ ಪ್ರವಾಸದಲ್ಲಿ ಕೊಟ್ಟ ದಾನ ಕಟ್ಟಿದ ಬುತ್ತಿಯಂತೆ ಉಪಯೋಗಕ್ಕೆ ಬರುತ್ತದೆ (ಕಾವ್ಯಾನುಭವ, ಪು. ೪೨).

ಬೇಡುವ ಮುನ್ನೀವ ನಾಡಿಗೊಳಗುತ್ತಮನು
ಬೇಡಿದಡೆ ಈವ ಮಧ್ಯಮನಧಮ ತಾ
ಬೇಡಲೀಯದನು ಸರ್ವಜ್ಞ.

ಆಡದಲೆ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡದವನು ಮಧ್ಯಮನು ಅಧಮ ತಾ
ಆಡಿಯೂ ಕೊಡದವನು.

ಬೇಡುವವರು ಮನೆಗೆ ಬರುತ್ತಿದ್ದಾರೆಂದು ತಿಳಿದಾಕ್ಷಣ, ಅವರಿಗೆ ಬೇಕಾದುದನ್ನು ನೀಡುವುದಕ್ಕೆ ಸಿದ್ಧನಾಗಿರಬೇಕು. ಅಂಥವನು ನಾಡಿನಲ್ಲಿ ಉತ್ತಮನೆಂದೆನಿಸಿಕೊಳ್ಳುತ್ತಾನೆ. ಕೆಲವೊಮ್ಮೆ ಬೇಡುವವರು ಮನೆಗೆ ಬಂದು ಕೈಯೊಡ್ಡಿದಾಗ ಅವರಿಗೆ ಬೇಸರದ ಮಾತುಗಳಿಂದ ಕೊಟ್ಟು ಕಳುಹಿಸುವುದು ಮಧ್ಯಮನೆಂದೆನಿಸಿ ಕೊಳ್ಳುತ್ತಾನೆ. ಅಷ್ಟೇ ಅಲ್ಲ ಬೇಡುವವರು ಹತ್ತಾರು ಸಾರಿ ಕೇಳಿದಾಗಲೂ ಒಂದಿಷ್ಟೂ ದಾನ ನೀಡದವನು ಲೋಕದೊಳಗೆ ಅಧಮನೆಂದೆನಿಸಿಕೊಳ್ಳುತ್ತಾನೆ.

ಇಚ್ಛೆಯನು ಅರಿದಿತ್ತ ನುಚ್ಚೊಂದು ಮಾಣಿಕವು
ಇಚ್ಛೆಯದ ತೀರ್ದ ಬಳಿಕಿತ್ತ ಮಾಣಿಕವು
ನುಚ್ಚಿಗೂ ಕಷ್ಟ ಸರ್ವಜ್ಞ.

ಯಾರಾದರೂ ಮನೆಗೆ ಬಂದು, ಹಸಿವೆಯೆಂದು ಬೇಡಿದಾಗ ಕನಿಷ್ಠ ನುಚ್ಚನ್ನು ದಾನ ಮಾಡಿದಾಗ ಅದು ಆ ಸಂದರ್ಭದಲ್ಲಿ ಬೆಲೆಬಾಳುವ ರತ್ನದಷ್ಟೇ ಬೆಲೆಯನ್ನು ಪಡೆದುಕೊಳ್ಳುತ್ತದೆ. ಬೇಡುವವರ ಇಚ್ಛೆ ಅಥವಾ ಹಸಿವು ತೀರಿಸದಿದ್ದರೆ, ಅದೇ ನುಚ್ಚು ಆ ರತ್ನಕ್ಕಿಂತಲೂ ಕಡಿಮ ಯೋಗ್ಯತೆ ಯನ್ನು ಪಡೆದುಕೊಳ್ಳುತ್ತದೆಂಬುದನ್ನು ಸರ್ವಜ್ಞ ಮಾರ್ಮಿಕವಾಗಿ ತಿಳಿಸಿದ್ದಾನೆ. ಸಮಾಜದಿಂದ ಬಂತಂತಹ ಸಂಪತ್ತನ್ನು ಮತ್ತೆ ಸಮಾಜಕ್ಕೆ ದಾನ ಮಾಡುವುದರಿಂದ ಅದರ ಜವಾಬ್ದಾರಿ ಕಡಿಮೆಯಾಗು ವುದೆಂಬುದು ಜನಪರ ಭಾವನೆ.

ಶಿವಕೊಟ್ಟ ಕಾಲಕ್ಕೆ ಧಾನ್ಯವ ಬೆಳೆದರೆ
ರಾತ್ರಿ ಹೊತ್ತು ರಾಶೀನಾದ್ರು ಹಾಕಬಾರದು
ಹಾಕಿದ್ರೇಕೆ ಹಾಕುವೊಲ್ಲೆ
ಮತ್ತೆ ಒಂದ ಹೇಳುತೀನಿ
ದಾನ-ಧರ್ಮದ ಕೈಯ
ಮರೆಯಬಾರದು । ಮೂಢನಾಗಬಾರದು (ಜನಪದ ಗೀತೆಗಳು, ಪು.೬೩)

ಎಂಬಂತೆ ಶಿವ ಕೊಟ್ಟ ಕಾಲಕ್ಕೆ ಮೈಮುರಿದು ದುಡಿದು ಧಾನ್ಯವನ್ನು ಬೆಳೆದು ರಾತ್ರಿ ಹೊತ್ತಿನಲ್ಲಿ ರಾಶಿ ಮಾಡಬಾರದು. ಒಂದು ವೇಳೆ ಮಾಡಿದರೂ ಸಹ ದಾನ ಧರ್ಮವನ್ನು ಮಾಡದೇ ಇರಬಾರದು ಎಂಬುದು ಜನಪದರಲ್ಲಿ ಕಂಡುಬರುತ್ತದೆ.

ಜನಪದ ಗೀತೆ

ಅತ್ತಂತ ಮಕ್ಕಳಿಗೆ ತುತ್ತು ರೊಟ್ಟಿ ಕೊಡಲಿಲ್ಲ
ಮಕ್ಕಳ ಬೇಡಿ ಪರ್ವತಕ । ಹೋದರ
ಮುಕ್ಕಣ್ಣ ಶಿವನು ನೋಡಿ ನಗನೇನ
(ಜನಪದ ಗೀತೆಗಳು, ಪು. ೧೨೫).

ಸರ್ವಜ್ಞನ ವಚನ

ಆನೆಯನು ಏರುವಡೆ ದಾನವನು ಮಾಡುವುದು
ಭಾನು ಮಂಡಲದನಡರುವಡೆ ಹಸಿದವರಿಗೆ
ನೀನೊಲಿದು ಇಕ್ಕು ಸರ್ವಜ್ಞ.

ಅಂದಳವನೇರುವಡೆ ಅಂದದಲಿ ಸುಖಿಸುವರೆ
ಮಂದಗಮನೆ ಸಿರಿ, ದೊರೆಯುವರೆ ಹಸಿದವರಿಗೆ
ಚೆಂದದಿಂದಿಕ್ಕು ಸರ್ವಜ್ಞ.

ಬೀದಿಯಲ್ಲಿರುವ ಮಕ್ಕಳು ರೊಟ್ಟಿಗಾಗಿ ಬೇಡುವಾಗ ಅವರಿಗೆ ರೊಟ್ಟಿಯ ತುಣುಕೊಂದನ್ನು ನೀಡದೇ ಮಕ್ಕಳ ಫಲ ಬೇಕೆಂದು ಕೇಳುವ ಒಬ್ಬ ಗರತಿಯ ಚಿತ್ರಣ ಇಲ್ಲಿ ಕಂಡು ಬರುತ್ತದೆ. ಜೀವನದಲ್ಲಿ ಏನು ಬೇಕಾಗಿದೆಯೋ ಅದರ ಬಗೆಗೆ ಹೆಚ್ಚು ಪ್ರೀತಿ, ಮಮತೆ ಇರುತ್ತದೆ. ಇದನ್ನೇ ಜನಪದರು ಮಕ್ಕಳ ಫಲ ಬೇಕೆಂದು ದಾನ ಧರ್ಮ ಮಾಡದೇ ಮೂಢನಂಬಿಕೆಗಳನ್ನು ಆಚರಿಸಿದರೆ, ಶಿವನು ಕರುಣಿಸುತ್ತಾನೆಯೇ ?. ಬದುಕಿನಲ್ಲಿ, ಬೇಡುತ್ತಾ ಬರುವ ಅನಾಥ ಮಕ್ಕಳಿಗೆ ಆಹಾರವನ್ನು ನೀಡದೆ ಮಕ್ಕಳು ಬೇಕೆಂದು ಬೇಡುವವರನ್ನು ಕಂಡು ಆ ಶಿವ ನಗದೇ ಇರಲಾರನು ಎಂಬ ಮಾತುಗಳು ಇಲ್ಲಿ ಕೇಳಿ ಬರುತ್ತವೆ. ಅದೇ ರೀತಿ ಸರ್ವಜ್ಞ ಜೀವನದಲ್ಲಿ ಸುಖದ ವೈಭೋಗ ಪಡೆಯಬೇಕಾದರೆ ಮೊದಲು ದಾನವೀಯಲೇ ಬೇಕು. ಅಷ್ಟೇ ಅಲ್ಲ ಸೂರ್ಯ ಮಂಡಲವನ್ನು ಭೇದಿಸಿ ಸ್ವರ್ಗಕ್ಕೆ ಹೋಗಬೇಕಾದರೆ, ಪಲ್ಲಕ್ಕಿಯಲ್ಲಿ ಕೂತು ಮೈಮರೆಬೇಕಾದರೆ, ಮಂದಗಮನೆಯರಾದ ಹೆಂಡತಿಯರು ದೊರೆಯಬೇಕಾದರೆ ಮೊದಲು ಹಸಿದವರಿಗೆ ದಾನ ಮಾಡಲೇ ಬೇಕು . ಆಗ ಎಲ್ಲವೂ ಪ್ರಾಪ್ತಿಯಾಗುವವು ಎಂದು ಸರ್ವಜ್ಞ ತಿಳಿಸಿದ್ದಾನೆ.

ಎಲ್ಲ ದಾನಗಳಿಗಿಂತ ಅನ್ನ ದಾನವೇ ಶ್ರೇಷ್ಠವೆಂಬುದನ್ನು ಜನಪದ ಗರತಿಯೊಬ್ಬಳು ಇಲ್ಲಿ ಮಾರ್ಮಿಕವಾಗಿ ಹೇಳಿರುವುದಲ್ಲದೇ ವಿವಿಧ ಪದಾರ್ಥಗಳನ್ನು ತನ್ನ ತವರು ಮನೆಯವರು ನೀಡುತ್ತಾರೆಂದು ನುಡಿದಿದ್ದಾಳೆ.

ಜೋಗಿ ಜಂಗಮರೆ ಹೋಗಿ ನನ್ನ ತೌರೀಗೆ
ಸಣ್ಣಕ್ಕಿ ದಾನ ಕೊಡುತಾರೆ । ಅಣ್ಣಯ್ಯ
ಹೊನ್ನಿನ ದಾನ ಕೊಡುತಾರೆ .

ನೀರುಳ್ಳಿ ದಾನ ನೀರು ಮಜ್ಜಿಗೆ ದಾನ
ಅಂಬಲಿಯ ದಾನ ಕೊಡುತಾರೆ । ಅಣ್ಣಯ್ಯ
ಅಂಬುಲದ ಮುದ್ದೆ ಕೊಡುತಾನೆ .

ಅತ್ತಿಗೆ ಬಸುರಿ ಮನೆ ಮುಂದೆ ಚಪ್ಪರ
ಅನ್ನ ಛತ್ರವ ಇಡಿಸೀದೆ । ಅಣ್ಣಯ್ಯ
ಮನೆ ಮುಂದೆ ಇಡಿಸಿದೆ ಅರವಂಟಿಗೆ ॥

ಹಾದಿಯೇ ಅರಮನೆ ಬೀದಿಯೇ ಪಡಸಾಲೆ
ಏಳು ಸುತ್ತಿನ ಕಲ್ಲು ಬಾವಿ । ಕಟ್ಟಿಸ್ಯಾನು
ಇಡಿಸ್ಯಾನು ತಮ್ಮಯ್ಯ ಅರವಂಟಿಗೆ ॥

(ಜನಪದ ಗೀತೆಗಳು, ಪು.೩೭).

ಗರತಿಗೆ ತವರು ಮನೆಯೆಂದರೆ, ಬಹಳ ಅಕ್ಕರೆ. ಅಲ್ಲಿ ದಾನ ಧರ್ಮಗಳು ನಿರಂತರವಾಗಿರುತ್ತವೆ ಹಾಗೂ ನಿಸ್ವಾರ್ಥವಾಗಿರುತ್ತವೆಂಬ ಅಭಿಮಾನ ಅವಳದು. ತನ್ನ ಮನೆಗೆ ಬೇಡಲು ಬಂದ ಜಂಗಮರಿಗೆ ದಾನ ಮಾಡುತ್ತಾ, ಅವರಿಗೆ ಸಲಹೆಯನ್ನು ಈ ರೀತಿ ನೀಡುತ್ತಾಳೆ " ನನ್ನ ತವರಿಗೆ ನೀವು ಹೋಗಿರಿ, ನನ್ನಣ್ಣ ಸಣ್ಣಕ್ಕಿ, ಹೊನ್ನು, ನೀರುಳ್ಳಿ, ಮಜ್ಜಿಗೆ, ಅಂಬಲಿ , ಮುದ್ದೆ ಮುಂತಾದವುಗಳನ್ನು ಯಥೇಚ್ಛವಾಗಿ ನೀಡುತ್ತಾನೆ. ಅಷ್ಟೇ ಅಲ್ಲ , ಅಲ್ಲಿ ಅತ್ತಿಗೆ ಬಸುರಿಯಾಗಿರುವುದರಿಂದ ಹಸಿದವರಿಗೆ ಅನ್ನದಾನವನ್ನೇ ಮಾಡುವುದಲ್ಲದೆ , ಬಾಯಾರಿ ಬಂದವರಿಗೆ ಏಳು ಸುತ್ತಿನ ಕಲ್ಲಿನ ಬಾವಿಯನ್ನು ನನ್ನಣ್ಣ ಕಟ್ಟಿಸಿದ್ದಾನೆ" ಎಂದೆಲ್ಲ ತನ್ನ ತವರಿನ ಪ್ರೀತಿಯನ್ನು ಹೊಗಳುತ್ತಾಳೆ.

ಆಗ ಬಾ ಈಗ ಬಾ ಹೋಗಿ ಬಾ ಎನ್ನದಲೇ
ಆಗಲೇ ಕರೆದು ಕೊಡುವವನ ಧರ್ಮ ಹೊ
ನ್ನಾಗದೇ ಬಿಡದು ಸರ್ವಜ್ಞ.

ತಿರಿದು ತಂದಾದರೂ ಕರೆದು ಜಂಗಮಗಿಕ್ಕು
ಪರಿಣಾಮವಕ್ಕು, ಪದವಕ್ಕು ಕೈಲಾಸ
ನೆರೆಮನೆಯಕ್ಕು ಸರ್ವಜ್ಞ.

ಬೇಡುವವರು ಬಂದಾಗ ಆಗ ಬಾ, ಈಗ ಬಾ ಎನ್ನದಲೇ, ಕರೆದು ದಾನ ಕೊಡುವವನ ಧರ್ಮವು ಹೊನ್ನಾಗದೇ ಇರಲಾರದು. ದಾನ ಮಾಡಬೇಕೆಂದು ಮನದಲ್ಲಿ ಹೊಳೆದಾಗ ಬೇರೆಡೆ ಭಿಕ್ಷೆ ಬೇಡಿಕೊಂಡು ಬಂದಾದರೂ ಜಂಗಮರನ್ನು ಕರೆದು ದಾನ ನೀಡಲೇಬೇಕು. ಆಗ ಕೈಲಾಸವೆಂಬುದು ಸಮೀಪದ ಮನೆಯಂತಾಗುವುದು ಎಂದಿದ್ದಾನೆ.

ಮೇಲು ಕೀಳೆನಬೇಡ ಶೀಲವನು ಬಿಡಬೇಡ
ಕಾಲವಿದ ಕಾಲವೆನಬೇಡ । ಧರ್ಮದಾ
ಕೀಲು ಬೇರೆಂದ ಸರ್ವಜ್ಞ.

ದಾನ ಮಾಡುವಾಗ ಆ ದಾನವನ್ನು ತೆಗೆದುಕೊಳ್ಳುವವನು ಮೇಲ್ತರಗತಿಯವನೋ ಅಥವಾ ಕೀಳು ತರಗತಿಯವನೋ ಎಂಬ ಸಂಶಯ ಇರಬಾರದು. ಅದೇರೀತಿ ದಾನ ಮಾಡತಕ್ಕ ವಸ್ತುವು ಎಷ್ಟು ಬೆಲೆ ಬಾಳುವುದೆಂಬ ಆಲೋಚನೆ ಮಾಡಬಾರದು. ಏನೇ ಆದರೂ ದಾನ ಮಾಡುವ ಸಂದರ್ಭದಲ್ಲಿ ಒಳ್ಳೆಯ ಮನಸ್ಸು ಇರಬೇಕಷ್ಟೆ.

ದಾನಮಾಡಬೇಕೆಂದುಕೊಂಡು ಬಳಿಯಲ್ಲಿರುವ ಸಂಪತ್ತನ್ನೆಲ್ಲಾ ನೀಡುವುದು ಯೋಗ್ಯವಲ್ಲ ವೆಂಬುದನ್ನು ;

ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಸುರಿದಿಹರೆ ?
ಕೊಡಬೇಡ ಕೊಡದೆ ಇರಬೇಡ, ಧರ್ಮವನು
ಬಿಡಬೇಡವೆಂದ ಸರ್ವಜ್ಞ.

ಪ್ರಣತಿಯೊಳಗೆ ಎಣ್ಣೆ ಮುಗಿದ ಬಳಿಕ ಕೊಡವನೆತ್ತಿ ಎಣ್ಣೆಯನ್ನು ಸುರಿಯಲಾರರು. ಅದರಂತೆ ಬೇಡುವವರು ಬಂದಾಗ ಎಲ್ಲಾ ಸಂಪತ್ತನ್ನು ದಾನ ಮಾಡಿ ಬರಿಗೈಯಾಗುವುದಕ್ಕಿಂತ ತಕ್ಕಷ್ಟು ದಾನ ಮಾಡಿ ದೊಡ್ಡ ಮನುಷ್ಯನಾಗುವುದೊಳಿತು. ಈ ವಚನದಲ್ಲಿ ಸರ್ವಜ್ಞ ಪರಿಚಯಿಸಿರುವ ಸೊಡರು, ಎಣ್ಣೆ, ಕೊಡ ಮುಂತಾದ ಜನಪದರ ಬಳಕೆಯಲ್ಲಿರುವ ಪದಗಳನ್ನು ತನ್ನ ವಚನದಲ್ಲಿ ನೇರವಾಗಿ ಬಳಸಿಕೊಂಡಿದ್ದಾನೆ.

ದಾನ ಮಾಡುವಾತನೇ ದಾತ. ದಾನಕ್ಕೆ ಒದಗದ ಧನ ಎಷ್ಟಿದ್ದರೇನು ಫಲವೆಂಬಂತೆ;

ಇತ್ತುದನು ಈಯದಗೆ ಮೃತ್ಯು ಒಲಿಯದೆ ಬಿಡಳು
ಹತ್ತಿರ್ದ ಲಕ್ಷ್ಮಿ ತೊಲಗಲ್ಕೆ ಮುಂದವನ
ತೊತ್ತಾಗಿ ಬರುವ ಸರ್ವಜ್ಞ.

ದಾನಿಗೂ ದಾನ ಮಾಡದೇ ಇರುವವನಿಗೂ ಮೃತ್ಯು ದೇವತೆಯು ಒಂದಿಲ್ಲೊಂದು ದಿನ ಬೆನ್ನು ಹತ್ತದೇ ಇರಲಾರಳು. ಸಿರಿವಂತನಲ್ಲಿದ್ದ ಹಣವು ಎಂದಾದರೊಮ್ಮೆ ಹೊರಟು ಹೋಗಲು, ಆಗ ಮೃತ್ಯು ದೇವತೆಯು ಸ್ವಲ್ಪವೂ ತಡಮಾಡದೇ ಅವನನ್ನು ನುಂಗುವಳು.

ಕೊಟ್ಟು ಕುದಿಯಲು ಬೇಡ ಕೊಟ್ಟಾಡಿ ಕೊಳಬೇಡ
ಕೊಟ್ಟು ನಾ ಕೆಟ್ಟೆನೆನಬೇಡ ಶಿವನಲ್ಲಿ
ಕಟ್ಟಿಹುದು ಬುತ್ತಿ ಸರ್ವಜ್ಞ.

ಉಣ್ಣದೊಡವೆಯ ಗಳಿಸಿ, ಮಣ್ಣಿನೊಳು ತಾನಿರಿಸಿ
ಸಣ್ಣಿಸಿ ನೆಲನ ಸಾರಿದನ| ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ.

ಮಾನವರ ದುರ್ಗುಣವನೇನೆಂದು ಬಣ್ಣಿಪೆನು
ದಾನಗೆಯ್ಯೆನಲು ಕನಲುವರು|ದಂಡವನು
ಮೌನದೀಯುವರು ಸರ್ವಜ್ಞ.

ಕೊಟ್ಟು ಎಂದಿಗೂ ಕೆಟ್ಟೆನೆಂದುಕೊಳ್ಳಬಾರದು. ಕೊಡುವುದೆಲ್ಲವೂ ಆತ್ಮ ಸಂತೋಷದಿಂದ ಕೊಟ್ಟಾಗ ತೆಗೆದುಕೊಳ್ಳುವವನಿಗೂ ಕೃತಜ್ಞತೆಯ ಭಾವನೆ ಬರುತ್ತದೆ. ಅದೇ ಪುಣ್ಯಕಾರ್ಯ. ಸುಖವನ್ನು ಭೋಗಿಸಿದ ಸಂಪತ್ತನ್ನು ಯಥೇಚ್ಛವಾಗಿ ಗಳಿಸಿದರೇನು ಫಲ ? 'ಅರ್ಥ ರೇಖೆ ಇದ್ದರೇನು, ಆಯುಷ್ಯ ರೇಖೆ ಇಲ್ಲದ ಮೇಲೆ' ಎಂಬ ಮಾತಿನಂತೆ ಅಕ್ಕಮಹಾದೇವಿಯೂ ಸಹ 'ಅಸಗ ನಿರೊಳಗಿರ್ದು ಬಾಯಾರಿ ಸತ್ತಂತೆ' ಎಂದು ಹೇಳಿದ್ದಾಳೆ. ಕೆಲ ಮಾನವರು ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡದೇ ಕೂಡಿಟ್ಟ ಸಂಪತ್ತಿಗೆಲ್ಲಾ ಸುಮ್ಮನೆ ದಂಡವವನ್ನು ನೀಡುತ್ತಾರೆಂದು ಸರ್ವಜ್ಞ ಹೇಳಿದ್ದಾನೆ. ಆದ್ದರಿಂದ ಸುಖದ ನೆಲೆ ಸಂಪತ್ತಿನಲ್ಲಿರು ವುದಕ್ಕಿಂತ ದಾನಮಾಡುವುದರಲ್ಲಿ ತೃಪ್ತಿಯಿದೆ ಎಂಬುದಾಗಿ ಸರ್ವಜ್ಞ ಸಾಮಾನ್ಯ ನೀತಿ ಸಾರವನ್ನು ಪ್ರತಿಪಾದಿಸಿದ್ದಾನೆ.

ದಾನದ ಬಗೆಗೆ ಸರ್ವಜ್ಞ ಹಲವು ರೀತಿಯಲ್ಲಿ ಪ್ರತಿಕ್ರಿಯಿಸಿದ್ದಾನೆ. ' ಎಲ್ಲಕ್ಕೂ ದಾನವೇ ಲೇಸು', 'ದಾಸೋಹಿ ಇಂದುಧರ ತಾನೆ', 'ಹಸಿದರ್ಗೆ ನೀನೊಲಿದಿಕ್ಕು', 'ಮಾಡು ನೀ ನಿತ್ಯ ದಾನವನು', 'ಹಸಿದವಂಗಿಲ್ಲೆನ್ನದಿಕ್ಕು', 'ಭಿಕ್ಷೆವಿಕ್ಕುಣಬೇಕು', 'ತಿರಿದುಂಬುತೊಬ್ಬನ ಕರೆದುಕೊಂಡುಂಬುದು', 'ಉತ್ತಮಗತಿಯ ಪಡೆವೊಡೆ ಯತಿಗೊಂದು ತುತ್ತನಿಕ್ಕುವುದು', 'ಅನ್ನವನಿಕ್ಕುವ ಭಿನ್ನ ಜಾತಿಯ ಕುಲಜ', 'ಕೊಡುವಾತನೇ ಮೃಡನು' - ಈ ಮೊದಲಾದ ಸೂಕ್ತಿಗಳಲ್ಲಿ ತನ್ನ ಮಾನವೀಯ ಅನುಕಂಪ ಹಾಗೂ ಮಾನವ ಪ್ರೇಮದ ಜೊತೆ ಜೊತೆಗೆ ದಾನ ಧರ್ಮದ ಮೌಲ್ಯದ ರೀತಿ-ನೀತಿಯನ್ನು ಸರ್ವಜ್ಞ ಇಲ್ಲಿ ಎತ್ತಿ ಹಿಡಿದಿದ್ದಾನೆ.

## ೬.೪. ನೀತಿ-ನಿಯಮ :

ಸರ್ವಜ್ಞ ನೀತಿ-ನಿಯಮಕ್ಕೆ ಬದ್ಧನಾದ ವ್ಯಕ್ತಿ. ತನ್ನ ಕಾಲದ ಜನರ ಜೀವನ ಚಿತ್ರಣವನ್ನು ವಚನಗಳಲ್ಲಿ ಹಿಡಿದಿಡಲು ಶ್ರಮಿಸಿದ ಜ್ಞಾನಿ. ಆಯಾ ಕುಲಕಸಬುಗಳನ್ನು ಮಾಡುವ ಜನರ ನೀತಿ-ನಿಯಮಗಳು ಹೀಗೆಯೇ ಇರಬೇಕೆಂದು ಕಟ್ಟುನಿಟ್ಟಾಗಿ ನುಡಿಯಾಡಿದ್ದರಿಂದ ಅವನನ್ನು ನಿಷ್ಠೂರವಾದಿಯೆಂದು ಕರೆದರೆ ತಪ್ಪಾಗಲಾರದು.

ಪರಂಪರೆಯ ಒಳಿತನ್ನೆಲ್ಲಾ ಸ್ವೀಕರಿಸುವ ಸರ್ವಜ್ಞ ತನಗೆ ಕೆಟ್ಟದ್ದೆನಿಸಿದ್ದನ್ನು ನಿಷ್ಠೂರವಾಗಿ ಜನರು ನೀತಿ ನಿಯಮಗಳನ್ನು ತಪ್ಪಿ ನಡೆದುಕೊಂಡಲ್ಲಿ ಕಟುಮಾತುಗಳನ್ನಾಡಿ ಅನೇಕರ ಕೋಪಕ್ಕೆ ಗುರಿಯಾಗಿದ್ದಿರ ಬಹುದು.

ಕಂಡದು ಆಡೆ ಭೂಮಂಡಲವು ಮುನಿಯುವುದು
ಕೊಂಡಾಡುತಿಚ್ಛೆ ನುಡಿದಿಹರೆ ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ.

''ಇದ್ದದ್ದು ಇದ್ಹಾಂಗ ಹೇಳಿದರೆ ಸಿದ್ಧಪ್ಪಗೆ ಸಿಡಿಲು ಬಡಿದಿತ್ತ್ಹಂತೆ'', ''ಕಂಡದ್ದು ಕಂಡ್ಹಾಂಗ ಹೇಳಿದರೆ ಕೆಂಡದಂಥ ಕೋಪ'' ಎಂಬ ಗಾದೆ ಮಾತುಗಳಂತೆ ಕಂಡದ್ದನ್ನು ಹೇಳಿದರೆ ಜಗತ್ತಿನಲ್ಲಿ ಕೋಪಕ್ಕೆ ಗುರಿಯಾಗಬೇಕಾಗುತ್ತದೆ. ಲೋಪದೋಷಗಳನ್ನು ಕಂಡು ಕಾಣದಂತಿದ್ದರೆ ಅಥವಾ ಯಾರನ್ನೋ ಮೆಚ್ಚಿಸು ವುದಕ್ಕಾಗಿ ಮೌನವಾಗಿದ್ದರೆ, ಅದು ಸತ್ಯಕ್ಕೆ ದ್ರೋಹ ಬಗೆದಂತೆ. ''ರೀತಿ-ನೀತಿಗಳಿದ್ದಲ್ಲಿ ವಿವೇಕವಿರುವುದು, ವಿವೇಕವಿದ್ದಲ್ಲಿ ಎಲ್ಲವೂ ಇರುವುದು''. ನೀತಿಗೆ ಸಮ್ಮತವಲ್ಲದ ಕಾಯವು ದೈವೀಕಾರ್ಯವಾಗುವುದಿಲ್ಲ (ಮುತ್ತಿನಂತಹ ಮಾತುಗಳು, ಪು. ೧೯೫).

ಬದುಕಿನಲ್ಲಿ ಕೆಲವು ಸಮಸ್ಯೆಗಳು ಅಜ್ಞಾನದಿಂದ ಬರುತ್ತವೆ. ಅದಕ್ಕಾಗಿ ಜ್ಞಾನ ದಾಹವನ್ನು ತೀರಿಸಿ ಕೊಳ್ಳುವ ನೀತಿವಂತನಾಗಬೇಕು. ''ನೀತಿಯೇ ಮಾನವನ ಏಕತೆಯ ಮೂಲ''. ಜನಪದರಲ್ಲಿ ನೀತಿಯೆಂಬುದು ಸಂಸ್ಕೃತಿಯ ಪ್ರತೀಕವಾಗಿದೆ. ವ್ಯಕ್ತಿಯ ನಡೆ-ನುಡಿಗಳು ಹಾಗೂ ಅದರಲ್ಲಿ ಅಡಕವಾಗಿರುವ, ಪೂರ್ವ ಕಾಲದಿಂದ ನಡೆದು ಬಂದಿರುವ ಒಳ್ಳೆಯ ಆಚಾರ-ವಿಚಾರಗಳು, ರೂಢಿ-ಸಂಪ್ರದಾಯಗಳು ಈ ನೀತಿಯಲ್ಲಿ ಒಳಗೊಳ್ಳುತ್ತವೆ. ಇದರ ವ್ಯಾಪ್ತಿ ಬಹು ದೊಡ್ಡದು (ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ, ಪು. ೪೪).

ಮನುಷ್ಯ ನೆಮ್ಮದಿಯಿಂದ ಬಾಳಬೇಕಾದರೆ, ತಾಳ್ಮೆ, ವಿವೇಕ ಹಾಗೂ ನೀತಿಪಾಠವೂ ಮುಖ್ಯ. ಶೌರ್ಯತನದಿಂದಿರುವುದು ಒಳ್ಳೆಯದಾಗಿದ್ದರೂ ದುರ್ಬಲರ ಮೇಲೆ ಪ್ರಯೋಗಿಸುವುದು ನೀತಿಗೆ ವಿರುದ್ಧವಾದುದಾಗಿದೆ.

ಗೌವುಡನೊಳು ಹಗೆತನವು । ಕಿವುಡನೊಳು ಏಕಾಂತ
ಪ್ರವುಡನೊಳು ಮೂಢನುಪದೇಶ-ಹಸಿವಿಂಗೆ
ತವುಡು ತಿಂದಂತೆ ಸರ್ವಜ್ಞ.

ಊರ ಗೌಡನಲ್ಲಿ ಶೌರ್ಯ ತೋರಿಸಿ, ವೈರತ್ಯ ಸಾಧಿಸುವುದು, ಕಿವುಡನಲ್ಲಿ ಗಹನವಾದ ವಿಷಯವನ್ನು ಮುಚ್ಚುಮರೆಯಾಗಿ ಮಾತನಾಡುವುದು, ತಿಳಿದಂತವನಿಗೆ ಮೂಢನು ಮಾಡುವ ಉಪದೇಶದ ಮಾತುಗಳು ಹೇಗಿರುತ್ತವೆಂದರೆ; ತುಂಬಾ ಹಸಿವಾದಾಗ ಒಣ ತೌಡನ್ನು ತಿಂದಂತಾಗುತ್ತದೆ.

''ನುಡಿದಂತೆ ನಡೆಯದಿದ್ದರೆ, ಕೈಯೊಳಗಿನ ಲಿಂಗವು ಘಟಸರ್ಪವಾಗಿ ಕಾಡಿತ್ತಯ್ಯ'' ಎಂಬ ಶರಣರ ವಚನದ ಸಾಲಿನಂತೆ;

ನುಡಿಯಲ್ಲಿ ಎಚ್ಚೆತ್ತು, ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಧರ್ಮ ಹೊಡಮರಳಿ ಕಚ್ಚುವಾ
ಹೆಡೆನಾಗ ನೋಡಾ ಸರ್ವಜ್ಞ.

ನಮ್ಮ ನಡೆ-ನುಡಿಗಳು ಉತ್ತಮವಾಗಿರಬೇಕಲ್ಲದೆ; ಎಚ್ಚರದಿಂದಿರಬೇಕು. ಸ್ವಲ್ಪ ದಾರಿ ತಪ್ಪಿದ್ದೇ ಆದರೆ ಧರ್ಮವೆಂಬುದು ತಿರುಗಿನಿಂತು ಘೋರ ಸರ್ಪದಂತೆ ಕಚ್ಚಲು ಅಡರಿಬರುವುದು ನಿಶ್ಚಯವೆಂದು ಎಚ್ಚರಿಸಿದ್ದಾನೆ. ವ್ಯವಹಾರಿಕ ನೀತಿಯ ತಿಳುವಳಿಕೆಯನ್ನು ನೀಡುವ ಸರ್ವಜ್ಞನು ಬಡತನ, ಶ್ರೀಮಂತಿಕೆ, ಹಣದ ಮಹತ್ವ, ಮಾತಿನ ಮಹತ್ವ ಮೊದಲಾದ ಹತ್ತಾರು ನೀತಿ-ನಿಯಮಗಳ ಬಗ್ಗೆ ಇಲ್ಲಿ ಚಿಂತನ ಮಂಥನ ಗೈದಿದ್ದಾನೆ.

ಅತಿಯಾಶೆ ಮಾಡುವನು ಗತಿಗೇಡು ಆಗುವನು
ಅತಿಯಾಶೆಯಿಂದ ಮತಿಗೆಡಗು। ಗತಿಯಿಂದ
ಸತಿಸುತರು ಕೆಡಗು ಸರ್ವಜ್ಞ.

ಆಳಾಗಿ ಬಲ್ಲವನು ಆಳುವನು ಅರಸಾಗಿ
ಆಳಾಗಿ ಬಾಳಲರಿಯದವನು ಕಡೆಯಲ್ಲಿ
ಹಾಳಾಗಿ ಹೋಹ ಸರ್ವಜ್ಞ.

"ಅತಿಯಾಸೆ ಗತಿಗೇಡು", "ಹಾಸಿಗೆ ಇದ್ದಷ್ಟು ಕಾಲುಚಾಚು", " ಆಳಾಗಿ ದುಡಿ, ಅರಸನಾಗಿ ಉಣ್ಣು", "ಕೈ ಕೆಸರಾದರೆ ಬಾಯ್ಮೊಸರು" ಈ ಮುಂತಾದ ಜನಪದರ ಗಾದೆ ಮಾತುಗಳನ್ನು ನೇರವಾಗಿ ಸರ್ವಜ್ಞ ಇಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಅತಿಯಾಶೆಗೆ ಬೆನ್ನು ಹತ್ತಿದಾದ ಇದ್ದುದ್ದನ್ನೆಲ್ಲಾ ಕಳೆದುಕೊಂಡು, ಕೊನೆಗೆ ಹೆಂಡತಿ-ಮಕ್ಕಳು ಕೆಡುವ ಕಾಲ ಬರುತ್ತದೆಂದು ಹೇಳಿದ್ದಾನೆ. "ಕಾಯಕವೇ ಕೈಲಾಸ" ಎಂದು ಶರಣರು ನುಡಿದಂತೆ, ಕರ್ತವ್ಯಪಾಲನೆಯಲ್ಲಿ ತಲ್ಲೀನನಾದಾಗಲೇ ಕೀರ್ತಿ ಬೆನ್ನು ಹತ್ತುತ್ತದೆ. "ಇಂದು ಕಲಿ, ಮುಂದೆ ನಲಿ" ಎಂಬಂತೆ ಸಮಯಕ್ಕೆ ಸರಿಯಾಗಿ ಆಳಾಗಿ ಕೆಲಸ ಮಾಡಿದರೆ, ಅರಸನಾಗಿ ಊಟ ಮಾಡುವ ಸಮಯ ತಾನಾಗಿಯೇ ಕೂಡಿಬರುತ್ತದೆ. ಇಲ್ಲದಿದ್ದರೆ ಕೊನೆಗೆ ಹಾಳಾಗಿ ಹೋಗುವ ಕಾಲ ಸನ್ನಿಹಿತವಾಗುತ್ತದೆಂದು ಎಚ್ಚರಿಸಿದ್ದಾನೆ.

ಗುರುಹಿರಿಯರಿಗೆ ಗೌರವ ಕೊಡುವುದು ನಮ್ಮ ದೇಶದ ಜನರ ಒಂದು ಮುಖ್ಯ ಮೌಲ್ಯ ;

ಗುರುಹಿರಿಯರಿಗೆ ಶಿರಬಾಗಿ ಎರಗಿದರೆ ನರ
ಸುರರು ಒಲಿದು ಸಿರಿಸುರಿಯೆ ಕೈಲಾಸ
ಕರತಲಾಮಲಕ ಸರ್ವಜ್ಞ.

ಗುರುಗಳಿಗೆ, ಹಿರಿಯರಿಗೆ ತಲೆಬಾಗಿ ಒಂದಿಸಿದರೆ, ದೇವತೆಗಳು ಅರಸುವರು ಹಾಗೂ ಸಿರಿ ಸಂಪತ್ತು ದೊರೆತು ಕೈಲಾಸ ಪದವಿ ಪ್ರಾಪ್ತಿಯಾಗುತ್ತದೆಂಬ ನಂಬಿಕೆ ಜನಪದರಲ್ಲಿದೆ. ಮಾನವ ಕಾಯಕದಲ್ಲಿ ಸತತ ಪ್ರಯತ್ನ, ಪ್ರಾಮಾಣಿಕತೆಗಳೊಂದಿಗೆ ನೀತಿವಂತನಾಗಿರಬೇಕು. ಕೇವಲ ಬಾಹ್ಯ ಸೌಂದರ್ಯದಿಂದ ಈ ಬಾಳನ್ನು ಕಂಗೊಳಿಸುವಂತೆ ಮಾಡಲಾಗದು. ಕೆಲವೊಮ್ಮೆ ರಾಗ-ದ್ವೇಷಗಳು ಮನದಲ್ಲಿ ಮತ್ತೊಬ್ಬರ ಮೇಲೆ ತಲೆಯೆತ್ತಿದಾಗ ಅವು ತಮ್ಮನ್ನೇ ತಿನ್ನುತ್ತವೆ ಎಂಬ ವಿಚಾರವನ್ನು;

ಕೆಡನೊಬ್ಬಗೆ ಬಗೆದು ಕೇಡು ತಪ್ಪದು ತನಗೆ
ನೋಡಿ ಕೆಂಡವನು ಹಿಡಿದೊಗೆದು ನೋವ ತಾ
ಬೇಡಿ ಬಗೆದಂತೆ ಸರ್ವಜ್ಞ.

"ಕೇಡುಗಾಲಕ್ಕೆ ಕೂಡುವುದು ದುರ್ಬುದ್ಧಿ", "ಕೆಡುವ ಕಾಲಕ್ಕೆ ಬುದ್ಧಿಯಿಲ್ಲ,ಮರಣ ಕಾಲಕ್ಕೆ ಮದ್ದಿಲ್ಲ" ಎಂಬಂತೆ ಎರಡನೆಯವರೆಗೆ ಕೆಡಕಾಗಲೆಂದು ಇಚ್ಛಿಸಿದರೆ, ಅದು ತನಗೇ ಆಗುತ್ತದೆ. ಮತ್ತೊಬ್ಬರ ಮೇಲೆ ಬೆಂಕಿಯ ಕೆಂಡವನ್ನು ಹಾಕಬೇಕೆಂದು, ಅದನ್ನು ಹಿಡಿಯಲು ಹೋದರೆ ಮೊದಲು ತನ್ನ ಕೈಯನ್ನೇ ಸುಡುತ್ತದೆ. ಆದ್ದರಿಂದ ಮನುಷ್ಯ ಶೀಲವಂತನಾಗಬೇಕು. ಆಸೆಗೆ ಬೆನ್ನುಹತ್ತಿ, ಹಿಂಸೆ,ಮೋಸ, ವಂಚನೆಗಳಿಗೆ ಬಲಿಯಾದರೆ, ತನ್ನತನವನ್ನೇ ಕಳೆದುಕೊಳ್ಳುತ್ತಾನೆ. " ಒಳಗಿರುವ ಶತ್ರುತ್ವ ಸಾಯಬೇಕೇ ಹೊರತು, ಹೊರಗಿರುವ ಶತ್ರುವು ಅಲ್ಲ" ಎಂಬುದೇ ಸರ್ವಜ್ಞನ ಅಭಿಮತ.

ಮಾನವನು ನಿತ್ಯ ಜೀವನವನ್ನು ನಡೆಸಿಕೊಂಡು ಹೋಗಲು ಕೆಲವು ನೀತಿ ನಿಯಮಗಳನ್ನು ರೂಢಿಸಿ ಕೊಂಡಿರಬೇಕು. ಮನುಷ್ಯ ಚಿರಂಜೀವಿಯಲ್ಲ. ಜನಪದರ ನೀತಿಯೆಂದರೆ, ಮನುಷ್ಯ ತನ್ನ ಕೆಟ್ಟ ಗುಣಗಳಿಂದಲೇ ನರಕ ಸೇರುತ್ತಾನೆಂಬುದು. ಬಸವಣ್ಣನವರ ಮಾತಿನಂತೆ "ಆಚಾರವೇ ಸ್ವರ್ಗ, ಅನಾಚರವೇ ನರಕ" (ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು. ೨೪೧). ಗುರು ಹಿರಿಯರಲ್ಲಿ ಗೌರವ, ಧರ್ಮದಲ್ಲಿ ಶ್ರದ್ಧೆ, ದೇವರಲ್ಲಿ ಭಕ್ತಿಯನ್ನಿಡುವುದರಿಂದ ನೈತಿಕಗುಣಾಭಿವೃದ್ಧಿಯಾಗಬಲ್ಲ ದೆಂಬ ನಂಬಿಕೆಯೂ ಸಹ ಜನಪದರಲ್ಲಿದೆ. ಅಷ್ಟೇ ಅಲ್ಲ ಜೀವನವನ್ನು ಸುಖಮಯ ಮಾಡಿಕೊಳ್ಳುವುದರ ಹಿನ್ನೆಲೆಯೇ ಈ ನೀತಿಯ ಅನುಸರಣೆಯಾಗಿದೆ (ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ, ಪು.೪೪).

ಲೋಕದಾಗ ಇರುವತನಕ ।ಬೇಕಾಗಿ ಇರಬೇಕ
ಸಾಕಾಗಿ ಶಿವನ ಸದರೀಗೆ ಹೋಗುವಾಗ
ಎಲ್ಲರೂ ಬರುತಾರ । ಕಳಸಾಕ.

ಲೋಕದಲ್ಲಿ ಬದುಕಿರುವವರೆಗೂ ಸಕಲರೊಡಗೂಡಿರಬೇಕು. ಸಹಜೀವಿಗಳ ಸುಖ ದುಖಗಳನ್ನು ಹಂಚಿಕೊಂಡಿರಬೇಕು. ನೆರೆ-ಹೊರೆಯವರೊಂದಿಗೆ, ಬಂಧುಬಳಗದವರೊಂದಗಿ, ಜನಾಂಗ -ಜನಾಂದವರೊಂದಿಗೆ ಬೆರೆತು ಬಾಳುವುದೇ ಮಾನವನ ನೀತಿಯುಕ್ತ ಬಾಳ್ವೆಯಾಗಿದೆ (ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು, ಪು.೩೪). ಇದೇರೀತಿ ಸರ್ವಜ್ಞನೂ ಸಹ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ;

ಸಿರಿಯ ಸಂಸಾರವನು ಸ್ಥಿರವೆಂದು ನಂಬದಿರು
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ
ಹರಿದುಹೋದಂತೆ ಸರ್ವಜ್ಞ.

ಸಂಸಾರವೊಂದನ್ನೇ ಮೆಚ್ಚುತ್ತಾ, ಹೆಂಡತಿ-ಮಕ್ಕಳು, ಆಸ್ತಿ-ಅಂತಸ್ತುಗಳೇ ಸ್ಥಿರವೆಂಬ ಭ್ರಮೆಯ ತಾಕಲಾಟದಲ್ಲಿ ಮೈಮರೆಯುವುದು ಸರಿಯಲ್ಲ. ಅದು "ಒಂದು ದಿನದ ಸಂತೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಕೂಡಿದ ಜನರು, ಸಂಜೆಯಾದಂತೆಯೇ ಹೊರಟು ಹೋದಂತೆ". ಈ ಮಾಯಾ ಮೋಹದ ಸಂಸಾರವೆಂಬುದು ಸಂತೆಯಿದ್ದಂತೆ. ನೀತಿಯು ಮಾನವರನ್ನು ಶಾಶ್ವತ ಸುಖದೆಡೆ ತೆಗೆದುಕೊಂಡು ಹೋಗುವ ಸಾಧನವಾಗಿದೆ. "ಹಸು ಹುಲ್ಲುತಿಂದು ಹಾಲು ಕೊಡುವಂತೆ" ಈ ನೀತಿ-ನಿಯಮಕ್ಕೊಳಗಾದವನ ಬಾಳು ಸಹ ಇತರರಿಂದ ಮೌಲ್ಯವನ್ನು ಪಡೆದುಕೊಳ್ಳುತ್ತದೆ.

ಜನಪದ ಸಾಹಿತ್ಯದಲ್ಲಿ ಈ ನೀತಿಯು ತುಂಬಿಕೊಂಡಿರುವುದನ್ನು ಕಾಣುತ್ತೇವೆ. ಬೆಳಗಾಗೆದ್ದು ದೇವರನ್ನು ನೆನಪು ಮಾಡಿಕೊಳ್ಳುವುದರಿಂದ ಹಿಡಿದು, ಮಲಗುವವರೆಗೂ ಗರತಿಯೊಬ್ಬಳು ಮಾಡುವ ಎಲ್ಲಾ ಕಾರ್ಯದಲ್ಲಿ ನೀತಿ ನಿಯಮಗಳು ಅಡಕವಾಗಿರುತ್ತವೆ. ಜನಪದರಲ್ಲಿರುವ ನೀತಿಯು ಹೆಣ್ಣು-ಗಂಡುಗಳಿ ಗಿಬ್ಬರಿಗೂ ಸಮವಾಗಿ ಅನ್ವಯವಾಗುವಂತೆ ಕಾಣಬರುತ್ತವೆ;

ಹೆಣ್ಣೆಂದು ರಾವಣ ಮಣ್ಣು ಮುಕ್ಕಿದನಯ್ಯ
ಹೆರವರ ಹೆಣ್ಣು ಬಯಸದೆ ಲಗ್ನದ
ಸತಿಯೊಡನೆ ಸುಖದಿ ಬಾಳಣ್ಣ.

ಎಂದು ಹೇಳುತ್ತಾ ಪೌರಾಣಿಕ ಘಟನೆಯ ಚಿತ್ರಣವನ್ನು ನೆನಪಿಸಿರುತ್ತಾರೆ. ಕೈಹಿಡಿದ ಸತಿಯೊಂದಿಗೆ ಸುಖವಾಗಿ ಬಾಳಬೇಕೆಂಬ ಸಂತಸವನ್ನು ವ್ಯಕ್ತಪಡಿಸಿದ್ದಾರೆ. ಇದನ್ನೇ ಸರ್ವಜ್ಞನ ವಚನಗಳಲ್ಲಿ ನೋಡಿದಾಗ;

ಎಂಟೆರೆಡು ತಲೆಯುಳ್ಳ ಭಂಟ ರಾವಣ ಕೆಟ್ಟ
ತುಂಟ ಕೀಚಕನ ಕೈಯ್ದೆಗೆದ ಪರಸತಿಯ
ನಂಟು ಬೇಡೆಂದ ಸರ್ವಜ್ಞ.

ಪರಸ್ತ್ರೀಯರನ್ನು ಮುಟ್ಟಿದ ರಾವಣ ಹಾಗೂ ಕೀಚಕ ಕೆಟ್ಟಿರುವ ವಿಷಯವನ್ನು ತಿಳಿಸುತ್ತಾ, ಲೋಕದಲ್ಲಿನ ಪರಸ್ತ್ರೀಯರನ್ನು ಗೌರಾವಾಧರಗಳಿಂದ ಕಾಣಬೇಕೆಂಬ ಮಾತುಗಳನ್ನು ಹೇಳಿದ್ದಾನೆ. ಇದೇರೀತಿ ಸರ್ವಜ್ಞನ ಅನೇಕ ವಚನಗಳಲ್ಲಿ ನೀತಿಯ ಕುರಿತಾಗಿರುವ ಮೌಲ್ಯಗಳನ್ನು ಕಾಣಬಹುದಾಗಿದೆ.

## ೬.೫. ದೈವೀ ಶ್ರದ್ಧೆ :

ದೇವರ ಬಗ್ಗೆ ಭಕ್ತಿ, ಶ್ರದ್ಧೆ ನಮ್ಮ ಜಾನಪದರ ಮುಖ್ಯ ವೈಶಿಷ್ಟ್ಯವಾಗಿದೆ. ಪ್ರಾಚೀನ ಕಾಲದಲ್ಲಿದ್ದ ಬೇಟೆಯುಗದ ಮಾನವನಿಗೆ ಪ್ರಕೃತಿಯಲ್ಲಾಗುವ ವೈಚಿತ್ರ್ಯಗಳೆಲ್ಲಾ ಅಚ್ಚರಿ ಯನ್ನುಂಟು ಮಾಡಿರಬೇಕು. ಆರ್ಭಟಿಸುವ ಗುಡುಗು,ಮಿಂಚುಗಳಿಗೆ ಆತ ಹೆದರಿರಬೇಕು. ಈ ರೀತಿ ನಡೆಯುವ ಘಟನೆಗಳ ಹಿಂದೆ ಯಾವುದೋ ಶಕ್ತಿ ಅಡಗಿದೆ ಎಂದು ಭಾವಿಸಿದ ಮನುಷ್ಯ ಆ ಶಕ್ತಿಯನ್ನೇ ದೇವರೆಂದು ಭಾವಿಸಿರಬೇಕು. ಪ್ರಕೃತಿಯಲ್ಲಾಗುವ ವಿಕೋಪಗಳಿಂದ ಪಾರಾಗಲು ಕಣ್ಣಿಗೆ ಕಾಣುವ ಪ್ರಕೃತಿ ಶಕ್ತಿಗಳಾದ ಬೆಂಕಿ, ಗಾಳಿ, ಮಳೆ, ಗುಡುಗು, ಮಿಂಚು ಇತ್ಯಾದಿಗಳನ್ನು ದೇವರುಗಳೆಂದು ನಂಬಿ ಪೂಜಿಸಲು ತೊಡಗಿ ರಬೇಕು (ಜನಪದ ದೇವತೆಗಳು ಮತ್ತು ಶಿಷ್ಟ ದೇವತೆಗಳು, ಪು. ೪).

ಆದಿಮಾನವನ ಬುದ್ಧಿಯ ವಿಕಾಸವಾದಂತೆಲ್ಲಾ ರಕ್ಷಣೆ ನೀಡುವ ಪ್ರತೀ ವಸ್ತುಗಳು ಗೋಚರಿಸಿರಬೇಕು. ಹೀಗೆ ನೂರಾರು ದೇವರುಗಳು ಉದ್ಭವಿಸಿದವು. '' ಒಂದೇ ಮಾತಿನಲ್ಲಿ ಹೇಳುವುದಾದರೆ ಅಪ್ರಜ್ಞಾವಂತ ಜನಾಂಗವೊಂದರ ಭಯದ ದೃಷ್ಟಿಯೇ ದೇವರುಗಳ ಸೃಷ್ಟಿಯಾಗಿ ಪರಿಣಮಿಸಿದೆ''. ಆದ್ದರಿಂದ ದೈವೀ ಶ್ರದ್ಧೆಗೆ ಮನುಷ್ಯ ತನ್ನ ಹೆಚ್ಚಿನ ಮೌಲ್ಯಗಳನ್ನು ಕೊಡುತ್ತಾ ಬಂದಿದ್ದಾನೆ. (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು.೨೦೬). ಹೀಗೆ ಹುಟ್ಟಿಕೊಂಡ ದೇವರ ಪ್ರಾಚೀನತೆಯ ಕಲ್ಪನೆಯ ತುಂಬಾ ಅದ್ಭುತವಾಗಿದೆ. ಅಷ್ಟೇ ಮೌಲ್ಯಯುತವಾದ ಬೆಲೆಯನ್ನು ಕಂಡುಕೊಂಡಿವೆ.

ಜನಪದ ಸಮಾಜದಲ್ಲಿ ದೈವೀಭಾವ ಅತಿ ಹೆಚ್ಚು ಕಂಡುಬರುತ್ತದೆ. ತಮ್ಮ ದೈನಂದಿನ ಕೆಲಸ ಕಾರ್ಯಗಳನ್ನು ಮಾಡುವಾಗಲೂ ದೇವರನ್ನು ಸ್ಮರಿಸದೇ ಇರಲಾರರು. ನಿಸರ್ಗದ ಪ್ರತಿಯೊಂದರಲ್ಲೂ ದೈವೀ ಅಂಶಗಳನ್ನು ಅವರು ಕಂಡವರು. ಇದು ಅವರಲ್ಲಿ ಪ್ರಮುಖವಾದ ಮೌಲ್ಯವಾಗಿರುದಲ್ಲದೆ, ಇತರೇ ಮೌಲ್ಯಗಳಿಗೆ ಮೂಲವಾಗಿದೆ. ದೈವತ್ವವನ್ನು ಸುತ್ತಿಕೊಂಡು, ಹೊದ್ದುಕೊಂಡು ಇವರು ಬದುಕಿದವರು.

ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆವಂಥ । ಭೂಮಿ ತಾಯಿನ
ಎದ್ದೊಂದು ಗಳಿಗೆ ನೆನೆದೇನ.

ಎಂದು ದೇವರನ್ನು ನೆನೆಯುವುದರಲ್ಲಿ ದೈವದ ಬಗ್ಗೆ ನಂಬುಗೆ, ಭಕ್ತಿ ಕಂಡುಬರುತ್ತದೆ. ಕಾರಣ; ಈ ಬೆಳೆ,ಗಾಳಿ, ನೀರು, ಬೆಂಕಿ ಇವೆಲ್ಲಾ ಪರಮಾತ್ಮನು ಕೊಟ್ಟ ದಾನಗಳೆಂದು ತಿಳಿವರು ಜಾನಪದರು.

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,
ಸುತ್ತಿ ಸುಳಿವ ಗಾಳಿಯೂ ನಿಮ್ಮ ದಾನ,
ನಿಮ್ಮ ದಾನವನುಂಡು ಅನ್ಯರನ್ನು ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ.

ಎಂಬ ಜೇಡರ ದಾಸೀಮಯ್ಯನ ವಚನದಂತೆ ಜನಪದರು ಸೂರ್ಯೋದಯದಿಂದ ಸೂರ್ಯಸ್ತದ ವರೆಗೆ ಮಾಡುವ ಸಕಲ ಕಾರ್ಯಗಳ ಹಿಂದೆ ದೈವೀ ಚೈತನ್ಯ ಇದೆ ಎಂದು ನಂಬಿ ಬಾಳುವೆಯನ್ನು ನಡೆಸಿಕೊಂಡು ಬಂದಿದ್ದಾರೆ.

ಏಳುತಲೆ ನೆನೆದೇನ ಏಳೆಂಟು ದೇವರನ
ಏಳು ಬಾಗಿಲದ ಒಡೆಯಾನ। ಪರೂತಮಲ್ಲ
ಏಳುತಲೇ ಮೊದಲ ನೆನೆದೇನ.

ಅನೇಕ ದೇವರುಗಳನ್ನು ನೆನೆಯುವ ಜಾನಪದರು ತಮ್ಮ ದಿನನಿತ್ಯದ ಕಾಯಕದಲ್ಲಿ ಅವರನ್ನು ಆತ್ಮೀಯತೆಯಿಂದ ತಮ್ಮವರನ್ನಾಗಿಸಿಕೊಂಡಿದ್ದಾರೆ. ಜನಪದರಂತೆ ಸರ್ವಜ್ಞನೂ ಸಹ ಶಿವಭಕ್ತನಾದುದರಿಂದ ತನ್ನ ವಚನಗಳಲ್ಲಿ ಶಿವನಿಗಿರುವ ವಿಶೇಷ ಮೌಲ್ಯಗಳನ್ನು ವ್ಯಕ್ತಪಡಿಸುತ್ತಾ;

ಎಲ್ಲವೂ ಶಿವನೆಂದ। ರೆಲ್ಲಿಹುದು ಭಯವಯ್ಯ
ಎಲ್ಲರೂ ಶಿವನ ನೆನದಿಹರೆ, ಕೈಲಾಸ
ವಿಲ್ಲಿಯೇ ನೋಡ ಸರ್ವಜ್ಞ.

ಭಯ ಅಳಿಸಿ ಹಾಕಬೇಕಾದರೆ; ಆ ಶಿವನಲ್ಲಿ ಭಕ್ತಿಯಿಡಬೇಕು. ಆಗ ಯಾವ ಭಯಭೀತಿಗಳೂ ಇರಲಾರವು. ಪ್ರಕೃತಿಯಲ್ಲಿ ದೊರೆಯುವ ನೀರು,ನೆಲ,ನೇಸರ,ಮಳೆ, ಗಾಳಿ,ಕಲ್ಲು, ಒಳ್ಳು, ಒನಕೆ, ಕಸಬರಿಗೆ ಮುಂತಾದವುಗಳು ಜನಪದರಿಗೆ ದೈವಾಗಿ ಕಂಡಿವೆ. ಅವನ್ನೆಲ್ಲಾ ತಮ್ಮ ಸಮೃದ್ಧಿಯ ಸುಖಕ್ಕೆ ಸಹಾಯಕವಾಗ ಬಲ್ಲವೆಂಬ ನಂಬಿಕೆಯಿಂದ ಪೂಜಿಸುತ್ತಾ ಬಂದಿದ್ದಾರೆ. ಇದೇ ಅಂಶವನ್ನು ಸರ್ವಜ್ಞನಲ್ಲಿ ನೋಡಿದಾಗ;

ಕಲ್ಲು ಕಾಷ್ಟದೊಳಿರುವ,ಮುಳ್ಳು ಮೊನೆಯಲ್ಲಿರುವ
ಸುಳ್ಳು ಈ ಮಾತು ಎನಬೇಡ, ಪರಮಾತ್ಮ
ನೆಲ್ಲೆಲ್ಲೂ ಇರುವ ಸರ್ವಜ್ಞ.

''ಸಣ್ಣನೆಯ ಮರಳೊಳಗೆ, ಸುಣ್ಣನೆಯ ಶಿಲೆಯೊಳಗೂ ದೇವರಿರುವನೆಂಬ ಸತ್ಯವನ್ನು'' ಸರ್ವಜ್ಞ ತಿಳಿಸಿದ್ದಾನೆ.

ಮಾದೇವ ನಿನ ಹೊರತು, ಮತ್ಯಾರವ ನಂಬಿಲ್ಲ
ನಾ ಮಾಡೇನನುವ ಅಳವಿಲ್ಲ । ಪರಶಿವನೆ
ನೀ ನಡೆಸಿದರುಂಟು ಸರುವೆಲ್ಲ ॥

ದೇವರ ನೆನದರ ಸಾವ್ಹುಟ್ಟು ನಮಗಿಲ್ಲ
ಹಾವು ಕಚ್ಚಿದರೂ ವಿಷವಿಲ್ಲ । ಸರ್ಪದ
ಹೆಡೆಯ ದಾಟಿದರೂ ಭಯವಿಲ್ಲ ॥

ಇದೇ ರೀತಿ ಸರ್ವಜ್ಞನಲ್ಲಿ;

ಶಿವಪೂಜೆ ಮಾಡಿದಡೆ । ಶಿವನ ಕೊಂಡಾಡಿದಡೆ
ಶಿವನಲ್ಲಿ ನೆನಹು ನೆಲಸಿರ್ದಡಾತಂಗೆ
ಶಿವಲೋಕದಿರವು ಸರ್ವಜ್ಞ.

ಇಲ್ಲಿನ ಮೊದಲ ಜನಪದರ ಪದ್ಯದಲ್ಲಿ; ಶರಣಾಗತಿ ಭಾವನೆ ಕಾಣಬರುತ್ತದೆ. ಸರುವೆಲ್ಲವನ್ನೂ ನಡೆಸಬಲ್ಲ ಪರಶಿವನಲ್ಲಿ ಅವರು ಶ್ರದ್ಧೆ ಇಟ್ಟವರು. ಅವನು ಸರ್ವಾಂತರ್ಯಾಮಿ ಎಂದು ನಂಬಿದವರು. '' ಎಲ್ಲಾ ದೇವರ ಮಾಡಿದರ ಆಗತೈತಿ, ನಮ್ಮ ಕೈಯಾಗೇನೈತಿ, ಕೊಡೋ ಶಿವಾ ಬಡವೇನಾ?'' ಎಂದು ಕೇಳುತ್ತಾರೆ. ''ನೀ ನೆಡೆಸಿದಂತೆ ನಡೆಯುವುದಷ್ಟೇ ನಮ್ಮ ಭಾಗ್ಯ, ನೀ ಸೂತ್ರಧಾರಿ ನಾವೆಲ್ಲಾ ಪಾತ್ರಧಾರಿಗಳಷ್ಟೆ'' ಎಂದು ಬೇಡಿಕೊಳ್ಳುತ್ತಾರೆ.

''ಆ ಶಿವನ ಕರುಣೆಯೊಂದಿದ್ದರೆ ನಮಗಾವ ಭಯವಿಲ್ಲವೆಂದು ಧೈರ್ಯವಾಗಿ ನುಡಿದಿದ್ದಾರೆ''. ಹಾವು ಕಚ್ಚಿದರೆ ವಿಷವೇರುವುದಿಲ್ಲ, ಸರ್ಪದ ಹೆಡೆ ದಾಟಿದರೂ ಯಾವ ಭಯಭೀತಿಗಳಿಲ್ಲ. ಇದಕ್ಕೆಲ್ಲ ಶಿವನ ಪೂಜೆ ಮಾಡಿ ಭಜಿಸಿದರೆ ಯಾವ ಭಯಗಳಿರುವುದಿಲ್ಲ (ಜಾನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ, ಪು.೧೩). ''ಪರಮಾತ್ಮ ತನಗಿಷ್ಟ ಬಂದಂತೆ ಮಾಡಲಿ'' ಎಂದು ಎಲ್ಲಾ ಭಾರವನ್ನು ಜನಪದರು ಆತನ ಮೇಲ್ಹಾಕಿ ''ಕರುಣೆ ಬಂದರೆ ಕಾಯೋ, ಮರಣ ಬಂದರೆ ಒಯ್ಯೋ'' ಎಂದು ಬೇಡಿಕೊಂಡಿರುವುದುಂಟು.

ಸಾಮಾಜಿಕ ಬದುಕಿನ ಪ್ರಮುಖ ಮೌಲ್ಯಗಳಾದ ಸತ್ಯ, ಅಹಿಂಸೆಗಳು ಇವು ದೈವೀ ಶ್ರದ್ಧಾ ಜನ್ಯಗಳಾಗಿವೆ. ದೇವರಿಗೆ ಅಂಜುವವನು ಪ್ರಾಮಾಣಿಕನಾಗಿರುತ್ತಾನೆ. ದೇವರಿಗೆ ಅಂಜದವನಿಗೆ ಜಗತ್ತಿನಲ್ಲಿ ಕಿಂಚಿತ್ತೂ ಕಿಮ್ಮತ್ತಿಲ್ಲ ಎಂಬ ಜನಪದರ ಮಾತಿನಂತೆ;

ಭಕ್ತಿಯಿಂದಲೇ ಮುಕ್ತಿ, ಭಕ್ತಿಯಿಂದಲೇ ಶಕ್ತಿ
ಭಕ್ತಿ ವಿರಕ್ತಿಯಳಿವರೀ ಜಗದಲ್ಲಿ
ಮುಕ್ತಿಯಿಲ್ಲದೆಂದ ಸರ್ವಜ್ಞ.

ಜನಪದರ ನಂಬುಗೆಯಂತೆ ಮನಸ್ಸಿನ ಅಜ್ಞಾನಾಂದಕಾರವು ತೊಲಗಬೇಕಾದರೆ, ಅಂತರ್ಮುಖಿಯಾಗಿ ದೇವರಲ್ಲಿ ಭಕ್ತಿಯಿಡಬೇಕು. ಭಕ್ತಿಯಿಲ್ಲದಿರೆ ಈ ಜಗತ್ತಿನಲ್ಲಿ ಮುಕ್ತಿದೊರಕದು. ಅದಕ್ಕಾಗಿ ಮನಸ್ಸು ನಿರ್ಮಲಗೊಳಿಸಿಕೊಳ್ಳಬೇಕು. ''ಅಂತರಂಗ ಶುದ್ಧಿಯು ಕೇವಲ ಬಾಹ್ಯಾಡಂಬರಗಳಿಂದ ದೊರೆಯುವುದಿಲ್ಲ''. ನಿತ್ಯ ನೀರ್ಮುಳುಗಿದ ನಂತರ ಮಟ್ಟಿ ಶ್ರೀಗಂಧವನು ನೊಸಲೊಳಗೆ ಧರಿಸಿದ ಮಾತ್ರಕ್ಕೆ ದೇವರನ್ನು ನೆಚ್ಚಿಸಲಾಗದು (ಸರ್ವಜ್ಞ, ಆರ್.ರೇಣುಕಮ್ಮ, ಪು.೪೯). ಆದ್ದರಿಂದ ಸರ್ವಜ್ಞನು ದೈವೀ ಶ್ರದ್ಧೆಗ ಬೇಕಾದ ತ್ರಿಕರ್ಣಪೂರ್ವಕ ಶುದ್ಧಿಯನ್ನು ಪಡೆಯದೇ ಮನಸ್ಸನ್ನು ನಿರ್ಮಲಗೊಳಿಸಿಕೊಳ್ಳುವುದಕ್ಕಾಗುವುದಿಲ್ಲವೆಂದಿದ್ದಾನೆ.

ಖಂಡಿಸದೆ ಕರ್ಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕ್ಕಯ್ದಲ್ಕೆ ಅದನೇನು
ರಂಡೆಯಾಳುವಳೇ ಸರ್ವಜ್ಞ.

ಎಂದು ಸರ್ವಜ್ಞ ಖಡಾಖಂಡಿತವಾಗಿ ದೈವೀಶ್ರದ್ಧೆಯಲ್ಲಿ ಭ್ರಾಂತಿ, ಅಹಂಕಾರಗಳಿರ ಬಾರದು. 'ಕಚ್ಚೆ ಕೈ ಬಾಯಿಗಳೆಲ್ಲಾ ಇಚ್ಛೆಯಲಿ ಇರಬೇಕು' ಇಲ್ಲದಿದ್ದರೆ ಲೋಕದಲ್ಲಿ ಶಾಂತಿ ಸಮಾಧಾನಗಳು ಸಿಗಲಾರವು. ಗಂಗಾ, ಗೋದಾವರಿ, ತುಂಗಭದ್ರೆ ಮುಂತಾದ ನದಿಗಳಲ್ಲಿ ಮುಳುಮುಳುಗಿ ದೇಹ ಪವಿತ್ರವಾಯಿ ತೆಂದು ಭಾವಿಸಿದರೆ, ಸದಾ ಕಪ್ಪೆ ನೀರೊಳಗಿದ್ದರೂ ಪವಿತ್ರವಾಗದೆಂಬಂತೆ, ಇಂದ್ರಿಯಾ ಲಾಲಸ್ಯಗಳನ್ನು ತ್ಯಜಿಸಿ ಚಿತ್ತ ಶುದ್ಧಿಯನ್ನು ಪಡೆದ ಮೇಲೆ, ಧ್ಯಾನಕ್ಕಾಗಿ ವನ, ಬೆಟ್ಟಗಳಿಗೆ ಹೋಗುವ ಅಗತ್ಯವಿಲ್ಲವೆಂದು ಘೋಷಿಸಿರುವ ಸರ್ವಜ್ಞ ;

ಮನದಲ್ಲಿ ನೆನೆವರಿಗೆ ಮನೆಯೇನು ಮಠವೇನು
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲ್ಲಿದ್ದರೇನು ? ಸರ್ವಜ್ಞ.

ಧ್ಯಾನ ಶೀಲನಾದವನಿಗೆ ಇದ್ದೆಡೆಯೆಲ್ಲಾ ಶಿವಮಯವಾಗಿರುತ್ತದೆ. ಮನಮುಟ್ಟಿ ಭಗವಂತನ ನಾಮ ಸ್ಮರಣೆ ಮಾಡುವ ಭಕ್ತನು ಮಠವಾಸಿ, ವನವಾಸಿಗಳಿಗಿಂತ ಉತ್ತಮ ಫಲಗಳನ್ನು ಪಡೆಯಬಹುದು. ಆದರೆ ನಿರ್ಮಲ ಮನಸ್ಸಿಲ್ಲದೆ, ಮಂತ್ರಗಳನ್ನು ಹೇಳಿ ಗಂಟೆ ಬಾರಿಸುತ ದೇವಾಲಯದಲ್ಲಿದ್ದರೂ ಪ್ರಯೋಜನವಿಲ್ಲ ವೆಂದು ಸರ್ವಜ್ಞ ಹೇಳಿದ್ದಾನೆ. ಹಾಗೆಯೇ ದೇವರು ಅಥವಾ ದೈವೀ ಶ್ರದ್ಧೆಯ ಸಂದರ್ಭದಲ್ಲಿ ಉಣ್ಣದ ಲಿಂಗಕ್ಕೆ ಉಣಬಡಿಸುವ ಕಪಟಿಗಳನ್ನು ಕಂಡು ಸರ್ವಜ್ಞ ಸಿಡಿಮಿಡಿಗೊಂಡು;

ಉಣಬಂದ ಜಂಗಮಕೆ ಉಣಬಡಿಸಲೊಲ್ಲದೆ
ಉಣದಿಪ್ಪ ಲಿಂಗಕ್ಕೆ ಉಣ ಬಡಿಸಿ ಕೈಮುಗಿವ
ಬಣುಗುಗಳ ನೋಡಾ ಸರ್ವಜ್ಞ.

ಜನಪದರು ಮನೆಗೆ ಬಂದ ಅತಿಥಿಗಳನ್ನು ಶ್ರದ್ಧಾ ಭಕ್ತಿಗಳಿಂದ ಆಧರಿಸಿ ಸ್ವಾಗತಿಸುತ್ತಾರೆ. ಅಷ್ಟೇ ಅಲ್ಲ ಕುಶಲೋಪಚಾರದ ಮಾತುಗಳನ್ನಾಡಿ ಪ್ರೀತಿ ತೋರುತ್ತಾರೆ. ಹೀಗೆ ವಿಭಿನ್ನ ಸಂಸ್ಕೃತಿಗಳ ಹಿನ್ನೆಲೆಯಲ್ಲಿರುವ ಜನಪದರು ಹಾಗೂ ನಾಗರೀಕರನ್ನು ಕಂಡೇ ಸರ್ವಜ್ಞ ಈ ಮೇಲಿನ ವಚನವನ್ನು ನುಡಿದಿರಬಹುದು. ಲಿಂಗದ ಬಾಯಿಯೇ ಜಂಗಮವೆಂದರಿತ ಜನಪದರು ಅವರನ್ನು ತೃಪ್ತಿಗೊಳಿಸುತ್ತಾರೆ. ಉಣ್ಣದೇ ಇರುವ ಲಿಂಗಕ್ಕಿಂತ ಉಣ್ಣುವ ಜಂಗಮರ ಸೇವೆ ಹೆಚ್ಚೆಂದು ಭಾವಿಸಿದ್ದಾರೆ. ಮನೆಗೆ ಬಂದ ಅತಿಥಿಗಳಿಗೆ ಊಟಕ್ಕಿಕ್ಕದೇ ಬರೀ ಅಧಿಕಾರ ಅಂತಸ್ತುಗಳಿಂದ ಮೆರೆಯುತ್ತಿರುವ ಮತ್ತು ದಾನಧರ್ಮಗಳನ್ನು ಮಾಡದೇ ಗುಡಿಗುಂಡಾರಗಳನ್ನು ಕಟ್ಟಿ ವ್ಯರ್ಥವಾದ ನೇಮಗಳನ್ನು ಮಾಡುತ್ತಾ ಬಂದಿರುವ ಜನರನ್ನು ಕಂಡ ಸರ್ವಜ್ಞ ಅಂಥವರಿಗೆ ಕ್ಷುದ್ರರೂ, ಅಲ್ಪಜ್ಞಾನಿಗಳೂ ಎಂದು ತೆಗಳಿದ್ದಾನೆ.

ಇನ್ನು ಜಗಕ್ಕೆಲ್ಲಾ ಒಬ್ಬನೇ ದೇವನೆಂಬ ನಂಬಿಕೆ ಇದ್ದಾಗ್ಯೂ ಹಲವಾರು ದೇವತೆಗಳನ್ನು ಜನಪದರು ಪೂಜಿಸುತ್ತಾ ಬಂದಿದ್ದಾರೆ. ಇದನ್ನು ಖಂಡಿಸಿದ ಸರ್ವಜ್ಞ;

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ.

ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನದ ಪ್ರಾಣಿಗಳಿ
ಗಾದವನೇ ದೇವ ಸರ್ವಜ್ಞ.

ಜನಪದರ ಸಮಾಜದಲ್ಲಿ ಹತ್ತಾರು ಸ್ಥರಗಳಿದ್ದಂತೆ, ಹತ್ತಾರು ದೇವರುಗಳೂ ಇರುತ್ತವೆ. ಆದರೆ ದೈವೀಭಾವ ಒಂದೇ ಆಗಿರುತ್ತದೆ. ''ದೇವನೊಬ್ಬ ನಾಮ ಹಲವು'' ಎಂದು ಬಸಣ್ಣನವರು ಹೇಳಿದಂತೆ ಸರ್ವಜ್ಞನೂ ಸಹ ಜಗಕ್ಕೆಲ್ಲಾ ಒಬ್ಬನೇ ದೇವರೆಂದು ಹೇಳಿದ್ದಾನೆ. ಆತನೇ ಸೃಷ್ಟಿಕರ್ತನಾದ, ಸರ್ವಜ್ಞನಾದ ಶಿವ; ನಿರಾಕಾರ ಸ್ವರೂಪಿ, ಸರ್ವ ವ್ಯಾಪಿ, ಎಲ್ಲೆಲ್ಲಿಯೂ ಇದ್ದಾನೆ (ಸರ್ವಜ್ಞ,

ಆರ್.ರೇಣುಕಮ್ಮ,ಪು.೪೪). ಈ ಭುವನ ಪ್ರಾಣಿಗಳಿಗಾದವನೇ ದೈವನೆಂಬ ಉದಾತ್ತ ಭಾವನೆ ಜನಪರದು. ''ಸರ್ವಂ ಶಿವಮಯಂ ಜಗತ್'' ಎಂಬಂತೆ ಅಂಗ ಸ್ವರೂಪಿಯಾದ ಭಗವಂತನು ಸರ್ವವ್ಯಾಪಿಯೆಂದೂ, ನಿರಾಕಾರಿಯೆಂದೂ ಸರ್ವಜ್ಞ ವಿವರಿಸಿದ್ದಾನೆ.

ಹೀಗೆ ಬದುಕಿನ ಪ್ರಮುಖ ಮೌಲ್ಯಗಳಲ್ಲಿ ದೈವೀ ಶ್ರದ್ಧೆಯೂ ಒಂದು ಮೌಲ್ಯವಾಗಿ ಸರ್ವಜ್ಞನಿಗೆ ಕಂಡುಬಂದಿರುವುದನ್ನು ಜನಪದರ ದೈವೀಶ್ರದ್ಧೆಯ ಹಿನ್ನೆಲೆಯಲ್ಲಿ ಇಲ್ಲಿ ನೋಡಲಾಗಿದೆ. ಮೌಲ್ಯಗಳ ಪ್ರಮುಖ ಪ್ರಯೋಜನ ಸಮಷ್ಠಿಯ ಹಿತ ದೈವತ್ವಕ್ಕೆ ವಿರೋಧವಾದ ಆಮಿಷಗಳನ್ನು ಹತ್ತಿಕ್ಕಿ ದೈವೀಶ್ರದ್ಧೆಯನ್ನು ಪಡೆದು, ಅನ್ಯರನ್ನು ತನ್ನಂತೆ ಕಂಡು, ಅವರ ಬದುಕಿಗೂ ಇಂಬುಗೊಡುವುದರ ಜೊತೆಗೆ ಸಕಲ ಚರಾಚರಗಳಲ್ಲಿ ದೇವರನ್ನು ಕಂಡವರು ಜನಪದರು. ಸರ್ವರನ್ನೂ ವಿಶಾಲ ದೃಷ್ಟಿಯಿಂದ ಪರೀಕ್ಷಿಸಿ ನೋಡಿರುವ ಸರ್ವಜ್ಞನೂ ಸಹ ದೈವೀ ಶ್ರದ್ದೆಗಿರುವ ಮೌಲ್ಯವನ್ನು ತನ್ನ ವಚನಗಳಲ್ಲಿ ನಾನಾ ವಿಧವಾಗಿ ವಿವರಿಸಿದ್ದಾನೆ.

ಅಧ್ಯಾಯ - ೭

# ಜಾನಪದ ಸಾಹಿತ್ಯಿಕ ಪ್ರಕಾರಗಳು

೭.೧. ಪ್ರವೇಶ

೭.೨. ತ್ರಿಪದಿಯ ಹಿನ್ನೆಲೆ

೭.೨.೧. ದೇಸಿ ತ್ರಿಪದಿ

೭.೨.೨. ತ್ರಿಪದಿಯ ಬಳಕೆ

೭.೨.೩. ಸರ್ವಜ್ಞನಲ್ಲಿ ತ್ರಿಪದಿ

೭.೩. ಸರ್ವಜ್ಞನ ವಚನಗಳಲ್ಲಿ ಭಾಷೆ

೭.೩.೧. ಬೈಗುಳ ಪದಗಳು

೭.೩.೨. ದೇಸಿ ಪದಗಳು ,ವಿಜಾತಿ ಪದಗಳು

೭.೪. ಗಾದೆ

೭.೪.೧. ಸರ್ವಜ್ಞನ ವಚನಗಳಲ್ಲಿ ಗಾದೆಗಳ ಪ್ರಭಾವ

೭.೪.೨. ಪರ್ಯಾಯ ಶಬ್ದರೂಪಗಳು

೭.೪.೩. ವ್ಯತ್ಯಾಸಗಳು

೭.೫. ಒಗಟುಗಳು

೭.೫.೧. ಸರ್ವಜ್ಞನ ವಚನಗಳಲ್ಲಿ ಜಾನಪದ ಒಗಟುಗಳ ಪ್ರಭಾವ

೭.೫.೨. ಪ್ರಾಕೃತಿಕ ಒಗಟುಗಳು

೭.೫.೩. ಸಾಂಸ್ಕೃತಿಕ ಒಗಟುಗಳು

೭.೫.೪. ಒಗಟಿನ ಹೊರಮೈಯಲ್ಲೇ ಬಚ್ಚಿಟ್ಟ ಗೂಢತೆ

೭.೫.೫. ಸನ್ನಿವೇಶವೊಂದನ್ನು ಅನಾವರಣಗೊಳಿಸುವ ಒಗಟುಗಳು

೭.೬. ಐತಿಹ್ಯ

೭.೭. ಪುರಾಣ

## ೭.೧. ಪ್ರವೇಶ :

ಜನಪದರ ಭಾಷೆಯೇ ಮೂಲತಃ ಸಾಹಿತ್ಯಿಕ ಭಾಷೆಯಾಗಿದೆ . ಅವರಾಡುವ ಮಾತಿನಲ್ಲಿ ಹೆಜ್ಜೆ ಹೆಜ್ಜೆಗೆ ಪಡೆನುಡಿಗಳು,ನಾಣ್ಣುಡಿಗಳು, ಉಪಮೆಗಳು , ರೂಪಕಗಳು, ಉತ್ಪ್ರೇಕ್ಷೆಗಳು, ಶ್ಲೇಷೆಗಳು ತಮ್ಮಿಂದತಾವೇ ತುಂಬಿಕೊಂಡಿರುತ್ತವೆ. ಹಳ್ಳಿಗರು ಸಾಹಿತ್ಯಾಂಶವಿಲ್ಲದೆ ಮಾತನಾಡುವುದು ಕಡಿಮೆ. ಅವರು ಮಾತಾನಾಡುವಾಗ ಅವರಗರಿವಿಗೆ ಬಾರದೇ ಸಾಹಿತ್ಯಿಕ ಅಂಶಗಳು ಹೊರಹೊಮ್ಮಿರುತ್ತವೆ . ತ್ರಿಪದಿ ರೂಪದ ಹಾಡುಗಳು, ಗಾದೆಗಳು, ಒಗಟುಗಳು, ನುಡಿಗಟ್ಟುಗಳು, ಐತಿಹ್ಯಗಳು, ಪುರಾಣಗಳು ಮುಂತಾದವುಗಳನ್ನು ಇಲ್ಲಿ ವಿಂಗಡಿಸಬಹುದು . ( ಇಂಥಾ ಅಮೂಲ್ಯವಾದ ಜಾನಪದ ಭಾಷಾ ಸಂಪತ್ತನ್ನು ಸರ್ವಜ್ಞನು ಸಮರ್ಥವಾಗಿ ಸೂರೆಗೊಂಡಿದ್ದಾನೆ). ಶಿಷ್ಟ ಕವಿಯಾದರೂ ಸರ್ವಜ್ಞ ಜಾನಪದರಿಗೆ ಬಹಳ ಸಮೀಪವಾದವನು. ತನ್ನ ವಚನಗಳಲ್ಲಿನ ಭಾಷೆ , ತ್ರಿಪದಿ, ಗಾದೆ, ಒಗಟು, ಐತಿಹ್ಯ, ಪುರಾಣಗಳ ಶಾಬ್ಧಿಕ ಅಭಿವ್ಯಕ್ತಗಳನ್ನು ಬಳಸಿಕೊಂಡಿದ್ದಾನೆ.

ಸರ್ವಜ್ಞನು ತನ್ನ ವಚನಗಳಲ್ಲಿ ಮೇಲೆ ತಿಳಿಸಿದ ವಾಕ್ ಪರಂಪರೆಯಲ್ಲಿ ಬಾಯಿಂದ ಬಾಯಿಗೆ ಹರಿದು ಬಂದ ಸಾಹಿತ್ಯಿಕ ಪ್ರಕಾರಗಳನ್ನು ಒಂದೊಂದಾಗಿ ವಿಶ್ಲೇಷಿಸುವುದೇ ಈ ಅಧ್ಯಾಯದ ಉದ್ದೇಶ.

## ೭.೨. ತ್ರಿಪದಿಯ ಹಿನ್ನೆಲೆ :

ತ್ರಿಪದಿಯಂತಹ ಬಿಗಿಕಟ್ಟಿನ ಮತ್ತು ಪರಿಮಿತ ವ್ಯಾಪ್ತಿಯ ಕಾವ್ಯ ಸ್ವರೂಪವನ್ನು ಕೈಗೆತ್ತಿಕೊಂಡಾಗ, ಲಭ್ಯವಿರುವ ಅತ್ಯಲ್ಪ ಅವಕಾಶದಲ್ಲಿಯೇ ಗಣನೀಯವಾದ ಕಲಾಕೌಶಲದ ಸಿರಿಯನ್ನು ಮೆರೆಯಲು ಕವಿಯಾದವನು ತನ್ನ ಪ್ರತಿಭಾ ಶಕ್ತಿಯನ್ನೇ ಪಣಕ್ಕೆ ಹಚ್ಚಬೇಕಾಗುತ್ತದೆ.

ಸಂವಾದ, ಕಥನ, ವರ್ಣನಾ ವಿಲಾಸದಂತಹ ಜೀವೋತ್ಕರ್ಷಕ ಸಾಹಿತ್ಯಾಂಶಗಳಿಗೆ ಆಸ್ಪದವೇ ಇಲ್ಲವೆಂಬತ ತ್ರಿಪದಿಯಂತಹ ಮಾಧ್ಯಮದಲ್ಲಿ ಅತ್ಯಲ್ಪ ಅವಕಾಶದಲ್ಲಿಯೇ ಚಿತ್ರಗಳನ್ನು ಬಿಡಿಸುವ, ಚಿಂತನೆಗಳನ್ನು ಅರಳಿಸವ, ಭಾವನೆಗಳನ್ನು ಹರಿಬಿಡುವ ಕೆಲಸ ಸುಲಭ ಸಾಧ್ಯವಾದುದಲ್ಲ (ಚುಟುಕು ಮಂದಾರ, ಪು. ೨೦). ತ್ರಿಪದಿ ಒಂದು ಗುಂಡು ಸೂಜಿಯ ಹಾಗೆ. ನಾಲ್ಕೈದು ಪುಟದ ಹಾಳೆಗಳನ್ನು ಗುಂಡು ಸೂಜಿ ಹೇಗೆ ಒಟ್ಟಿಗೆ ಹಿಡಿದಿಟ್ಟರಬಲ್ಲದೋ ಹಾಗೆಯೇ ಪುಟ್ಟ ಪುಟ್ಟ ಭಾವಗಳನ್ನು ಈ ತ್ರಿಪದಿ, ಛಂದಸ್ಸು ಕೂಡಿಸಿಡುತ್ತದೆ. ನೂರು ಶ್ಲೋಕಗಳನ್ನು ಹೇಳಬಲ್ಲವನು ಪಂಡಿತನು ಹೇಗೋ ಹಾಗೆಯೇ ನೂರು ತ್ರಿಪದಿಗಳನ್ನು ಹೇಳಬಲ್ಲವನು ಹಳ್ಳಿಯವ ಜಾಣ. ಗಾದೆಗಳನ್ನು ಜೋಡಿಸುವುದು, ಪ್ರಾಸಬದ್ಧವಾಗಿ ಮಾತನಾಡುವುದು ಇವೆಲ್ಲಾ ಗ್ರಾಮೀಣ ಜನರ ಸಹಜವಾದ ವಚನೋವಿಲಾಸಗಳು (ತ್ರಿಪದಿಯ ಚತುರ್ಮುಖಿ, ಪು. ೧೭). 'ತ್ರಿಪದಿ' ಅಂದರೆ; ಮೂರು ಪಾದಗಳುಳ್ಳ ಪದ್ಯ. ಮೊದಲನೆಯ ಪಾದದಲ್ಲಿ ಇಪ್ಪತ್ತು ಮಾತ್ರೆಗಳು, ಎರಡನೆಯ ಸಾಲಿನಲ್ಲಿ ಹದಿನೆಂಟು ಮಾತ್ರೆಗಳು ಮೂರನೆಯ ಸಾಲಿನಲ್ಲಿ ಹದಿಮೂರು ಮಾತ್ರೆಗಳು ಇರುತ್ತವೆ. ಇತರೆ ಪದ್ಯಗಳಂತೆ ತ್ರಿಪದಿಯಲ್ಲಿಯೂ ದ್ವಿತೀಯ ಅಕ್ಷರವು ಪ್ರಾಸವಿರುತ್ತದೆ. ಪ್ರಥಮ ಪಾದದಲ್ಲಿ ಅರ್ಧ ಚರಣವಾದ ಮೇಲೆ ಉಳಿದರ್ಧ ಚರಣವನ್ನು ಪ್ರಾರಂಭಿಸುವಾಗಲೂ ಮೊದಲು ಬಂದ ಪ್ರಾಸವೇ ಬರುತ್ತದೆ. ಇದು ತ್ರಿಪದಿಯ ಅಸಾಧಾರಣವಾದ ಲಕ್ಷಣವೆನ್ನಬಹುದು (ಸರ್ವಜ್ಞ ವಚನಗಳು, ಪು.೩೭).

### ೭.೨.೧. ದೇಸೀ ತ್ರಿಪದಿ :

ತ್ರಿಪದಿ ಮೂಲತಃ ಜಾನಪದ ಛಂದಸ್ಸು ಇವು ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಆಶು ಕವಿತೆಯಾಗಿ ತ್ರಿಪದಿಯ ತಲೆಮಾರುಗಳಿಂದ ಪ್ರವಹಿಸುತ್ತಾ ಬಂದಿವೆ. ತ್ರಿಪದಿಯನ್ನು ಹಾಡದ ಹಳ್ಳಿಯ ಜನರೇ ಇಲ್ಲ. ಹೆಂಗಸರಾಗಲಿ, ಗಂಡಸರಾಗಲಿ ವೃತ್ತಿ, ವಯಸ್ಸು, ಜಾತಿ, ಪಂಥ, ವರ್ಗ, ವರ್ಣಾಧಿಗಳ ಬೇಧವಿಲ್ಲದೆ ಎಲ್ಲರಲ್ಲೂ ಕಂಠಸ್ಥವಾಗಿರುತ್ತವೆ. ಕಂಬಳಿ ಕುಡುಗೋಲು ಹಳ್ಳಿಯವರ ಭಾಗ್ಯದ ಸಂಕೇತವಾದರೆ, ತ್ರಿಪದಿ ಅವರ 'ಕಾವ್ಯ ಪ್ರಯೋಗಮತಿ'ಯ ಸಂಕೇತವಾಗಿದೆ (ತ್ರಿಪದಿಯ ಚತುರ್ಮುಖಿ, ಪು.೧೭). ಜನಪದರು ತಮ್ಮ ನಿತ್ಯ ಕಾಯಕದಲ್ಲಿ ತ್ರಿಪದಿಯ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಕುಟ್ಟುವ, ಬೀಸುವ, ಕೇರುವ, ಕಣ ಮಾಡುವ, ತೂರುವ ಕೆಲಸಗಳಲ್ಲಿ ತ್ರಿಪದಿಗಳನ್ನು ಸಹಜ ಲಾವಣ್ಯದಿಂದ ಹಾಡಿ ಕನ್ನಡ ನುಡಿಯನ್ನು ಬೆಳಗಿಸಿದವರು ಹಳ್ಳಿಯ ಹೆಣ್ಣುಮಕ್ಕಳು. ಗಾದೆಯನ್ನು

ಛಂದಸ್ಸಿಗೆ ಹೊಂದಿಸಿ, ನುಡಿಕಟ್ಟನ್ನು ಪ್ರಾಸಕ್ಕೆ ಸೇರಿಸಿ, ಶುದ್ಧ ದೇಶೀಯವಾದ ರೀತಿಯಲ್ಲಿ ನಮ್ಮ ಜನಪದರು ತ್ರಿಪದಿಯನ್ನು ಕಟ್ಟಿದವರು (ಅದೇ ಪು.೧೮). ಜನಪದರು ಈ ತ್ರಿಪದಿಯನ್ನು ಹೇಳುವಾಗ ದ್ವಿತೀಯ ಪಾದದ ಮೂರು ಗಣಗಳವರೆಗೆ ಹೇಳಿ, ಮತ್ತೆ ಆ ಎರಡನೆಯ ಸಾಲನ್ನು ಮೊದಲಿನಿಂದ ಪ್ರಾರಂಭಿಸುತ್ತಾರೆ. ಉದಾಹರಣೆಗೆ ಹಳ್ಳಿಯ ಅಜ್ಜಿ ತನ್ನ ಮುದ್ದು ಮೊಮ್ಮಗನನ್ನು ಕರೆಯುವ ಸೊಬಗನ್ನು ನೋಡಿದಾಗ;

ಮುದ್ದೆ ಬಾ ಮಗುವೆ ಬಾ ವಜ್ರದ ಹರಳೆ ಬಾ
ಅರ್ಜುನನ ಕೊರಳ ಪದಕವೆ - ಬಾ

ಎಂದು ಅಜ್ಜಿ ಮೊಮ್ಮಗನನ್ನು ಕರೆಯುವಳು. ಮೊದಲಬಾರಿಗೆ ಹೆಣ್ಣುಮಗಳು ತನ್ನ ತವರು ಮನೆಯನ್ನು ಬಿಟ್ಟು ಗಂಡನ ಮನೆಗೆ ಹೊರಡುವಾಗ ಆಗುವ ಸಂಕಟವನ್ನು ಉಪಮೆ ಮೂಲಕ ಹೇಳಿದ್ದಾಳೆ;

ಹುಟ್ಟಿದ ಮನೆಯಿಂದ ಮೆಟ್ಟಲ್ಲನ್ನಿಳಿಯುವಾಗ
ಹೊಟ್ಟೆಗೆ ಸಿಡಿಲು ಬಡಿದ್ಹಾಂಗೆ - ಹೆತ್ತಮ್ಮ
ಕಣ್ಣ ನೀರ್ಧರಿದು ಹೊಳೆಯಾಯ್ತು ॥

ಹಾಗೆಯೇ ಬಡತನದ ದಾರುಣ ಚಿತ್ರ ಹಳ್ಳಿಗರ ಬಾಯಲ್ಲಿ ಈ ಕೆಳಗಿನಂತೆ ಮೂಡಿ ಬಂದಿದೆ;

ಬಡವರು ಸತ್ತರೆ ಸುಡುವುದಕೆ ಸೌದಿಲ್ಲೆ
ಒಡಲ ಕಿಚ್ಚಿನಲಿ ಹೆಣಬೆಂದೋ - ದೇವುರೆ
ಬಡವರಿಗೆ ಸಾವ ಕೊಡಬ್ಯಾಡ.

ಹೀಗೆ ಸಾವಿರಾರು ತ್ರಿಪದಿಗಳನ್ನು ಕಟ್ಟಿ ಹಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ತ್ರಿಪದಿಯು ಭಾಗೀರಥಿ ಯಂತೆ ಹರಿದುಬಂದಿದ್ದಾಳೆ (ಅದೇ ಪು.೩೩,೩೫).

ಈ ಮೇಲಿನ ತ್ರಿಪದಿಗಳ ಮೇಲೆ ಪಂಡಿತರು ಬೃಹತ್ ಗ್ರಂಥ ರಚಿಸಬಹುದು. ಅಂತಹ ಹೆಚ್ಚೊತ್ತಿಗೆ ಆಹಾರವಾಗಬಹುದಾದ ವಿಷಯವನ್ನು ಜಾನಪದರು ಕೇವಲ ಮೂರು ಸಾಲುಗಳಲ್ಲಿ ಹಿಡಿದಿಟ್ಟಿದ್ದಾರೆ. ತ್ರಿಪದಿಯನ್ನು ವಾಮನಾವತಾರಕ್ಕೆ ಹೋಲಿಸಿದ ಬೇಂದ್ರೆಯವರು "ತ್ರಿಪದಿಯೇ ಕನ್ನಡದ ಗಾಯತ್ರಿ," ಎಂದು ಹೊಗಳಿದ್ದಾರೆ (ಕನ್ನಡ ಛಂದೋ ವಿಕಾಸ, ೧೯೬೨). ಬಿಡಿಬಿಡಿಯಾದ ಅನುಭವ ವಿಶೇಷವನ್ನು ಚಿತ್ತಾಕರ್ಷಕವಾದ ಮಾತಿನಲ್ಲಿ ನೇರವಾಗಿ ಹುದುಗಿಟ್ಟು ಹೇಳಲು ತ್ರಿಪದಿ ಹೇಳಿ ಮಾಡಿಸಿಟ್ಟ ಮಾಧ್ಯಮ. ಗುಲಗಂಜಿಯಲ್ಲಿ ಪಟ್ಟೆ ಸೀರೆಯನ್ನು ಕಟ್ಟಿಡುವಂತೆ ತ್ರಿಪದಿಯಲ್ಲಿ ಹರಿಯಿಸಿದ ಕವಿಯ ಅನುಭವ ಮಡಚಿದರೆ ಹಿಡಿಯಷ್ಟಾಗಿ, ಬಿಡಿಸಿದರೆ ಜಗದಗಲವಾಗಿ ಹರಡುವ ವ್ಯಾಪಕ

ಶಕ್ತಿಯುಳ್ಳದ್ದಾಗಿದೆ (ತ್ರಿಪದಿಯ ಚತುರ್ಮುಖಿ, ಪು.೧೯). ಈ ಛಂದೋ ರೂಪದ ತ್ರಿಪದಿ ಸಮುದ್ರದಷ್ಟು ಆಳವಾದ ಹಾಗೂ ಪರ್ವತದಷ್ಟು ಎತ್ತರವಾದ ಅರ್ಥವನ್ನೊಳಗೊಂಡಿರುತ್ತದೆ. ಕೇವಲ ಮೂರು ಸಾಲುಗಳಲ್ಲಿ ನೂರರಷ್ಟು ಅನುಭವದ ವಲಯಗಳನ್ನು ತೆರೆದಿಡುತ್ತದೆ.

ಸಾಲುಗಳ ದೃಷ್ಟಿಯಿಂದ ಸಂಸ್ಕೃತದಲ್ಲಿನ ಗಾಯತ್ರಿ ಮಂತ್ರವನ್ನು ಕನ್ನಡದಲ್ಲಿನ ತ್ರಿಪದಿಗೆ ಹೋಲಿಸಬಹುದು;

| | |
|---|---|
| ತತ್ಸುವಿತುರ್ ವರೇಣೆಯಂ | ಜೀವಿಜೀವಿಯ ತಿಂದು ಜೀವಿಪುದ ಜಗವೆಲ್ಲ |
| ಭರ್ಗೋದೇವಸ್ಯ ಧೀಮಹಿ | ಜೀವದಿಂ ಹೊರಗೆ ತಿಂಬುವರ ನಾಕಾಣೆ |
| ಧಿಯೋಯೋನಃ ಪ್ರಚೋಚಯಾತ್ ॥ | ಜೀವವೇ ಜಗವು ಸರ್ವಜ್ಞ. |

ಜಾನಪದವು ತನ್ನ ಸುಖದುಃಖಗಳು ನೀಡಿದ ಅನುಭವದ ಮೌಲ್ಯವನ್ನು ಕಾವ್ಯದ ಮೂಲಕವೇ ಗ್ರಹಿಸಿ ಹೇಳಿರುವುದೇ ಹೆಚ್ಚು ಸರ್ವತಂತ್ರ ಸ್ವತಂತ್ರ ಅಸ್ಥಿತ್ವವಿರುವ ತ್ರಿಪದಿಗೆ ಸ್ವಯಂಪೂರ್ಣತೆ ಇದೆ. ಇಂದಿನವರೆಗೂ ತ್ರಿಪದಿ ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿರುವುದಕ್ಕೆ ಕಾರಣಗಳೆಂದರೆ; ಇದರ ಸರಳತೆ, ನೇರ ಸ್ಪಷ್ಟತೆ, ಎಂತಹ ಭಾವಗಳ ಭಾರವನ್ನಾದರೂ ಹೊತ್ತು ನಿಭಾಯಿಸುವ ಚತುರತೆ, ತನ್ನ ಮೂರು ಸಾಲಿನಲ್ಲೇ ಅರ್ಥ ಸಮೃದ್ಧಿ ಯನ್ನು ಮೆರೆಯುವಿಕೆ (ಜಾನಪದ ಮುಕ್ತಕಗಳು, ಪು.೪).

## ೭.೨.೨. ತ್ರಿಪದಿಯ ಬಳಕೆ :

ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ತ್ರಿಪದಿ ಕ್ರಿ.ಶ. ೭ನೇ ಶತಮಾನದಲ್ಲಿ ಹುಟ್ಟಿದ ಬಾದಾಮಿ ಗುಹಾ ಶಾಸನದಲ್ಲಿ ದೊರೆಯುತ್ತದೆ.

ಸಾಧುಗೆ ಸಾಧು ಮಾಧೂರ್ಯನ್ಗೆ ಮಾಧೂರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆರನಲ್ಲ ॥

ಇಷ್ಟೇ ಅಲ್ಲದೆ, ತ್ರಿಪದಿ ರಚನೆ ಕನ್ನಡದ ಮೊಟ್ಟಮೊದಲ ಗ್ರಂಥ ಕವಿರಾಜಮಾರ್ಗದಲ್ಲಿ ಪ್ರಸ್ತಾಪವಾಗಿದೆ. ಕ್ರಿ.ಶ. ೯೪೧ರಲ್ಲಿದ್ದ ಪಂಪ ಮಹಾಕವಿ ತನ್ನ ಆದಿ ಪುರಾಣದಲ್ಲಿ ಬಳಸಿದ್ದಾನೆ (ತ್ರಿಪದಿ ಚತುರ್ಮುಖಿ, ಉದ್ಧೃತ, ಪು.೨೨).

ಸುರಯಿಯೊಳ್ ಗಿಳಿ ಮಗುಳ್ವಿರಗಿಳಿ ಬಿರಯಿಗೆ
ಮೊರೆವಂತೆ ಮೊರೆವ ಮರಿದುಂಬ ತಳಿರೊಳ್
ಪರಭೃತಂ ಮಗುಳ್ವಿ ಪರಭೃತಂ ॥

ಹಾಗೆಯೇ ಕ್ರಿ.ಶ. ೯೫೦ರಲ್ಲಿದ್ದ ಪೊನ್ನನ ಶಾಂತಿಪುರಾಣದಲ್ಲಿಯೂ ಸಹ ಈ ತ್ರಿಪದಿಯ ಬಳಕೆಯನ್ನು ಕಾಣಬಹುದಾಗಿದೆ.

ಎಯ್ದದ ಬಗೆಯಂತೆ ಮೇಯ್ದಪ್ಪಂತನಿತು
ಮೆಯ್ದರೆ ಮಧುವರ್ ಬಂಧರೂಪಿಂಗಾ
ಯ್ದೊಯ್ದನ್ನನಪ್ಪ ಪರಮತಂ ॥

ಅಂತು ಮಾರೂಪನೆ ಚಿಂತಿಸಿ ಚಿಂತಿಸಿ
ಕಾಂತೆಯರ್ ಪತಿಗೆ ರತಿ ಸೋಲ್ತ ಕೆಂದಳಿ
ರಂತಲರ್ಗಣೆಗೆ ಡೊಣೆಯಾದರ್ ॥

ಇದಲ್ಲದೆ ಕ್ರಿ.ಶ. ೯೯೦ರ ಒಂದನೇ ನಾಗವರ್ಮನ 'ಛಂದೋಂಬುಧಿ'ಯಲ್ಲಿ ತ್ರಿಪದಿಯ ಲಕ್ಷಣವನ್ನು ತ್ರಿಪದಿಯಲ್ಲಿಯೇ ಮೊದಲಬಾರಿಗೆ ವಿವರಿಸಲಾಗಿದೆ. ಕ್ರಿ.ಶ. ೧೦೨೫ರಲ್ಲಿ ರಚನೆಗೊಂಡ 'ಲೋಕೋಪಕಾರ' ಎಂಬ ಚಾವುಂಡರಾಯನ ಗ್ರಂಥದಲ್ಲಿ ಮೂರು ತ್ರಿಪದಿಗಳಿವೆ. ಸುಮಾರು ಕ್ರಿ.ಶ. ೧೦೪೨ರಲ್ಲಿದ್ದ ದುರ್ಗಸಿಂಹನ 'ಪಂಚತಂತ್ರ' ದಲ್ಲಿನ ಒಂದು ತ್ರಿಪದಿ ಹೀಗಿದೆ;

ಹಿತವನತಿ ಭಕ್ತ ನನ್ವಿತನಿವಂ ಸುಭೃತ್ಯಂ
ಕೃತಕೃತ್ಯನೆನ್ನರ್ ಪಿಸುಣೆಂದೆ ಕಿಡಿಪರೀ
ಕ್ಷಿತಿಪತಿಗಳಿಂತ ವಿಚಾರದಿ ।

(ತ್ರಿಪದಿ; ಸ್ವರೂಪ ಮತ್ತು ಇತಿಹಾಸ,ಪು.೯೧).

ಕ್ರಿ.ಶ. ೧೧೫೦ರಲ್ಲಿದ್ದ ಮಹಾದೇವಿ ಅಕ್ಕನ 'ಯೋಗಾಂಗ ತ್ರಿವಿಧಿ'ಯಲ್ಲಿ ೬೭ ತ್ರಿಪದಿಗಳಿವೆ. ಉದಾಹರಣೆಗೆ;

ಕೋಟಿ ರವಿ ಶಶಿಗಳ್ಗೆ ಮೀಟಾದ ಪ್ರಭೆ ಬಂದು
ನಾಟಿತು ಎನ್ನ ಮನದೊಳಗದರಿಂದ
ದಾಟಿದೆನೊ ಭವದ ಕೋಶಗಳ ॥

ಕ್ರಿ.ಶ. ೧೧೮೯ರ ಅಗ್ಗಳನ 'ಚಂದ್ರಪ್ರಭ ಪುರಾಣ'ದಲ್ಲಿ ಕಂಡು ಬಂದ ತ್ರಿಪದಿ;

ಕೇಡನಾಗೆಂದಾಗಂ ಕೇಡೆಂದು ವಿಪರೀತಂ
ಮಾಡಿಯೆ ನೆಗಳ್ದ ಜಡಜಂತು ಮೂಡಿಮು
ಳ್ಗಾಡುಗುಂ ಜನ್ಮ ಜಡಧಿಯೊಳ್ (೪-೫೪).

ಸುಮಾರು ಕ್ರಿ.ಶ. ೧೨೦೦ರ ನೇಮಿಚಂದ್ರನ 'ಲೀಲಾವತಿ ಪ್ರಬಂಧ'ದಲ್ಲಿನ ತ್ರಿಪದಿಗಳಲ್ಲಿ, ವೇಶ್ಯಾ ಜೀವನದ ಚಿತ್ರಣವಿದೆ.

ಪತ್ತಿದ ಗಂಡರ ಚಿತ್ತವ ಕಿಡಲೀಯ
ದಿತ್ತುದೇ ಕೋಟಿ ತನಗೆಂಬ ಸೂಳೆಯ
ಓತ್ತಿಲಲ್ಲಿರದೇ ಸುರಭೋಜ ॥ (೨-೪೦).

ಸುಮಾರು ಕ್ರಿ.ಶ. ೧೬೫೦ರ ಷಡಕ್ಷರಿ ಕವಿಯ 'ರಾಜಶೇಖರ ವಿಲಾಸ'ದಲ್ಲಿನ ತ್ರಿಪದಿ ಹೀಗಿದೆ;

ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ
ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂ-
ಮದಮೆಂದು ತೊಲಗದಿರುರ್ಕೆ॥ (೧೧-೮೯).

ಈ ಕನ್ನಡ ತ್ರಿಪದಿಯು ಮೂಲತಃ ಅಂಶಗಣ ಛಂದಸ್ಸು. ಇದು ಪ್ರಾರಂಭದಿಂದ ಹನ್ನೆರಡನೆಯ ಶತಮಾನದವರೆಗೆ ತನ್ನ ಅಂಶಗಣದ ರೂಪದಲ್ಲಿಯೇ ಕಂಡುಬರುತ್ತದೆ. ಆದರೆ ೧೨ನೆಯ ಶತಮಾನದಲ್ಲಿ ಅದು ಮಾತ್ರಾಗಣ ಛಂದಸ್ಸಿಗೆ ಮಾರ್ಪಾಟಾಗಿದ್ದುದು ಕಂಡುಬರುತ್ತದೆ. ಈ ಅಂಶಗಣ ಅಥವಾ ದೇಸೀ ತ್ರಿಪದಿಯ ಛಂದಸ್ಸಿನ ಸ್ವರೂಪವು ಹೀಗಿದೆ;

| | |
|---|---|
| | - - - - - - - - - - - - - |
| ವಿ.ವಿ.ವಿ.ವಿ. | ಆಡಿ ಬಾ । ನನಕಂದ । ಅಂಗಾಲ । ತೊಳದೇನ । |
| | - - - - - - - - - - - - - |
| ವಿ.ಬ್ರ.ವಿ.ವಿ. → | ತೆಂಗಿನ । ಕಾಯಿ । ಎಳನೀರ । ತಕ್ಕೊಂಡು |
| | - - - - - - - - |
| ವಿ.ಬ್ರ.ವಿ. | ಬಂಗಾರ । ಮಾರಿ । ತೊಳದೇನ ॥. |

ಸರ್ವಜ್ಞನಲ್ಲಿ ಮಾತ್ರಾಗಣ ಸ್ವರೂಪದಲ್ಲಿನ ತ್ರಿಪದಿ ಹೀಗಿದೆ;

- ∪ - ∪∪∪∪∪ - ∪ - - ∪ -
ಜಾತಿಹೀ। ನನ ಮನೆಯ। ಜ್ಯೋತಿ ತಾ। ಹೀನವೇ

- ∪∪ - ∪ ∪∪ - ∪ - ∪∪∪
ಜಾತಿ ವಿ। ಜಾತಿ । ಎನಬೇಡ। ದೇವನೊಲಿ

- ∪ - - ∪ - - ∪
ದಾತನೇ। ಜಾತ । ಸರ್ವಜ್ಞ ॥.

**ವ್ಯತ್ಯಾಸ :** ವಿಷ್ಣುಗಣ ಇದ್ದಲ್ಲಿ ಐದು ಮಾತ್ರೆಯ ಗಣಗಳಾಗಿ ಹಾಗೂ ಬ್ರಹ್ಮಗಣ ಇದ್ದಲ್ಲಿ ಮೂರು ಮಾತ್ರೆಯ ಗಣಗಳಾಗಿ ತ್ರಿಪದಿ ಪರಿವರ್ತನೆ ಹೊಂದಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಈ ಪ್ರಕ್ರಿಯೆ ಪ್ರಾರಂಭವಾಗಿದ್ದು ೧೨ನೆಯ ಶತಮಾನದಲ್ಲಿ.

ದೇಶೀ ತ್ರಿಪದಿ ಅಥವಾ ಅಂಶಗಣ ತ್ರಿಪದಿ ಇಂದಿಗೂ ಜಾನಪದದ ಹಾಡುಗಳಲ್ಲಿ ಉಳಿದುಕೊಂಡು ಬಂದಿದೆ. ಆದರೆ ಅಕ್ಕಮಹಾದೇವಿಯ 'ಯೋಗಾಂಗ ತ್ರಿವಿಧಿ'ಯಲ್ಲಿ ಅದು ಮೊಟ್ಟ ಮೊದಲು ಮಾತ್ರಗಣ ಛಂದಸ್ಸಿನ ಸ್ವರೂಪವನ್ನು ಪಡೆಯಿತು. ಮುಂದೆ ಇದೇ ರೂಪದಲ್ಲಿ ಮುಂದುವರೆದು ಸರ್ವಜ್ಞನ ಕೈಯಲ್ಲಿ ತನ್ನ ಅತ್ಯಂತ ಶ್ರೇಷ್ಠ ಸಿದ್ಧಿಯನ್ನು ಪಡೆಯಿತು. ಈ ದೃಷ್ಟಿಯಿಂದ ನಾವು ಜಾನಪದ ತ್ರಿಪದಿಗಳೊಡನೆ ಸರ್ವಜ್ಞನ ತ್ರಿಪದಿಗಳನ್ನು ಇಟ್ಟು ನೋಡಬಹುದಾಗಿದೆ. ಉದಾಹರಣೆಗೆ;

| | |
|---|---|
| ಅತ್ತೆಯ ಮನೆ ದೋಸೆ ಹತ್ತಿ ಹೂವಿನ್ಹಾಂಗ | ಬಲ್ಲೆನೆಂಬುವ ಮಾತು ಎಲ್ಲವೂ ಹುಸಿಕಾಣೋ |
| ಎಪ್ಪತ್ತು ತಿಂದ ಮದುಮಗ-ಹೊಟ್ಟೇಲಿ | ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ |
| ನೆಗಳುಂಟೋ ಏನೋ ಶಿವಬಲ್ಲ ॥ | ಬಲ್ಲಾತ ಬಲ್ಲ ಸರ್ವಜ್ಞ. |

ಈ ರೀತಿ ಮೇಲೆ ತಿಳಿಸಿದಂತೆ ಸು. ೯ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಹಲವಾರು ಕವಿಗಳು ತಮ್ಮತಮ್ಮ ಕೃತಿಗಳಲ್ಲಿ, ಶಾಸನಗಳಲ್ಲಿ ವೈವಿಧ್ಯಕ್ಕಾಗಿಯೋ ಛಂದೋಜ್ಞಾನದ ಪ್ರದರ್ಶನಕ್ಕಾಗಿಯೋ ತ್ರಿಪದಿಯನ್ನು ಬಳಸಿದ್ದಾರೆಯೇ ಹೊರತು ಅದನ್ನೇ ಮುಖ್ಯ ಛಂದಸ್ಸನ್ನಾಗಿ ಸ್ವೀಕರಸಿ ಕಾವ್ಯರಚನೆ ಮಾಡಿದ್ದಿಲ್ಲ. ಸುಮಾರು ೧೬ನೆಯ ಶತಮಾನದಲ್ಲಿದ್ದ ಸರ್ವಜ್ಞನವರೆಗೆ ಅನೇಕ ಕವಿಗಳು ಈ ತ್ರಿಪದಿಯನ್ನು ಬಳಸಿರುವುದನ್ನು ಕನ್ನಡ ಸಾಹಿತ್ಯದಲ್ಲಿ ಕಾಣುತ್ತಾ ಬಂದಿದ್ದೇವೆ.

## ೭.೨.೩. ಸರ್ವಜ್ಞನಲ್ಲಿ ತ್ರಿಪದಿ:

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ತ್ರಿಪದಿ'ಗೆ ವಿಶಿಷ್ಟ ಸ್ಥಾನಮಾನಗಳನ್ನು ತಂದುಕೊಟ್ಟ ಕೀರ್ತಿ ಸರ್ವಜ್ಞನಿಗೆ ಸಲ್ಲುತ್ತದೆ. ಅವನ ವಚನಗಳು ವ್ಯವಸ್ಥಿತವಾದ, ಸುಸಂಬಧವಾದ ರಚನೆಗಳು. ಮಾತ್ರಾ ತ್ರಿಪದಿ ಛಂದಸ್ಸಿಗೆ ಕರಾರುವಕ್ಕಾಗಿ ಅಳವಡುವಂತಹವು. ಇವು ಪದ್ಯಗಂಧಿಯಾಗಿ 'ಅಂದು' ಕೊಳ್ಳುವುದಕ್ಕೂ, ರಾಗವಾಗಿ 'ಹಾಡಿ' ಕೊಳ್ಳುವುದಕ್ಕೂ ಮಣಿಯುವಂಥವು. ಉದಾಹರಣೆಗೆ;

ಆಡದೇ ಮಾಡುವವನು ರೂಢಿಯೊಳಗುತ್ತಮನು
ಆಡಿಮಾಡುವವನು ಮಧ್ಯಮನು- ಅಧಮ ತಾ
ನಾಡಿಯೂ ಮಾಡ ಸರ್ವಜ್ಞ.

ಇಲ್ಲಿ ಬಳಸಿರುವ 'ಮಾಡು' ಶಬ್ದಕ್ಕೆ ನಡೆ, ಕೃತಿ, ಸಾಧನೆ ಎಂಬ ಉತ್ತಮಾರ್ಥಗಳನ್ನು ಅನ್ವಯಿಸಿದ್ದಾನೆ. ಈ ಜಾನಪದದ ತ್ರಿಪದಿ ತನ್ನದೇ ಆದ ಲಯ, ಗತ್ತು,ಗಮ್ಮತ್ತುಗಳ ತವನಿಧಿಯಾಗಿದೆ. ವಾಮನ ಗಾತ್ರದ ಇದರ ತ್ರಿವಿಕ್ರಮಗುಣವನ್ನರಿತೇ ತ್ರಿಪದಿ ಪ್ರಪಂಚದ ಚಕ್ರವರ್ತಿ ಸರ್ವಜ್ಞ ಕವಿ ತನ್ನ ಲೋಕೋತ್ತರ ಅಭಿವ್ಯಕ್ತಿಗೆ ಜನಮನ ಸೂರೆಗೊಂಬ ಈ ವೃತ್ತವನ್ನು ಆಯ್ದುಕೊಂಡವನು (ಜನಪದ ಮುಕ್ತಕಗಳು, ಪು.೪).

ಸರ್ವಜ್ಞನು ತ್ರಿಪದಿಗಳಲ್ಲಿ ಮಾಡಿದ 'ಭಾಷಿಕ ಕ್ರಾಂತಿ'ಯಲ್ಲಿ ದೇಶೀ ನುಡಿಯ ಸೊಬಗು, ಭಾಷಾ ಸಂಪತ್ತನ್ನು ಕಂಡುಕೊಂಡದ್ದು ಜಾನಪದರಂತೆ ಆ ಮೂಲಕವಾಗಿ ಮಾಡಿದ 'ಸಾಹಿತ್ಯ ಕ್ರಾಂತಿ'ಯಲ್ಲಿ ನಿರೂಪಿತವಾದ ಸಾಹಿತ್ಯ ಸೌಂದರ್ಯ, ಉಪಮೆಗಳು, ಪಡೆನುಡಿಗಳೂ, ನಾಣ್ನುಡಿಗಳು, ಉತ್ಪ್ರೇಕ್ಷೆಗಳು, ಶ್ಲೇಷ ಗಳು, ರೂಪಕ-ಕೌಶಲ್ಯಗಳು ಮುಂತಾದ ಜನಪದೀಯ ಸಾಹಿತ್ಯಿಕ ಅಂಶಗಳು ತನ್ನಿಂದ ತಾನೇ ಈತನ ವಚನಗಳಲ್ಲಿ ತುಂಬಿಕೊಂಡಿವೆ.

ಸರ್ವಜ್ಞನು ತಾನಿದ್ದ ಪರಿಸರದಲ್ಲಿ ನೇರವಾಗಿ ಕಂಡ, ಅನುಭವಿಸಿದ ಸತ್ಯವನ್ನು ಸಾಮಾಜಿಕರಿಗೆ ಮನದಟ್ಟಾಗುವಂತೆ ಉಸುರಿಸಿದ್ದಾನೆ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು.೪೨೬). ಸರ್ವಜ್ಞನ ಶೈಲಿಯನ್ನು ಚರ್ಚಿಸುವಾಗ ಅವನು ಬಳಸಿದ ಛಂದಸ್ಸನ್ನೂ ಗಮನಿಸುವುದು ಅವಶ್ಯಕ. ಮಹಾಕಾವ್ಯಗಳ ಓಘವೇ ಬೇರೆ, ಲಲಿತ ಕಾವ್ಯಗಳ ಸೊಬಗೇ ಬೇರೆ, ಭಾವಗೀತೆಗಳ ವಿಲಾಸವೇ ಬೇರೆ, ನೀತಿ ಸೂತ್ರಗಳಾದ ಸರ್ವಜ್ಞನ ವಚನಗಳ ಛಂದವೇ ಬೇರೆ. ಒಂದೊಂದು ಭಾವಕ್ಕೆ ಒಂದೊಂದು ಛಂದಸ್ಸು ಉಚಿತವಾಗುತ್ತದೆ.

ಅತೀ ಹೆಚ್ಚು ತ್ರಿಪದಿಗಳನ್ನು ಬಳಸಿದ ಕೀರ್ತಿ ಸರ್ವಜ್ಞನಿಗೆ ಸಲ್ಲುತ್ತದೆ. ಈ ತ್ರಿಪದಿ ದೇಶೀ ಛಂದಸ್ಸಿನ ತಾಯಿ ಬೇರು. ಕನ್ನಡ ಋಕ್ಸಂಹಿತೆಯ ಗಾಯತ್ರಿ. ಈ ಹಳೆಯ ಛಂದೋಮಟ್ಟದ ಬಟ್ಟೆಯಲ್ಲಿ 'ನುಡಿಗಲಿತ', ಸರ್ವಜ್ಞ 'ತ್ರಿಪದಿಯ ತ್ರಿವಿಕ್ರಮ'ನಾದ. ಹಿರಿದರ್ಥವನ್ನು ಕಿರಿದರಲ್ಲಿ ಹೇಳುವ ಅವನ 'ಸಂಕ್ಷೇಪ ಸ್ವಾರಸ್ಯ'ದ ಸೂತ್ರಾತ್ಮಕ ಶೈಲಿ ಹಳೆಯದೇ ಆದರೂ ನಿತ್ಯ ನೂತನವಾದುದು(ಸರ್ವಜ್ಞ ಮೂರ್ತಿಯ ವಚನಗಳು, ಪು.೨೪). ಈ ತ್ರಿಪದಿಗಳ ನುಡಿ ಕಿವಿಗೆ ಇಂಪು, ನುಡಿಯೊಳಗಿನ ಅರ್ಥ ಬಾಳಿಗೆ ಸೊಂಪು.

ಕಪಟ ಯೋಗಿಗಳ ಬೀದಿಗೆಳೆದ, ತ್ಯಾಗಿಗಳನ್ನು ಲೋಕಾಭಿರಾಮವಾಗಿ ಹೊಗಳಿದ ಸರ್ವಜ್ಞನ ವಚನ ಹೀಗಿದೆ;

ಕಚ್ಚೆ ಕೈಬಾಯಿಗಳು ಇಚ್ಛೆಯಲಿ ಇದ್ದಿಹರೆ
ಅಚ್ಚುತನಪ್ಪ ಅಜನಪ್ಪ - ಲೋಕದಲಿ
ನಿಶ್ಚಿಂತನಪ್ಪ ಸರ್ವಜ್ಞ.

ಇಂದ್ರನಾನೆಯನೇರಿ ಒಂದನೂ ಕೊಡಲರಿಯ
ಚಂದ್ರಶೇಖರನು ಮುದಿಯೆತ್ತನೇರಿ ಬೇ
ಕೆಂದುದನು ಕೊಡುವ ಸರ್ವಜ್ಞ.

ಇಲ್ಲಿನ ಮಾತುಗಳೆಲ್ಲಾ ಸರಳ, ಅರ್ಥ ಅಪಾರ, ಮೂರ್ತಿ ಕಿರಿದು-ಕೀರ್ತಿ ಹಿರಿದಾಗಿದೆ (ತ್ರಿಪದಿಯ ಚತುರ್ಮುಖಿ,ಪು.೩೬). ಹೀಗೆ ಸರ್ವಜ್ಞನ ತ್ರಿಪದಿಗಳು ಬಿಲ್ಲಿಗೆ ಹೂಡಿದ ಬಾಣ ಚೂಪಾಗಿದ್ದಂತೆ ಅದರ ಗುರಿ ನಿಶ್ಚಲ ಹಾಗೂ ಪರಿಣಾಮ ಹೆಚ್ಚು. ನೀತಿಯ ಮಾತು, ಕಟುಮಾತು, ಬಿಚ್ಚುಮಾತು, ಆಕರ್ಷಣಾ ಮಾತು ಇವು ಸರ್ವಜ್ಞನಲ್ಲಿ ಅತ್ಯಂತ ಸಹಜವಾಗಿ ಮೂಡಿಬಂದಿವೆ. ಕೇವಲ ಮೂರೇ ಮೂರು ಸಾಲಿನಲ್ಲಿ ಮುತ್ತಿನಂತಹ ಮಾತುಗಳನ್ನು ಹೇಳಿ, ಇಡೀ ಮೂರು ಲೋಕಗಳನ್ನು ತಿದ್ದಿತೀಡಿದ ಮುಕ್ಕಣ್ಣ ಈ ಸರ್ವಜ್ಞ. ತನ್ನ ತ್ರಿಪದಿ ಛಂದಸ್ಸಿನಲ್ಲಿ ಬಿಟ್ಟು ಬಿಡದೇ ಪ್ರಾಸವನ್ನು 'ಪ್ರಾಸವಿಲ್ಲದ ಹಾಡು ತಾಸು ಹಾಡಿದರೇನು?' ಎಂಬಂತೆ ತುಂಬಾ ಸುಂದರವಾಗಿ ನೆನಪಿಟ್ಟುಕೊಳ್ಳುವಂತೆ ತಿಳಿಸಿದ್ದಾನೆ.

ಸರ್ವಜ್ಞನೇನು ಇತರ ಪಂಡಿತರನ್ನು ಮೆಚ್ಚಿಸುವುದಕ್ಕೆ ಪಾಂಡಿತ್ಯದ ಮಹಾಕಾವ್ಯಗಳನ್ನು ಬರೆದವನಲ್ಲ. ನಿಂತಲ್ಲಿ, ಕುಳಿತಲ್ಲಿ, ಅನುಭವ ಪಡೆದಲ್ಲಿ, ಹೊಸ ಮತ್ತು ಹಳೆಯ ವಿಷಯ ವಸ್ತುಗಳು ದರ್ಶನವಾದಲ್ಲಿ ತಕ್ಷಣ ತ್ರಿಪದಿಯಲ್ಲಿ ಪ್ರತಿಕ್ರಿಯಿಸಿದ್ದಾನೆ. ಆ ಪ್ರತಿಕ್ರಿಯೆಯು ಖಂಡನೆಯಾಗಿರಬಹುದು ಅಥವಾ ರಸಿಕತೆಯಿಂದಿರಬಹುದೇ ವಿನಃ ಎಂದಿಗೂ ಸುಳ್ಳಾಗಿರಲಿಕ್ಕೆ ಸಾಧ್ಯವೇ ಇಲ್ಲ.

ತನ್ನ ಕಾವ್ಯಕ್ಕೆ ಜನಪದರಿಗೆ ಅರ್ಥವಾಗುವ ರೀತಿಯಲ್ಲಿ ಹಾಗೂ ನೆನಪಿಟ್ಟುಕೊಳ್ಳುವ ನೆಪದಲ್ಲಿ ಅನುಕೂಲವಾದ ತ್ರಿಪದಿ ಛಂದಸ್ಸನ್ನೇ ಬಳಸಿದ್ದಾನೆ. ಈತನ ವಚನಗಳಲ್ಲಿ ಪರಿಪೂರ್ಣತೆ, ಪರಿಪಕ್ವತೆ, ಸುಸಂಬದ್ಧತೆ ಕಂಡುಬರುತ್ತದೆ. ಮೊದಲನೆಯ ಸಾಲಿನಲ್ಲಿ ಜನರನ್ನಾಕರ್ಷಿಸಿ, ಎರಡನೆಯ ಸಾಲಿನಲ್ಲಿ ಭಾವ ಗಾಂಭೀರ್ಯ ಪ್ರದರ್ಶಿಸಿ, ನಂತರ ಪುನರುಚ್ಚಾರತೆಯೊಂದಿಗೆ ಮೂರನೆಯ ಸಾಲಿನ ಸಮಾರೋಪದಲ್ಲಿ ಚಾಟಿಯ ಏಟಿನಂತಿರುವ ಶಬ್ದಗಳನ್ನು ಮೂಡಿಸಿದ್ದಾನೆ. ಇಂತಹ ಮೂರು ಸಾಲುಗಳುಳ್ಳ ತ್ರಿಪದಿಗಳೇ ಆತನ ವಚನಗಳು. ಅವು ಕಾವ್ಯರತ್ನಗಳಾಗಿ ಆಪ್ಯಾಯಮಾನವಾಗಿ ಬೆಳಗಿವೆ.

## ೭.೩. ಜಾನಪದ ಭಾಷೆ:

ಭಾಷೆಯೆಂಬುದು ಸಂಸ್ಕೃತದ 'ಭಾಷ್' ಎಂಬ ಶಬ್ದದಿಂದ ಬಂದಿದೆ. ಭಾಷೆ ಮಾತನಾಡುವ ಕ್ರಿಯೆಯನ್ನು ಹೊಂದಿದೆ. ಮಾನವನಿಗೆ ಇರುವ ವಿಶಿಷ್ಟವಾಗಿರುವ ಶಕ್ತಿ ಆಲೋಚನೆಗಳ ಮೂರ್ತ ರೂಪವೇ ಭಾಷೆ. ಸಮೂಹ ಸಂವಹನದ ಮಾಧ್ಯಮವಾದ ಈ ಭಾಷೆಯು ಮಾನವನ ಜೀವನವು ಎಲ್ಲಿಲ್ಲಿದೆಯೋ ಅಲ್ಲೆಲ್ಲಾ ಇದೆ. ಭಾಷೆ ನಿತ್ಯ ಪರಿವರ್ತನಶೀಲವಾದುದು. ಕಾಲದಿಂದ ಕಾಲಕ್ಕೆ ಭಾಷಾ ಪರಿವರ್ತನೆಯನ್ನು ಅದರ ಬೆಳವಣಿಗೆಯ, ಜೀವಂತಿಕೆಯ ಲಕ್ಷಣವೆನ್ನುತ್ತಾರೆ (ವಚನಗಳಲ್ಲಿ ಜಾನಪದ ಅಂಶಗಳು, ಪು.೩೪೭). ಸರ್ವಜ್ಞನ ಭಾಷೆಯು ಸತ್ವಯುತವಾಗಿದ್ದರೆ ಮತ್ತು ಸಮರ್ಥವಾಗಿದ್ದರೆ ಅದಕ್ಕೆ ಕಾರಣ, ಜನಪದ ಭಾಷೆಯ ಅಂಶಗಳಾದ ದೇಸಿ ನುಡಿಗಳು, ಬಳಕೆಯ ಪಡೆನುಡಿಗಳು, ಗಾದೆ, ಒಗಟು ಮುಂತಾದವುಗಳನ್ನು ಒಳಗೊಂಡಿರುವುದರಿಂದ ಎನ್ನಬಹುದು.

ಪ್ರಾಚೀನ ಕನ್ನಡ ಕಾವ್ಯ ಶೈಲಿಯು ಸಂಸ್ಕೃತ ಪದ ಭೂಯಿಷ್ಟವಾಗಿತ್ತು. ೧೨ನೆಯ ಶತಮಾನದ ಆರಂಭದಿಂದ ಶುದ್ಧಗನ್ನಡದ ಹೊಸ ಹಾದಿಯನ್ನು ರೂಢಿಸುವ ಪ್ರಯತ್ನಗಳು ನಡೆದವು. ನಯಸೇನ ನಂತಹ ಕವಿಗಳಲ್ಲಿ ಈ ಹೊಸ ಹಾದಿಯ ಸೂಚನೆ ಇದೆ. ವಚನಕಾರರಿಂದ, ಕ್ರಾಂತಿಕಾರಿ ಕವಿಗಳಾದ ಹರಿಹರ, ರಾಘವಾಂಕರ ದಿಟ್ಟವಾದ ಹೆಜ್ಜೆಗಳಿಂದ ನಂತರದ ಹರಿದಾಸರ ಹಾಡುಗಳಿಂದ, ಚಾಮರಸ, ಕುಮಾರವ್ಯಾಸನಂತಹ ಕವಿಗಳ ಆಡುನುಡಿಯ ಸಹಜ ಪ್ರಯೋಗದಿಂದ ತತ್ವಪದಕಾರರಿಂದ ಕನ್ನಡದ ದೇಸಿಯ ಶೈಲಿಯು ಬೆಳೆಯುತ್ತಾ ಬಂದಿದೆ.

ಸರ್ವಜ್ಞನ ವಚನದಲ್ಲಿ ಜಾನಪದೀಯ ಲಯ, ಆಶಯಗಳನ್ನು ಭಾಷೆಯ ಹಿನ್ನಲೆಯಲ್ಲಿ ಒಟ್ಟಾರೆ ಯಾಗಿ ನೋಡಿದಾಗ ಒಂದು ಅಂಶ ಪ್ರಮುಖವಾಗಿ ಮನದಟ್ಟಾಗುತ್ತದೆ. ಸರ್ವಜ್ಞನನಿಗಿಂತ ಹಿಂದಿನ ಸಾಹಿತ್ಯದ ಭಾಷೆ ಜನಪರ ಭಾಷೆಯಲ್ಲಿ ಹೊರಹೊಮ್ಮಿರುವುದೂ ಶರಣರು ಹಾಗೂ ದಾಸರಲ್ಲಿ ಗುರುತಿಸಬಹುದು. ''ಇದಕ್ಕೆ ಕಾರಣವೇನೆಂದರೆ , ಸಾಹಿತ್ಯ ರಾಜಾಶ್ರಯ ಬಿಟ್ಟು ಜನಸಾಮಾನ್ಯರ ಬಳಿಗೆ ಬಂದುದು ಒಂದಾದರೆ ರಾಜಕೀಯ ಹಾಗೂ ಧಾರ್ಮಿಕ ಬದಲಾವಣೆಗಳು ಮುಖ್ಯವಾಗಿವೆ, (ಕನ್ನಡ ಶಿಷ್ಟ ಸಾಹಿತ್ಯ ದಲ್ಲಿ ಜಾನಪದ, ಪು. ೭೪) .

ಅಲ್ಲದೆ ಸರ್ವಜ್ಞನ ಕಾಲದಲ್ಲಿ ಅನೇಕ ರಾಜಮನೆತನಗಳ ಮಧ್ಯ ಸದಾಕಾಲ ಯುದ್ಧ, ಅನಂತರ ಹೊರಗಿನಿಂದ ಸಾಮ್ರಾಜ್ಯ ಶಾಹಿಗಳ ದಾಳಿಗಳಿಂದ ಜನರು ಬೇಸತ್ತು ತಮ್ಮ ಜೀವನದ ಗತಿಯನ್ನು ಹುಡುಕುವ ಪ್ರಯತ್ನದಲ್ಲಿದ್ದಂತಹ ಕಾಲ.

ಜನಸಾಮಾನ್ಯರಿಗೆ ಬೇಕಾಗಿದ್ದುದೂ ಮುಖ್ಯವಾಗಿ ನೈತಿಕತೆ ಬೇಕಾಗಿತ್ತು . ಅದು ತಮ್ಮ ಭಾಷೆಯಲ್ಲಿ ಅರಿತುಕೊಳ್ಳಬೇಕಾಗಿತ್ತು. ಈ ಸಂದರ್ಭದಲ್ಲಿ ಸರ್ವಜ್ಞ ಉದಯಿಸಿಬಂದಿದ್ದು ಯೋಗಾಯೋಗವೆನ್ನಬಹುದು. ಈತ ತನ್ನ ಭಾಷೆಯನ್ನು ಜನಪರರಿಗೆ ಅರ್ಥವಾಗುವಂತೆ ಪ್ರಯೋಗಿಸಿದ್ದು. ಅವರಲ್ಲಿಯ ನಂಬಿಕೆ , ಆಶಯ, ಮೂಡಿಸಿದ್ದ ಸಾಹಿತ್ಯದ ಭಾಷೆ ಪಂಡಿತವರ್ಗಕ್ಕೆ ಮೀಸಲುವೆಂಬುದನ್ನು ಸರ್ವಜ್ಞ ತಿರಸ್ಕರಿಸಿ, ಅದನ್ನು ಜನ ಭಾಷೆಯೊಂದಿಗೆ ಪ್ರಯೋಗಿಸಿದ್ದೂ ಸಹ ಮುಖ್ಯವಾದ ಅಂಶ.

ಸರ್ವಜ್ಞನ ತ್ರಿಪದಿಗಳಲ್ಲಿ ಅಚ್ಚಗನ್ನಡ ದೇಸಿಯ ಶೈಲಿಯ ಪರಕಾಷ್ಠತೆಯನ್ನು ನಾವು ಕಾಣ ಬಹುದಾಗಿದೆ. ಜನಸಾಮಾನ್ಯರಿಗಾಗಿ ರಚಿಸಲಾದ ಅವುಗಳಲ್ಲಿ ಆಡು ಭಾಷೆಯ ಸ್ವಾರಸ್ಯ ಪರಿಣಾಮಕಾರಿ ಯಾಗಿ ಮೂಡಿಬಂದಿದೆ. ಜನಸಮ್ಮುಖವಾಗಿ ಹೊರಟ ಕನ್ನಡ ಸಾಹಿತ್ಯ ವಾಹಿನಿಯು ಸರ್ವಜ್ಞನಲ್ಲಿ ತುಟ್ಟ ತುದಿಯನ್ನು ತಲುಪಿದಂತಾಗಿದೆ. ವಿಜಯನಗರ ಸಾಮ್ರಾಜ್ಯ ಪತನದ ನಂತರ ರಾಜಕೀಯ, ಧಾರ್ಮಿಕ, ಸಾಮಾಜಿಕ, ನೈತಿಕ ರಂಗಗಳಲ್ಲಿ ಅಧಃ ಪತನ ತಲೆದೋರಿತ್ತು. ಅಂತಹ ಕಾಲದಲ್ಲಿ ಸರ್ವಜ್ಞನು ತನ್ನ ಸಿಡಿಲಿನಂತಹ ಭಾಷೆಯಿಂದ ಜನಮನವನ್ನು ಸಂಸ್ಕರಿಸಿದ. ತನ್ನ ಸುತ್ತಲಿನ ಜನಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸಿ, ಅವರ ಜೀವನ ಮಟ್ಟವನ್ನು ತಿದ್ದುವುದಕ್ಕಾಗಿ ಆಡು ನುಡಿ ಯನ್ನು ಬಳಸಿಕೊಂಡ. ಅಂದಿನ ವಾಸ್ತವ ಜೀವನದ ವಿಷಯಗಳನ್ನು ಅರಿತು ಅಭಿವ್ಯಕ್ತಿಗಾಗಿ ತ್ರಿಪದಿಯನ್ನೇ ಬಳಸಿಕೊಂಡ.

ತಮಿಳಿನ 'ತಿರುವಳ್ಳುವರ್', ತೆಲುಗಿನ 'ವೇಮನ', ಹಿಂದಿಯ 'ಕಬೀರ' ಈ ಮೂವರು ಕವಿಗಳಿಗೆ ಸರಿಸಮಾನವಾಗಿ ಕನ್ನಡ ಭಾಷೆಯಲ್ಲಿ ಸರ್ವಜ್ಞನನ್ನೂ ಸಹ 'ಜಾನಪದ ಕವಿ ಚಕ್ರವರ್ತಿ' ಎಂದು ಕರೆಯಲಾಗಿದೆ. ಸಾಹಿತ್ಯ ಎಲ್ಲರಿಗೆ ಇಲ್ಲವಾಗಿರುವುದನ್ನು ಕಂಡು, ಅದನ್ನು ಜನಪದರಿಗೆ ಒದಗಿಸಲೆಂದೇ ಅವರ ಭಾಷೆಯಲ್ಲಿಯೇ ತಿಳಿಸಬೇಕೆಂದು ಮುಂದೆ ಬಂದವನು ಸರ್ವಜ್ಞ.

'ಸರ್ವರೊಳಗೊಂದೊಂದು ನುಡಿ (ಭಾಷೆ)ಗಲಿತು, ತಾನು ವಿದ್ಯೆಯ ಪರ್ವತವೇ ಆದ'ವನೀತ. ಜನರ ಭಾಷೆ ಯನ್ನರಿಯಲು 'ಹಿಂಡನಗಲಿದ ಗಜದಂತೆ' ಹಿರಿದಾದ ನಾಡಿನಲ್ಲಿ ಸುತ್ತಿದಾತ (ಸರ್ವಜ್ಞ ಕವಿ ಜೀವನ ಹಾಗೂ ಸಾಹಿತ್ಯ, ಪು. ೭೦-೭೧).

ವಚನಕಾರರಂತೆ ದೇಸೀಯತೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ, ದೇಸೀ ಭಾಷೆಯ ಎಲ್ಲಾ ಸಾಧ್ಯತೆಗಳನ್ನು ಭಾಷಾ ದೃಷ್ಟಿಯಿಂದ ಬಳಸಿಕೊಂಡು, ಅದ್ಭುತ ಕ್ರಾಂತಿಯನ್ನೇ ಮಾಡಿದವನು. ಕಾವ್ಯ, ಭಾಷೆಯಲ್ಲಿಯೇ ಅಭಿವ್ಯಕ್ತವಾಗುವ ಪ್ರಕಾರ. ನಡುಗನ್ನಡದ ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡು ವಚನಗಳನ್ನು ರಚಿಸಿ, ಅವುಗಳನ್ನು ಸಾಮಾನ್ಯ ಜನರ ನಾಲಿಗೆಯ ಮೇಲೆ ಸದಾ ನಲಿಯುವಂತೆ ಮಾಡಿದ ಯಶಸ್ಸು ಮೊದಲು ಸರ್ವಜ್ಞನಿಗೆ ಸಲ್ಲಬೇಕು.

ಶ್ರೀಸಾಮಾನ್ಯರ ನಡುವೆ ಸಂಚರಿಸುತ್ತಿದ್ದ ಸರ್ವಜ್ಞನಿಗೆ ಮುಖ್ಯವಾಗಿ ಭಾಷಾ ಬೇಸಾಯದ ಪ್ರಕ್ರಿಯೆ ಬಹುದೊಡ್ಡದಾಗಿ ಪರಿಣಾಮ ಬೀರಿರಬೇಕು. ಭಾಷಾ ದೃಷ್ಟಿಯಿಂದ ಮಡಿ-ಮೈಲಿಗೆಗಳನ್ನು ಧಿಕ್ಕರಿಸಿದವನು. ಸರ್ವಜ್ಞನ ಕನ್ನಡ ಭಾಷಾ ಪ್ರೇಮ ಎಷ್ಟೊಂದು ಅಗಾಧವೆಂದರೆ; ಈ ಭಾಷೆ ಆತನ ಮನೋನಾಳದಲ್ಲಿ ಅಚ್ಚ ಹಸಿರಾಗಿ ಹರಿದು, ಕಂಠನಾಳದಲ್ಲಿ ನಿಚ್ಚ ಹೊಸದಾಗಿ ಹೊಮ್ಮಿ ಬಂದಿದೆ. ''ಮಾತೃಭಾಷಾ ಮಾಧ್ಯಮ ಸೂತ್ರದಲ್ಲೇನದರೂ ಗುಣಾಂಶವಿದ್ದರೆ ಕನ್ನಡ ನಾಡಿನಲ್ಲಿ ಅದನ್ನು ಕಂಡುಕೊಂಡವರಲ್ಲ. ಬಸವಾದಿ ಪ್ರಮಥರು ಮೊದಲಿಗರಲ್ಲದಿದ್ದರೂ, ಆ ಸೂತ್ರವನ್ನು ಹೃದಯಪೂರ್ವಕವಾಗಿ ಸಮನ್ವಯಿಸಿಕೊಂಡವರಲ್ಲಿ ಅವರೇ ಪ್ರಥಮರು''(ವಚನಗಳಲ್ಲಿ ಜಾನಪದ ಅಂಶಗಳು, ಪು. ೩೪೮). ಈ ಮಾತೃಭಾಷಾ ಮಾಧ್ಯಮದ ಸೂತ್ರವನ್ನು ವಚನಕಾರರಂತೆ ತನ್ನ ವಚನಗಳಲ್ಲಿ ಸರ್ವಜ್ಞ ಅಳವಡಿಸಿಕೊಂಡಿದ್ದಾನೆ. ಈತನಿಗರಿವಿಲ್ಲದೆ; ಜನಪದ ಭಾಷೆಯು ವಚನಗಳ ರಚನೆಯ ಓಟದಲ್ಲಿ ಪ್ರವೇಶ ಮಾಡಿರುವುದು ಇಲ್ಲಿ ಗುರುತಿಸಬಹುದಾಗಿದೆ.

ಸರ್ವಜ್ಞ ವರಕವಿ. ಅವನ ಮಾತಿನ ಮೋಡಿ ಎಲ್ಲರನ್ನೂ ಮರುಳುಗೊಳಿಸಬಲ್ಲದು. ಆತನ ಭಾಷಾ ವೈಖರಿಗೆ ಅವನು ಬೆಳೆದು ಬಂದ ಆವರಣ ಹಾಗೂ ತನ್ನ ಹಿಂದಿನ ವಚನಕಾರರ ಪ್ರಭಾವ, ಅಪಾರವಾದ ಅನುಭವವೂ ಕಾರಣವಾಗಿದೆ. ತಾನೇ ಎಲ್ಲವನ್ನು ಬಲ್ಲವನೆಂಬ ಅಹಂಕಾರವಿಲ್ಲ; ಎಲ್ಲರಿಂದಲೂ ಕಲಿಯಲು ಸಿದ್ಧನಾತ (ಸರ್ವಜ್ಞ ಕವಿ; ಜೀವನ ಹಾಗೂ ಕಾವ್ಯ, ಪು.೧೦೦) ಅಂತೆಯೇ ಆತನು ಹೇಳಿದ;

ಸರ್ವಜ್ಞನೆಂಬುವನು ಗರ್ವದಿಂದಾದವನೇ?
ಸರ್ವರೊಳೊಂದೊಂದು ನುಡಿಗಲಿತು ವಿದ್ಯೆಯ
ಪರ್ವತವೇ ಆದ ಸರ್ವಜ್ಞ.

ನಾಡಿನ ಉದ್ದಗಲಕ್ಕೂ ತಿರುಗಿದ ಸರ್ವಜ್ಞ ಕಂಡುದುದನ್ನು ಕಂಡಂತೆ ಹೇಳುವ ಮನೋವೃತ್ತಿಯ ಜೊತೆಗೆ ಹೃದಯಕ್ಕೆ ಮುಟ್ಟುವ ಭಾಷೆಯಲ್ಲಿ ಹೇಳುವ ರಸಿಕನೀತ. ತಾನು ನೋಡಿದ ಜನರ ಸ್ವಭಾವ, ಅಪ್ರಿಯವಾಗಿದ್ದಾಗ ಕಂಡದ್ದನ್ನಾಡುವ ಧೀರ;

ನರಿ ನಾಯಿ ಹಲ್ಲುನಂಜು ಉರಗನ ಶಿರನಂಜು
ಬೆರಸಿ ತಪ್ಪುವನ ನುಡಿ ನಂಜು । ದುರುಳರ
ಸರಸವೇ ನಂಜು ಸರ್ವಜ್ಞ.

ಉರಗನಾ ಹಲ್ಲು ನಂಜು ಸುರಿಗೆಯಾ ಮೊನೆ ನಂಜು
ಕರುಣವಿಲ್ಲದವನ ನುಡಿ ನಂಜು ದುರ್ಜನರ
ಇರವೆಲ್ಲ ನಂಜು ಸರ್ವಜ್ಞ.

ಹೀಗೆ ನರಿ, ನಾಯಿ, ಉರಗ ಈ ಪ್ರಾಣಿಗಳಲ್ಲಿ ಹಲ್ಲಿನೊಳಗೆ ನಂಜಿರುತ್ತದೆ. ಆದರೆ ದುರ್ಜನರಲ್ಲಿ ಮೈಯೆಲ್ಲಾ ನಂಜನ್ನೊಳಗೊಂಡಿರುತ್ತದೆಂದು, ಅವರ ಸಹವಾಸವೇ ಸರಿಯಲ್ಲ, ಅಂಥವರಿಂದ ದೂರವಿರುವುದೇ ಉತ್ತಮ ಎಂಬಂತಹ ಮಾತುಗಳನ್ನು ನಿರ್ಭಿತಿ, ನಿಷ್ಠೂರತೆಗಳಿಂದ ಹೇಳಿದ್ದಾನೆ.

ದೇವರ ಸ್ವರೂಪವನ್ನು ವಿವರಿಸುವ ಆತನ ಪರಿಯನ್ನು ನೋಡಿದಾಗ, ಆಗಿಲ್ಲ, ಹೋಗಿಲ್ಲ, ಮೇಗಿಲ್ಲ, ಕೆಳಗಿಲ್ಲ, ತಾಗಿಲ್ಲ, ತಪ್ಪು ತಡೆಯಿಲ್ಲ ದೇವರು ಹೀಗಿದ್ದಾನಂತೆ. ಅತ್ಯಂತ ಗಂಭೀರವಾದ, ಅಮೂರ್ತವಾದ ಪರಮ ಸತ್ಯವನ್ನು ಕಠಿಣ ಭಾಷೆಯ ಶಬ್ದವನ್ನು ಬಳಸದೇ, ಸಂಸ್ಕೃತವನ್ನೂ ಎಳೆದು ತಾರದೇ, ಅತ್ಯಂತ ಸರಳವಾಗಿ ಅಭಿವ್ಯಕ್ತಿಸಿದ್ದಾನೆ. ನೇರ, ಸರಳ, ಸ್ಪಷ್ಟ ಹಾಗೂ ಅಷ್ಟೇ ನಿಷ್ಪೃಷ್ಟ, ಚಿತ್ರಯುಕ್ತ ಹಾಗೂ ಸಶಕ್ತ ಭಾಷೆಯ ಬಳಕೆಯಲ್ಲಿ ಸರ್ವಜ್ಞನನ್ನು ಮೀರಿಸುವ ಇನ್ನೊಬ್ಬ ಕವಿ ಇಲ್ಲವೆಂದು ಹೇಳಬಹುದು. ಚುಟುಕು ಸಾಹಿತ್ಯಕ್ಕೆ ಈತನ ಭಾಷೆಯ ಗುಣಗಳೇ ಜೀವಾಳ.

ಚಿತ್ರವನು ನವಿಲಿನೊಳು ವಿಚಿತ್ರವನು ಗಗನದೊಳು
ಪತ್ರ ಪುಷ್ಪಗಳ ವಿವಿಧ ವರ್ಣಗಳಿಂದ
ಚಿತ್ರಿಸಿದವರಾರು ? ಸರ್ವಜ್ಞ.

ಎಂದು ವಿಸ್ಮಯದಿಂದ ದೇವರನ್ನು ನೆನೆಯುವ ಸರ್ವಜ್ಞನ ರಚನೆಗಳಲ್ಲಿಯ ಕಲ್ಪನಾ ಸಾಮರ್ಥ್ಯ, ಅಜ್ಞೇಯವಾದದ್ದನ್ನು ಜ್ಞೇಯದ ಮೂಲಕ ಬೋಧಿಸುವ ಚಾತುರ್ಯ, ಧ್ವನಿಶಕ್ತಿ ಹಾಗೂ ಭಾಷೆ ಬಳಕೆಯ ವಿಧಾನ ಅಸಾಧಾರಣವಾದುದು. ಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ಮನದೆರೆದು ಮಾತನಾಡುವ, ಸರ್ವಜ್ಞನ ಪ್ರವೃತ್ತಿ ಒಂದು ರೀತಿಯಲ್ಲಿ ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ. ನಿತ್ಯ ಕಾಣುವ ಸತ್ಯವನ್ನು ಮುಚ್ಚುಮರೆಯಿಲ್ಲದೇ, ಪರೋಕ್ಷವಾಗಿ ಹೇಳದೇ, ಇದ್ದದ್ದು ಇದ್ದಂತೆಯೇ ನುಡಿದಿರುವನು;

ಕಲ್ಲುಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟಿಲ್ಲ
ದಿಲ್ಲ ಕಾಣಯ್ಯ ಸರ್ವಜ್ಞ.

ಒಣ ಭಕ್ತಿಯಿಂದೇನೂ ಪ್ರಯೋಜನವಿಲ್ಲವೆಂಬುದನ್ನು ಜನಬಳಕೆಯ ದೇಸೀ ಭಾಷೆಯಲ್ಲಿ ಅಭಿವ್ಯಕ್ತಿಸಿದ್ದಾನೆ. ಇಲ್ಲಿ ಬಳಸಿರುವ ಕಲ್ಲುಗುಂಡು, ಬುಗುಟು ಅಚ್ಚ ಜಾನಪದ ಭಾಷೆಯ ಬಳಕೆಯಲ್ಲಿವೆ. ಈ ರೀತಿ ಆಡಂಬರದ ಭಕ್ತಿಗಿಂತ ಅಂತರಂಗದ ಭಕ್ತಿಯೇ ಶ್ರೇಷ್ಠವೆಂಬುದನ್ನು ಇನ್ನೊಂದು ವಚನದಲ್ಲಿ;

ಮನದಲ್ಲಿ ನೆನೆವವಗೆ ಮನೆಯೇನು ಮಠವೇನು ?
ಮನದಲ್ಲಿ ನೆನೆಯದಿರುವವನ ದೇಗುಲದ
ಕೊನೆಯಲ್ಲಿದ್ದರೇನು ? ಸರ್ವಜ್ಞ.

''ಶಿಲೆಯ ಮೇಲಿಪ್ಪ ಸಂಸಾರಿಗಳುಂಟು, ಮೊಲೆಯ ಮೇಲಿಪ್ಪ ಸನ್ಯಾಸಿಗಳುಂಟು'' ಎಂಬ ಮಾತಿನಂತೆ ದೇವರ ಧ್ಯಾನ ಮಾಡುವವನಿಗೆ ಯಾವುದೇ ಪ್ರಶಾಂತ ಸ್ಥಳವಿದ್ದರಷ್ಟೇ ಸಾಲದು; ಮನಸ್ಸನ್ನು ನಿಯಂತ್ರಣದಲ್ಲಿಟ್ಟಿಕೊಳ್ಳುವ ಶಕ್ತಿ ಬೇಕೆಂಬುದರ ಬಗೆಗೆ ಆತನ ವಚನದ ಭಾಷೆ ಅಭಿವ್ಯಕ್ತಿಸುತ್ತದೆ. ಇಲ್ಲಿನ ಭಾಷೆಯಲ್ಲಿ ಹೊಡೆದೆಬ್ಬಿಸುವ ಬಲವಿದೆ. ಇಂತಹ ನೈಜತೆಯನ್ನು ಪ್ರತಿಬಿಂಬಿಸುವ ಭಾಷಾ ನಿಪುಣತೆ ಸರ್ವಜ್ಞನಲ್ಲಿ ಕರಗತವಾಗಿದೆ.

ಮೊದಲೇ ತಿಳಿಸಿದಂತೆ ಸರ್ವಜ್ಞನು ಖಂಡಿತವಾದಿ. ಅವನು ಸುಸಂಸ್ಕೃತರೆನ್ನುವವರು ಮೆಚ್ಚದ ಗ್ರಾಮ್ಯವನ್ನೂ ಬಳಸಿದ್ದಾನೆ. ಅವನಲ್ಲಿ ದೇಸೀಯ ಸೊಬಗಿನೊಡನೆ ಗ್ರಾಮ್ಯದ ಒರಟುತನವನ್ನೂ ಕಾಣುತ್ತೇವೆ. ಅಂತೆಯೇ ''ಅವನನ್ನು ಪ್ರಾಕೃತದ ಪ್ರಾಕೃತ ಕವಿ'' ಎಂದು ವಿದ್ವಾಂಸರು ಹೇಳಿದ್ದಾರೆ (ಸರ್ವಜ್ಞ ಕವಿ ಜೀವನ ಹಾಗೂ ಕಾವ್ಯ, ಪು. ೧೦೫).

ಆಲದ ಬಿಳಲಂತೆ ಜೋಲು ಜಡೆಗಳ ಬಿಟ್ಟು
ನಾಲಿಗೆ ಕೌಪ ಶುದ್ಧಿಲ್ಲ, ಮರಿ ನಾಯ
ಬಾಲದಂತಕ್ಕು ಸರ್ವಜ್ಞ.

ಮೇಲಿನ ವಚನದಲ್ಲಿ 'ನಾಲಿಗೆ ಕೌಪ ಶುದ್ಧಿಲ್ಲ' ಎಂದು ಹೇಳುವಾಗ ಒರಟುತನವಿದೆ. ಇದು ಕೆಲವರಿಗೆ ಅಶ್ಲೀಲವೆನ್ನಿಸಬಹುದು. ಆಲದ ಮರದ ಬೇರಿನಂತೆ ಗಡ್ಡವನ್ನು ಬಿಟ್ಟಾಕ್ಷಣ ಯೋಗಿ ಎಂದೆನಿಸಲಾರನು. ನಾಲಿಗೆಯೂ, ಕೌಪೀನವೂ ಶುದ್ಧವಿಲ್ಲದವನು ನಾಯಿಕುನ್ನಿಯ ಬಾಲದಂತೆ ಮತ್ತೆ ಪಾಪಕ್ಕೆ ಗುರಿಯಾಗುವನು (ನಾಲಿಗೆಯ ಶುದ್ಧಿ ಎಂದರೆ; ಅಸತ್ಯ, ಅವಾಚ್ಯ, ಅಪಶಬ್ದ, ಭಾಷಣ ಮಾಡದಿ

ರೋಣ. ಕೌಪೀನ ಶುದ್ಧಿ ಎಂದರೆ ಸ್ತ್ರೀಯರ ಸಹವಾಸದಿಂದ ರೇತಸ್ಖಲನ ಮಾಡದಿರೋಣ ಎಂದರ್ಥ). ಈ ಕಟು ಸತ್ಯವನ್ನು ಬಯಲಿಗೆಳೆದು 'ನಾಯಿ ಬಾಲ ಸದಾ ಡೊಂಕಾಗಿರುವಂತೆ' ಅಂಥವರ ಮನಸ್ಸು ನೀಚತನಕ್ಕೆಳಸಿರುತ್ತದೆ ಎಂಬುದನ್ನು ಸರ್ವಜ್ಞ ಮುಚ್ಚುಮರೆಯಿಲ್ಲದೇ ಹೇಳಿದ್ದಾನೆ. ಮುಂದಿನ ವಚನದಲ್ಲಿ ಇನ್ನೊಂದು ಹೆಜ್ಜೆ ಮುಂದೆ ಹೋಗಿ;

ಖಂಡಿಸದೆ ಕರಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕ್ಕೆಯ್ದಲ್ಕೆ ಅದನೇನು
ರಂಡೆಯಾಳುವಳೇ ? ಸರ್ವಜ್ಞ.

ದೇಹ ಮತ್ತು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲಾರದೆ, ಸ್ವರ್ಗ ಸುಖ ಬೇಕೆಂದರೆ; ಆ ಕೈಲಾಸವೆನ್ನುವುದು ರಂಡೆಯ ಹೊರಸೆ ? ''ಸ್ವರ್ಗವನ್ನು ಷಂಡನಾಳುವನೆ ?'' ಎಂಬಂತಹ ಬಿರುಸಿನ ಮಾತುಗಳಲ್ಲಿ ಗ್ರಾಮ್ಯ ಪರಿಸರದ ಜನಪದರ ಭಾಷೆಯನ್ನೇ ನೇರವಾಗಿ ಎತ್ತಿಕೊಂಡಿದ್ದಾನೆ. ಸುಸಂಸ್ಕೃತರು ಈ ಒರಟುತನದ ಭಾಷೆಯನ್ನು ಮೆಚ್ಚದಿರಬಹುದು. ಅಂದಾಕ್ಷಣ ಹೇಳುವ ಸತ್ಯದಲ್ಲಿ ಆತನಿಗೆ ಮುಚ್ಚುಮರೆಯಿಲ್ಲ. ಸರ್ವಜ್ಞನಿಗೆ ಭಾಷೆ ಮುಖ್ಯವಲ್ಲ; ಭಾವ ಮುಖ್ಯ.

ವಿವಿಧ ವೃತ್ತಿ ನಿರತರಾದವರು ಅವರಾಡುವ ಭಾಷೆಯನ್ನು ಆಯ್ದುಕೊಂಡು ಒಮ್ಮೊಮ್ಮೆ ಆ ಶಬ್ದಗಳಿಗೆ ಸಾಂಕೇತಿಕ ಅರ್ಥ ಕಲ್ಪಿಸಿ, ಆಧ್ಯಾತ್ಮಿಕ ವಿಷಯವನ್ನೋ, ಸಾಮಾಜಿಕ ವಿಷಯವನ್ನೋ ಅವುಗಳಲ್ಲಿ ಹುದುಗಿಸಿ ವಚನ ರಚನೆಗೈದಿದ್ದಾನೆ.

ಸರ್ವಜ್ಞನ ಭಾಷೆಯಲ್ಲಿ ದೇಸೀಯ ಚಲುವಿದೆ. ಗ್ರಾಮೀಣ ಸತ್ವಗಳನ್ನು ಸಂಪ್ರಾಪ್ತಿಸುವ ಭಾಷಿಕಾಂಶಗಳು ಆತನ ಆಡುಭಾಷೆಯಲ್ಲಿ ಮಿಳಿತಗೊಂಡು ಜನಪದ ಸತ್ವದ, ಪ್ರಭಾವದ ಮುದ್ರೆಯನ್ನೊತ್ತಿವೆ. ತಾನಿದ್ದ ಸ್ಥಳದಲ್ಲಿ ಕಂಡು ಬಂದ ಜನರ ಜೀವನ ವೈಚಿತ್ರ್ಯಗಳನ್ನು ಆಯಾ ಸಂದರ್ಭಕ್ಕೆ ತಕ್ಕಂತೆ ಯಥೋಚಿತವಾಗಿ ನುಡಿಗಟ್ಟಿನಂತೆ, ನಾಣ್ನುಡಿಯಂತೆ, ಕೂಡುನುಡಿಯಂತೆ, ಬೈಗಳ ಶಬ್ದಗಳಂತೆ ಮೊದಲಾದ ದೇಸೀ ಭಾಷೆಯಲ್ಲಿ ಅರುಹಿದ್ದಾನೆ. ಉದಾಹರಣೆಗೆ;

ಸೂಳೆಯ ನೆರೆನಂಬಿ ಗಾಳಕ್ಕೆ ಸಿಲುಕದಿರು.
ಆಲಸಿಕೆಯಲೆ ಇರುವಂಗೆ ಕಲಸಲು ಅಂಬಲಿಯಿಲ್ಲ.
ಸುರೆಯ ಸೇವಿಸುವಂತೆ ಶಿರವಿಹುದು ಸ್ಥಿರವಲ್ಲ.
ಮದ್ದ ( ಅಫೀಮು ) ಮೆದ್ದವನು ಪ್ರಬುದ್ಧನೆಂದೆನಬೇಡ.
ಊರಿಂಗೆ ದಾರಿಯನು ಆರು ತೋರಿದರೇನು ?
ತುಪ್ಪವಾದಬಳಿಕ ಹೆಪ್ಪನೆರೆದವರುಂಟೆ ?
ಶ್ವಾನ ತೆಂಗಿನಕಾಯಿ ತಾನು ಮೆಲ್ಲಬಲ್ಲುದೆ ?.
ಬೆಟ್ಟ ಕರ್ಪೂರ ಉರಿದು ಬೊಟ್ಟಿಡಲು ಬೂದಿಲ್ಲ.
ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ?.
ಆನೆ ನೀರಾಟದಲಿ ಮೀನ ಕಂಡಂಜುವುದೇ ?
ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ.
ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ ?.
ಗುರಿಯು ತಾಗದ ಬಾಣ ನೂರಾರು ಎಸೆದರೇನು ?.
ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು ?.
ನೆರೆಯುಂಡ ಊಟವದು ಮರಳಿ ತಾನುಳಿವುದೆ ?.
ತತ್ವನರಿಯದಲೆ ಭಸಿತವಿಟ್ಟವ ಶುದ್ಧ ಕತ್ತೆಯಂತೆ.
ಸಿರಿಯು ಸಂಸಾರವನು ಸ್ಥಿರವೆಂದು ನಂಬದಿರು.
ವ್ಯಸನದಲಿ ದೇಹವು ಮಸಣವನು ಕಾಣುವುದು.
ಸಾಲವನು ತರುವಾಗ ಹಾಲೋಗರುಂಡಂತೆ.

ಮುಂತಾದವು ಇಲ್ಲಿ ಕ್ರೋಢೀಕರಿಸಿರುವ ಹೇಳಿಕೆಗಳು, ಪ್ರಶ್ನೆಗಳು ಕೇವಲ ಶುಷ್ಕವಾಗದೇ, ದೃಷ್ಟಾಂತ ರೂಪವನ್ನೂ ತಾಳುತ್ತವೆ. ಆದರೆ ಈ ದೃಷ್ಟಾಂತ ಭಾಷೆಯ ರೂಪ ಕೇವಲ ರಸಾನುಭವವಲ್ಲ. ಅಂದರೆ ಕೇವಲ ಅವುಗಳಲ್ಲಿ 'ರಸ' ಇಲ್ಲವೆಂದು ಅರ್ಥವಲ್ಲ. ಅವುಗಳ ಮುಖ್ಯ ಉದ್ದೇಶ ನೀತಿಯನ್ನು ವಿವೇಕವನ್ನು ಹೇಳುವುದು.

ನಮ್ಮ ಅಲಂಕಾರಿಕರು ವಾಜ್ಞಯವನ್ನು; ಪ್ರಭು ಸಮ್ಮಿತ, ಮಿತ್ರ ಸಮ್ಮಿತ ಹಾಗೂ ಕಾಂತ ಸಮ್ಮಿತ ಎಂದು ವಿಭಾಗಿಸಿದ್ದಾರೆ. ಸರ್ವಜ್ಞನ ವಚನಗಳು ಬಹುಮಟ್ಟಿಗೆ ಮಿತ್ರ ಸಮ್ಮಿತವೆಂಬ ವರ್ಗಕ್ಕೆ ಸೇರುತ್ತವೆ. ಹಿತೈಷಿಯಾದ ಗೆಳೆಯನೊಬ್ಬನು ಈ ಲೋಕದಲ್ಲಿ ನಡೆದುಕೊಳ್ಳಬೇಕಾದ ನಿರ್ದೇಶನವನ್ನು ಕೆಲವೊಮ್ಮೆ ನಯವಾದ ಭಾಷೆಯಲ್ಲಿ, ಇನ್ನೂ ಕೆಲವೊಮ್ಮ ಕಟುವಾದ ಭಾಷೆಯಲ್ಲಿ ಹೇಳಿದ್ದಾನೆ. ನಮ್ಮ ಅಲಂಕಾರಿಕರು ಕಾವ್ಯವು 'ವ್ಯವಹಾರ' ಬೋಧಿಸುತ್ತದೆ ಎಂದಿದ್ದಾರೆ. ಸರ್ವಜ್ಞನ ವಚನಗಳು ನಿಜವಾದ ಅರ್ಥದಲ್ಲಿ ವ್ಯವಹಾರದ ನೀತಿಗಳನ್ನು ಬೋಧಿಸುವದರೊಂದಿಗೆ ಮನುಷ್ಯ ಸ್ವಭಾವವನ್ನು, ಲೋಕದ ನಡಾವಳಿಕೆಯನ್ನು, ಚೆನ್ನಾಗಿ ದೇಸೀಯ ಭಾಷೆಯಲ್ಲಿ ಮನಮುಟ್ಟುವ ರೀತಿಯಲ್ಲಿ ತಿದ್ದಿದ್ದಾನೆ.

ಹೀಗೆ ನೀತಿ-ನಿಯಮ, ವಿಚಾರ-ಹಿರಿಮೆ, ಪದಬಂಧ-ಅರ್ಥವೈಭವ, ಕಲ್ಪನಾ ಸೌಂದರ್ಯಗಳೆಲ್ಲವನ್ನೂ ಹೊಂದಿ ಮೆರೆಯುವ ಅನೇಕ ವಚನಗಳನ್ನು ಆತನಲ್ಲಿ ಗುರುತಿಸಬಹುದು. ಉದಾಹರಣೆಗೆ;

ಗಂಧವನು ತೇವಲ್ಲಿ ಒಂದು ನೊಣವನು ಕಾಣೆ
ಸಂಧಿಸಿ ಮಲವ ಬಿಡುವಲ್ಲಿ ನೊಣ ಮುತ್ತು
ವಂದವನು ನೋಡು ಸರ್ವಜ್ಞ.

ಇಲ್ಲಿ ಬಳಸಿರುವ ಗಂಧ, ಮಲ ಹಾಗೂ ನೊಣ ಈ ಶಬ್ದಗಳಲ್ಲಿ ಒಂದಕ್ಕೊಂದು ಸಂಬಂಧದ ಬಗ್ಗೆ ಬಹಳಷ್ಟು ಹೇಳಬಹುದು. ಅಚ್ಚ ಜಾನಪದೀಯ ನಾಣ್ನುಡಿಯಂತೆ ಸರ್ವಜ್ಞ ಈ ವಚನ ಕಟ್ಟಿದ್ದಾನೆ. 'ನೊಣ'ವು ಅಳಿಮನದ ಪ್ರತೀಕ. 'ಗಂಧ'ವು ಮಾನವರ ಸದ್ಗುಣ, ಸದಾಚಾರ ಹಾಗೂ ಪರಿಪಕ್ವತೆಯ ಸಂಕೇತ. 'ಮಲ'ವೆಂಬುದು ದುರ್ಗುಣ, ದುರಾಚಾರ, ಅಪರಿಪಕ್ವತೆಗಳ ಪ್ರತಿನಿಧಿ. ಅಲ್ಪತೆಯುಳ್ಳವರು, ಅಳಿ ಮನದವರು, 'ಗಂಧ'ವನ್ನು ದೂರವಿಟ್ಟು 'ಮಲ'ವನ್ನೇ ಮುತ್ತುವರು. ಇಲ್ಲಿ ವಚನದಲ್ಲಿ ನೀತಿ ಇದೆ, ವಿಚಾರ ವಿದಗ್ಧತೆಯಿದೆ,ಕಾವ್ಯ ಸೌಂದರ್ಯವಿದೆ. ಪದಬಂಧವೋ ಸುಂದರ-ಬಂಧುರವಾದ ಭಾಷೆಯನ್ನೊಳಗೊಂಡಿದೆ.

ಸರ್ವಜ್ಞ ತನ್ನ ಅಭಿಜಾತ ಪ್ರತಿಭೆಗೆ ಜ್ವಲಂತ ನಿದರ್ಶನಗಳಾದ ಕೆಲ ನವೀನ ನುಡಿಗಟ್ಟುಗಳು ಹೀಗಿವೆ. ಉದಾಹರಣೆಗೆ;

ಬಿದ್ದನಡು ( ಆಲಸ್ಯ), ಊರನರಿ (ಕುತಂತ್ರ), ಅರನಾರಿ (ಷಂಡ, ಪೌರುಷಹೀನ), ಬಿದ್ದು ಬರುವವ (ಘಟಿಂಗ), ಅಂಬರದ ಕಲಹ (ಗುಡುಗು, ಸಿಡಿಲು), ತೊಪ್ಪಲನೀರು (ಮಂಜಿನ ಹನಿ), ಹೊಟ್ಟೆ ದೇವ (ಕೂಳಿಗೆ ಅಳದವ)- (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ,ಪು.೨೨೪) ಇಲ್ಲಿ ಉದಾಹೃತವಾದ ಒಂದೊಂದು ಪದಪುಂಜವೂ ಒಂದೊಂದು ವಿಧವಾದ ಭಾವದ ಒಗರು ತಾನೇ ತಾನಾಗಿ ವಿಜೃಂಭಿಸಿ ಅಭಿವ್ಯಕ್ತಿಗೆ ಅಪರೂಪವಾದ ಶಕ್ತಿ ಒದಗಿಸಿದಂತಾಗಿದೆ. ಕೆಲ ಪದಪುಂಜಗಳಂತೂ ಕಣ್ಣಿಗೆ ಕಟ್ಟಿ, ಮನದಲ್ಲಿ ನೆಟ್ಟು ನಿಲ್ಲಿಸಬಹುದಾದ ಅಪೂರ್ವ ಶಬ್ದ ಚಿತ್ರಗಳೇ ಸರಿ.

ಮುಪ್ಪಿನ ಶಬ್ದ ಚಿತ್ರವನ್ನು ಕೊಡುವಲ್ಲಿ ಸರ್ವಜ್ಞನ ಭಾಷಾ ಪ್ರಯೋಗ ಅದ್ಭುತ. ಉದಾಹರಣೆಗೆ : 'ಗುದ್ದು ಗುಣ್ಣಾದವ' ; ಹಣ್ಣು ಹಣ್ಣು ಮುದುಕನ ಮುಖ ಮುದ್ರೆಯನ್ನು ಯಶಸ್ವಿಯಾಗಿ ಇದು ಸೆರೆ ಹಿಡಿಯುತ್ತದೆ. ಅದೇ ರೀತಿ ಹತ್ತು ಹೆತ್ತಾಕೆ, ರಸಗೆಟ್ಟು ಹೋದ ವನಿತೆ, ಹಲ್ಲಿಲ್ಲದವಳು, ಬಿದ್ದ ಮೊಲೆಯವಳು- ಈ ಒಂದೊಂದು ಶಬ್ದ ಚಿತ್ರಗಳು ಮುಪ್ಪಿನ ಮುದ್ರೆ ಎನಿಸಬಹುದಾದ ಒಂದೊಂದು ಅಂಶದ ಮೇಲೆ ಪ್ರಕಾರವಾದ ಪ್ರಕಾಶ ಚೆಲ್ಲಿ ಸರ್ವಜ್ಞನ ಚಿತ್ರ ಶಕ್ತಿಯನ್ನು ಎತ್ತಿ ತೋರಿಸುತ್ತವೆ (ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ, ಪು. ೨೨೫).

ಆಡಿದ ನುಡಿ ಎಲ್ಲರ ಮನಕ್ಕೆ ಹಿಡಿದು ನುಡಿಗಟ್ಟಾಗಬೇಕಾದರೆ, ಜನಪ್ರಿಯವಾಗಬೇಕಾದರೆ ಅದಕ್ಕೆ ಒಂದು ತೂಕ,ರುಚಿ, ಸಂಪರ್ಕ ಇರಬೇಕಾಗುತ್ತದೆ. ಒಂದು ಚಿಕ್ಕವಾಕ್ಯ ಮನಸ್ಸಿನಲ್ಲುಳಿಯಬೇಕಾದರೆ ಅದು ಅರ್ಥ ಗರ್ಭಿತವಾಗಿ, ಸಂಕ್ಷಿಪ್ತವಾಗಿರಬೇಕಾಗಿರುತ್ತದೆ. ಅಂತಹ ಮಾತುಗಳು ಜನ ಜೀವನದ ಯಾವುದಾದರೊಂದು ಮುಖವನ್ನು ಬಿಂಬಿಸಬೇಕಾಗುತ್ತದೆ. ಒಂದು ವಿಚಾರ- ಒಂದು ಸಮಸ್ಯೆ- ಕಂಡ ಸಂಗತಿಯನ್ನು ಕೇಂದ್ರೀಕರಿಸಿ ಮನದಟ್ಟುಗೊಳಿಸಬೇಕಾಗುತ್ತದೆ. ಕೇಳಿದೊಡನೆ ಇದು ಸರಿಯಾದ ಭಾಷಾ ಪ್ರಯೋಗ ಅಥವಾ ಒಳ್ಳೆಯಮಾತು ಎನಿಸುವಂತಿರಬೇಕು (ಜಾನಪದ ದರ್ಶನ, ಪು. ೮೦).

ಸರ್ವಜ್ಞನ ವಚನಗಳಲ್ಲಿನ ಒಂದೊಂದು ವಾಕ್ಯಗಳು ಸಹ ವಿಚಾರಪೂರಿತವಾದ, ಕಾವ್ಯಮಯವಾದ ಸಂಗ್ರಹಗಳಾಗಿವೆ. ಮನಸ್ಸಿಗೆ ರುಚಿಸಿ, ಸ್ಮರಣೆಗೆ ಪ್ರಿಯವಾಗುವಂತೆ ಮೊನೆ, ಖಾರ ಇರುವುದು ಕಂಡು ಬರುತ್ತದೆ. ಅಂತಹ ಕೆಲವೇ ವಾಕ್ಯಗಳನ್ನು ಇಲ್ಲಿ ಉದಾಹರಣೆಗಾಗಿ ಎತ್ತಿಕೊಳ್ಳಲಾಗಿದೆ. ಆತನ ಭಾಷಾ ಪ್ರಯೋಗಕ್ಕೆ ಈ ಕೆಳಗಿನವುಗಳು ಸಾಮಾನ್ಯ ವಾಕ್ಯಗಳಂತೆ ಕಂಡು ಬಂದರೂ, ಗಾದೆಮಾತುಗಳಂತೆ ಭಾಸವಾಗುತ್ತವೆ. ಉದಾಹರಣೆಗೆ;

ಮಾನವುಳ್ಳವರ ಸಂಗ ತಾ ಸಕ್ಕರೆಯ ಜೇನು ಸವಿದಂತೆ.
ದೌರ್ಜನ್ಯಕಾರಿ ಸತ್ತರೆ ಹತ್ತಿರ್ದ ಕಜ್ಜಿ ಹೋದಂತೆ.
ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ.
ಹಸನವಿಲ್ಲದವಳ ರತಿಕೂಟ, ಜಿನನ ಬಾಯ ಕಿಸು ಕುಳದಂತೆ.
ನಂಬುಗೆಯು ಕೆಟ್ಟ ಬಳಿಕ, ತಾ ಬೇಗೆಯಂತೆ ಬೆಂದು ಸತ್ತಂತೆ.
ಸಾಲವನು ತರುವಾಗ ಹಾಲೋಗರವನುಂಡಂತೆ.

ಈ ಮೇಲಿನ ಚಿಕ್ಕ ಸಾಲಿನಲ್ಲಿ ಕಂಡುಬರುವ ಬೆಲ್ಲ, ಸಕ್ಕರೆ, ಕಜ್ಜಿ, ಭಸಿತ, ಕೀಲು, ಏತ,ಕಲ್ಲು, ಹಾಲೋಗರ, ಕಿಸುಕುಳ (ತೊಂದರೆ), ಬೇಗೆ, ತಲೆಬೇನೆ, ಹಾಳೂರು, ಮಳಲೊಳಗೆ ಎಣ್ಣೆ ಮುಂತಾದ ಜಾನಪದ ಶಬ್ದಗಳ ಪ್ರಯೋಗ ಇಡೀ ವಾಕ್ಯದಲ್ಲಿ ಕೇಂದ್ರ ಬಿಂದುವಾಗಿ ಗೋಚರಿಸುತ್ತವೆ. ದೇಸಿಯತೆಯನ್ನು ಇಲ್ಲಿ ಸಮರ್ಥವಾಗಿ ದುಡಿಸಿಕೊಂಡು ಹಾಗೂ ಅದರ ವಿಸ್ತಾರತೆಯನ್ನು ಹೆಚ್ಚಿಸಿದ್ದಾನೆ. ಜನಸಾಮಾನ್ಯರ ನಾಲಿಗೆಯ ಮೇಲೆ ಪಾರಂಪರಿಕವಾಗಿ ಸಾಗಿ ಬಂದ, ನಿಘಂಟುವಿನ ಕೆಲ ಶಬ್ದಗಳು ಆಶ್ರಯ ಪಡೆಯದಿರುವ ಸಹಸ್ರಾರು ದೇಸಿ ನುಡಿಗಳು, ಶಬ್ದಗಳನ್ನೆಲ್ಲಾ ತನ್ನ ವಚನಗಳಲ್ಲಿ ತುಂಬಿ, ಕನ್ನಡ ಜಾನಪದ ಭಾಷಾ ಕೋಶವನ್ನು ಸರ್ವಜ್ಞ ಶ್ರೀಮಂತಗೊಳಿಸಿದ್ದಾನೆ. ಅಷ್ಟೇ ಏಕೆ ದೇಸಿ ನುಡಿಗಳು ಅರ್ಥ ವಲಯವನ್ನು ಹಿಗ್ಗಿಸಿದ್ದಾನೆ. ಉದಾಹರಣೆಗೆ;

ಹೊಲೆಯಲ್ಲ ಅರಿದಂಗೆ (೨೨೦)
ಯೋಗಿಗೆ ಹೊಲೆಯಿಲ್ಲ (೧೫೫)
ಕೋತಿಗಂ ಗುಣವಿಲ್ಲ (೧೭೧)
ಬಂಧನವ ಮಾಡದಿರು (೧೯೨)
ಅರಿವೆಂಬುದಾತ್ಮಂಗೆ (೨೦೨)
ಯತಿಗೇಕೆ ಕೋಪ ? (೨೨೬)
ಅರಳೆಗಂ ರಸವಿಲ್ಲ (೧೩೧)
ಅರಿವನರಿದಡೆ ಜೀವ (೧೬೮)
ತನ್ನ ತಾನರಿಯುವದು (೧೮೬)
ಆನೆಗಂಜಿಕೆ ಏಕೆ ? (೧೯೮)
ರಾಗವಿದ್ದರೆ ಭೋಗ (೨೭೧)
ಆಲದಾ ಬಿಳಿಲಂತೆ (೨೬೯)

ಇತ್ಯಾದಿ ಈ ಮೇಲೆ ಉದಾಹೃತವಾದ ಒಂದೊಂದು ಪದಪುಂಜದಲ್ಲಿ ಒಂದೊಂದು ವಿಧವಾದ ಭಾವದ ಒಗರು ಅಥವಾ ಬಣ್ಣದ ಹೊಗರು, ತಾನೆ ತಾನಾಗಿ ವಿಜೃಂಭಿಸಿ ಅಭಿವ್ಯಕ್ತಿಗೆ ಅಪರೂಪದ ಶಕ್ತಿ - ಕಾಂತಿಯನ್ನು ಒದಗಿಸಿದೆ. ಜನಸಾಮಾನ್ಯರ ಭಾಷೆಯ ಕೆನೆಯಾದ ಪಡೆನುಡಿ ಅಥವಾ ನುಡಿಗಟ್ಟು (Idiom) ಗಳನ್ನು ಸರ್ವಜ್ಞ ತನ್ನ ವಚನಗಳಲ್ಲಿ ವ್ಯಾಪಕವಾಗಿ ಬಳಿಸಕೊಂಡಿದ್ದಾನೆ. ಎರಡು ಅಥವಾ ಮೂರು ಶಬ್ದಗಳಲ್ಲಿ ಅಡಗಿಸಿ, ವಿಶಿಷ್ಟ ಅರ್ಥದಿಂದ ಚಲಾವಣೆಗೊಳಿಸಿ, ಭಾವತೀವ್ರತೆಯನ್ನುಂಟು ಮಾಡಿದ್ದಾನೆ. ಇಲ್ಲಿನ ಪದ ಪುಂಜಗಳಂತೂ ಕಣ್ಣಿಗೆ ಕಟ್ಟಿ, ಮನದಲ್ಲಿ ನಟ್ಟು ನಿಲ್ಲಬಹುದಾದ ಅಪೂರ್ವ ನಖಚಿತ್ರಗಳೇ ಆಗಿವೆ. (ಸ. ಸದರ್ಶನ ಮತ್ತು ಸಾಹಿತ್ಯ ತತ್ವ , ಪು. ೨೨೪) ಜನಪದರು ದೈನಂದಿನ ವ್ಯವಹಾರದಲ್ಲಿ ಸಹಜವಾಗಿ ಬಳಕೆಯಾಗುವ ಭಾಷೆಯನ್ನು ತನ್ನ ವಚನಗಳಲ್ಲಿ ಮೇಲಿನಂತೆ ಬಳಸಿಕೊಂಡಿರುವುದು ಕಂಡುಬರುತ್ತದೆ. ಸರ್ವಜ್ಞ ತನ್ನ ಕಾಲದ ಹಲವಾರು ಪಡೆಮಾತುಗಳನ್ನು ವಚನಗಳಲ್ಲಿ ಉಲ್ಲೇಖಿಸಿ, ವಚನಾರ್ಥವನ್ನು ಹಿಗ್ಗಿಸಿಕೊಂಡಿದ್ದಾನೆ. ಚಲಾವಣೆಯಲ್ಲಿರುವ ಪಡೆಮಾತುಗಳು ಕಾಲಕ್ರಮದಲ್ಲಿ, ಮಾತಿನಲ್ಲಿ ಹಾಗೂ ಸಾಹಿತ್ಯದಲ್ಲಿ ಸ್ವಲ್ಪ ಬದಲಾಗುವುದುಂಟು. ಸಜೀವ ಭಾಷೆಯಲ್ಲಿ ಇದು ಅನಿವಾರ್ಯ. ಜನಪದರ ಜಾಣ್ಮೆ, ಅನುಭವ, ಧ್ವನಿಗಳೆಲ್ಲವನ್ನೂ ಪಡೆಮಾತುಗಳು ಪ್ರತಿಬಿಂಬಿಸುತ್ತವೆ.(ವಚನ ಸಾಹಿತ್ಯ ಮತ್ತು ಜಾನಪದ, ಪು. ೧೩೯) ಇಂತಹ ಸಾಂಕೇತಿಕ ಅರ್ಥವನ್ನೊಳಗೊಂಡ ಪಡೆಮಾತುಗಳು ಭಾಷೆಗೆ ಬಲವನ್ನು ನೀಡುವ ಒಂದು ಶಕ್ತಿಯಿದ್ದಂತೆ. ಈ ಬಗೆಯ ವಾಗ್ರೂಢಿಗಳನ್ನು ಸರ್ವಜ್ಞನ ವಚನಗಳಿಂದ ಕೆಲವನ್ನು ಮಾತ್ರ ಇಲ್ಲಿ ಶೋಧಿಸಲಾಗಿದೆ.

ಇತ್ತ ಗ್ರಾಮ್ಯವು ಅಲ್ಲದ ಅತ್ತ ಶಿಷ್ಟವೂ ಅಲ್ಲದ ಒಂದು ಬಗೆಯ ಹದಬೆದೆಯ ಭಾಷೆ ಸರ್ವಜ್ಞನದು. ಈತನ ಭಾಷೆಯಲ್ಲಿ ಹೆಚ್ಚು ಪ್ರಮಾಣ ಕನ್ನಡ ದೇಸಿಯತೆ ಇರುವುದನ್ನು ಇಲ್ಲಿಯವರೆಗೆ ಸಮೀಕ್ಷಿಸಲಾಗಿದೆ. ಭಾಷಿಕ ಅಂಶಗಳಲ್ಲಿ ಒರಟುತನ, ಹಾಸುಬೀಸು, ನಯ ನಜೂಕು, ವ್ಯಂಗ್ಯ -ವಿಡಂಬನೆ ಈ ಎಲ್ಲದರ ಜೊತೆಗೆ ಸರ್ವಜ್ಞ ಸ್ಪಂದಿಸಿದ್ದಾನೆ, ಅಷ್ಟೇ ಮನಮುಟ್ಟುವಂತೆ ಸ್ವೀಕರಿಸಿದ್ದಾನೆ. ದೇಸಿಯತೆಯಿಂದ ತನ್ನ ಭಾಷೆಯ ಅಂದವನ್ನು, ಅರ್ಥವನ್ನು ಹೆಚ್ಚಿಸಿಕೊಂಡ ಸರ್ವಜ್ಞ , ಆಡುನುಡಿಗೆ ತೀರ ಹತ್ತಿರವಾದವನು, ಹೀಗಾಗಿ ," ಸು. ೧೫೦೦ ವರ್ಷಗಳಿಗಿಂತಲೂ ಅಧಿಕ ಕಾಲಾವಧಿಯ ಇತಿಹಾಸ ಪಡೆದ ಕನ್ನಡ ಸಾಹಿತ್ಯದಲ್ಲಿ ಮೊಟ್ಟ ಮೊದಲ ಬಾರಿಗೆ ದೇಸಿ ಮಾತಿನ ತಂತ್ರವನ್ನು ಬಳಸಿದ ಕೀರ್ತಿ ವಚನಕಾರರದು " (ವಚನ ಸಾಹಿತ್ಯ ಮತ್ತು ಜಾನಪದ ಪು.೧೪೬).

ಸರ್ವಜ್ಞನು ಬಳಸಿದ ಭಾಷೆಗೆ ವಚನಕಾರರ ಭಾಷೆಯೇ ಹೆಚ್ಚು ಪ್ರೇರಣೆಯಾಗಿದೆ. ಆದ್ದರಿಂದ ಅವರ ವಚನಗಳು ಜನರ ಬಾಯಿಯಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವಂತೆ ಸರ್ವಜ್ಞನ ವಚನಗಳೂ ಸಹ ಉಳಿದುಕೊಂಡು ಬಂದಿವೆ.

ಜನಪದ ನುಡಿಯ ಸೊಗಸಿಗೆ ಕೆಲವು ವಚನಗಳಲ್ಲಿನ ವಾಕ್ಯಗಳ ಉದಾಹರಣೆಗಳನ್ನು ಗಮನಿಸಿಬಹುದು . ಉದಾಹರಣೆಗೆ ;

ನಿಜವಾಗಿ ವಸ್ತುವಿನ ಬೆಲೆ ಅಥವಾ ಅದರ ಮಹತ್ವ ಅರಿಯದಿರುವುದಕ್ಕೆ 'ಚಂದನವ ಕುಟ್ಟಿ ಒಗೆದಂತೆ' (೩೩೧) ಯಾರೂ ದಿಕ್ಕಿಲ್ಲದಿವನಿಗೆ ಅಥವಾ ಅನಾಥನಿಗೆ ''ತಾಯ್ಸತ್ತ್ ಕೂಸಿನಂತೆ'' (೬೯೭) ''ಯಾವ ಕೆಲಸವೂ ಮಾಡದೇ ಅಥವಾ ನಿಸ್ಸಾಹಾಯಕ ಸ್ಥಿತಿಗೆ'' ಸಮರದಲ್ಲಿ ಬಿಲ್ಲು ಮುರಿದಂತೆ (೬೯೯) ''ಎಣ್ಣೆ ಕುಡಿಕೆ ಹೊಡೆದಂತೆ '' (೬೯೬) , ಅಪ್ರಯೋಜನವಾದುದುಕ್ಕೆ ಅಥವಾ ಕೈಗೊಂಡು ಕೆಲಸ ನೆರವೇರದಿದ್ದಾಗ ನೀರೊಳಗಕ್ಷವರ ಬರೆದಂತೆ (೬೫೫) ವ್ಯರ್ತಪ್ರಯತ್ನ. '' ಮಳಲೊಳಗೆ ಬೆರೆದ ಕೂಳಂತೆ '' (೬೮೯) ಅಂದರೆ ಜನಪದರ ಭಾಷೆಯಲ್ಲಿರುವ ''ನೀರಲ್ಲಿ ಹೋಮ ಮಾಡಿದಂತೆ'' ಎಂಬುದನ್ನು ಇಲ್ಲಿ ನೆನಪಸಿಕೊಳ್ಳ ಬಹುದಾಗಿದೆ. ಆಸೆ ಎಲ್ಲಾ ದುಃಖಗಳಿಗೆ ಮೂಲ ಎಂಬ ಮಾತಿಗೆ ಅನುಗುಣವಾಗಿ ಸರ್ವಜ್ಞ ''ಸವಿಬೇಡಿ ಬೇವು ತಿಂದಂತೆ, ಚುಂಬಿಸಲು ಹಲ್ಲು ಮುರಿದಂತೆ (೬೫೯)

***ನಿಷೇದಾತ್ಮಕ ಹಾಗೂ ಪ್ರಶ್ನಾರ್ತಕ ವಾಕ್ಯಗಳನ್ನು*** ತನ್ನ ವಚನಗಳಲ್ಲಿ ಕಂಡರಿಸದ್ದಾನೆ. ಉದಾಹರಣೆಗೆ;

ಹಾರುವವಗೆ ಮಿಂದೂಟವೇಕೆ ? (೪೧೬)
ಸುಜನರ್ಗೆ ಕುಂದು ಬಂದಪುದೆ ? (೩೮೩)
ವೀರರು ಸಾವ ಭೀತಿಗಂಜುಳಿವರೆ ? (೨೯೩)
ಕೆರೆಬಾವಿ ತುಂಬಿದಂತಿರುವವೆ ? (೨೯೩)
ಆಕಳು ತಲೆಯಲ್ಲಿ ಕರೆಯುವುದೆ ? (೨೮೧)
ಕೊಟ್ಟಿದ್ದು ಉಳಿಯುವುದೆ ? (೨೭೪)
ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಹುದೆ ? (೨೭೫)
ಯೋಗಿಗಂ ಸ್ತುತಿ ನಿಂದೆಯೇಕೆ ? (೨೫೧)

ಕಿರಿದರಲ್ಲಿ ಹಿರಿದರ್ಥವನ್ನು ಒಳಗೊಂಡ, ಗಾದೆಯ ಮೈಕಟ್ಟಿಗೆ ಪ್ರಭಾವಿತನಾದ ಸರ್ವಜ್ಞ ಇಡೀ ತನ್ನ ವಚನಗಳನ್ನು ಗಾದೆಗಳ ರೂಪದಲ್ಲಿಯೇ ನಿರ್ವಹಿಸಿಲು ಪ್ರಯತ್ನಿಸಿದುದನ್ನು ನೋಡಿದರೆ ಗಾದೆಗಳು ಬೇರೆಯಲ್ಲ ಆತನ ವಚನಗಳ ಭಾಷೆಯು ಬೇರೆಯಲ್ಲ ಅನ್ನಿಸುತ್ತದೆ. ತನ್ನ ಹದಬೆದೆಯ ಭಾಷೆಯಲ್ಲಿ ದೇಸಿಯ ಅಂಶಗಳನ್ನು ಕಂಡಿರಿಸಿದ್ದಾನೆ ( ವಚನ ಸಾಹಿತ್ಯ ಮತ್ತು ಜಾನಪದ, ಪು. ೧೪೬).

೭.೨.೧

**ಬೈಗುಳ ಪದಗಳು :**

ಮನುಷ್ಯ ಉಪ್ಪು, ಹುಳಿ,ಖಾರ, ಒಗರು ಸೇವಿಸುವವನಾಗಿರುವುದರಿಂದ ಸಹಜವಾಗಿಯೇ ಮೌನ, ನಗು, ಬೇಸರ, ಕೋಪ, ಆವೇಗ, ಉದ್ವೇಗ ಮುಂತಾದ ನವರಸಗಳಿಗೆ ಒಳಗಾದಂತೆಯೇ ಅರಿಷಡ್ವರ್ಗಗಳಾದ ಕಾಮ,ಕ್ರೋದ,ಲೋಭ,ಮೋಹ, ಮದ, ಮತ್ಸರಾದಿಗಳಿಗೆ ಬಲಿಯಾಗುತ್ತಿರುತ್ತಾನೆ. ಇವುಗಳಲ್ಲಿ ಕೋಪ ಅಥವಾ ಸಿಟ್ಟು ಎಂಬುದು ಬಹಳ ಘೋರವಾದುದು. 'ಸಿಟ್ಟು ಶೃಂಗಾರಕ್ಕೆ ಬರಲಾರದು' ಎಂಬ ಮಾತಿದ್ದರೂ ಇದು ವ್ಯಕ್ತಿಯಲ್ಲಿ ಕಂಡುಬಂದಾಗ ಬಾಯಿಯಿಂದ ಬೈಗುಳ ಪದಗಳು ಹೊರಬರುತ್ತವೆ. ನುಡಿ-ಕಿಡಿಗಳೇ ಅಥವಾ ಕಿಡಿಕಾರುವ ನುಡಿಗಟ್ಟುಗಳೇ ಬೈಗಳು. ಮಾನಸಿಕ ನೋವನ್ನುಂಟು ಮಾಡುವುದೇ ಇವುಗಳ ಸಾಮಾನ್ಯ ಉದ್ದೇಶ (ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು, ಪು.೩೫೫). ಆದರೂ 'ಬೈದು ಹೇಳಿದವರು ಬುದ್ಧಿ ಹೇಳಿದರು, ನಕ್ಕು ಹೇಳಿದವರು ಕೆಡುಕು ಹೇಳಿದರು' ಎಂಬ ಮಾತನ್ನು ಅರಿಯಬಹುದು.

ವ್ಯಕ್ತಿಯೊಬ್ಬನಿಗೆ ಕೋಪಬಂದಾಗ ನಾನಾ ವಿಧವಾದ ಮಾತುಗಳಿಂದ ಬೈಯಲ್ಪಡುತ್ತಾನೆ. 'ಕಂಡದ್ದನ್ನು ಆಡಿದರೆ, ಕೆಂಡದಂತಹ ಕೋಪ' ,' ಇದ್ದದ್ದು ಇದ್ಹಾಂಗ ಹೇಳಿದರೆ, ಎದ್ದು ಬಂದು ಎದೆಗೊದ್ಹಾಂಗಾತು', 'ಬೈಯುವುದೆಲ್ಲಾ ಒಳ್ಳೆಯದಕ್ಕಾಗಿಯೇ' ಇತಿ ಮೊದಲಾದ ಸಮಾಜ ಒಪ್ಪಿತವಾದ ಗಾದೆಗಳಲ್ಲಿ ಬೈಗುಳಿಂದ ವ್ಯಕ್ತಿ ಉತ್ತಮ ದಾರಿ ಕಂಡುಕೊಳ್ಳುವ ಭಾವನೆ ಇರುತ್ತದೆ.

ನಮ್ಮ ಗ್ರಾಮೀಣ ಪರಿಸರದಲ್ಲಿ ಜನರು ಕೋಪಗೊಂಡಾಗ ಬೈಗುಳ ಪದಗಳು ಸರಾಗವಾಗಿ ಹೊರಬರುತ್ತವೆ. 'ಮೈಮೇಲಿನ ಗಾಯ ಮಾಯಬಹುದು, ಬೈಗಳಿಂದ ಮಾನಸ್ಸಿಗಾದ ಗಾಯ ಬೇಗ ಮಾಯುವುದಿಲ್ಲ' ಎಂಬ ಮಾತು ದೈಹಿಕ ನೋವಿಗಿಂತಲೂ, ಮಾನಸಿಕ ನೋವು ಬಲವಾಗಿರುತ್ತದೆಂದು ತಿಳಿದುಬರುತ್ತದೆ. ಒಟ್ಟಾರೆ ಬೈಗುಳ ಪದಗಳ ಹಿಂದಿನರ್ಥ ವ್ಯಕ್ತಿಯ ಗುಣವನ್ನು ಶುದ್ಧಿ ಮಾಡುವುದಾಗಿರುತ್ತದೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಸರ್ವಜ್ಞನನ್ನು ನೋಡಿದಾಗ ಈತ ಬಹಳ ನಿಷ್ಠೂರವಾದಿ. ತನ್ನ ಸಮಾಜದಲ್ಲಿ ಕಂಡುಬಂದ ಲೋಪಗಳನ್ನು ನೇರವಾಗಿ ಖಂಡಿಸಿ ಓಗ್ಗು-ಮುಗ್ಗಾಗಿ ಬೈದಿದ್ದಾನೆ. ಅವನು ಶಾಂತಮೂರ್ತಿಯಾಗಿದ್ದಂತೆಯೇ ಉಗ್ರಕೋಪಿಯೂ ಆಗಿದ್ದನು. ಅವನು ಬಳಸಿರುವ ಬೈಗುಳ ಪದಗಳನ್ನು ಇಲ್ಲಿ ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಸೂಳಿ, ಹಾದರಗಿತ್ತಿ, ರಂಡೆ, ಮೂಳ, ಪರದೇಶಿ, ಗರ್ವಿ, ಚಂಡಿ, ಮಾರಿ, ಪಾತಕಿ, ಹಾಳೂರು ಶುನಕ, ಹಾಳೂರು ಹದ್ದು, ಹಾಳೂರು ಗೂಗೆ, ಹತ್ತಿಗೇಡಿ ಹೊಲೆಯ, ಕಪಿಯೆ, ಮಾದಿಗ, ಬಣಗು, ಭ್ರಷ್ಟ, ಕಲ್ಲಿನಂತೆ, ಅರಸಿಕ ಮತಿಗೇಡಿ, ಭಂಡ, ಕುನ್ನಿ,ಪಾತಕಿ, ಮೂಳ, ಕತ್ತೆ ಮಾನವ, ಗತಿಗೇಡಿ, ಮೂತಾತ್ಮ, ಮರುಳ, ಮಿಂಡೆ, ಕೋತಂಗಿ, ಅಂದಗೇಡಿ, ಮೂಢ, ದುರ್ಜನ, ಅಜ್ಞಾನಿ, ದುರುಳ, ಲಂಡ, ಕಳ್ಳ, ರಕ್ಕಸ, ಹೊಲೆಯ, ಕೋಡಗ, ಹೇಸಿ, ಕಿಸವಾಯಿ, ಮೂರ್ಖ, ಅದಮ, ಕತ್ತೆಲದ್ದಿ, ಬಾಯೊಳಗೆ ಮಣ್ಣು, ಕಾಡುಮಿಗ, ಅವಿಚಾರಿ, ಲಂಡ, ತುಚ್ಛ, ಜ್ಞಾನಹೀನ, ಕಟುಗ, ನೀಚ, ಮೂಳ್ನಾಯಿ, ಬೋಳ್ನಾಯಿ, ಹುಚ್ಚ, ಹೆಡ್ಡ ಇತ್ಯಾದಿ.

೭.೩.೨

**ದೇಸಿ ಪದಗಳು :**

ಈ ದೇಸಿಯತೆ ಎಂಬುದು ಸಾಮಾನ್ಯ ಜನರು ಬಳಸುವ ಭಾಷೆಯಲ್ಲಿ ಅಡಗಿರುತ್ತದೆ. ಅವರು ನಿತ್ಯ ಬಳಸುವ ಪದಗಳಿಂದ ಆಯಾ ಭಾಷೆಯು ಇನ್ನಷ್ಟು ಅರ್ಥವಂತಿಕೆಯನ್ನು ಪಡೆದುಕೊಳ್ಳುತ್ತದೆ. ಅಲ್ಲದೆ, ಭಾಷೆಯ ಸೊಗಡು, ಶಕ್ತಿ ಹೆಚ್ಚಾಗುತ್ತಾ ಹೋಗುತ್ತದೆ. ಒಟ್ಟಾರೆ ದೇಸಿಯ ಪದವಿಲ್ಲದ ಭಾಷೆ ಭಾಷೆಯೇ ಅಲ್ಲವೆಂಬ ಮಾತನ್ನು ಅನೇಕ ಜಾನಪದ ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದೇರೀತಿ ಸರ್ವಜ್ಞನ ವಚನಗಳಲ್ಲಿ ಕಂಡುಬಂದ ಅನೇಕ ದೇಸಿ ಶಬ್ದಗಳನ್ನು ಇಲ್ಲಿ ಕಂಡರಿಸಲಾಗಿದೆ.

ಚಿಮ್ಮಟ, ಮೇಟಿ, ಕೆಸರು, ಗುಡಿ, ಸಾಲೆ, ಮಾಳಿ, ಅಡಿಗೆ, ಮಡಿಕೆ, ಬಸಿರು, ಕೂಳು, ಬಣ್ಣ, ಕುಲ, ಹೊಲೆಯ, ಹೊಲಸು, ಎಲುವು, ಮಲ, ಮೂತ್ರ, ಮುಸುಕು, ಹೇಸಿ, ಆಳು, ಊದು, ಎಂಜಲು, ಕೆರ, ಹಳ್ಳ, ಪಾಪಿ, ನಾಣೆಕಲ್ಲು, ಕಂಟಕ, ಬೆಟ್ಟ, ಲೇಸು, ಆಪತ್ತು, ಬಲೆ, ಭಂಗ, ನಂಜು, ಕಿಚ್ಚು, ಕೂಡು, ಓಡು, ಹೀನ, ಹುಸಿ, ಹಮ್ಮು, ಕೆಮ್ಮು, ಉಂಬು, ಉಟ್ಟು, ನರಳು, ಬೆರಸು, ಊರು, ದಿಟ, ಭೋಗ, ಭಾಗ್ಯ, ಅಂಗ ಮುಂತಾದವು.

**ವಿಜಾತಿ ಪದಗಳು :** ೧

ಸರ್ವಜ್ಞ ವಚನಗಳಲ್ಲಿ ದೊರೆತ ವಿಜಾತಿ ಪದಗಳಿಂದಾಗುವ ಜೋಡುನುಡಿಗಳು ಈ ರೀತಿ ಇವೆ.

ಆಡಿ-ಕೂಡಿ, ಹುಸಿ-ಹಸಿ, ಕಳ್ಳ-ಸುಳ್ಳ, ಮೊಬ್ಬಿ- ಉಬ್ಬಿ, ಕೊಟ್ಟು-ಬಿಟ್ಟು, ಹಣ-ಹೆಣ, ಮುತ್ತು-ಹತ್ತು, ಹಣ-ರಣ, ನುಡಿಸು-ಕೆಡಿಸು, ಸಿರಿಯಣ್ಣ-ಹಿರಿಯಣ್ಣ, ಮುನಿ-ಕಿನಿ, ತಪ್ಪು- ಒಪ್ಪು, ಯತಿ-ಸತಿ, ಮೆರೆಸು-ಮರೆಸು, ಚೆಲುವ-ಬಲವ, ಮಣ್ಣು-ಹೊನ್ನು, ತುರುಕ-ಹರುಕ, ವದನೆ-ಬದನೆ, ಸುರೆಯ- ಉರಿಯ, ನೀಚ- ಈಚ, ಅಂಗಿ-ಭಂಗಿ, ಆಡಿದ-ನೋಡಿದ, ಜಾವಕ್ಕೆ-ಹೇವಕ್ಕೆ, ಜನಕೆ-ವನಕೆ, ಹೋರುವ-ಸೋರುವ, ಅರ್ಥ-ವ್ಯರ್ಥ, ಆಯೆ-ಜೋಯೆ, ಶ್ವಾನ- ಊನ, ಇರಿದ-ತರಿದ, ಮಾತು-ಸೋತು, ಕೋಟಿ-ಮೇಟಿ, ಎತ್ತಿಮ್ಮೆ- ಉತ್ತೊಮ್ಮೆ-ಬಿತ್ತೊಮ್ಮೆ, ಬೆಕ್ಕು-ಮುಕ್ಕು, ಬಾಲೆ-ಮಾಲೆ, ಆಡಿ-ಕೂಡಿ-ಕಾಡಿ, ಅಡಿಕೆ-ಮಡಿಕೆ, ಅಂಡೆ-ಕುಂಡೆ, ನಾಯಿಗೆ-ಕೋಳಿಗೆ, ಕಟ್ಟಾಸೆ-ಕೊಟ್ಟಾಸೆ, ಅಡ್ಡ-ಗಿಡ್ಡ, ಕೊಂಬು-ತುಂಬು, ಬೇಡಂಗೆ-ಬೋಡಂಗೆ, ವಾಜಿ-ತೇಜಿ, ಆಡಿ-ಕೂಡಿ, ತುಪ್ಪಾದ-ಒಪ್ಪಾದ, ಸಾಕಿದವ-ಸೋಕಿದವ, ಸುಂಕ-ಬಿಂಕ, ಭಂಡೆ-ಮಿಂಡೆ, ಶ್ವಾಸ-ಹೀನ, ಅಲ್ಲಪ್ಪ-ಬಲ್ಲಪ್ಪ, ವ್ಯಸನ-ಮಸಣ, ಗೀತ-ಜಾತ, ಆಸೆ-ಮೀಸೆ, ಅಚ್ಚು-ಮೆಚ್ಚು, ಒಕ್ಕಲಿಲ್ಲದ - ಮಕ್ಕಳಿಲ್ಲದ, ಸುಂಕ-ಬಿಂಕ, ಹೊಲೆಯ - ಒಲೆಯ, ಜಾಣ-ಕೋಣ, ಹಾಸು-ಪೂಸು, ವೀರ-ಸಾರ, ಕರೆಯದಲೆ-ಬರೆಯದಲೆ, ರಾಮು-ಸೋಮ, ಸತ್ಯ-ಮಿಥ್ಯೆ, ಏರುವ-ಹೇರುವ, ಕಾಯಕ-ನಾಯಕ, ಹೆತ್ತ-ತೊತ್ತ, ದಿನಪತಿ-ಧನಪತಿ, ಹಲ್ಲ-ಕಲ್ಲ, ಒಬ್ಬ- ಇಬ್ಬ, ಗವುಡ-ಕಿವುಡ, ಎಲ್ಲ-ಬಲ್ಲ, ಮಾನ-ಜ್ಞಾನ, ಮನ-ಘನ, ತಾಗು-ಬಾಗು, ಮಾನೀಶ-ನೀನೀಶ, ಆಳಿವಣ್ಣ-ಗಿಳಿವಣ್ಣ, ಮಿಥುನ-ಮಥನ, ಚೇಳ-ಕಾಳ, ಒಮ್ಮೆ- ಇಮ್ಮೆ,

ತಳಿಗೆ-ಮಳಿಗೆ, ತಂತ್ರ-ಮಂತ್ರ, ಹಿಡಿಯುವುದು-ಪಡೆಯುವುದು, ಶಂಖಿ-ಬಿಂಕ, ಅಟ್ಟು-ಸುಟ್ಟು, ಬಟ್ಟೆ-ಹೊಟ್ಟೆ, ಅರದೆಲೆ-ಹೊರದಲೆ, ಕಣುಕ-ಮಣುಕ, ಕಾಡೆಲ್ಲ-ನಾಡೆಲ್ಲ, ಮಲ್ಲಿಗೆ-ಕಲ್ಲಿಗೆ, ಅಳಿಯ-ಬಳಿಯ, ಅಲ್ಲ-ಬೆಲ್ಲ, ಮೂಡಲ-ಬಡಗಲ, ಕಿರಿನೋಟ-ಅರೆನೋಟ-ನೆರೆನೋಟ, ಹಸ್ತಿನಿ-ಬಿತ್ತಿನಿ, ಒಳೆಯುವಳು-ಮಲೆಯುವಳು, ನಾಲ್ವೆರಳು-ಮೂವೆರಳು, ಮತಿ-ರತಿ, ಹಣವು-ಋಣವು, ರಂಡಿಗಿಲ್ಲದ- ಉಂಡಿಗಿಲ್ಲದ, ಲಿಂಗವಿಲ್ಲದ-ಗಂಗೆಯಿಲ್ಲದ, ಪಿಂಡ-ಮುಂಡ, ಸುಣ್ಣ-ಬಣ್ಣ, ಗಂಡ-ಮಿಂಡ, ಅರಸು-ಹೊರಸು, ದೇಶ-ಕೋಶ, ಒಪ್ಪು-ತಪ್ಪು, ಅಳೆ-ಮಲೆ, ಅಡಕೆ-ಕಿಡಿಕೆ, ಹಳ್ಳ-ಕುಳ್ಳ, ಹರಿಕೆ-ನೆರಿಕೆ, ಬಚ್ಚಲಿಲ್ಲದ-ಕೆಚ್ಚಲಿಲ್ಲದ, ದಾರಿಯ-ಜಾರೆಯ, ಎರೆ-ದೊರೆ, ಅಲ್ಲ-ನಲ್ಲ, ಚುಚ್ಚುವ-ಕಚ್ಚುವ, ಒಮ್ಮೆ-ದಿಮ್ಮೆ, ಆಲಕ್ಕೆ-ಶೀಲಕ್ಕೆ, ಬಂಡು-ತುಂಡು, ಅಳೆಯಾಸೆ-ಮಳೆಯಾಸೆ, ಪಡಿಯಾಸೆ-ಮಡಿಯಾಸೆ, ಕರೆವಾಸೆ-ನಿರಿಯಾಸೆ, ಕಟ್ಟಾಸೆ- ಮೆಟ್ಟಾಸೆ, ಆರಿ-ಮೀರಿ, ಕಾರೆಯದ-ಈರೆಯದು, ಗುದ್ದು-ಮುದ್ದು, ಶಂಕಿ-ಮಂಕಿ, ಮಾಗಿ-ಯೋಗಿ, ಅತ್ತ- ಇತ್ತ, ಅಚ್ಚ- ಉಚ್ಚ, ಒತ್ತಿ-ಕೆತ್ತಿ, ಉಟ್ಟುಟ್ಟು-ಬಿಟ್ಟಿಟ್ಟು, ಉಬ್ಬೊಮ್ಮೆ-ಬಿಟ್ಟೊಮ್ಮೆ, ಉಟ್ಟಿಳಿದು-ಕಟ್ಟಿಳಿದು, ನಡೆಯುತ್ತ-ಕೊಡಹುತ್ತ, ನಡೆಯುತ್ತ-ನುಡಿಯುತ್ತ, ಕಣಕಾಲ-ಮೊಣಕಾಲ, ಮುಂಡೆ-ಕುಂಡೆ, ತಿನಿಸು-ಕನಸು, ಬಿದ್ದ- ಎದ್ದ, ಹೊರಸಿಂಗೆ-ಕೆರಸಿಂಗೆ, ಕಾಲ-ಸಾಲ, ಮತಿ-ಗತಿ, ಎಲೆ-ಮೊಲೆ, ಬಾಳಿಗೆ-ಕೋಳಿಗೆ, ಅವಿಂಗೆ-ಹಾವಿಂಗೆ, ಕುದುರೆ-ಚದುರೆ, ಅಲ್ಲದ-ಸಲ್ಲದ, ಬೆಳಿಗೆ-ಗಿಳಿಗೆ, ಮುಚ್ಚು-ಚುಚ್ಚು, ಬಿಲ್ಲಾಸೆ-ಕೊಲ್ಲಾಸೆ, ಒಕ್ಕಲಿಗ-ಮಕ್ಕಳಿಗೆ, ಬಂಡಿಗೆ-ಮಂಡಿಗೆ, ಬೆಲೆ-ನೆಲೆ, ಹದ್ದು-ಮದ್ದು, ನೆಲೆ-ಬಲೆ, ಬಿಕ್ಕು- ಇಕ್ಕು, ಹಣ-ಹೆಣ, ಅಡ್ಡ-ಗಡ್ಡ, ನೀರಿಲ್ಲದ- ಊರಿಲ್ಲದ, ನೋಟಕ್ಕೆ-ಕೂಟಕ್ಕೆ, ಕೊಟ್ಟಾತ-ತಿಟ್ಟಾತ, ಸೀಗೆ-ಕಾಗೆ, ಕೂಳು-ಹಾಳು, ಕಾಲಿಲ್ಲದ-ತೋಳಿಲ್ಲದ, ತಕ್ಕ-ಘಕ್ಕ, ಹಲ್ಲು-ಸೊಲ್ಲು, ಹರೆಯಲ್ಲಿ-ನೆರೆಯಲ್ಲಿ, ಸಂದ-ಬೆಂದ, ಕರ್ಮ-ಮರ್ಮ, ರುದ್ರ-ಭದ್ರ, ಹರಿದಲೆ-ಕುರಿದಲೆ, ತಿರುಕ-ನರಕ, ವೇದ-ನಾದ, ಬೇಡು-ಮಾಡು, ಹಮ್ಮು-ಬಿಮ್ಮು, ಆಗು-ಹೋಗು, ಕೋಪ-ತಾಪ, ಒಮ್ಮನದಿ- ಇಮ್ಮನದಿ, ಧ್ಯಾನದ-ಮೌನದ, ಹೇಳ-ಕೇಳ, ಇಂದು-ಮುಂದು, ಕೋತಿಂಗೆ-ಮಾತಿಂಗೆ, ಜಾಣ-ಪ್ರಾಣ, ಜೊಳ್ಳು-ಸುಳ್ಳು, ಕನಕ-ಜನಕ, ಕಿವಿ-ಕವಿ, ಭಕ್ತಿ-ಮುಕ್ತಿ, ಸಾಲ-ಶೀಲ, ಶಕ್ತಿ-ಯುಕ್ತಿ, ಲಜ್ಜೆ-ಹೆಜ್ಜೆ, ಹಾವ-ಈವ, ಆಹಾರ-ಬೇಹಾರ, ಕೊಟ್ಟಲ್ಲಿ- ಇಟ್ಟಲ್ಲಿ, ಅರಿತು-ಮರೆತು, ಜಂತ್ರ-ಮಂತ್ರ, ಆವ ಕಾಲ-ಜೀವ ಕಾಲ, ಇಂಗು-ತೆಂಗು, ವೇದ-ವಾದ, ಎಣಿಸು-ಗುಣಿಸು, ಕೊಲುವ-ಮೆಲುವ, ಆಗಿಲ್ಲ-ಮೇಗಿಲ್ಲ, ಹೀನ-ದೀನ, ನಾನು-ತಾನು, ಒಂದೆ - ಮುಂದೆ, ಕವಿ-ಭವಿ, ವಿಷಯಕ್ಕೆ-ಅಶನಕ್ಕೆ, ಪರುಷ-ವರುಷ, ತಾಪ-ಕೂಪ, ಮಾಸಿ-ಸೂಸಿ, ಗಡಿಗೆ-ಅಡುಗೆ, ಬೆಳೆ-ಕಳೆ, ಅಂತಿರ್ದ- ಎಂದಿರ್ದ, ಜೋಗಿ-ತ್ಯಾಗಿ, ಜಡೆ-ಎಡೆ, ಕೊಟ್ಟದ್ದು-ಕಟ್ಟಿದ್ದು, ಎತ್ತಿ-ನೆತ್ತಿ, ವೇಶ್ಯ-ದೇಶ, ಹಾಳು-ಜಾಳು, ಗಾನ-ಮಾನ, ದಾನಿ-ಜ್ಞಾನಿ, ನೋಡು-ಬೇಡು, ಬೇಡಿ-ಕೂಡಿ, ತಿರಿದು-ಕರೆದು, ಧರ್ಮ-ಮರ್ಮ, ಕಂಡವರ-ಕೊಂಡವರ, ಅನ್ನ-ಮುನ್ನ, ಊರಿಂಗೆ-ನಾರಿಂಗೆ, ಕೋಟೆ-ಬೇಟೆ, ಓಡು-ಕೇಡು, ಕರವೆತ್ತಿ-ಹಿರಿದೊತ್ತಿ, ಬಾಗದ-ಹೋಗದ, ಹರಿ-ಸರಿ, ಸಜ್ಜನರು-ನಿರ್ಜನರು, ತೋಟ-ಕೀಟ, ಕರ್ಮ-ಚರ್ಮ, ಅಂಬು-ಕೊಂಬು, ಕೇಡು-ಕೂಡು, ಆಡುವ-ನೋಡುವ, ಸಂದವರ-ಬೆಂದವರ, ಬಲ-ನೆಲ, ಅಂತಿಕ್ಕು - ಎಂತಿಕ್ಕು, ಹಾದರ-ಸೋದರ, ಎಲುವಿಲ್ಲ-ಬಲ್ಲವಿಲ್ಲ, ಯಾತರದು-ನಾತರದು, ಅರಿತಂಗೆ-ಮರೆತಂಗೆ, ಅರ್ಥ-ವ್ಯರ್ಥ, ಜ್ಯೋತಿ-ರೀತಿ, ಒಳಗೊಂದು-ಹೊರಗೊಂದು, ದ್ವಿಜ-ಭುಜ, ಹೆಂಡಕ್ಕೆ-ಕೆಂಡಕ್ಕೆ,

ಮುತ್ತು-ತೊತ್ತು, ಹೊಳೆಯ-ಆಳೆಯ, ಅಂದು-ಸಂದು, ಬಂಟ-ತುಂಟ, ಕುಂಬಾರ-ಪಿಂಜಾರ, ಜಾಜಿ-ತೇಜಿ, ಗಾಜು-ಮೋಜು, ಮಂಜು-ಪಂಜು, ಹಡಗು-ಗುಡುಗು, ವನಕೆ-ಜನಕೆ, ಉಪ್ಪು-ಮುಪ್ಪು, ಸಂತೆ-ಚಿಂತೆ, ಕದನ-ವದನ, ಬತ್ತಿ-ಹೊತ್ತಿ ಮುಂತಾದವು.

ಹೀಗೆ ದ್ವಿರುಕ್ತಿ , ಜೈಗುಳದ ನುಡಿ, ಪಡೆನುಡಿ, ನಾಣ್ನುಡಿ, ವಿಜಾತಿ ಪದಗಳು, ದೇಸಿ ಪದಗಳು ಮೊದಲಾದ ಭಾಷಿಕ ಅಂಶಗಳಲ್ಲಿಯ ಒರಟುತನ , ಹಾಸು - ಬಿಸು, ನಯ-ನಾಜೂಕು, ವ್ಯಂಗ್ಯ-ವಿಡಂಬನೆ ಎಲ್ಲದರ ಜೊತೆಗೆ ಸರ್ವಜ್ಞ ಸ್ಪಂದಿಸಿದ್ದಾನೆ. ಅಷ್ಟೇ ಅಲ್ಲ ಮನಮುಟ್ಟಿ ಸ್ವೀಕರಿಸಿ, ತನ್ನ ವಚನ ಭಾಷೆಯನ್ನು ಸರ್ವರೀತಿಯಿಂದಲೂ ಜಿಗುಟುಗೊಳಿಸಿದ್ದಾನೆ, ಚುರುಕುಗೊಳಿಸದ್ದಾನೆ. ದೇಸಿಯತೆಯಿಂದ ತಮ್ಮ ವಚನಗಳ ಮೂಲಕ ಶರಣರು ಹೇಗೆ ಜನಸಾಮಾನ್ಯರಿಗೆ ಹತ್ತಿರವಾದರೋ ಅದೇ ರೀತಿ ಸರ್ವಜ್ಞನೂ ಸಹ ದೇಸಿಯತೆಗೆ ತೀರ ಹತ್ತಿರವಾಗಿ ಕನ್ನಡ ಸಾಹಿತ್ಯದಲ್ಲಿ ವಚನಕಾರರಂತೆ ದಾಖಲೆ ನಿರ್ಮಿಸಿದ್ದಾನೆ.

''ಸಾಹಿತ್ಯ ಬರೆಯಬೇಕೆಂದು ಉದ್ದೇಶಪೂರ್ವಕವಾಗಿಯೇ ಸರ್ವಜ್ಞ ಹೊರಟವನಲ್ಲ ಸಮಾಜ ಕ್ರಾಂತಿ ಯೊಂದರ ಸಮಯದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯ ನಮಗೆ ಹೆಚ್ಚು ಹತ್ತಿರವಾಗಿ ಕಂಡದ್ದು ಆಶ್ಚರ್ಯವಲ್ಲ'' (ವಚನ ಸಾಹಿತ್ಯ ಮತ್ತು ಜಾನಪದ, ಪು.೧೪೬) ಹೀಗೆ ತಾನು ನಂಬಿದ ಸಿದ್ಧಾಂತವನ್ನು ಇನ್ನೂ ಸಾಮಾನ್ಯ ಜನರಿಗೆ ಮುಟ್ಟಿಸುವುದೇ ಗುರಿಯಾಗಿಟ್ಟುಕೊಂಡಿದ್ದ ಸರ್ವಜ್ಞ ಒಕ್ಕಲಿಗ, ಅಕ್ಕಸಾಲಿಗ, ಸುಂಕಿಗ, ಮುಂತಾದ ಉದ್ಯೋಗಗಳಲ್ಲಿನ ವ್ಯಾಪಾರಿಗಳಿಗೂ ಸಹ ಖಾರವಾದ ಭಾಷೆಯಲ್ಲಿ ತ್ರಿಪದಿಗಳ ಮೂಲಕ ಖಂಡಿಸಿದ್ದಾನೆ. ಅಲ್ಲಲ್ಲಿ ಹಿತೋಪದೇಶದ ಮಾತುಗಳನ್ನು ಆಡಿ ಬೋಧಿಸಿದ್ದಾನೆ.

## ೭.೪. ಗಾದೆ :

ಮನುಷ್ಯನ ಆಲೋಚನಾ ತರಂಗದಲ್ಲಿ ಅಭಿವ್ಯಕ್ತಿ ಪಡೆದ ಅನುಭವದ ನುಡಿಗಳೇ ಗಾದೆಗಳು. ಗಾದೆಯಿಲ್ಲದ ಭಾಷೆಯಿಲ್ಲ. ಎಲ್ಲಾ ವರ್ಗದವರಲ್ಲೂ, ಎಲ್ಲಾ ಜನಾಂಗಗಳಲ್ಲೂ ಗಾದೆಗಳು ಬಳಕೆಯಲ್ಲಿವೆ. ಗಾದೆಗಳು ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿವೆ. ಗಾದೆ ವೇದಕ್ಕೆ ಸಮ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಮಾತುಗಳು 'ಗಾದೆ'ಯ ಮಹತ್ವವನ್ನು ವ್ಯಕ್ತಪಡಿತ್ತವೆ. ಗಾದೆ ಜನಪದರಲ್ಲಿ ಯಾರೋ ಅನಾಮಧೇಯರ ಮನಸ್ಸಿನಲ್ಲಿ ಅನುಭವದ ಒತ್ತಡಗಳಿಂದ ತಟ್ಟನೆ ಹಾರಿದ ಕಿಡಿ ನುಡಿ ಎನ್ನಬಹುದು. ಆದ್ದರಿಂದ ಗಾದೆ ಜನರಿಂದ ಜನರಿಗಾಗಿಯೇ ಸೃಷ್ಟಿಗೊಂಡ ಸಾಹಿತ್ಯವಾಗಿದೆ. ಅಲ್ಲದೆ ಗಾದೆಗಳು ಲೋಕಾನುಭವದಿಂದ ತುಂಬಿ ತುಳುಕುವ ದೇಸಿ ನುಡಿಗಡಣದಿಂದ ಕೂಡಿ ಸಾಮಾನ್ಯರ ಹೃದಯವನ್ನು ತೀವ್ರವಾಗಿ ಸ್ಪಂಧಿಸುವ ಸಾಮರ್ಥ್ಯವನ್ನು ಪಡೆದವುಗಳಾಗಿವೆ.

ಸಹಸ್ರಾರು ಜಾನಪದ ಗಾದೆಗಳ ಉದ್ಧರಣೆಗಳನ್ನು ೧೨ನೇ ಶತಮಾನದ ವಚನಕಾರರಲ್ಲಿ ನಂತರ ೧೫ನೇ ಶತಮಾನದ ದಾಸರ ಕೀರ್ತನೆಗಳಲ್ಲಿ ಕಾಣಬಹುದಾಗಿದೆ. ಆನಂತರ ಬಂದ ಸುಮಾರು ೧೬ನೇ ಶತಮಾನದ ಸರ್ವಜ್ಞನ ವಚನಗಳಲ್ಲಿಯೂ ಗಾದೆಗಳನ್ನು ನೋಡಬಹುದು. ಲೋಕದ ವಿಚಾರಗಳನ್ನು ತೀರಾ ಸಾಮಾನ್ಯನಿಗೆ ಅರ್ಥವಾಗುವಂತೆ ಪರಿಣಾಮಕಾರಿಯಾಗಿ ಸರ್ವಜ್ಞ ಗಾದೆಗಳನ್ನು ಕಟ್ಟಿದ್ದಾನೆ. ಮೊನಚು, ವ್ಯಂಗ್ಯ, ವಿಡಂಬನೆ, ಬಿಗಿ, ಸವಿ ಮುಂತಾದ ಎಲ್ಲಾ ಅಂಶಗಳನ್ನು ತ್ರಿಪದಿಗಳನ್ನು ಗಾದೆಯ ರೂಪದಲ್ಲಿ ಅಭಿವ್ಯಕ್ತಪಡಿಸಿದ್ದಾನೆ.

ಸರ್ವಜ್ಞನ ಅನೇಕ ತ್ರಿಪದಿಗಳಲ್ಲಿ ಅಡಕವಾಗಿರುವ ಗಾದೆಗಳ ಅಂಶಗಳನ್ನು ಜನಪದರ ಆಡುನುಡಿಗಳಿಗೆ ಎಷ್ಟೊಂದು ಹತ್ತಿರವಾಗಿ ಕಂಡುಬರುತ್ತವೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

ಉದಾ: ಕೂಸು ಇದ್ದ ಮನಿಗೆ ಬೀಸಣಕಿ ಯಾತಕ
ಕೂಸು ಕಂದಯ್ಯ ಒಳಗ್ಹೊರಗ । ಆಡಿದರ
ಬಿಸಣಕಿ ಗಾಳಿ ಸುಳಿದಾವ sss.

ಈ ಮೇಲಿನ ಜಾನಪದ ತ್ರಿಪದಿಯಲ್ಲಿ ಕೂಸು, ಬೀಸಣಿಕೆ, ಗಾಳಿ, ಕಂದ, ಒಳ-ಹೊರಗೆ ಓಡಾಡಿ ಆಡುವ ಪರಿ ಈ ಎಲ್ಲಾ ವರ್ಣನೆಯ ವಿವರಗಳೂ ಉಪಮಾನಗಳಾಗುತ್ತವೆ. ಸರ್ವಜ್ಞನ ವಚನಗಳಲ್ಲಿ ಇದು ತುಸು ಭಿನ್ನ. ಉದಾ :

ಗಂಧವನು ತೇದಲ್ಲಿ ಒಂದು ನೊಣವನೂ ಕಾಣೆ
ಸಂಧಿಸಿ ಮಲವ ಬಿಡುವಲ್ಲಿ। ನೊಣ
ಮುತ್ತುವಂದು ನೋಡು ಸರ್ವಜ್ಞ.

ಸರ್ವಜ್ಞನ ಈ ವಚನ ತ್ರಿಪದಿಯಲ್ಲಿ ರಚಿತವಾಗಿದ್ದರೂ ದುಸ್ಸಂಗದ ಲಕ್ಷಣವನ್ನು ತಿಳಿಸುವ ಪರಿ ತುಸು ಭಿನ್ನವಾಗಿದೆ. ಗಂಧ , ನೊಣ, ಪರಸ್ಪರ ವಿರುದ್ಧಾರ್ಥಕ ಸಂಗತಿಗಳು. ಗಂಧದ ಕಂಪು ಇದ್ದೆಡೆ ನೊಣ ಇರುವುದಿಲ್ಲ. ನೊಣ ಮುತ್ತುವುದು ದುರ್ನಾತ ಸೂಸುವಲ್ಲಿ. ಹೀಗೆ ಗಂಧ, ನೊಣ, ಮಲ ಇವೆಲ್ಲಾ ವರ್ಣನೆಯ ವಿವರಗಳು ಉಪಮಾನಗಳಾದರೂ ಪರಸ್ಪರ ಎರಡು ವಿರುದ್ಧ ಸಂಗತಿಗಳನ್ನು ಮುಖಾಮುಖಿಯಾಗಿ ದುಸ್ಸಂಗದ ಲಕ್ಷಣಗಳನ್ನು ತಿಳಿಯಪಡಿಸುತ್ತಿದೆ.

ಹೀಗೆ ಸರ್ವಜ್ಞನ ವಚನಗಳಲ್ಲಿ ಜನಪದ ಸಾಹಿತ್ಯದ ಪ್ರಭಾವ ದಟ್ಟವಾಗಿದ್ದರೂ ಅದು ತನ್ನದೇ ಪ್ರಕಾರವೊಂದನ್ನು ರೂಢಿಸಿಕೊಂಡು ಭಿನ್ನವಾಗಿ ನಿಲ್ಲುತ್ತದೆ. ಜಾನಪದ ತ್ರಿಪದಿ ಶೈಲಿಯನ್ನು ಸರ್ವಜ್ಞ ತನ್ನ ಸಾಹಿತ್ಯ ರಚನಾ ಮಾಧ್ಯಮವಾಗಿ ಬಳಸಿಕೊಂಡರೆ, ಜನಪದ ಗಾದೆ ಪ್ರಕಾಗಳನ್ನು ಉಕ್ತಿಗಳಂತೆ ಬಳಸಿಕೊಂಡಿರುವುದನ್ನು ಕಾಣಬಹುದು. ಜನಪದ 'ಗಾದೆ' ಪ್ರಕಾರಗಳನ್ನು ಸರ್ವಜ್ಞ ತನ್ನ ವಚನದಲ್ಲಿ ಉಕ್ತಿಗಳಂತೆ ಬಳಸಿರುವಂತೆಯೇ ಸರ್ವಜ್ಞನ ವಚನಗಳಲ್ಲಿನ ಅವನ ರಚನೆಗಳ ವಾಕ್ಯಗಳೆಷ್ಟೋ ಮತ್ತೆ ಹೊಸ ಗಾದೆಗಳಾಗಿ ಪ್ರಚಲಿತವಾಗಿರುವುದನ್ನು ಕಾಣುತ್ತೇವೆ. ಸಾಹಿತ್ಯ ಲೇಖನದಲ್ಲಿ ಈ ಬಗೆಯ ಕ್ರಿಯೆ ಪ್ರಕ್ರಿಯೆಗಳು ಬಹುಶಃ ಸಾಮಾನ್ಯವೂ ಅನಿವಾರ್ಯವೂ ಆಗಿವೆ ಎನ್ನಬಹುದು. ಈ ಕ್ರಿಯೆ -ಪ್ರಕ್ರಿಯೆ ಗಳು ಗಾದೆಗಳಿಗಷ್ಟೇ ಸಂಬಂಧ ಪಡದೇ ಉಳಿದ ಸಾಹಿತ್ಯಕ್ಕೆ ಅನ್ವಯಿಸುತ್ತದೆ.

ಉದಾ: ಹರಿವ ಹಾವಿಗಂಜೆ ಉರಿವ ಜ್ಯೋತಿಗಂಜೆ
ಹುಲಿಗಂಜಿ ಹುಲ್ಲಾ ಮರಿಗಂಜೆ। ಅಮ್ಮನೋರೆ
ನಿಮಗಂಜಿ ನಾನು ನೆಡುವಳು।

( ಜಾನಪದ ಸಿಂಹವಲೋಕನ,ಪು.೪೯).

ಇದು ಕರಾವಳಿ ಪ್ರದೇಶದಲ್ಲಿ ರೂಢಿಯಲ್ಲಿರುವ ಒಂದು ತ್ರಿಪದಿ. ಈ ತ್ರಿಪದಿಯ ಮೇಲೆ ವಚನಕಾರರ ಪ್ರಭಾವವನ್ನು ನಾವು ಗುರುತಿಸಬಹುದು. ವಚನ ಸಾಹಿತ್ಯ,ಜನಪದ ಸಾಹಿತ್ಯದ ಸತ್ವವನ್ನು ಹೀರಿ ಬೆಳೆದ ಸಾಹಿತ್ಯವಾದ್ದರಿಂದ ಅದು ಜನ ಸಾಮಾನ್ಯರಿಗೆ ಬಹುಬೇಗ ತಟ್ಟಿತು. ಈ ತ್ರಿಪದಿಯನ್ನೆ ಭಾವ , ಲಯಗಳು, ಬಸವಣ್ಣನವರ ಒಂದು ವಚನದ ಭಾವ ಲಯಗಳನ್ನು ಚೆನ್ನಾಗಿ ಹೋಲುತ್ತದೆ. ಅ ವಚನ ಇಂತಿದೆ.

ಹರಿವ ಹಾವಿಗಂಜೆ, ಉರಿಯ ನಾಲಿಗಂಜೆ, ಸುರಗಿಯ ಮೊನೆಗಂಜೆ
ಒಂದಕ್ಕಂಜುವೆನೊಂದಕ್ಕಳುಕುವೆ
ಪರಸ್ತ್ರೀ ಪರಧನವೆಂಬ ಜೂಜಿಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯ ಕೂಡಲಸಂಗಮದೇವ.

ಈ ವಚನದಲ್ಲಿ ಬಸವಣ್ಣನವರು ನೈತಿಕ ಮೌಲ್ಯಗಳ ಅಗತ್ಯವನ್ನು ಪೌರಾಣಿಕ ಸಂಗತಿಯೊಂದರ ಮೂಲಕ ಅನಾವರಣಗೊಳಿಸಿದ್ದಾರೆ. ರಾವಣನಂತಹ ಧೀರ, ಪರಾಕ್ರಮಿ ರಾಜನು ಪರಸ್ತ್ರೀಯನ್ನು ಮೋಹಿಸಿ ನಾಶಗೊಂಡ ರಾಮಾಯಣದ ಪ್ರಮುಖ ಘಟನೆ ಈ ವಚನದಲ್ಲಿ ಧ್ವನಿ ಪೂರ್ಣವಾಗಿ ಬಳಕೆಯಾಗಿದೆ, ಮಾತ್ರವಲ್ಲ ಶಿಷ್ಟ ಸಂಸ್ಕೃತಿ, ಉಪ ಸಂಸ್ಕೃತಿ ಮೇಲೆ ಹೇರಲಾದ '' ವಿಧಿ, ವಿಧಿ ಬರಹ, ಹಣೆ ಬರಹ ಮೊದಲಾದ ಪರಿಕಲ್ಪನೆಗಳೂ ಎಲ್ಲೋ ಕಾಣದ ಲೋಕದಲ್ಲಿರದೇ ಮರ್ತ್ಯ ಲೋಕದ ಮಾನವನಲ್ಲೇ ಅಂತರ್ಗತವಾದ ಸಂಗತಿಯನ್ನು ತಿಳಿಯಪಡಿಸುತ್ತವೆ''. ರಾವಣ ವಿಧಿ ವಶನಾದದ್ದು ತನ್ನಲ್ಲಿಯ ಪರಸ್ತ್ರೀ ವ್ಯಾಮೋಹದಂತಹ ದುರ್ಗಣದಿಂದ. ಈ ದುರ್ಗಣವು ಅವನಲ್ಲಿಲ್ಲದಿದ್ದ ಪಕ್ಷದಲ್ಲಿ ಅಲ್ಲಿ ವಿಧಿಯ ಮಾತೇ ಇರುವುದಿಲ್ಲ. ಮುಖ್ಯವಾಗಿ ವ್ಯಕ್ತಿಯ ಗುಣ-ನಡತೆಗಳು ನೈತಿಕ ನೆಲೆಗಟ್ಟಿನ ಮೇಲೆ ನಿರ್ಮಾಣಗೊಳ್ಳಬೇಕಾದ ಜರೂರನ್ನು ಒತ್ತಿ ಹೇಳುವ ಆಶಯ ಈ ವಚನದಲ್ಲಿದೆ.

ಈ ವಚನದ ಭಾವ ಲಯಗಳು ಕರಾವಳಿ ಜನಪದ ತ್ರಿಪದಿಯೊಂದರ ಮೇಲೆ ಪ್ರಭಾವ ಬೀರಿದ್ದು, ನಿಜವಾಗಿಯೂ ಅಲ್ಲಿಯ ಜನಪದರು ತಮ್ಮ ಮೂಲ ಆಶಯಗಳಿಗನುಗುಣವಾಗಿಯೇ ಅದನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದು. ಇಲ್ಲಿ ಬಸವಣ್ಣನವರು ದುರ್ಗುಣ, ದುರ್ನಡತೆಗಳಿಗೆ ಅಂಜಿ ನಡೆದರೆ, ಜನಪದರು 'ಅಮ್ಮ'ನವರಿಗೆ ಅಂಜಿ ನಡೆಯುತ್ತಾರೆ. ಇಲ್ಲಿ 'ಅಮ್ಮ' ಪರಿಕಲ್ಪನೆ 'ಕ್ಷುದ್ರ ದೇವತೆ'ಗಳನ್ನು ಕುರಿತದ್ದಾಗಿದೆ. ಈ 'ಅಮ್ಮಗಳು' ಅನೇಕ ರೋಗ ರುಜನಿಗಳನ್ನು, ಸಂಕಷ್ಟಗಳನ್ನು ತಂದೊಡ್ಡುವ ದೇವರುಗಳಾಗಿದ್ದು, ಈ ಅಮ್ಮನವರಿಗೆ ಅಂಜಿ ನಡೆದರೆ ಎಲ್ಲ ಸಂಕಷ್ಟಗಳಿಂದಲೂ ಪಾರಾಗಬಹುದೆಂಬ ನಂಬಿಕೆ ಇಂದಿಗೂ ಜನಪದರಲ್ಲಿದೆ. ವಚನಕಾರರು ಈ 'ಅಮ್ಮಗಳ' ಪರಿಕಲ್ಪನೆಯನ್ನು ತುಸು ಭಿನ್ನ ಪಾತಳಿಯಲ್ಲಿ ವಿಶ್ಲೇಷಿಸುತ್ತಾರೆ. ಉದಾಹರಣೆಗೆ ಬಸವಣ್ಣನವರ ಒಂದು ವಚನ;

'' ಮಾರಿ, ಮಸಣಿ ಎಂಬವು ಬೇರಿಲ್ಲ ಕಾಣಿರೋ
ಮಾರಿ ಎಂಬುದೇನು ?
ಕಂಗಳು ತಪ್ಪಿ ನೋಡಿದರೆ, ಮಾರಿ
ನಾಲಿಗೆ ತಪ್ಪಿ ನುಡಿದರೆ, ಮಾರಿ
ನಮ್ಮ ಕೂಡಲ ಸಂಗಯ್ಯನ ನೆನಹು ಮರೆತರೆ ಮಾರಿ''.

ಇಲ್ಲಿ ಬಸವಣ್ಣನವರು ಮಾರಿ , ಮಸಣಗಳನ್ನು ದುರ್ಗುಣ, ದುರ್ನಡತೆಗಳಿಗೆ ಸಂವಾದಿಯಾಗಿ ಬಳಸಿದರೆ, ಜನಪದರು ರೋಗ, ರುಜಿನ, ಸಂಕಷ್ಟಗಳಿಗೆ ಸಂವಾದಿಯಾಗಿ ಬಳಸಿಕೊಳ್ಳು ತ್ತಾರೆ. ' ಹರಿವ ಹಾವಿಗಂಜೆ.....'' ವಚನದ ಭಾವ ಲಯಗಳನ್ನು ಜನಪದರು ಸ್ವೀಕರಿಸಿದರೂ ಸಹ ಅಲ್ಲಿ ತಮ್ಮ ಮೂಲ ಆಶಯಗಳಿಗೆ ಧಕ್ಕೆಯಾಗದಂತೆ ಎಚ್ಚರವಹಿಸಿದ್ದಾರೆ. ಹೀಗೆ ಶಿಷ್ಟ-ಜನಪದಗಳ ಮಧ್ಯ ಒಂದು ಬಗೆಯ ಕೊಡು-ಕೊಳುವಿಕೆಯ ಕ್ರಿಯೆ, ಪ್ರಕ್ರಿಯೆಗಳು ನಿರಂತರವಾಗಿರುತ್ತವೆ ಮತ್ತು ಈ ಕಾರ್ಯ ದಲ್ಲಿ ಪರಸ್ಪರ ಎರಡೂ ಸಂಸ್ಕೃತಿಗಳು ತಮ್ಮ ಮೂಲ ಆಶಯಗಳ ಬಗ್ಗೆ ಒಂದು ಬಗೆಯ ಎಚ್ಚರಿಕೆಯನ್ನು ಸದಾ ಕಾಯ್ದುಕೊಂಡಿರುತ್ತವೆ. ಈ ಮಾತು ಜನಪದದ ಒಂದು ಪ್ರಕಾರವಾದ 'ಗಾದೆ' ಗಳಿಗೂ ಅನ್ವಯಿಸುತ್ತದೆ.

ಗಾದೆಗಳನ್ನು ಜನಪದ ಸಾಹಿತ್ಯದ 'ಸುಭಾಷಿತ'ಗಳೆಂದು ಕರೆಯಬಹುದು. ಇವು ಜನಪದ ಸಂಸ್ಕೃತಿಯ 'ನೀತಿ ಸಂಹಿತೆ'ಗಳಾಗಿ ಕೆಲಸ ಮಾಡುತ್ತವೆ. ಗಾದೆಗಳು ಜನಪದ ಸಾಹಿತ್ಯದಲ್ಲಿನ ಒಂದು ಬಗೆಯ ವಿಶಿಷ್ಟ ರಚನೆಗಳು. ಇವು ಕೆಲವೇ ಶಬ್ದಗಳನ್ನು ಹೊಂದಿದ್ದರೂ ವಿಶಾಲವಾದ ಅರ್ಥ ವ್ಯಾಪ್ತಿಯನ್ನು ಹೊಂದಿದೆ. ಇವು ಪ್ರವಹಿಸುವ ಕಾಲದೊಂದಿಗೆ ನಿರಂತರ ಚಲನಶೀಲತೆಯನ್ನು ಹೊಂದಿದ್ದು, ಅದೇ ಕಾರಣಕ್ಕೆ ಜೀವಂತಿಕೆಯಿಂದ ಕೂಡಿರುತ್ತವೆ.

ಸಾಮಾನ್ಯವಾಗಿ ಗಾದೆ ಸಾಧಿಸಲು ಕಷ್ಟವಾದ ಉನ್ನತ ನೀತಿ-ತತ್ವಗಳನ್ನು ವ್ಯಕ್ತಪಡಿಸುವುದಿಲ್ಲ; ಬದಲಾಗಿ ಲೋಕದಿಂದ ಪಡೆದುಕೊಂಡ ಅನುಭವಾದ ಒಟ್ಟು ಮೊತ್ತವಾಗಿರುತ್ತದೆ. ಧರ್ಮ ಬೋಧಕರ ಪ್ರವಚನಗಳಾಗಲಿ, ಉಪದೇಶಗಳಾಗಲಿ ಗಾದೆಗಳಾಗಿ ಪರಿವರ್ತಿತವಾಗುವುದಿಲ್ಲ. ಅವು ಆಧ್ಯಾತ್ಮಿಕ ಭೂಮಿಕೆಯನ್ನು ಪ್ರವೇಶಿಸುವುದು ಅಪರೂಪ. ಅವು ನೀತಿಯ ಉಕ್ತಿಗಳಾದರೂ, ಧಾರ್ಮಿಕ ಸಿದ್ಧಾಂತಗಳನ್ನು ಕಾಣಲಾರೆವು. ಆದರೆ ಜನತೆ ತಾನು ಯಾವುದನ್ನು ಸತ್ಯವೆಂದು ಗೌರವಿಸಿದೆಯೋ ಅದಕ್ಕೆ ಸೂಚಿಯಾಗಿದೆ (ಜಾನಪದ ಸಂಕಿರಣ, ಪು. ೮೨). ಹೀಗೆ ಗಾದೆಗಳು ಅತೀ ಕಿಷ್ಟ ವಿಷಯಗಳನ್ನು ಸಹ ಅತ್ಯಂತ ಸರಳವಾಗಿ, ಸುಂದರವಾಗಿ, ಮಾರ್ಮಿಕವಾಗಿ ನಿರೂಪಿಸುತ್ತವೆ. ಉದಾ: ''ಒಂದು ಕೆಲಸದ ಗುಣ ದೋಷಗಳನ್ನು ಆ ಕೆಲಸವನ್ನು ಮಾಡಿದವನು ತಾನೇ ಅನುಭವಿಸುತ್ತಾನೆ''. (ಸುಭಾಷಿತಾವಲಿ). ಇದೊಂದು ಶಿಷ್ಟ ಪರಂಪರೆಯ ಸುಭಾಷಿತ. ಜಾನಪದರು ಇದನ್ನು ತಮ್ಮ ಅನುಭವದ ಮೂಸೆಯಲ್ಲಿ ಅತೀ ಚಿಕ್ಕ ವಾಕ್ಯದಲ್ಲಿ ಎಷ್ಟೊಂದು ಸರಳವಾಗಿ, ಸಮರ್ಥವಾಗಿ ರೂಪಸಿದ್ದಾರೆನ್ನುವುದಕ್ಕೆ ಹಲವು ಗಾದೆಗಳು ಸಿಕ್ಕುತ್ತವೆ. ಉದಾ:

೧. 'ಮಾಡಿದ್ದುಣ್ಣೋ ಮಹಾರಾಯ'
೨. 'ಅಯ್ಯ ಮಾಡಿದ್ದು ಅಯ್ಯನ ಕೈ ಮೇಲೆ'
೩. 'ಮಾಡಿದಟ್ಟಿಗೆ ಮಾಡಿದಟು ; ನೀಡಿದಟ್ಟಿಗೆ ನೀಡಿದಟು'
೪. ' ಮಾಡಿದವ್ರು ಉಣ್ಣತಾರ ಮಣೆಯಂಥ ಕಡಬು'
೫. 'ಉಪ್ಪು ತಿಂದೋವ್ರು ನೀರ್ ಕುಡ್ಯಾಕ ಬೇಕು'

ಹೀಗೆ ಅತೀ ಸಂಕ್ಷಿಪ್ತ ರೂಪದಲ್ಲಿ ತುಂಬ ಸರಳವಾಗಿ, ಮಾರ್ಮಿಕವಾಗಿ ನೀತಿ, ಉಕ್ತಿಗಳನ್ನು , ತತ್ವ-ಸಿದ್ಧಾಂತಗಳನ್ನು ಕಟ್ಟಿಕೊಡುತ್ತವೆ ಗಾದೆಗಳು.

ಗಾದೆಯ ಶೈಲಿಗೆ ತನ್ನದೇ ಆದ ಕೆಲವು ಸರಳ ತಂತ್ರಗಳಿವೆ . ವೈದೃಶ್ಯ . ಅತಿಶಯೋಕ್ತಿ. ಪ್ರಾಸ , ಪುನಾರಾವೃತ್ತಿ . ಯಮಕ, ಅನುಪ್ರಾಸಗಳೇ ಅವು . ಇವು ಕೆಲವು ಕಡೆ ಹೆಚ್ಚಾಗಿ ಮತ್ತೆ ಕೆಲವು ಕಡೆ ಕಡಮೆಯಾಗಿ ಕಾಣಿಸಿಕೊಳ್ಳಬಹುದು . ಗಾದೆಯ ಶೈಲಿಯ ಒಂದು ವಿಲಕ್ಷಣ ರೀತಿ ವೈದೃಶ್ಯದ ಉಪಯೋಗ ಕೆಲವು ವೇಳೆ ಇದು ಸಮಾನಾಂತರ ರಚನೆಯಿಂದ ಪುಷ್ಟಿಗೊಂಡಿರುತ್ತದೆ. ಉದಾ: ''ಯಥಾ ರಾಜ ತಥಾ ಪ್ರಜಾ'' (ಜಾನಪದ ಸಂಕಿರಣ, ಪು. ೮೨). ಜನಪದದಲ್ಲೂ ಇಂತಹ ವೈದೃಶ್ಯ ಗಾದೆಗಳು ಕಾಣಬಹುದು. ಉದಾಹರಣೆಗೆ ''ತಾಯಿಯಂತೆ ಮಗಳು, ನೂಲಿನಂತೆ ಸೀರೆ''.

ಗಾದೆಗಳು ಸಾಮಾನ್ಯವಾಗಿ ಬದುಕಿನ ಎಲ್ಲಾ ಆಯಾಮಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುತ್ತವೆ. ಮತ್ತು ಆಯಾ ಸಂಸ್ಕೃತಿಯ ಜನ ಜೀವನದ ಪ್ರತಿಬಿಂಬಗಳಾಗಿರುತ್ತವೆ. ಜಾನಪದ ಸಮೂಹದಲ್ಲಿ ಒಂದು 'ಹದವರಿತ' ಸಂದರ್ಭದಲ್ಲಿ ರಚನೆಗೊಳ್ಳುವ ಗಾದೆಗಳು ಚಲಿಸುವ ಕಾಲ ಪ್ರವಾಹದೊಂದಿಗೆ ನಿರಂತರ ಚಲನಶೀಲತೆಯನ್ನು ಹೊಂದಿದ್ದರೂ ಅವು ತಮ್ಮ ಮೂಲ ಆಶಯಗಳ ಬಗ್ಗೆ ಒಂದು ಬಗೆಯ ಎಚ್ಚರವನ್ನು ಸದಾ ಕಾಯ್ದುಕೊಂಡಿರುತ್ತವೆ. ಉದಾಹರಣೆಗೆ 'ಹೆಣ್ಣಿಗೆ ಹಾಡು ಕಲಿಸುವುದಿಲ್ಲ, ನಾಯಿಗೆ ಬೊಗಳು ಕಲಿಸುವುದಿಲ್ಲ' ಜನಪದ ಮಹಿಳೆಗೆ ಹಾಡು ಉಸಿರಿನಷ್ಟೇ ಸಹಜವಾದುದು ಎಂಬ ಸಂಗತಿಯನ್ನು ತಿಳಿಯಪಡಿಸಲು ಈ ಗಾದೆ ಹುಟ್ಟಿಕೊಂಡಿರುವಂತಿದೆ. ಆದರೆ ಈ ಸಂಗತಿಯನ್ನು ಬೊಗಳುವ ನಾಯಿಯ ದೃಷ್ಟಾಂತದ ಮೂಲಕ ತಿಳಿಸುತ್ತಿರುವುದು, ಜನಪದ ಸಮಾಜದಲ್ಲಿ ಮಹಿಳೆಯ ಸ್ಥಾನ-ಮಾನ ತಿಳಿಸಬಹುದು ಅಥವಾ ನಾಯಿಯ ನಿಷ್ಠೆ-ಪ್ರಾಮಾಣಿಕತೆಗೂ ಸಂವಾದಿಯಾಗಬಹುದು. ನಾಯಿ, ಆಕಳು, ಕರು, ಎಮ್ಮೆ, ಎತ್ತು, ಆಡು , ಕೋಳಿ, ಕುರಿ ಮೊದಲಾದ ಪ್ರಾಣಿ-ಪಕ್ಷಿ ಗಳು ಜಾನಪದರ ಬದುಕಿನ ಒಂದು ಭಾಗವಾದುದರಿಂದ ಈ ರೀತಿಯ ಹೋಲಿಕೆಗಳಿಗೆ ಪುರುಷರೂ ಬಲಿಯಾಗಬಹುದು.

ಗಾದೆಗಳು ಕಾಲ,ದೇಶಗಳನ್ನೂ ಮೀರಿ ಜನ ಜೀವನದ ಎಲ್ಲ ಮಗ್ಗಲುಗಳನ್ನು ಆವರಿಸಿ ಬೆಳೆದು ಬಂದಿರುವುದು ನಿಜವಾದರೂ ನಾವು ಅಧ್ಯಯನದ ಅನುಕೂಲಕ್ಕಾಗಿ ಅವುಗಳನ್ನು :-

೧) ಕೌಟುಂಬಿಕ      ೨) ಸಾಮಾಜಿಕ

೩) ಆರ್ಥಿಕ      ೪) ವ್ಯವಹಾರಿಕ

೫) ವೈಚಾರಿಕ      ೬) ಪೌರಾಣಿಕ

೭) ನೈತಿಕ ಮುಂತಾಗಿ ವಿಂಗಡಿಸಿಕೊಳ್ಳಬಹುದು.

'ಗಂಡ ಹೆಂಡಿರ ಜಗಳ ಉಂಡು ಮಲಗುವತನಕ', 'ಗಂಡ-ಹೆಂಡಿರ ಜಗಳದಲ್ಲಿ ಕೂಸು ಬಡವಾಯ್ತು', 'ಹುಟ್ತಾ ಅಣ್ಣ-ತಮ್ಮಂದಿರು, ಬೆಳೀತಾ ದಾಯಾದಿಗಳು', ' ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು', 'ಅಣ್ಣ ನಮೋನಾದ್ರೆ ಅತ್ಗೆ ನಮ್ಮೋಳ ?' ಮುಂತಾದ ಗಾದೆಗಳು ಕೌಟುಂಬಿಕ ವರ್ಗಕ್ಕೆ ಸೇರಿದರೆ, ' ಊರು ಉಪಕಾರ ಅರಿಯದು ಹೆಣ ಸಿಂಗಾರ ಅರಿಯದು', 'ಹಳ್ಳಿಯಿಂದ ದಿಲ್ಲಿ, ಆಳಿನಿಂದ ಅರಸ', ' ಉಂಡೋರಿಗೆ ಉಬ್ಬಸ, ಹಸಿದೋರಿಗೆ ಸಂಕಟ', ' ಬಡವನ ಕೋಪ ದವಡೆಗೆ ಮೂಲ' ಮುಂತಾದ ಗಾದೆಗಳು ಸಾಮಾಜಿಕ ವರ್ಗಕ್ಕೆ ಸೇರುತ್ತವೆ. 'ಕಾಸಿದ್ರೆ ಕೈಲಾಸ', 'ದುಡ್ಡೇ ದೊಡ್ಡಪ್ಪ', 'ಹಣ ಅಂದ್ರೆ ಹೆಣಾನೂ ಬಾಯಿ ಬಿಡ್ತಂತೆ', ' ಇಟ್ರೆ ತೊಟ್ರೆ ಪುಟ್ಟಮ್ಮನೂ ಚೆಂದ', 'ಹೊನ್ನಿದ್ದಮ್ಮನ ತನ್ನು ಮುಚ್ಚು' ಮುಂತಾದ ಗಾದೆಗಳು ಆರ್ಥಿಕ ವರ್ಗಕ್ಕೆ ಸೇರಿದರೆ, 'ಗಾಳಿ ಬೀಸಿದಾಗ ತೂರಿಕೋ, ಯಾಪಾರ ಬಂದಾಗ ಮಾರಿಕೋ', 'ಕೊಟ್ಟವನು ಕೋಡಂಗಿ ಇಸಗೊಂಡವನು ಈರಭದ್ರ', ' ಎಣ್ಣೆ ಬಂದಾಗ ಕಣ್ಣು ಮುಚ್ಕೊಂಡ್ರಂತೆ', 'ಕುರಿ ಕೊಬ್ಬಿದರೆ ಕುರುಬನಿಗೇ ಲಾಭ' ಮುಂತಾದ ಗಾದೆಗಳು ವ್ಯವಹಾರಿಕ ವರ್ಗಕ್ಕೆ ಸೇರುತ್ತವೆ. ಇನ್ನು 'ಅಪ್ಪ ಹಾಕಿದ ಆಲದ ಮರ ಅಂತ ನೇಣು ಹಾಕ್ಕೊಳ್ಳೋಕಾಗತ್ತಾ ?' ಎಂಬಂತಹ ಗಾದೆಗಳು ವೈಚಾರಿಕ ವರ್ಗಕ್ಕೆ ಸೇರಿದರೆ, 'ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು', 'ಹೆಣ್ಣಿನಿಂದ ರಾವಣ ಕೆಟ್ಟ, ಮಣ್ಣಿನಿಂದ ಕೌರವ ಕೆಟ್ಟ', 'ರಾಮರಾಜ್ಯ ಆಳಿದರೂ ರಾಗಿ ಬೀಸೋದು ತಪ್ಲಿಲ್ಲ', 'ಬೆಳತನಕ ರಾಮಾಯಣ ಕೇಳಿ ರಾಮ ಸೀತೆಗೇನಾಗ್ಬೇಕು ಅಂದಿದ್ನಂತೆ' ಮುಂತಾದ ಗಾದೆಗಳು ಪೌರಾಣಿಕ ವರ್ಗಕ್ಕೆ ಸೇರಿದರೆ 'ಪ್ರತ್ಯಕ್ಷ ಕಂಡರೂ ಪ್ರಾಮಾಣಿಸಿ ನೋಡು', 'ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು', 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ ?', 'ಅಟ್ಟ ಮೇಲೆ ಒಲೆ ಉರೀತು, ಕೆಟ್ಟ ಮೇಲೆ ಬುದ್ಧಿ ಬಂತು', 'ಜಾಲಿ ಬಿತ್ತಿದರೆ ಕಾಲಿಗೆ ಮೂಲ', 'ಅರಿವೇ ಗುರು, ಆಚಾರವೇ ಶಿಷ್ಯ',' ಕೆಟ್ಟು ನೆಂಟರ ಸೇರ ಬೇಡ ಕೊಟ್ಟು ತಿರುಗಿ ಬೀಳಬೇಡ' ಮುಂತಾದ ಗಾದೆಗಳು ನೈತಿಕ ವರ್ಗಕ್ಕೆ ಸೇರುತ್ತವೆ.

ಹೀಗೆ ಗಾದೆಗಳ ಪ್ರಪಂಚ ತುಂಬಾ ವಿಶಾಲ ಹಾಗೂ ವೈವಿಧ್ಯತೆಯಿಂದ ಕೂಡಿದ್ದು, ಸಹಜವಾಗಿಯೇ ಇವು ಸರ್ವಜ್ಞ ಕವಿಯ ತ್ರಿಪದಿಗಳ ಮೇಲೆ ಪ್ರಭಾವ ಬೀರಿವೆ. ಸರ್ವಜ್ಞನ ಅನೇಕ ವಚನಗಳಲ್ಲಿ ಗಾದೆಗಳು ಬಳಕೆಯಾಗಿದ್ದಲ್ಲದೆ, ಆತನ ಸೃಜನಾತ್ಮಕ ವಾಕ್ಯಗಳೂ ಅನೇಕ ಗಾದೆಗಳಾಗಿ ಪರಿವರ್ತಿತಗೊಂಡಿವೆ. ಸಾಹಿತ್ಯ ಪ್ರಪಂಚದಲ್ಲಿ ಈ ರೀತಿಯ ಕೊಡುಕೊಳ್ಳುವಿಕೆ ಸಹಜವೂ ಆಗಿದೆ.

## ೭.೪.೧. ಸರ್ವಜ್ಞನ ವಚನಗಳಲ್ಲಿ ಗಾದೆಗಳ ಪ್ರಭಾವ :

ಸರ್ವಜ್ಞನ ವಚನಗಳಲ್ಲಿ ಗಾದೆಗಳು ಉಸುರಿನಷ್ಟೇ ಸಹಜವಾಗಿ ಹಾಸುಹೊಕ್ಕಾಗಿವೆ. ಕೆಲವು ಕಡೆ ಈ ಗಾದೆಗಳು ಸಂಕ್ಷಿಪ್ತವಾಗಿದ್ದರೆ, ಇನ್ನೂ ಕೆಲವು ಕಡೆ ಇಡೀ ತ್ರಿಪದಿಯನ್ನು ಆವರಿಸಿಬಿಡುತ್ತವೆ. ಉದಾಹರಣೆಗೆ 'ಅರಿವೇ ಗುರು' ಎಂಬುದೊಂದು ಗಾದೆ,

ಅರಿವಿನಾ ಅರಿವು ತಾ ಧರೆಯೊಳಗೆ ಮೆರೆದಿಹುದು
ಅರಿವಿನಾ ಅರಿವ ಹರಿಹರರು ಬೊಮ್ಮನೂ
ಅರಿಯರೈ ಕಂಡ್ಯಾ ಸರ್ವಜ್ಞ.

ಹರಿಹರ ಬ್ರಹ್ಮಾದಿಗಳಿಗಿಂತ 'ಗುರು' ಅಧಿಕನಾದರೆ ಮುಂದೆ ಸಾಧನೆಯ ಶಿಖರ ತಲುಪಿದಾಗ 'ಅರಿವೇ ಗುರು'ವಾಗುವ ಚಮತ್ಕಾರ ಈ ವಚನದಲ್ಲಿದೆ. 'ಅರಿವಿನಾ ಅರಿವು' ಎಂದರೆ ಅರಿವಿನ-ಜ್ಞಾನದ ಬಗ್ಗೆ ತಿಳುವಳಿಕೆ ಜ್ಞಾನಿಯಾಗುವಿಕೆ ಜಗತ್ತಿನಲ್ಲಿ ದೊಡ್ಡದು. ಅರಿವಿನ ಅರಿವನ್ನು ಹರಿಹರ ಬ್ರಹ್ಮಾದಿಗಳೂ ಅರಿಯರು! ಅದು 'ನರ' ರೂಪದ ಮೂಲಕ, ಗುರುವಿನ ಸಂಸರ್ಗದ ಮೂಲಕ, ಸ್ವಯಂ ಸಾಧನೆ-ಸಿದ್ಧಿಗಳಿಂದ ಸಾಧಿಸಬೇಕಾದ ಕಾರ್ಯ ಎಂದು ಸರ್ವಜ್ಞನ ಅಭಿಮತವಾಗಿದೆ. 'ಮಾತು ಮನಿ ಕೆಡಸ್ತಂತ; ತೂತು ಒಲಿ ಕೆಡಸ್ತಂತ' ಎಂಬುದು ಇನ್ನೊಂದು ಗಾದೆ. ಈ ಗಾದೆ ಸರ್ವಜ್ಞನ ವಚನದಲ್ಲಿ ಬಳಕೆಯಾದದ್ದು ಹೀಗೆ;

ಮಾತಿನಾ ಮಾಲೆಯೂ । ತೂತಾದ ಮಡಿಕೆಯೂ ।
ಹಾತೆಯೂ ಹುಲ್ಲೂ ಸರವೆಯೂ ಇವು ನಾಲ್ಕು
ಏತಕ್ಕೂ ಬೇಡ ಸರ್ವಜ್ಞ.

ಇಲ್ಲಿ ಚತುರೋಕ್ತಿಯಲ್ಲಿ ಈ ಗಾದೆಯನ್ನು ಸರ್ವಜ್ಞ ಬಳಸಿಕೊಂಡಿದ್ದು, ಇದೇ ಗಾದೆಯನ್ನಾಧರಿಸಿದ ಇನ್ನೊಂದು ವಚನ ಹೀಗಿದೆ;

ಮಾತಿನಾ ಬೊಮ್ಮವೂ । ತೂತಿನ ಮಡಿಕೆಯೂ ।
ಪಾತಕನ ನೆರೆಯು ಇವು ಮೂರು ಲೋಕದೊಳ
ಗೇತಕ್ಕೂ ಬೇಡ ಸರ್ವಜ್ಞ.

ಇಲ್ಲಿ 'ಮಿಥ್ಯಾಜ್ಞಾನಿಯ ಸಂಗ ಸಲ್ಲದು' ಎಂಬ ಸಂಗತಿಯನ್ನು ತಿಳಿಸಲು ಈ ಗಾದೆ ಬಳಕೆಗೊಂಡಿದೆ.

ಇದ್ದಿದ್ದು ಬಿಟ್ಟು ಇಲ್ಲದ್ದು ಕೇಳಿದ್ರಂತ;
ಇಲ್ಲದ್ದು ಕೇಳಿ ಗಲ್ಲ ಬಾಯಂಗ ಹೊಡಿಸ್ಕೊಂಡಿದ್ರಂತ;

ಈ ಮೇಲಿನ ಎರಡೂ ಗಾದೆಗಳು ಒಂದೇ ಸಂಗತಿಯನ್ನು ಕುರಿತಾಗಿ ರಚನೆಗೊಂಡಿದ್ದರೂ ಒಂದೊಂದು ಕಾರಣವನ್ನು ಇನ್ನೊಂದು ಪರಿಣಾಮವನ್ನು ತಿಳಿಯಪಡಿಸುತ್ತವೆ. ಈ ಗಾದೆಗಳು ಸರ್ವಜ್ಞನ ವಚನವೊಂದರಲ್ಲಿ ಬಳಕೆಗೊಂಡ ಪರಿಯನ್ನು ನೋಡೋಣ;

ಇದ್ದದದು ಬಿಟ್ಟು ಹೊರ। ಗಿದ್ದುದನು ಬಯಸುತಲೆ
ಇದ್ದು ಉಣದಿಪ್ಪ ಬಾಯೊಳಗೆ ಕತ್ತೆಯಾ
ಲದ್ದಿಯೇ ಬೀಳ್ಗು ಸರ್ವಜ್ಞ.

ಈ ವಚನದಲ್ಲಿ ಮೇಲಿನ ಎರಡೂ ಬಗೆಯ ಗಾದೆಗಳು ಸಮನ್ವಯಗೊಂಡು ಒಂದು ಅರ್ಥ ಪೂರ್ಣತೆಯನ್ನು ತಂದುಕೊಡುತ್ತವೆ. 'ನಾ ಮಾಡಿದ ಕರ್ಮ ಬಲವಾಗಿದ್ದರೆ ಯಾರೇನು ಮಾಡ್ತಾರು?', 'ಪಾಲಿಗೆ ಬಂದದ್ದು ಪಂಚಾಮೃತ', 'ದುಡಿದದ್ದು ಉಂಡ್ರೆ ಪಡೆದದ್ದು ಯಾರು ಉಣ್ಬೇಕು', 'ಹಿಂದ ಮಾಡಿದ ಪಾಪ ಇಂದು ತೀರೀಸ್ಬೇಕು' ಕರ್ಮ ಸಿದ್ಧಾಂತದ ತಿರುಳನ್ನು ತಮ್ಮೊಡಲಲ್ಲಿ ಅಡಗಿಸಿಕೊಂಡು ರೂಪು ತಳೆದ ಇಂತಹ ಗಾದೆಗಳು ಸರ್ವಜ್ಞನ ವಚನಗಳಲ್ಲಿ ಬಳಕೆಯಾದ ಪರಿ. ಆತನ ಸಾಹಿತ್ಯಕ್ಕೆ ಶಿಷ್ಟ ಜಾನಪದ ಆವರ್ತನವನ್ನು ತಂದುಕೊಡುತ್ತದೆ. ಉದಾಹರಣೆಗೆ ;

ಹಿಂದೆ ಮಾಡಿದ ಕರ್ಮ ।ವೆಂದಿಗೂ ಬೆಂಬಿಡದು ।
ಬಂದ ಭೋಗವದು ತಿಂದು ತೀರಲೇ ಬೇಕು ॥
ನೊಂದೆನೆನಬೇಡ ಸರ್ವಜ್ಞ.

ವರ್ಣಾಶ್ರಮ ಪದ್ಧತಿಯ ಮೂಲಕ ಸಮಾಜವನ್ನು ಹಿಡಿತದಲ್ಲಿಟ್ಟುಕೊಳ್ಳಲು ರೂಪು ತಳೆದ 'ಕರ್ಮ ಸಿದ್ಧಾಂತ'ದ ಪ್ರಭಾವದಿಂದ ಜನಪದ ಸಾಹಿತ್ಯವೂ ಮುಕ್ತವಾಗಿಲ್ಲ. ಜನಪದ ಗಾದೆಗಳಿಂದ ಪ್ರಭಾವಿತವಾದ ಸರ್ವಜ್ಞನ ವಚನಗಳಲ್ಲೂ ಈ ಕರ್ಮ ಸಿದ್ಧಾಂತದ ಛಾಯೆ ಕಂಡು ಬರುತ್ತದೆ.




ಈ ಆವರ್ತನದ ಮೂಲಕ ವಿವರಿಸಬಹುದು. 'ಹಣೆ ಬರಹ', 'ವಿಧಿ ಬರಹ', 'ಹಿಂದೆ ಮಾಡಿದ ಕರ್ಮ' ಮುಂತಾದ ನಿಲುವುಗಳು ಯಥಾ ಸ್ಥಿತಿಯನ್ನು ಕಾಯ್ದುಕೊಂಡು ಹೋಗಲು ಸಹಕರಿಸುತ್ತವೆ. ಈ 'ವಿಧಿ ಲೀಲೆ'ಯು ಸರ್ವಜ್ಞನ ವಚನಗಳನ್ನು ಬಿಟ್ಟಿಲ್ಲ!.

'ಮಾತೆಂಬುದು ಜ್ಯೋತಿರ್ಲಿಂಗ'ವೆಂದರು ವಚನಕಾರರು. ಇದನ್ನೇ ನಮ್ಮ ಜನಪದರು ಕಾವ್ಯಮಯವಾಗಿ - 'ಮಾತು ಆಡಿದ್ರ ಹೋತು; ಮುತ್ತು ಒಡದ್ರ ಹೋತು', 'ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲ', ' ಆಡಿದ ಮಾತು ಒಗದ ಕಲ್ಲು ಹಿಂದ್ಕ ಬಂದೀತಾ ?', ' ಊಟ ಬಲ್ಲವನಿಗೆ ರೋಗವಿಲ್ಲ; ಮಾತು ಬಲ್ಲವನಿಗೆ ಜಗಳವಿಲ್ಲ' ಎಂದು ಮುಂತಾಗಿ ಗಾದೆಗಳನ್ನು ಕಟ್ಟಿದ್ದಾರೆ. ಈ ಎಲ್ಲ ಗಾದೆಗಳ ಸಾರವನ್ನು ಹೀರಿಕೊಂಡು ರಚಿತವಾದ ಸರ್ವಜ್ಞನ ವಚನಗಳು ಮಾತಿನ ಮಹತ್ವವನ್ನು ತಿಳಿಸುವ ಪರಿ ರೋಚಕವಾಗಿದೆ.

ಮಾತಿನಿಂ ನಗೆ ನುಡಿಯು । ಮಾತಿನಿಂ ಹಗೆ ಕೊಲೆಯು ।
ಮಾತಿನಿಂ ಸರ್ವ ಸಂಪದವು । ಲೋಕಕ್ಕೆ
ಮಾತೇ ಮಾಣಿಕವು ಸರ್ವಜ್ಞ.

ಹೊತ್ತಿಗೊದಗಿದಾ ಮಾತು । ಸತ್ತವನು ಎದ್ದಂತೆ ।
ಹೊತ್ತಾಗಿ ನುಡಿದಾ ಮಾತು ಕೈ ಜಾರಿದಾ
ಮುತ್ತಿನಂತಿಹುದು ಸರ್ವಜ್ಞ.

ಮಾತು ಮಾಣಿಕದ ಮುತ್ತು । ಮಾತೆ ತಾ ಸದರವು ।
ಮಾತಾಡಿದಂತೆ ನಡೆದಾತ ಜಗವನು ।
ಕೂತಲ್ಲೇ ಆಳ್ವ ಸರ್ವಜ್ಞ.

ಹೀಗೆ ಅನೇಕ ವಚನಗಳ ಮೂಲಕ ಮಾತಿನ ಮಹತ್ವವನ್ನು ಸರ್ವಜ್ಞ ಕವಿ ನಮಗೆ ಕಟ್ಟಿ ಕೊಡುತ್ತಾನೆ. 'ಓದು' ವಿದ್ಯಾರ್ಜನೆಯ, ಜ್ಞಾನಾರ್ಜನೆಯ ಒಂದು ಸಾಧನ. ಇದು ವಿದ್ಯಾರ್ಜನೆಗೆ, ಜ್ಞಾನಾರ್ಜನೆಗೆ ಪೂರಕವಾಗಿರಬೇಕೇ ವಿನಃ ಮಾರಕವಾಗಿರಬಾರದು. ಅಂದರೆ 'ಮಂತ್ರಕ್ಕಿಂತ ಉಗುಳೇ ಜಾಸ್ತಿ' ಎನ್ನುವಂತೆ ವಿದ್ಯೆ-ಜ್ಞಾನಗಳಿಗಿಂತ 'ಓದೇ' ಅಧಿಕವಾಗಬಾರದು. ಇದನ್ನೇ ನಮ್ಮ ಜಾನಪದರು, ' ಓದು ಒಕ್ಕಾಲು ; ಬುದ್ಧಿ ಮುಕ್ಕಾಲು', 'ಓದಿದವ್ನಿಗೆ ಓಣಿ ಸಿಗ್ಲಿಲ್ಲ; ಕೇಳಿದವ್ನಿಗೆ ಕೇರಿ ಸಿಗ್ಲಿಲ್ಲ', 'ಓದಿ ಓದಿ ಕೂಚು ಭಟ್ಟನಾದ', 'ಪುರಾಣ ಕೇಳಾಕ ಬದ್ನಿಕಾಯಿ ತಿನ್ನಾಕ' ಈ ಮುಂತಾದ ಗಾದೆ ಗಳನ್ನು ರಚಿಸಿದ್ದಾರೆ. ' ಓದು ವಿದ್ಯಾರ್ಜನೆಯ ಒಂದು ಅಂಗ ನಿಜ; ಆದರೆ ಅದೇ ಅಂತಿಮವಲ್ಲ. ಓದಿನ ಜೊತೆಗೆ ಬರಹವೂ, ಬರಹದ ಜೊತೆಗೆ ಜ್ಞಾನಾರ್ಜನೆಯೂ, ಜ್ಞಾನಾರ್ಜನೆಯ ಜೊತೆಗೆ ಸನ್ನಡತೆಯೂ, ಸನ್ನಡತೆಯ ಜೊತೆಗೆ ಸದ್ಬುದ್ಧಿಯೂ... ಒಂದಕ್ಕೊಂದು ಪೂರಕವಾಗಿರಬೇಕು'. ಇದರಲ್ಲಿ ಯಾವುದೂ ಇರದೇ ಬರೀ ಓದೇ ಆಗ್ಲಿ ಅದು ಬರೀ 'ಪುಸ್ತಕ ಬದನೇಕಾಯಿ' ಯಾದೀತು! ಎಂಬ ಸಂಗತಿಯನ್ನು ಸರ್ವಜ್ಞ ಕವಿ ತುಂಬಾ ಮಾರ್ಮಿಕವಾಗಿ ವಿವರಿಸುತ್ತಾನೆ.

ಓದಿದಾ ಓದು ತಾ। ಮೇದ ಕಬ್ಬಿನ ಸಿಪ್ಪೆ।
ಓದಿನಾ ಒಡಲನರಿದಿಹರೆ ಸಿಪ್ಪೆ ಕ
ಬ್ಬಾದಂತೆ ಕಾಣೋ ಸರ್ವಜ್ಞ.

ಬೆರವಂಗೆ ಭೋಗವೂ। ಮೊರೆವಂಗೆ ರಾಗವೂ
ಬರೆವಂಗೆ ಓದು ಬರುವಂತೆ ಸಾಧಿಪಗೆ
ಬಾರದಿಹುದುಂಟೆ ಸರ್ವಜ್ಞ.

ಹೀಗೆ ಓದಿನ ಜೊತೆಗೆ ಬರಹದ ಅಗತ್ಯವನ್ನು ಅದರೊಟ್ಟಿಗೆ ಜ್ಞಾನಾರ್ಜನೆ, ಸನ್ನಡತೆ, ಸದ್ಬುದ್ಧಿಯ ಅನಿವಾರ್ಯತೆಯನ್ನೂ ತುಂಬಾ ಸಮರ್ಥವಾಗಿ ಸರ್ವಜ್ಞ ಕವಿ ಕಟ್ಟಿಕೊಡುತ್ತಾನೆ.

'ಅಪ್ಪ ಹಾಕಿದ ಆಲದ ಮರರ ಅಂತಹ ನೇಣು ಹಾಕ್ಕೊಳ್ಳಾಕಾಗುತ್ತಾ ?' ಎಂಬುದೊಂದು ತುಂಬಾ ಜನಪ್ರಿಯವಾಗಿದೆ. ಕುರುಡು ಸಂಪ್ರದಾಯಗಳನ್ನು, ಗೊಡ್ಡು ಕಂದಾಚಾರಗಳನ್ನು ಅವು ಹಿರಿಯರಿಂದ ಬಂದ ಬಳುವಳಿ' ಪ್ರಾಚಿನ ಪರಂಪರೆ ತಂದಿತ್ತ ಭಾಗ, ಎಂದೆಲ್ಲಾ ಎಣಿಸಿ ಕಣ್ಣು ಮುಚ್ಚಿ ಪಾಲಿಸಬೇಕೆನ್ನುವ ಸಂಪ್ರದಾಯ ಶರಣರ ನಿಲುವುಗಳನ್ನು ಖಂಡಿಸಲು ಈ ಗಾದೆ ಹುಟ್ಟಿರುವಂತಿದೆ. ಈ ಗಾದೆಯನ್ನು ಬಳಸಿ, ಸರ್ವಜ್ಞ ಕಟ್ಟಿದ ವಚನವೊಂದು ಹೀಗಿದೆ;

ಅಪ್ಪ ಹಾಕಿದ ಗಿಡವು। ಒಪ್ಪುತ್ತಲಿರುತಿರಲು।
ತಪ್ಪಿಲ್ಲವೆಂದು ಅದನೇರಿ ಮಗು ನುರ್ಲಿ।
ಗೊಪ್ಪಿಕೊಳ್ಳುವನೇ ? ಸರ್ವಜ್ಞ.

ಇಲ್ಲಿ ಸಂಪ್ರದಾಯ ಶರಣತೆಯನ್ನು ಮೀರಿ ವೈಚಾರಿಕ ಸೆಳಕೊಂದು ಹಾದು ಹೋಗಿದೆ. ಉಚಿತಾನುಚಿತಗಳ ಜಿಜ್ಞಾಸೆಯಿದೆ. ತಪ್ಪು-ಸರಿಗಳನ್ನು ವಿವೇಕ ಚಿತ್ತದಿಂದ ಪರಾಮರ್ಶಿಸಿ ನೋಡಬೇಕೆನ್ನುವ ತೀವ್ರ ಆಶಯ ತುಡಿತಗಳಿವೆ.

'ಸತ್ಯ ತಿಳಿದೋವ್ರು ಸತ್ತಂಗ ಇರಬೇಕು' ಇದು ನಮ್ಮ ಜನಪದರಲ್ಲಿ ತುಂಬಾ ಬಳಕೆಯಲ್ಲಿರುವ ಬೈಗುಳ ರೂಪದ ಗಾದೆ. ಜ್ಞಾನಿಯ ಲಕ್ಷಣಗಳನ್ನು ಸಂಸ್ಕೃತ ಸುಭಾಷಿತಗಳಲ್ಲಿ ಹಾಗೂ ಅತೀ ಕ್ಲಿಷ್ಟವಾದ ಉದ್ದುದ್ದ ವಾಕ್ಯಗಳಲ್ಲಿ ವಿವರಿಸಿದರೆ, ಜನಪದರು ಒಂದೇ ವಾಕ್ಯದಲ್ಲಿ ಅದನ್ನೇ ಹೇಳಿದ್ದಾರೆ. ಈ ಗಾದೆಯನ್ನು ಸರ್ವಜ್ಞ ಬಳಸಿಕೊಂಡ ಬಗೆ ಸರಳತೆಯಲ್ಲಿ ಗಹನತೆಯನ್ನು ತುಂಬುವ ಪ್ರಯತ್ನವಾಗಿದೆ.

ಸತ್ತ ಹಾಗಿರು ಎಂಬು। ದೆತ್ತಣದ ಬಯ್ಗಳವು।
ಕತ್ತೆ ಮಾನವರು ಅರಿಯದೆಲೆ ಇದು ಮಹಾ
ತತ್ವದಾ ಮಾತು ಸರ್ವಜ್ಞ.

ಜ್ಞಾನಿಗಳಿಗೆ ನಿರಹಂಕಾರವು, ವಿದ್ಯೆಗೆ ವಿನಯವು ಭೂಷಣವಾಗಿರಲೇ ಬೇಕಾದ ಅನಿವಾರ್ಯತೆಯನ್ನು ಸರ್ವಜ್ಞ ಕವಿ 'ಕತ್ತೆ ಮಾನವರು' ಎಂಬ ಚಾಟಿ ಬೀಸಿ ತಿಳಿಸಲೆತ್ನಿಸಿದ್ದಾನೆ.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಬಡವ-ಬಲ್ಲಿದ ಎಂಬ ವರ್ಗ ತಾರತಮ್ಯ ಅನಾದಿ ಕಾಲದ್ದು. ವರ್ಗ-ವರ್ಣ ಆಧಾರಿತ ಸಾಮಾಜಿಕ ಪದ್ಧತಿಯನ್ನು ವ್ಯವಸ್ಥಿತವಾಗಿ ಜಾರಿಗೊಳಸಿ, ಅದನ್ನೊಂದು ಮೌಲ್ಯ (?!)ವಾಗಿಸಿದ ಉದಾಹರಣೆಗಳು ಪ್ರಪಂಚದ ಎಲ್ಲೆಡೆ ಸಿಕ್ಕುತ್ತವೆ. ಈ ವರ್ಗ ತಾರತಮ್ಯವನ್ನು ಕುರಿತೇ ಜನಪದರು ; 'ಹೊನ್ನಿದ್ದಮ್ಮನ ತನ್ನು ಮುಚ್ಚು, ಬಳಗಿದ್ದಮ್ಮನ ಹಾದ್ರ ಮುಚ್ಚು', 'ಬಡವನ ಹೆಂಡತಿ ಬಸುರಾಗ್ಬಾರ್ದು', 'ಬಡವನ ಕೋಪ ದವಡೆಗೆ ಮೂಲ' ಈ ಮುಂತಾದ ಗಾದೆಗಳನ್ನು ಕಟ್ಟಿದ್ದಾರೆ.

ಬಡವಿಯಾಡಿದ ಮಾತು ನುಡಿ ನುಡಿಗೆ ಬ್ಯಾಸರ
ಒಡವಿ ಇಟ್ಟವ್ವ ಬನಬನದು ಹೇಳಿದರ
ನುಡಿ ನುಡಿಗೆ ಬಾಯಿ ಬಿಡತಾರ.

ಎಂದು ಜನಪದರು ತ್ರಿಪದಿ ಕಟ್ಟಿ ಹಾಡಿದ್ದಾರೆ. ಸರ್ವಜ್ಞನ ಕವಿ ಈ ಎಲ್ಲ ಅಂಶಗಳನ್ನು ಬಳಸಿಕೊಂಡು 'ಪಕ್ಷ ಪಾತದ' ಪರಿಯನ್ನು ಅನಾವರಣಗೊಳಿಸಿದ ಪರಿ ಇಂತಿದೆ ;

ಉಳ್ಳವರು ನುಡಿದಿಹರೆ। ಒಳ್ಳಿತೆಂದೆನ್ನುವರು।
ಇಲ್ಲದಾ ಬಡವ ನುಡಿದಿಹರೆ ಉಣುವಾಗ।
ಹಳ್ಳು ಕಡಿದಂತೆ ಸರ್ವಜ್ಞ.

## ೭.೪.೨. ಪರ್ಯಾಯ ಶಬ್ದ ರೂಪಗಳು :

ಸರ್ವಜ್ಞನ ವಚನಗಳಲ್ಲಿ ಕೆಲವು ಗಾದೆಗಳು ನೇರವಾಗಿ ಪ್ರಸ್ತಾಪಿಸಲ್ಪಟ್ಟಿದ್ದರೆ, ಇನ್ನೂ ಕೆಲವು ಗಾದೆಗಳು 'ಪರ್ಯಾಯ ಶಬ್ದ ರೂಪಗಳಲ್ಲಿ' ಪ್ರಸ್ಥಾಪಿಸಲ್ಪಟ್ಟಿವೆ. ಗಾದೆಗಳ ಅರ್ಥ ಅಥವಾ ತಿರುಳನ್ನು ತನ್ನದೇ ಶಬ್ದ ರೂಪದಲ್ಲಿ ಸರ್ವಜ್ಞ ಕವಿ ಕಟ್ಟಿಕೊಡುತ್ತಾನೆ. ಉದಾಹರಣೆಗೆ;

ಸತ್ಯಕ್ಕೆ ಸರಿಯಿಲ್ಲ । ಮಿಥ್ಯಕ್ಕೆ ನೆಲೆಯಿಲ್ಲ ।
ಹೆತ್ತಮ್ಮನಿಂದ ಹಿತರಿಲ್ಲ ನರರೊಳಗೆ ।
ನಿತ್ಯರೇ ಇಲ್ಲ ಸರ್ವಜ್ಞ.

ಈ ಮೇಲಿನ ವಚನದಲ್ಲಿ ' ಸತ್ಯಕ್ಕೆ ಸಾವಿಲ್ಲ; ಸುಳ್ಳಿಗೆ ಸುಖವಿಲ್ಲ' ಹಾಗೂ 'ತಾಯಿಗಿಂತ ಬಂಧುವಿಲ್ಲ ; ಉಪ್ಪಿಗಿಂತ ರುಚಿಯಿಲ್ಲ' ಎಂಬೆರೆಡು ಗಾದೆಗಳು ಪರ್ಯಾಯ ಶಬ್ದ ರೂಪಗಳಲ್ಲಿ ಬಳಸಲ್ಪಟ್ಟಿವೆ. ಗಾದೆಗಳ ಅರ್ಥ ಒಂದೇ ಆದರೂ ಪರಸ್ಪರ ಶಬ್ದ ರೂಪಗಳು ಬೇರೆ ಬೇರೆಯಾಗಿವೆ.

'ಮಾತು ಮನಾರ, ಕೈ ಸುಮಾರ', ' ಉದ್ದುದ್ದ ಮಾತಾಡಿ, ಉದ್ರಿ ಹೇಳಿದ್ರಂತ', 'ಮಾತ ಕೇಳಿದ್ರ ಗಿಡದಾಗಿನ ಮಂಗ್ಯಾ ಕೈ ಬಿಡ್ಬೇಕು', 'ಬಣಕಾರಗಿತ್ತಿ ನೋಡು; ಹೇಸಿ ಮುಂಡಿ ಕೈ ನೋಡು' ಎಂಬ ಗಾದೆಗಳು ಮಾತಿಗೂ, ಕೃತಿಗೂ ನಡುವೆ ಇರುವ ಅಜಗಜಾಂತರ ವ್ಯತ್ಯಾಸವನ್ನು ತಿಳಿಯಪಡಿಸುತ್ತವೆ. ತನ್ನ ಬಗ್ಗೆ ಬಡಾಯಿ ಕೊಚ್ಚಿಕೊಳ್ಳುವ ವ್ಯಕ್ತಿ ಆಂತರಿಕವಾಗಿ ನಿಜಕ್ಕೂ ಅಸಮರ್ಥ. ಈ ಅಸಮರ್ಥತೆಯನ್ನು ಮುಚ್ಚಿಡಲೋ ಅಥವಾ ಇನ್ನಾವುದೋ ವಿಚಿತ್ರವಾದ ಖಯಾಲಿಗೋ ತನ್ನ ಬಗ್ಗೆ ದೊಡ್ಡ ದೊಡ್ಡ ಮಾತುಗಳನ್ನಾಡುವುದು, ದೊಡ್ಡಸ್ತಿಕೆ ತೋರಿಸಿಕೊಳ್ಳುವುದು ಸಮಾಜದ ಹಲವು ವ್ಯಕ್ತಿಗಳ ವಿಚಿತ್ರ ನಡುವಳಿಕೆಯ ಈ ಗಾದೆಗಳನ್ನು ಪರ್ಯಾಯ ಶಬ್ಧ ರೂಪಗಳಲ್ಲಿ ಸರ್ವಜ್ಞನ ಕವಿ ಬಳಸಿಕೊಂಡ ಬಗೆಯಂತೂ ರೋಚಕವಾಗಿದೆ.

ಉದ್ದುರುಟು ಮಾತಾಡಿ । ಇದ್ದುದನು ಹೋಗಾಡಿ ।
ಉದ್ದನಾ ಮರದ ತುದಿಗೇರಿ ಕೈ ಜಾರಿ ।
ಬಿದ್ದು ಸತ್ತಂತೆ ಸರ್ವಜ್ಞ.

ಇಲ್ಲಿ ನಡೆ-ನುಡಿಗಳ ನಡುವಿನ ಅಂತರ ವಾಸ್ತವತೆಯನ್ನು ಮರೆಮಾಚಿ, ಅವಾಸ್ತವತೆಯ ಭ್ರಮಾ ಲೋಕಕ್ಕೆ ಕರೆದೊಯ್ದು ಅವನತಿಯ ಪ್ರಪಾತಕ್ಕೆ ತಳ್ಳುವ ಕಹಿ ಸತ್ಯವನ್ನು ಅನಾವರಣಗೊಳಿಸಿದ್ದಾನೆ ಸರ್ವಜ್ಞ ಕವಿ. ಈ ವಚನ ಗಾದೆಯೊಂದರ ಹಲವು ಆಯಾಮಗಳನ್ನು ಪರ್ಯಾಯ ಶಬ್ದ ರೂಪಗಳಲ್ಲಿ ಹಿಡಿದಿಟ್ಟು ಸುಂದರ ಉಪಮೆಯೊಂದಿಗೆ ಅಗಾಧ ಅರ್ಥ ವ್ಯಾಪ್ತಿಯನ್ನು

ಕಟ್ಟಿಕೊಡುತ್ತಾ ಶಬ್ದ ಚಿತ್ರಗಳನ್ನು ಕಡೆಯುವಲ್ಲಿ ಯಶಸ್ವಿಯಾಗಿದೆ. 'ಬೇಕಾದ್ದು ಬೆಳತನಕ', 'ಬೇಕಾದ್ದು ಬೆಲ್ಲಕ್ಕಿಂತ ಸಿಹಿ', 'ಹೆತ್ತವ್ರಿಗೆ ಹೆಗ್ಣ ಮುದ್ದು, ಕಟ್ಕೊಂಡೋವ್ರಿಗೆ ಕೊಡಗ ಮುದ್ದು'. ಮುಂತಾದ ಗಾದೆಗಳ ತಿರುಳು ಪರ್ಯಾಯ ಶಬ್ದ ರೂಪಗಳೊಂದಿಗೆ ವ್ಯಕ್ತವಾದ ಇನ್ನೊಂದು ಬಗೆ ಹೀಗಿದೆ;

ಕೊಂಕು ಗುರುಳಿನ ರಂಭೆ । ಕಂಕಣವು ಕಟಿ ಸೂತ್ರ ।
ಪಂಕೇಜ ಗಂಧಿಯೆನಬೇಡ । ತಾನೊಲಿದ
ಮಂಕೆ ಮಾಣಿಕವು ಸರ್ವಜ್ಞ.

'ಕಬ್ಬು ಡೊಂಕಾದರೆ ಸಿಹಿ ಡೊಂಕೆ ?' ಎಂಬುದೊಂದು ಗಾದೆ. ಮಾನವನ ಹೃದಯ ಸಂಪನ್ನತೆಯ ಜೊತೆ ಜೊತೆಗೆ ಆಂತರಿಕ ಸೌಂದರ್ಯದ ಮಹತ್ವವನ್ನು ತಿಳಿಯಪಡಿಸುತ್ತದೆ. ವ್ಯಕ್ತಿಗಳ ಬಾಹ್ಯ ಲಕ್ಷಣಗಳ ಆಧಾರದ ಮೇಲೆ ಸೌಂದರ್ಯದ ವ್ಯಾಖ್ಯೆಯನ್ನು ಬರೆಯಲಾಗದು. ವ್ಯಕ್ತಿಯ ನಿಜವಾದ ಸೌಂದರ್ಯ ಆತನ ಅಂತರಂಗದ 'ಅರಳುವಿಕೆ'ಯಲ್ಲಿ ಅಡಕವಾಗಿದೆ. 'ಸತ್ಯಂ ಶಿವಂ ಸುಂದರಂ', ' ಏಕೋ ರಸಃ ಕರುಣ ಏವ'' (ಭವ ಭೂತಿ) ಎಂಬ ಸೌಂದರ್ಯ ಮೀಮಾಂಸೆಗೆ ಸಂಬಂಧಪಟ್ಟ ನಿಲುವುಗಳು ಇದನ್ನೆ ತಿಳಿಸುತ್ತವೆ.

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗೂ ಕಣ್ಣಾಗಿ ಒಳಗಿಹುದು
ರೂಪ-ಲಾವಣ್ಯಕೆ ಅಳಿಯಲು ಬಾರದು
ಅವುಗಳೆ ಇದರೊಂದು ಕಣವಿಹವು ( ಸಖೀಗೀತ).

ಎಂದು ಅಂಬಿಕಾತನಯದತ್ತರು ಸೌಂದರ್ಯದ ಬಗ್ಗೆ ಮಾರ್ಮಿಕವಾಗಿ ನುಡಿದಿದ್ದಾರೆ. ಹೀಗೆ ಈ ಒಂದು ಚಿಕ್ಕ ಗಾದೆಯಲ್ಲಿ ಸೌಂದರ್ಯ ಮೀಮಾಂಸೆಯ ಅಗಾಧವಾದ ಅರ್ಥ ವ್ಯಾಪ್ತಿಯೇ ಅಡಕವಾಗಿದೆ. ಈ ಗಾದೆಯನ್ನು ಆಧರಿಸಿ, ಪರ್ಯಾಯ ಶಬ್ದ ರೂಪಗಳೊಂದಿಗೆ ಸರ್ವಜ್ಞ ಕವಿ ತುಂಬಾ ಸುಂದರವಾಗಿ ಸೌಂದರ್ಯದ ಬಗ್ಗೆ ವ್ಯಾಖ್ಯೆಯನ್ನು ಕಟ್ಟಿಕೊಡುತ್ತಾನೆ.

ಹಣ್ಣು ಹಂಪಲುಗಳಲಿ ಡೊಂಕು ಬಾಳೆ
ಹಣ್ಣು ಡೊಂಕುಂಟು ಒಳಗೆ ರುಚಿಯುಂಟು ।
ಸಜ್ಜನರ ಡೊಂಕು ಲೇಸೆಂದ ಸರ್ವಜ್ಞ.

ಬಾಳೆ ಹಣ್ಣಿನ ಬಾಹ್ಯ ರೂಪ ಡೊಂಕಾದರೂ ಅದರ ಒಳಗಿನ ತಿರುಳು ರುಚಿ ಇರುವಂತೆ ಸಜ್ಜನರು ಆಂತರಿಕ ಸೌಂದರ್ಯದಿಂದ ಕೂಡಿದವರಾಗಿದ್ದು, ಅವರ ಡೊಂಕು-ಅಂದರೆ ಬಾಹ್ಯ ವೈಕಲ್ಯಗಳು ಅವರ ಆಂತರಿಕ ಸೌಂದರ್ಯಕ್ಕೆ ಯಾವುದೇ ಧಕ್ಕೆ ತರಲಾರವು ಎಂದು ಸರ್ವಜ್ಞಕವಿಯ ಅಭಿಮತವಾಗಿದೆ.

'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೇ ಪಂಚಾಮೃತಕ್ಕೆ ಸಲ್ಲುವುದೇ?'
'ಬೇವು ಬಿತ್ತಿ ಮಾವು ಬೆಳೆಯಲಾದೀತೆ?'
'ಹಾಲು ಕುಡಿದ ಮಕ್ಕಳೇ ದಕ್ಕರು, ವಿಷ ಕುಡಿದ ಮಕ್ಕಳು ಧಕ್ಕಿಯಾರೇ?'

ಮುಂತಾದ ಗಾದೆಗಳು ಪಾಪಕಾರ್ಯ ಹಾಗೂ ಅದರಿಂದ ಗಳಿಸಿದ ಧನ ಕನಕಗಳ ಅವಸ್ಥೆಯ ಬಗೆಯನ್ನು ತಿಳಿಸುತ್ತವೆ. ನ್ಯಾಯ,ನೀತಿಗೆ ಬದ್ಧರಾಗಿ ಗಳಿಸಿದ ಸಂಪತ್ತು ವಿನಿಯೋಗಿಸಲು ಯೋಗ್ಯವಾದುದು. ಅಂತಹ ವಿನಿಯೋಗದಲ್ಲಿ ಆತ್ಮತೃಪ್ತಿಯಿದೆ. ವ್ಯಕ್ತಿ-ಸಮಾಜದ (ವ್ಯಷ್ಟಿ-ಸಮಷ್ಟಿ) ಉನ್ನತಿಯಿದೆ. ಆದರೆ ಅನ್ಯಾಯ, ಅನೀತಿಯಿಂದ ಗಳಿಸಿದ ಸಂಪತ್ತಿಗೆ ಈ ಬಗೆಯ ಒಂದು 'ವಿನಿ ಯೋಗ್ಯತೆ' ಇರುವುದಿಲ್ಲ. ಆ ಸಂಪತ್ತು ಅಕ್ರಮ ಮಾರ್ಗದಿಂದ ಸಂಪತ್ತಾದ್ದರಿಂದ ಅದು ಕಲ್ಲಾಬಿಲ್ಲಿ ಯಾಗುವುದೇ ಹೆಚ್ಚು. ಇದನ್ನು ಕಂಡೇ 'ಕಳ್ಳರ ಬಾಳೇ ಕಲ್ಲಾ ಬಿಲ್ಲಿ ; ಕಳ್ಳನ ಮನಸ್ಸು ಹುಳ್ಳುಳ್ಳ...' ಮುಂತಾದ ಗಾದೆಗಳು ಹುಟ್ಟಿಕೊಂಡಿವೆ. ಈ ಎಲ್ಲಾ ಗಾದೆಗಳ ಅಂಶವನ್ನು ಬಳಸಿಕೊಂಡು ಪರ್ಯಾಯ ಶಬ್ದ ರೂಪಗಳಲ್ಲಿ ಸರ್ವಜ್ಞ ಕವಿ ಕಟ್ಟಿ ಕೊಡುವ ವಚನವೊಂದು ಹೀಗಿದೆ;

ಬೇವು ಫಲವಾಗದು ಸೇವಿಸಲು ಯೋಗ್ಯವೇ?
ಗಾವಿಲನ ಧನವು ಘನವಾಗಿ ಬಯ್ಚಿಟ್ಟ ।
ಠಾವಿಲೇ ಪೋಕು ಸರ್ವಜ್ಞ.

ಇಲ್ಲಿ ಪಾಪಿಯ ಧನವನ್ನು ಬೇವಿನ ಫಲಕ್ಕೆ ಹೋಲಿಸಿ ಅದು ನಿರುಪಯುಕ್ತ, ಗಳಿಸಿದ ಮಾರ್ಗದಲ್ಲೇ ಅದು ಹೊರಟು ಹೋಗುವುದು ಎಂದು ಸರ್ವಜ್ಞ ಕವಿ ತಿಳಿಸುತ್ತಾನೆ. ಸ್ಥಿರ ಹಾಗೂ ಏಕಾಗ್ರ ಮನಸ್ಥಿತಿ ಸುಲಭ ಸಾಧ್ಯವಲ್ಲ. ಮನಸ್ಸಿನ ಸ್ಥಿತಿ ಸದಾ ಚಂಚಲ. ಅದನ್ನು ಪಳಗಿಸಿ ಹಿಡಿತದಲ್ಲಿಟ್ಟುಕೊಳ್ಳುವ ಕ್ರಿಯೆ ಮುತ್ತಾಗುವ ಪರಿಯಂತೆ ಸುಧೀರ್ಘ. ಇದು ಸತತ ಸಾಧನೆ-ಸಿದ್ಧಿಗಳ ಮೂಲಕ ಆಗಬೇಕಾದ ಕಾರ್ಯ. ಈ ಕಾರ್ಯ ಸಾಧಕರಿಂದ ಮಾತ್ರ ಸಾಧ್ಯ. ಅಂತಹ ಸಾಧಕರು ತಮ್ಮ ಮನಸ್ಸನ್ನು ಸದಾ ಹಿಡಿತದಲ್ಲಿಟ್ಟುಕೊಂಡಿರಬೇಕು. ಇಲ್ಲದೇ ಹೋದರೆ ಅಂತವರು ಚಂಚಲ ಚಿತ್ತದ 'ವೇಷಧಾರಿ'ಗಳೆನ್ನಿಸಿ ಕೊಂಡಾರೆಯೇ ಹೊರತು ನಿಜವಾದ ಯೋಗಿಗಳಾಗಲು ಸಾಧ್ಯವಿಲ್ಲ. ಚಂಚಲ ಚಿತ್ತದ ವ್ಯಕ್ತಿಗಳನ್ನು ಕುರಿತಾಗಿ ಜನಪದರು ತುಂಬಾ ಸುಂದರವಾಗಿ ಗಾದೆಗಳನ್ನು ಕಟ್ಟಿದ್ದಾರೆ.

'ಕುದಿಯೋದ್ರೊಳಗ ನಾಲ್ಕ ಸರ್ತಿ ಹಳಸ್ತಾರ!'
'ಚಿತ್ತಿ ಮಳಿ; ಚಿತಗಡ್ಕ ಮನಸ್ಸು '

ಚಿತ್ತಿ ಮಳೆ ಚಂಚಲತೆಗೆ ಹೆಸರಾದ ಮಳೆ. ಚಿತ್ತ ಬಂದರೆ ಬಂತು, ಇಲ್ಲದಿದ್ದರೆ ಇಲ್ಲ. 'ಚಿತ್ತಿ ಮಳಿ ಹಾಂಗ ಆಕಿ ಮನಸ್ಸು ಚಿತ್ತ ಬಂದತ್ತ ಹೊಳ್ಳತೈತಿ' ಎಂದು ಚಂಚಲ ಚಿತ್ತದ ಯುವತಿಯರನ್ನು ಕುರಿತು ಹೇಳುವುದುಂಟು. ಸ್ವಾತಿ ಮಳೆ ಹಾಗಲ್ಲ. ಅದು ಸ್ಥಿರತೆಗೆ ಹೆಸರಾದ ಮಳೆ. ಅದು ಒಮ್ಮೆ ಸುರಿಯತೊಡಗಿದರೆ ' ಧೊsss' ಎಂದು ಸುರಿದದ್ದೇ ಸುರಿದದ್ದು , ಇದನ್ನು ಕಂಡೇ ಜನಪದರು 'ಸ್ವಾತಿ ಮಳಿ ಹೇತೇನಂದ್ರ ಬಿಡಂಗಿಲ್ಲ ' ಎಂಬ ಗಾದೆಯನ್ನು ಕಟ್ಟಿದ್ದಾರೆ. ಈ ಸ್ವಾತಿ ಮಳೆಯ ಏಕಾಗ್ರತೆಯಲ್ಲಿಯೇ ಮುತ್ತು ರಚನೆಗೊಳ್ಳುವ ಪರಿ ಅಡಗಿದೆ. ಚಿಪ್ಪಿನಲ್ಲಿ ಮುತ್ತು ರಚನೆಗೊಳ್ಳಲು ಸ್ವಾತಿ ಮಳೆಯ ಏಕಾಗ್ರತೆಯಿಲ್ಲದ ಅಸ್ಥಿರ ಮನಸ್ಸಿನ ಸಾಧಕನಿಗೆ ಸಾಧನೆ-ಸಿದ್ಧಿಗಳು ಲಭಿಸುವುದಿಲ್ಲ. ಇದನ್ನೇ ಸರ್ವಜ್ಞ ಕವಿ:-

'ಚಿತ್ತಿಯಾ ಮಳೆ ಹನಿದು ಮುತ್ತಾಗಬಲ್ಲುದೇ ?
ಚಿತ್ತವಿಲ್ಲದೆಲೆ ಬೋಳಾದಡಾ ಯೋಗ ।
ಕತ್ತೆಯಿಂದತ್ತತ್ತ ಸರ್ವಜ್ಞ.

ಎಂದು ಹೇಳುತ್ತಾನೆ. 'ಚಿತ್ತ ಸ್ಥಿರವಿಲ್ಲದ ಸಾಧಕನ ತಪ-ಸಿದ್ಧಿಗಳು ವ್ಯರ್ಥ' ಎಂದು ಈ ವಚನದ ತಾತ್ಪರ್ಯವಾಗಿದೆ.

' ಪ್ರೀತಿಯಿಲ್ಲದ ಜೀವನ ಮರಣಕ್ಕೆ ಸಮಾನ' ಎಂಬುದೊಂದು ಗಾದೆ. ತಾಯಿ-ಮಗುವಿನ ನಡುವಿನ 'ವಾತ್ಸಲ್ಯ', ಸ್ನೇಹಿತರ ನಡುವಿನ ' ಆತ್ಮೀಯತೆ', ಗಂಡ-ಹೆಂಡತಿ, ಪ್ರೇಯಸಿ-ಪ್ರಿಯಕರ ನಡುವಿನ 'ಪ್ರೇಮ', 'ಭಾವನೆ' ಈ ಮೊದಲಾದವುಗಳು ಪ್ರೀತಿಯ ನಾನಾ ಮುಖಗಳು. ಮೂಲತಃ ಪ್ರೀತಿ ಎನ್ನುವುದು ಮನಸ್ಸಿನ ಒಂದು ಭಾವನೆ, ಅನುಭೂತಿ. ಈ ಅನುಭೂತಿ ಹೃದಯದಾಳದಿಂದ ಸಹಜವಾಗಿ ಹೊರಹೊಮ್ಮಬೇಕು. ಪತಿ-ಪತ್ನಿಯರಲ್ಲಿ ಸಹಬಾಳ್ವೆ ಸಾಧ್ಯವಾಗಬೇಕಾದರೆ ಪರಸ್ಪರರಲ್ಲಿ ಪ್ರೀತಿ-ವಿನಯ, ಆತ್ಮೀಯತೆ ಬೇಕು. ಈ ಪ್ರೀತಿಯ ಬದುಕಿಗೆ ಪತಿ-ಪತ್ನಿಯರಲ್ಲಿ ಗಂಡ-ಹೆಂಡತಿ ಭಾವನೆಗಿಂತ ಹೆಚ್ಚಾಗಿ 'ಸಖ-ಸಖಿ' ಭಾವ ಅರಳಬೇಕು. ಈ ಪ್ರೀತಿ ಒಮ್ಮುಖವಾಗಬಾರದು. ಬದಲಾಗಿ ಅದು ಇಮ್ಮುಖವಾಗಬೇಕು. ಪರಸ್ಪರ ಇಬ್ಬರಲ್ಲೂ ಪ್ರೀತಿಯ ಭಾವನೆ ಬೇಕು. ಇದನ್ನೇ ಸರ್ವಜ್ಞನ ಕವಿ ;

ಮನ ಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು
ಮನ ಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ.

ಇಲ್ಲಿ 'ಸರಸವೇ ಜನನ , ವಿರಸವೇ ಮರಣ, ಸಮರಸವೇ ಜೀವನ' ಎಂಬ ಕವಿ ವಾಣಿ ಮೊಳಗಿದೆ. ಪತ್ನಿಯನ್ನು ಪ್ರೀತಿ-ವಿನಯಗಳಿಂದ ಆಧರಿಸಿ ಹೃದಯದಾಳದಿಂದ ಪ್ರೀತಿಸಿ,ಮನ ಮುಟ್ಟಿ ಬಾಳ್ವೆ ಮಾಡಿದರೆ ಅಂತಹ ಬಾಳ್ವೆ 'ಅಮೃತದ ಕೆನೆಯ ಸವಿದಂತೆ' ಎಂದು ಸ್ವಾರಸ್ಯಕರವಾಗಿ ಸರ್ವಜ್ಞ ಕವಿ ವಿವರಿಸಿದ್ದಾನೆ. ಸರ್ವಜ್ಞನ ಕೆಲವು ವಚನಗಳಲ್ಲಿ ಅಡಗಿರುವ ಗಾದೆಗಳು ಜಾನಪದರ ಆಡುನುಡಿಯ ಗಾದೆಗಳಿಗೆ ಸಾಮಿಪ್ಯತೆಯನ್ನು ಪಡೆದಿವೆ. ಉದಾಹರಣೆಗೆ;

## ೭.೪.೩. ವ್ಯತ್ಯಾಸಗಳು :

| **ಸರ್ವಜ್ಞನ ಗಾದೆಗಳು** | **ಜಾನಪದ ಗಾದೆಗಳು** |
|---|---|
| **ಸಾಮಾಜಿಕ :** | |
| ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಲ್ಲುದೇ ?<br>ಹೆಣ್ಣಿದ್ದ ಮನೆಗೆ ಎಡತಾಕಿ ಶಿವಯೋಗಿ<br>ಮಣ್ಣು ಮಸಿಯಾದ ಸರ್ವಜ್ಞ. | ಬೆಂಕಿ ಮುಂದ ಬೆಣ್ಣೆ ಇಟ್ರ<br>ಕರಗದಂಗ ಇದ್ದೀತಾ ?. |
| ಕೇಡು ಬಹ ಕಾಲಕ್ಕೆ ಕೂಡುವವೇ ಬುದ್ಧಿಗಳು<br>ಕೊಡಗನು ಲಂಕೆ ಸುಡುವಾಗ ರಾವಣನು<br>ಆಡ ಕಾದಿಹನೋ ಸರ್ವಜ್ಞ. | ವಿನಾಶ ಕಾಲಕ್ಕೆ ವಿಪರೀತ ಬುದ್ಧಿ |
| ಬಲ ಹೋದ ಕಾಲಕ್ಕೆ ನೆಲವೆದ್ದು ಬಡಿಯುವುದು<br>ಕುಲ,ಛಲವು,ಕಲಹ ಸಿರಿಯು , ಸಂಗ್ರಾಮಗಳು<br>ಬಲವಿರುವತನಕ ಸರ್ವಜ್ಞ. | ಬಲವಿಲ್ಲಾಗ ನೆಲವೆದ್ದು ಬಡೀತಂತ |
| ಆನೊಂದು ಮಾಡುವೆನು ಆನೊಂದು ಹೂಡುವೆನು<br>ಆನೊಂದು ಮಾಡಲಾನಂದವೆನಲು ಶಿವ<br>ತಾನೊಂದು ಮಾಳ್ಪ ಸರ್ವಜ್ಞ. | ತಾನೊಂದು ಬಗೆದರೆ, ದೈವವೊಂದು ಬಗೆಯಿತು |
| ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ<br>ಬೋರ್ಕಲ್ಲ ಮೇಲೆ ಮಳೆಗೆರದರಾ ಕಲ್ಲು<br>ನೀರ್ಕೊಳ್ಳಲಹುದೇ ? ಸರ್ವಜ್ಞ. | ಬೋರ್ಗಲ್ಲ ಮೇಲೆ ನೀರೆರೆದರೆ ಅದು ಹೀರ ಬಹುದೇ? |

| | |
|---|---|
| ಬಿತ್ತದಾ ಹೊಲ ಹೊಲ್ಲ, ಮೆತ್ತದಾ ಮನೆ ಹೊಲ್ಲ<br>ಚಿತ್ತ ಬಂದತ್ತ ತಿರುಗುವಾ ಮಗ ಹೊಲ್ಲ<br>ಬತ್ತಲಿರ ಹೊಲ್ಲ ಸರ್ವಜ್ಞ. | ಮಾಡಿದ್ರ ಮನಿ, ಹೂಡಿದ್ರ ಹೊಲ |
| ಕಂಡದ್ದು ಹೇಳಿದರೆ ಕಂಡವಾಗುವರು ಭೂ<br>ಮಂಡಲದೊಳಗೆ ಖಂಡಿತವನಾಡುವರ<br>ಕಂಡಿಹುದೇ ಕಷ್ಟ ಸರ್ವಜ್ಞ. | ಕಂಡದ್ದನ್ನಾಡಿದರೆ ಕೆಂಡದಂಥ ಕೋಪ |
| ಅತಿಯಾಸೆ ಮಾಡುವನು ಗತಿಗೇಡಿಯಾಗುವನು<br>ಅತಿಯಾಸೆಯಿಂದ ಮತಿ ಕೆಡಗು ರತಿಯಿಂದ<br>ಸತಿಸುತರು ಕೆಡಗು ಸರ್ವಜ್ಞ. | ಅತಿಯಾಸೆ ಗತಿಗೆಡಿಸಿತು. |
| ಎಂಟು ಹಣವುಳ್ಳನಕ ಭಂಟನಂತಿಕ್ಕು<br>ಎಂಟು ಹಣಹೋದ ಮರುದಿನವೇ ಹುಳತಿಂದ<br>ದಂಟಿನಂತಿಕ್ಕು ಸರ್ವಜ್ಞ. | ಹಣವಿಲ್ಲದವನು ಹೆಣಕ್ಕಿಂತಲೂ ಕಡೆ. |
| ಅಡಿಕೆ ಹಾಕದಾ ಬಾಯಿ ಕಡುಗವಿಕ್ಕದಾ ಕಿವಿಯು<br>ಒಡಕಿನಾ ಮನೆಯು ನಿಲುಕದಾ ಫಲಕೆ ನರಿ<br>ಮಿಡುಕಿ ಸತ್ತಂತೆ ಸರ್ವಜ್ಞ. | ಕೈಗೆಟುಕದಾ ದ್ರಾಕ್ಷಿ ಕಂಡು ನರಿ ಹುಳಿಯಂದಂತೆ. |
| ತಿರಿದುಂಬುತೊಬ್ಬರನು ಕರೆದುಂಬದತಿಹಿತವು<br>ಕರೆಯದೊಬ್ಬರನು- ಉಣ್ಣುತಿಪ್ಪನೂಟ ತಾ<br>ನರಕದಾ ಊಟ ಸರ್ವಜ್ಞ. | ತಿರ್ಕೊಂಡು ಉಂಡ್ರೂ ಕರ್ಕೊಂಡು ಉಣಬೇಕು |
| ಕತ್ತಿಲಾದ ಗಾಯ । ಮತ್ತಿರದೆ ಮಾಯುವುದು<br>ಸುತ್ತಲಾಡುತಿಹ ಜಿಹ್ವೆಯಾ ಗಾಯ ತಾ<br>ಸತ್ತು ಮಾಯುವುದೇ ? ಸರ್ವಜ್ಞ. | ಕತ್ತಿಯ ಗಾಯ ಮಾಯಬಹುದು;<br>ಮಾತಿನ ಗಾಯ ಮಾಯದು. |
| ಹೆಂಡಕ್ಕೆ ಹೊಲೆಯ ತಾ ಕಂಡಕ್ಕೆ ಕಟುಗ ತಾ<br>ದಂಡಕ್ಕೆ ಕೃಷಿಕ ಹಾರುವನು ತಂದು ತಾ<br>ಪಿಂಡಕ್ಕೆ ಇಡುವ ಸರ್ವಜ್ಞ. | ಬ್ರಾಹ್ಮಣ ಗಳಿಸಿದ್ದು ಪಿಂಡಕ್ಕೆ,<br>ಒಕ್ಕಲಿಗ ಗಳಿಸಿದ್ದು ದಂಡಕ್ಕೆ,<br>ತುರುಕ ಗಳಿಸಿದ್ದು ಖಂಡಕ್ಕೆ,<br>ಹೊಲೆಯ ಗಳಿಸಿದ್ದು ಹೆಂಡಕ್ಕೆ. |

ಹೆಂಡಕ್ಕೆ ಹೊಲೆಯ ತಾ ಕಂಡಕ್ಕೆ ಕಟುಗ ತಾ
ದಂಡಕ್ಕೆ ಕೃಷಿಕ ಹಾರುವನು ತಂದು ತಾ
ಪಿಂಡಕ್ಕೆ ಇಡುವ ಸರ್ವಜ್ಞ.

ಬ್ರಾಹ್ಮಣ ಗಳಿಸಿದ್ದು ಪಿಂಡಕ್ಕೆ,
ಒಕ್ಕಲಿಗ ಗಳಿಸಿದ್ದು ದಂಡಕ್ಕೆ,
ತುರುಕ ಗಳಿಸಿದ್ದು ಖಂಡಕ್ಕೆ,
ಹೊಲೆ ಗಳಿಸಿದ್ದು ಹೆಂಡಕ್ಕೆ.

ಮೂರೆಳೆಯನುಟ್ಟಾತ ಹಾರುವಡೆ ಸ್ವರ್ಗಕ್ಕೆ
ನೂರೆಂಟು ಎಳೆಯ ಕವುದಿಯ ಹೊದ್ದಾತ
ಹಾರನೇಕಯ್ಯ ಸರ್ವಜ್ಞ.

ಮೂರು ನಾಮದವ ಸ್ವರ್ಗಕ್ಕೆ ಹೋದರೆ,
ಮೂವತ್ತು ನಾಮದವ ಎಲ್ಲಿಗೆ ಹೋಕ್ತಾನೆ ?

ಜಾತಿ ಹೀನರ ಮನೆಯ ಜ್ಯೋತಿ ತಾ ಹೀನವೆ ?
ಜಾತಿ ವಿಜಾತಿ ಎನಬೇಡ, ದೇವನೊಲಿ
ದಾತನೇ ಜಾತ ಸರ್ವಜ್ಞ.

ಜಾತಿ ಹೀನನ ಮನೆ ಜ್ಯೋತಿ ಹೀನವೇ ?.

ತಾಗುವಾ ಮುನ್ನವೇ ಬಾಗುವಾ ತಲೆ ಲೇಸು
ತಾಗಿ ತಲೆಯೊಡೆದು ಕೆಲ ನಾದ ಬಳಿಕದರ
ಭೋಗವೇನೆಂದ ? ಸರ್ವಜ್ಞ.

ತಾಗಿ ಬಾಗದ ಮುನ್ನ ಬಾಗಿ ನಡೆವುದು ಲೇಸು.

ಅಡಿಗಟ್ಟಣವೇಕೆ ? ಬೋಡಂಗೆ ಕಟ್ಟೇಕೆ
ಕೋಡಗನ ಕೈಯ ಬಳೆಯೇಕೆ ? ಬಡವಂಗೆ
ನಾಡ ಮಾತೇಕೆ ? ಸರ್ವಜ್ಞ.

ಬಡವನಿಗೆ ನಾಡ ಮಾತ್ಯಾಕೆ ?.

ಸಾಲವನು ತರುವಾಗ ಹಾಲು ಬೋನುಂಡಂತೆ
ಸಾಲಿಗನು ಬಂದು ಕೇಳಿದರೆ ಕುಂಡಿಗಂ
ಚೇಳು ಕಡಿದಂತೆ ಸರ್ವಜ್ಞ.

ಸಾಲಿಗ ಬಂದು ಕೇಳ್ವಾಗ ಕುಂಡಿಗೆ ಚೇಳು ಕಡಿದಂತೆ.

ಕಂಡಂತೆ ಹೇಳಿದರೆ ಕೆಂಡ ಉರಿಯುವುದು ಭೂ
ಮಂಡಲದ ಒಳಗೆ ಖಂಡಿತವ ನಾಡುವರ
ಕಂಡಿಹುದೇ ಕಷ್ಟ ಸರ್ವಜ್ಞ.

ಕಂಡದ್ದು ಕಂಡಂಗೆ ಹೇಳಿದ್ರೆ ಕೆಂಡ್ದಂಥ ಕೋಪ.

ಒಬ್ಬನರಿದರೆ ಸ್ವಂತ ಇಬ್ಬರಲಿ ಏಕಾಂತ
ಇಬ್ಬರಿಂದೊಬ್ಬನರಿದು ಬೇರೊಬ್ಬನಿಂ
ಹಬ್ಬಿ ಲೋಕಾಂತ ಸರ್ವಜ್ಞ.

ಇಬ್ರಿದ್ರೆ ಏಕಾಂತ, ಮೂವರಿದ್ರೆ ಲೋಕಾಂತ.

ಹೊಲಬನರಿಯದ ಗುರುವು ತಿಳಿಯಲರಿಯದ ಶಿಷ್ಯ
ನೆಲೆಯನಾರಯ್ಯ ದುಪದೇಶವಂಥಕನು
ಕೊಳನ ಹೊಕ್ಕಂತೆ ಸರ್ವಜ್ಞ.

ಬಳ್ಳಿ ಗುರುಡರು ಕೂಡಿ ಹಳ್ಳಕ್ಕೆ ಬಿದ್ದಂಗೆ.

ತಿರಿದುಂಬುತೊಬ್ಬರನು ಕರೆದುಂಬದತಿ ಹಿತವು
ಕರೆಯದೊಬ್ಬರನು- ಉಣ್ಣುತಿಪ್ಪ ನೂಟ ತಾ
ನರಕದಾ ಊಟ ಸರ್ವಜ್ಞ.

ತಿರಕೊಂಡುಂಡ್ರೂ ಕರಕ್ಕೊಂಡುಣ್ಣ ಬೇಕು.

ಎತ್ತ ಹೋದರೂ ಒಂದು ತುತ್ತ ಕಟ್ಟಿರಬೇಕು
ತುತ್ತೊಂದು ಗಳಿಗೆ ತಡೆದಿಹರೆ ಕೈ ಹಿಡಿದು
ಎತ್ತ ಬೇಕೆಂದ ಸರ್ವಜ್ಞ.

ಎತ್ತ ಹೋದ್ರೂ ತುತ್ತ ಕೈಲಿರಬೇಕು.

ವಾರಾಂಗನಿಯರಿಂಗೆ ಯಾರೆಂಜಲೇನಯ್ಯ
ಊರೆಂಜಲನ್ನು ತಿಂಬುವಾ ಶುನಕಂಗೆ
ಯಾರೆಂಜಲೇನು ಸರ್ವಜ್ಞ.

ಊರೆಂಜಲು ತಿನ್ನುವ ಸೂಳೆಗೆ ಯಾರೆಂಜಲಾದರೇನು?

**ಆಧ್ಯಾತ್ಮಿಕ :**

ತೋಡಿರ್ದ ಬಾವಿಗೆ ಕೂಡಿರ್ದ ಜಲ ಸಾಕ್ಷಿ
ಮಾಡಿರ್ದಕ್ಕೆಲ್ಲ ಮನಸಾಕ್ಷಿ ಸರ್ವಕ್ಕೂ
ಮೃಡನೆ ತಾ ಸಾಕ್ಷಿ ಸರ್ವಜ್ಞ.

ಮಾಡಿದ ಪಾಪಕ್ಕೆ ಮನವೇ ಸಾಕ್ಷಿ, ತಾ ಮಾಡಿದ್ದು ತನಗೇ ಸಾಕ್ಷಿ

ಎಣ್ಣೆ ಬೆಣ್ಣೆಯ ರಿಣವು ಅನ್ನ ವಸ್ತ್ರದ ರಿಣವು
ಹೊನ್ನು ಹೆಣ್ಣಿನಾ ರಿಣವು ತೀರಿದ ಕ್ಷಣದಿ
ಮಣ್ಣು ಪಾಲೆಂದ ಸರ್ವಜ್ಞ.

ಅನ್ನದ ಋಣ, ನೀರಿನ ಋಣ ಹರಿದ ಮೇಲೆ ಈ ಲೋಕದಿಂದ ನಿವೃತ್ತಿ.

ಒಡಲ ದಂಡಿಸಿ ಮುಕ್ತಿ ಪಡೆವೆನೆಂಬುವ ನೆಗ್ಗ
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ
ಮಡಿದಿಹುದೇ ಹೇಳು ಸರ್ವಜ್ಞ.

ಹುತ್ತವ ಬಡಿದರೆ ಹಾವು ಸಾಯುತ್ತೇ?

ನಲ್ಲ ಒಲ್ಲಿಯನೊಲ್ಲ ನೆಲ್ಲಕ್ಕಿ ಬೋನೊಲ್ಲ
ಅಲ್ಲವನು ಒಲ್ಲ ಮೊಸರೊಲ್ಲ, ಯಾಕೊಲ್ಲ?
ಇಲ್ಲದ್ದಕ್ಕೆ ಒಲ್ಲ ಸರ್ವಜ್ಞ.

ನಲ್ಲಿಯನೊಲ್ಲ, ದೋತ್ರವನೊಲ್ಲ,
ಬೋನವನೊಲ್ಲ, ಕೆನೆ ಮೊಸರೊಲ್ಲ ಯಾಕೊಲ್ಲ,
ಇಲ್ಲದ್ದಕ್ಕೊಲ್ಲ.

ದಂಡಿಸಿದ ತನುವಿಲ್ಲ ಕೊಂಡಸುವ್ರತವಿಲ್ಲ
ಕಂಡ ಕಂಡವರು ಹರಿಯಲ್ಕೆ ಕೈಲಾಸ
ರಂಡೆಯರ ಹೊರಸೆ ಸರ್ವಜ್ಞ.

ಕಾಯ ಖಂಡಿಸದೆ ಮನ ದಂಡಿಸದೆ
ಕಂಡಕಂಡವರು ಬಂದು ಕೂಡಲಿಕ್ಕ
ಕೈಲಾಸ ರಂಡಮುಂಡೆಯರ ಹೊರಸಲ್ಲ.

......................................

ಅರ್ತಿಗೆ ಬೆಲೆಯಿಲ್ಲ, ಕತ್ತೆಗೆ ಹೊಲೆಯಿಲ್ಲ
ಬತ್ತಲಿದ್ದವನಿಗೆ ಭಯವಿಲ್ಲ ಸರ್ವಜ್ಞ.

ಬೆತ್ತಲೆ ಇರೋನಿಗೆ ಎತ್ತಲೂ ಬಯವಿಲ್ಲ.

**ರಾಜಕೀಯ :**

ಅರಸ ರಕ್ಕಸನಂತೆ ವರ ಮಂತ್ರಿ ಹುಲಿಯಂತೆ
ಬರೆವಾತ ನಾಡ ನರಿಯಂತೆ ಪರಿವಾರ
ಗರಗಸದಂತೆ ಸರ್ವಜ್ಞ.

ಅರಸು ರಾಕ್ಷಸನಾದರೆ ಮಂತ್ರಿ ಹೆಬ್ಬುಲಿ

**ಶೈಕ್ಷಣಿಕ :**

ವಿದ್ಯೆಯುಳ್ಳವನ ಮುಖವು ಮುದ್ದು ಬರುವಂತಕ್ಕು
ವಿದ್ಯೆಯಿಲ್ಲದವನ ಬರಿ ಮುಖವು ಹಾಳೂರು
ಹದ್ದಿನಂತಕ್ಕು ಸರ್ವಜ್ಞ.

ವಿದ್ಯೆಯಿಲ್ಲದವ ಹದ್ದಿಗಿಂತ ಕಡೆ.

ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ ಸಾಹಿತ್ಯ
ವೆಲ್ಲವರಿಗಿಲ್ಲ ಸರ್ವಜ್ಞ.

ಎಲ್ಲ ಬಲ್ಲವರಿಲ್ಲ, ಒಂದೂ ತಿಳಿಯದವರಿಲ್ಲ.

ಅರಿಯೆನೆಂಬುವುದೊಂದು ಅರಸು ಕೆಲಸವು
ಕಾಣೋಅರಿದೆನೆಂದಿಹನು ದೊರೆಗಳಾ ಆಳೆಂದು
ಮರೆಯಬೇಡೆಂದ ಸರ್ವಜ್ಞ.

ಅರಿಯ ಅನ್ನೋದು ಅರಸಿನ ಗುಣ, ಬಲ್ಲೆ
ಅನ್ನೋದು ಆಳಿನ ಗುಣ.

**ಔದ್ಯೋಗಿಕ :**

ಕುಲವನ್ನು ಕೆಡಿಸುವುದು । ಛಲವನ್ನು ಬಿಡಿಸುವುದು
ಹೊಲೆಯನಾ ಮನೆಯ -ಹೊಗಿಸುವುದು ಕೂಳಿನಾ
ಬಲವ ನೋಡೆಂದು ಸರ್ವಜ್ಞ.

ಹೊಟ್ಟೆ ಹೊಲೆಯನ ಮನೆ ಹೋಗಿಸಿತು.

ಉತ್ತರೆಯು ಬರತಿಹರೆ । ಹೆತ್ತ ತಾಯ್ತೊರೆದಿಹರೆ
ಸತ್ಯಕುಂ ತಪ್ಪಿ ನಡೆದಿಹರೆ ಲೋಕ ತಾ
ನೆತ್ತ ಸೇರುವುದು ಸರ್ವಜ್ಞ.

ಉತ್ತರೆ ಬರೆದಿರೆ, ಹೆತ್ತಮ್ಮ ತೊರೆದರೆ, ಮುತ್ತು ಮಣ್ಣಾದರೆ ಲೋಕ ಬೈಗು-ಬೆಳಗು ಆಗೋದು ಹೇಗೆ?

ಎರೆಯನ್ನು ಉಳುವಂಗೆ । ದೊರೆಯನ್ನು ಪಿಡಿದಂಗೆ
ಉರಗ ಭೂಷಣನ ನೆನೆವಂಗೆ ಭಾಗ್ಯವು
ಅರಿದಲ್ಲವೆಂದ ಸರ್ವಜ್ಞ.

ಎರೆ ನಂಬಿದೆಯೋ, ದೊರೆ ನಂಬಿದೆಯೋ ?

ಹಣವಿಗೊಂದೀ ಸವಿಪ್ಪಣಕ್ಕೊಂದು ಬೇಳೆಯನು
ತ್ರಿಣಯಣಾ ಮಕುಟವಾದರೂ ಅಕ್ಕಸಾಲೆ
ಟೊಣೆಯದೇ ಬಿಡನು ಸರ್ವಜ್ಞ.

ಅಕ್ಕನದಾದರೂ ಅಕ್ಕಿಕಾಳಷ್ಟು ಅಕ್ಕಸಾಲಿ ಕದಿದೇ ಬಿಡ.

**ಗುಣ - ಶೀಲ-ಸ್ವಭಾವಗಳು :**

ದಂತ ಪಂಕ್ತಿನ ನಡುವೆ ಎಂತಿಪ್ಪುದದು ಜಿಹ್ವೆ
ಅಂತು ದುರ್ಜನರ ಬಳಸಿನಲಿ ಸಜ್ಜನನು
ನಿಂತಿಹನು ನೋಡ ಸರ್ವಜ್ಞ.

ಹಲ್ಲುಗಳ ಮಧ್ಯ ನಾಲಿಗೆ ಇದ್ದಾಂಗೆ.

ಒಳ್ಳೆಯನು ಇರದೂರು ಕಳ್ಳನೊಡನಾಟವೂ
ಸುಳ್ಳನಾ ಮಾತು ಇವು ಮೂರು ಕೆಸರೊಳಗೆ
ಮುಳ್ಳು ತುಳಿದಂತೆ ಸರ್ವಜ್ಞ.

ಸುಳ್ಳು ಮಾತು ಕೆಸರಿನಲ್ಲಿ ಮುಳ್ಳು ತುಳಿದಾಂಗ.

ಸೋರುವಾ ಮನೆಗಿಂತ ದಾರಿಯಾ ಮರ ಲೇಸು
ಹೋರುವಾ ಸತಿಗಿಂತ ಬದುಕಿಂದ ಹೊಡೆದೊಯ್ವ
ಮಾರಿಯೇ ಲೇಸು ಸರ್ವಜ್ಞ.

ಹೋರುವ ಹೆಂಡತಿ, ಸೋರುವಾ ಮನೆ ಎರಡೂ ಒಂದೆ.

| | |
|---|---|
| ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ<br>ಕೊಟ್ಟು ನಾ ಕೆಟ್ಟೆನೆನ ಬೇಡ, ಅದು ಮುಂದೆ<br>ಕಟ್ಟಿದಾ ಬುತ್ತಿ ಸರ್ವಜ್ಞ. | ಕೊಟ್ಟೋನಿಗೆ ಬಡತನವಿಲ್ಲ, ಕೊಡದಿದ್ರೆ ಸಿರಿತನವಿಲ್ಲ |
| ತುಡುಗುಣಿಯು ಗಂಡನಾ ಬಡತನವ ಬಲ್ಲಳೇ<br>ಕಡನ ತಂದಿಕ್ಕಿ-ಕುದಿಸಿ ತುಪ್ಪವ ಬೆರಸಿ<br>ಹೊಡೆದು ಕುಳ್ಳಿಹಳು ಸರ್ವಜ್ಞ. | ತುಡುತಿನ್ನಿ ಗಂಡನ ಬಡತನ ಬಲ್ಲಳೇ? |
| ಹೆಣ್ಣಿಗೂ ಮಣ್ಣಿಗೂ ಉಣ್ಣದುರಿಯಲು ಬೇಡ<br>ಹೆಣ್ಣಿಂದ ಕೆಟ್ಟ ದಶಕಂಠ ಕೌರವನು<br>ಮಣ್ಣಿಂದ ಕೆಡನೇ? ಸರ್ವಜ್ಞ. | ಮಣ್ಣಿಂದ ಕೌರವ ಕೆಟ್ಟ, ಹೆಣ್ಣಿಂದ ರಾವಣ ಕೆಟ್ಟ. |
| ಕೊಡುವರೇ ಕೈ ಹಾಳೆ? ಎಡೆಯೇನು ದೂರವೇ?<br>ಎಡೆಯಾಡಿಸುತ್ತಾ ಕೊಡದೆ ಲೋಭಿಯ ಮಾತು<br>ಕೊಡಲಿಯಾ ಗಾಯ ಸರ್ವಜ್ಞ. | ಕೊಡದ ಲೋಭಿಯ ಮಾತು, ಕೊಡಲೀ ಗಾಯ. |
| ಉಳ್ಳಲ್ಲಿ ಉಣಲಿಲ್ಲ ಉಳ್ಳಲ್ಲಿ ಉಡಲಿಲ್ಲ<br>ಉಳ್ಳಲ್ಲಿ ದಾನ ಕೊಡದವನ ಒಡವೆಯದು<br>ಕಳ್ಳಂಗೆ ನೃಪಗೆ ಸರ್ವಜ್ಞ. | ಉಳ್ಳಾಗ ಉಣದವ, ಉಳ್ಳಾಗ ಉಡದವ. |
| ಅತ್ತೆ ಮಾಡಿದ ತಪ್ಪು ಗೊತ್ತಿಲ್ಲದಡಗಿಹುದು<br>ತೊತ್ತದನು ಮಾಡಿ ದಾಕ್ಷಣದಿ ಸುತ್ತಲುಂ<br>ಗೊತ್ತಿಹುದು ನೋಡ ಸರ್ವಜ್ಞ. | ಅತ್ತೆ ಒಡೆದ ಮಡಕೆ ಅಡಕಲಾಗೆ, ಸೊಸೆ ಒಡೆದ ಮಡಕೆ ಅಂಗಳದಾಗೆ. |
| ಅಂಡೆಬಾಯಿಯನೊಬ್ಬ।ಕಂಡು ಮುಚ್ಚಲುಬಹುದು<br>ಮುಂಡೆಗಳ ಬಾಯ ಮುಚ್ಚಲುಂ ಸಲ್ಲದಿರು<br>ಖಂಡಿತವು ನೋಡ ಸರ್ವಜ್ಞ. | ಮಡಕೇ ಬಾಯಿ ಮುಚ್ಚಬೋದು, ಮನುಷ್ಯರ ಬಾಯ ಮುಚ್ಚಲಾಗುದು. |
| ಅಂಗಿ ಅರಿವೆಯ ಮಾರಿ ಭಂಗಿಯನು ತಾ ಸೇದಿ<br>ಮಂಗನಂದದಲಿ ಕುಣಿವಾತ ಭವ ಭವದಿ<br>ಭಂಗಗೊಳುತಿಹನು ಸರ್ವಜ್ಞ. | ಅಂಗಿ ಕೊಟ್ಟು ಭಂಗಿ ಸೇದಿ ಮಂಗನಾದ. |

ಕಂಡದ್ದು ಆಡೆ ಭೂ ಮಂಡಲವು ಮುನಿಯುವುದು
ಕೊಂಡಾಡುತಿಚ್ಚೆ ನುಡಿದಿಹರೆ । ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ.

ಇದ್ದದ್ದು ಇದ್ದಾಂಗ ಹೇಳಿದ್ರ ಎದ್ದಬಂದು ಎದಿಗೆ ಒದ್ರಂತ.

ಅತಿಯಾಶೆ ಮಾಡುವನು ಗತಿಗೇಡು ಆಗುವನು
ಅತಿಯಾಶೆಯಿಂದ ಮತಿಗೆಡುಗು ಗತಿಯಿಂದ
ಸತಿ-ಸುತರು ಸರ್ವಜ್ಞ.

ಅತಿಯಾಸೆ ಗತಿಗೇಡು.

ಬುದ್ಧಿಯಲಿ ಕರ್ಮಗಳ ತಿದ್ದಲ್ಕೆ ಅಸದಳವು
ಬುದ್ಧಿ ಬಲಶಾಲಿ ಎನಬೇಡ ಕರ್ಮವದು
ಗುದ್ದಿ ಕೊಲ್ಲುವುದು ಸರ್ವಜ್ಞ.

ಬುದ್ಧ ಭೂಮಿ ಆಳ್ತೀನೆಂದ್ರೆ, ಅದೃಷ್ಟದಲ್ಲಿ ಕತ್ತೆ ಕಾಯುವುದಿತ್ತಂತೆ.

ಆಳಾಗಬಲ್ಲವನು ಆಳವವನು ಅರಸಾಗಿ
ಆಳಾಗಿ ಬಾಳಲರಿಯದನು ಕಡೆಯಲ್ಲಿ
ಹಾಳಾಗಿ ಹೋಗುವನು ಸರ್ವಜ್ಞ.

ಆಳಾಗಿ ದುಡಿ ಅರಸನಾಗಿ ಉಣ್ಣು.

ಕಾಸು ಇಲ್ಲದ ಬಾಳು ಭಾಷೆಯರಿಯದ ಆಳು
ಹೇಸಿಯಾದವಳ ಮನೆ ಮಾರ್ತೆ ಕತ್ತೆಯಾ
ಹೂಸಿನಂತಕ್ಕು ಸರ್ವಜ್ಞ.

ಹಣವಿಲ್ಲದವನು ಹೆಣಕ್ಕಿಂತ ಕಡೆ.

ಹಣವ ಕಂಡರೆ ಬಾಯಿ ಹೆಣಬಿಡುವದೆಂದಿರಲು
ಹಣ ನೋಡಿ ಆಣೆಯ ಮಾಡುವಳು ಇಲ್ಲದಿರೆ
ಒಣ ಮಾತಿನವಳು ಸರ್ವಜ್ಞ.

ಹಣ ಕಂಡ್ರೆ ಹೆಣವೂ ಬಾಯ್ಬಿಡುತ್ತೆ.

ಅರಳೆಗಂ ರಸವಿಲ್ಲ ಕರುಳಿಗಂ ನಾಂಚಿಲ್ಲ
ದುರುಳಂಗೆ ಆರು ಹಿತರಿಲ್ಲ ಸೂಳೆಯಲಿ
ಸರಲವೇ ಇಲ್ಲ ಸರ್ವಜ್ಞ.

ಅಂಗಾಲಿಗೆ ಹೇಸಿಗೆ ಇಲ್ಲ, ಕರುಳಿಗೆ ನಾಚಿಕೆಯಿಲ್ಲ.

**ಸಂಕೀರ್ಣ :**

ಗಂಧವನು ತೇವಲ್ಲಿ ಒಂದು ನೊಣವನುಕಾಣೆ
ಸಂಧಿಸಿಹ ಮಲವ ಬಿಡವಲ್ಲಿ ನೊಣ ಮುತ್ತು
ವಂದವನು ನೋಡು ಸರ್ವಜ್ಞ.

ಗಂಧ ತೇಯುವಲ್ಲಿ ಒಂದು ನೊಣವ ಕಾಣೆ.

| | |
|---|---|
| ಕೋಪವೆಂಬುದ ಕೇಳಿ, ಪಾಪದಾ ನೆಲೆಗಟ್ಟು<br>ಕೂಪದೊಳು ನೇಣು ಹರಿದಂತೆ ನರಕದೊಳು<br>ಕೋಪಿ ತಾನಿಳಿವ ಸರ್ವಜ್ಞ. | ಕೂಪಕ್ಕಿಳಿಯುವವನಿಗೆ ನೇಣು ಹರಿದ ಹಾಗೆ. |
| ಮರಳ ತಾ ಮಳೆಗಂಜಿ ಮರದಡಿಯ ಸಾಗಿದರೆ<br>ಮರದ ಹನಿ ಬಿಡದು । ಮಳೆನಿಂದುದುರುಳನಾ<br>ನೆರಳು ಇಂತೆಂದ ಸರ್ವಜ್ಞ. | ಮಳೆ ಬಿಟ್ರೂ ಮರ್ದ ಹನಿ ಬಿಡದು. |
| ಬಲಹೋದ ಕಾಲಕ್ಕೆ ನೆಲ್ಲವೆದ್ದು ಬಡಿಯುವುದು<br>ಕುಲ ಛಲವು ಕಲಹ ಸಿರಿಯು ಸಂಗ್ರಾಮಗಳು<br>ಬಲವಿರುವ ತನಕ ಸರ್ವಜ್ಞ. | ಬಲವಿಲ್ಲದ ಕಾಲಕ್ಕೆ ನೆಲವೆದ್ದು ಬಡೀತು . |
| ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ<br>ಹೊತ್ತಾಗಿ ನುಡಿದ ಮಾತು ಕೈ ಜಾರಿದಾ<br>ಮುತ್ತಿನಂತಿಹುದು ಸರ್ವಜ್ಞ. | ಹೊತ್ತಿಗೊದಗಿದವನ ಮಾತು ಸತ್ತವನು ಎದ್ದಂಗೆ. |
| ಅಪ್ಪ ಹಾಕಿದ ಗಿಡವು ಬಪ್ಪುತ್ತಲಿರುತಿರಲು<br>ತಪ್ಪಿಲ್ಲವೆಂದು ಅದನೇರಿ ಮಗನುರ್ಲಿ<br>ಗೊಪ್ಪಿಕೊಳ್ಳುವನೇ ಸರ್ವಜ್ಞ. | ಅಪ್ಪ ಹಾಕಿದ ಆಲದ ಮರಾಂತ ನೇಣು ಹಾಕಿ ಕೊಳ್ತಾರೆಯೇ ? |

ಹೀಗೆ ಸರ್ವಜ್ಞನ ವಚನಗಳು ಜನಪದ ಗಾದೆಗಳಿಂದ ಸಮೃದ್ಧಿಗೊಂಡಿವೆ. ಜನಪದ ಗಾದೆಗಳನ್ನು ಸರ್ವಜ್ಞ ಕವಿ ತನ್ನ ವಚನಗಳಲ್ಲಿ ಉಪಯೋಗಿಸಿದಂತೆ ಸರ್ವಜ್ಞನ ವಚನಗಳಲ್ಲಿನ ಹಲವಾರು ಅರ್ಥಪೂರ್ಣ ವ್ಯಾಕ್ಯಗಳು ನುಡಿಮುತ್ತುಗಳಾಗಿ, ಗಾದೆಗಳಾಗಿ ಪರಿವರ್ತಿತಗೊಂಡಿವೆ. ಈ ಒಂದು ಕ್ರಿಯೆ-ಪ್ರಕ್ರಿಯೆ ( ಕೊಡು - ಕೊಳ್ಳುವಿಕೆ) ಸಾಹಿತ್ಯ ಪರಂಪರೆಯಲ್ಲಿ ಸಹಜವೂ, ಅನಿವಾರ್ಯವೂ ಹೌದು.

ಸರ್ವಜ್ಞನ ವಚನಗಳಲ್ಲಿನ ಅನೇಕ ಅರ್ಥಪೂರ್ಣ ವಾಕ್ಯಗಳು ಇಂದು ಗಾದೆಗಳ ಗುಂಪಿಗೆ ಸೇರಿಹೋಗಿವೆ. ತನ್ನ ಸರಳತೆಯ ಸೊಬಗು, ಅರ್ಥವಂತಿಕೆ, ಕಿರಿದರಲ್ಲಿ ಪಿರಿದನ್ನು ಹೇಳುವ ಬಗೆ ...ಮುಂತಾದ ಎಲ್ಲ ಗುಣಗಳು ಸರ್ವಜ್ಞನ ವಚನಗಳಲ್ಲಿನ ಅರ್ಥಪೂರ್ಣ ವಾಕ್ಯಗಳನ್ನು ಗಾದೆಗಳ ಗುಂಪಿಗೆ ಸೇರಿಸಿವೆ. ಉದಾ:

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು, ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡು, ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ, ಒಲಿದರೆ ನಾರಿ ಮುನಿದರೆ ಮಾರಿ, ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ, ಆಡದೇ ಮಾಡುವವನು ರೂಢಿಯೊಳಗುತ್ತಮನು, ಕೊಟ್ಟಿದ್ದು ತನಗೆ; ಬಚ್ಚಿಟ್ಟಿದ್ದು ಪರರಿಗೆ, ಹಂಗಿನರ ಮನೆಗಿಂತ ಪಿಂಗಡದ ಗುಡಿಲೇಸು ಇತ್ಯಾದಿಗಳನ್ನು ಹೇಳಬಹುದು.

ಹೀಗೆ ಸರ್ವಜ್ಞನ ವಚನಗಳಲ್ಲಿನ ಅನೇಕ ಅರ್ಥಪೂರ್ಣ ವಾಕ್ಯಗಳು ಗಾದೆಗಳ ಸ್ಥಾನವನ್ನು ತುಂಬಿವೆ. 'ಗಾದೆಗಳ ಬಳಕೆ ಮತ್ತು ತಿರುಗಿ ಗಾದೆಗಳ ಸೃಷ್ಠಿ' (ಕ್ರಿಯೆ-ಪ್ರಕ್ರಿಯೆ) ಸರ್ವಜ್ಞನ ವಚನಗಳಲ್ಲಿ ಲೀಲಾ ಜಾಲವಾಗಿ ನಡೆದಿದೆ.

ಹೀಗೆ ಜನಪದ ಸಾಹಿತ್ಯದ ಒಂದು ವಿಶಿಷ್ಠ ಪ್ರಕಾರವಾದ 'ಗಾದೆಗಳು' ಸರ್ವಜ್ಞನ ವಚನಗಳಲ್ಲಿ ಉಸಿರಿನಷ್ಟೇ ಸಹಜವಾಗಿ ಹಾಸು ಹೊಕ್ಕಾಗಿವೆ ಮತ್ತು ಅವುಗಳು ತಮ್ಮ ಮೂಲ ಆಶಯಕ್ಕೆ ಚ್ಯುತಿ ಬರದಂತೆ ಒಂದು ಬಗೆಯ ಎಚ್ಚರಿಕೆಯನ್ನು ಕಾಯ್ದುಕೊಂಡಿವೆ. ಈ ಹಿನ್ನಲೆಯಲ್ಲಿ ಕೆಲವು ವಚನಗಳು ಹಳೆಯ ನಿಲುವುಗಳನ್ನು (ಕರ್ಮ ಸಿದ್ಧಾಂತ, ವಿಧಿ ಬರೆಹ, ಹಣೆ ಬರೆಹ, ಹಿಂದಿನ ಕರ್ಮ) ಸಮರ್ಥಿಸಿದರೆ ಇನ್ನು ಕೆಲವು ವಚನಗಳು ವೈಚಾರಿಕ ಸ್ಪರ್ಶದಿಂದ ನಳನಳಿಸುತ್ತವೆ (ಸರ್ವಜ್ಞನ ವಚನಗಳಲ್ಲಿ ಅಡಕವಾಗಿರುವ ಇನ್ನೂ ಅನೇಕ ಗಾದೆ ಮಾತುಗಳನ್ನು ಹಾಗೂ ನುಡಿಗಟ್ಟುಗಳನ್ನು 'ಅ'ಕಾರಾದಿಯಾಗಿ ಅನುಬಂಧದಲ್ಲಿ ನೀಡಲಾಗಿದೆ). ಒಟ್ಟಿನಲ್ಲಿ ಗಾದೆಗಳ ಪ್ರಭಾವದಿಂದ ಸರ್ವಜ್ಞನ ವಚನಗಳು ಶ್ರೀಮಂತಗೊಂಡಿವೆಯೆನ್ನಬಹುದು.

## ೭.೫. ಒಗಟುಗಳು :

ಜನಪದ ಸಾಹಿತ್ಯದಲ್ಲಿ ಗಾದೆಗಳಂತೆ ಇನ್ನೊಂದು ಪ್ರಕಾರವೆಂದರೆ; ' ಒಗಟುಗಳು'. ಈ ಒಗಟು ಪ್ರಕಾರ ಬಹುಶಃ ಗಾದೆಯ ನಂತರ ಹುಟ್ಟಿರಬಹುದು. ಕಾರಣ ಒಗಟುಗಳು ಭೌದ್ಧಿಕ ಕಸರತ್ತಿನ ಮೂಲಕ ರಚಿತವಾಗಿದ್ದು, ನಿಗೂಢತೆಯಿಂದ ಕೂಡಿ, ಸಂಕೀರ್ಣ ರೂಪದಲ್ಲಿರುವತ್ತವೆ. ಗಾದೆಗಳಾದರೂ ಅನುಭವ ಜನ್ಯ ಸಂಗತಿಗಳ ಮೂಲಕ ರಚನೆಗೊಂಡ ಸರಳ ಮಾದರಿಗಳಾಗಿದ್ದು, ಮನುಷ್ಯನ ನಡೆ ನುಡಿಗಳನ್ನು ನೇರಗೊಳಿಸುವ ಆಶಯದಿಂದ ರಚನೆಗೊಂಡಿರುತ್ತವೆ. ಮನುಷ್ಯರ ನಡುವೆ ಭಾಷೆಯ ಉಪಯೋಗ ಪ್ರಾರಂಭವಾದ ಮೇಲೆ ಮೊದಲು ಸರಳ ರೂಪದ ಗಾದೆಗಳು ಹುಟ್ಟಿವೆ. ಅದರ ನಂತರ ಅವರು ಭಾಷೆಯಲ್ಲಿ ಪ್ರಬುದ್ಧತೆ ಸಾಧಿಸಿದಂತೆಲ್ಲಾ ಒಗಟುಗಳ ರಚನೆಯಾಗಿರಬೇಕು. ಗಾದೆಗಳಂತೆ ಒಗಟುಗಳಲ್ಲಿ ಅನುಭವವೇ ಪ್ರಾಧಾನ್ಯವಾಗಿರುವುದಿಲ್ಲ. ಹೆಚ್ಚೆಂದರೆ ಅದೊಂದು ಅಂಶ ವಾಗಿರಬಹುದು. 'ಅಕ್ಷರ' ವಿದ್ಯೆಯ ಸೋಂಕಿಲ್ಲದ ಅನಾಮಧೇಯ ಜನಪದರು ರಚಿಸಿರುವ ಒಗಟುಗಳ ತುಂಬಾ ಪ್ರತಿಮೆ, ಸಂಕೇತ , ರೂಪಕಗಳು ತುಂಬಿಕೊಂಡಿದ್ದು, ಅಕ್ಷರಸ್ಥರೆನಿಸಿಕೊಂಡವರ ಬುದ್ಧಿ ಭಾವಗಳಿಗೆ ಸವಾಲಾಗಿ ಪರಿಣಮಿಸುವ ಪರಿ ಅಚ್ಚರಿದಾಯಕವಾಗಿದೆ.

''ಜನಪದ ಕವಿಗಳು ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಿಮತಿಗಳ್' ಎಂಬುದು ಸರಿಯೇ ?. ಆದರೆ ಅವರು ಕುರಿ ಮತಿಗಳೂ ಅಲ್ಲ, ಅವರು ಮುಗ್ಧರೆಂದಾಕ್ಷಣ ಮಂದ ಬುದ್ಧಿಗಳೆಂದು ಅರ್ಥವಲ್ಲ. ಭೌದ್ಧಿಕ ಜಾಗ್ರತೆ, ಆಲೋಚನಾ ಶಕ್ತಿ, ತರ್ಕ ಸಾಮರ್ಥ್ಯ ಅವರಲ್ಲಿದ್ದವೆಂಬುದನ್ನು ನಾವು ಮನಗಾಣಬೇಕು. ಕು (ಳಿ)ರಿತು ಓದದಿರುವುದರಿಂದಲೇ ಅವರ ಬುದ್ಧಿಯಲ್ಲಿ ನಾವಿನ್ಯ, ಸ್ವಪ್ರಕಾಶ, ನಿಷ್ಚಿತತೆ ಉಳಿಯುವುದು ಸಾಧ್ಯವಾಯಿತು. ಅನುಕರಣ ಸಾಹಿತ್ಯಕ್ಕೆ ಅವಕಾಶವಾಯಿತು. ಜನಪದ ಕವಿಗಳ ಈ ಭೌದ್ಧಿಕ ಎಚ್ಚರಿಕೆ ಸೊಗಸಾಗಿ ಕನ್ನಡಿ ಹಿಡಿಯುತ್ತವೆ ಈ ಒಗಟುಗಳು'' (ಜನಪದ ಸಾಹಿತ್ಯ ಪ್ರವೇಶಿಕೆ, ಪು. ೨೦)

ಒಗಟಿಗೆ ಒಂಟು, ಒಡಪು, ಒಡಗತೆ, ಒಡಚುವ ಕಥೆ ಎಂಬ ಪರ್ಯಾಯ ಪದಗಳುಂಟು. ಒಗಟು ಎಂದರೆ, ಸವಾಲು ಹಾಕು, ಬಿಡಿಸು ಎಂಬರ್ಥವಿಹುದೆಂದು ಸಿ. ಪಿ.ಕೆ.ಯವರು ಹೇಳಿದ್ದಾರೆ. ಗೋರೂರು ರಾಮಸ್ವಾಮಿ ಅಯ್ಯಾಂಗಾರರು ಹೇಳಿದಂತೆ, ''ಒಂದು ವಸ್ತುವನ್ನು ಚಮತ್ಕಾರಯುತವಾಗಿ ಕೇಳುವವರ ಬುದ್ಧಿ ಕ್ರಮಿಸುವಂತೆ ಪದಾರ್ಥದೊಂದಿಗೆ ವರ್ಣಿಸಿ ಅದನ್ನು ಗುರುತಿಸುವಂತೆ ಹೇಳುವುದು ಒಗಟಿನ ರಹಸ್ಯ '' ಅದೇ ರೀತಿ ಜೀಶಂಪ.ರವರು, '' ಬುದ್ಧಿಕೌಶಲವನ್ನು ಒರೆಗೆ ಹಚ್ಚಿ ನೋಡುವ ಇವುಗಳ ಸೃಷ್ಟಿಯ ಹಿನ್ನೆಲೆಯಲ್ಲಿ ವಿಶಿಷ್ಟವಾದ ಕವಿ ಮನೋಧರ್ಮದ ಮಿಡಿತವನ್ನು ಕಾಣಬಹುದು. ಒಂದು ಅರ್ಥದಲ್ಲಿ ಒಂದೊಂದು ಒಗಟೂ ಒಂದು ಪುಟ್ಟ ಭಾವಗೀತೆ'' ಎಂಬಂತಹ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಗಟುಗಳ ಸೃಷ್ಟಿಕರ್ತರು ಹಳ್ಳಿಗಾಡಿನ ಅಶಿಕ್ಷಿತ ಜನ ಎನ್ನಬಹುದು. ಆದಿ ಮಾನವ ಪ್ರಕೃತಿ ಮತ್ತು ಪ್ರಾಣಿ ಪ್ರಪಂಚದಲ್ಲಿ ಕಂಡ ಸಾದೃಶ್ಯ ಜ್ಞಾನದಿಂದ ರೂಪಕ ಮೂಲವಾಗಿ ಮೂಡಿದ ಈ ಒಗಟುಗಳು ಬಾಯಿಂದ ಬಾಯಿಗೆ , ಕಿವಿಯಿಂದ ಕಿವಿಗೆ, ಪೀಳಿಗೆಯಿಂದ ಪೀಳಿಗೆಗೆ ಸಂಸ್ಕಾರ ಹೊಂದಿ, ಹರಳುಗೊಂಡು, ಜನ ಸಮಷ್ಟಿಯ ಮುದ್ರೆಯನ್ನು ಧರಿಸಿ ಚಲಾವಣೆಯಲ್ಲಿರುವಂಥವು. ಒಗಟುಗಳು ಭಾವಪೂರ್ವತೆಗಿಂತ ಬುದ್ಧಿಪೂರ್ವಕವಾಗಿ ಮನಸ್ಸಿಗೆ ಆನಂದವನ್ನುಂಟು ಮಾಡುತ್ತವೆ. ಉದಾಹರಣೆ: ೧) ಕಣ್ಣಿಗೆ ಹತ್ತಿರ, ಕಾಲಿಗೆ ದೂರ (ದಿಗಂತ ಮತ್ತು ಬೆಟ್ಟ). ೨) ಬಯಲೊಳಗೊಂದು ಬೆಳ್ಳಿ ರೂಪಾಯಿಗಳು (ಸೂರ್ಯ ಮತ್ತು ಚಂದ್ರ). ೩) ಕೊಟ್ಟು ಕೆಟ್ಟ(ಬಲಿ ಚಕ್ರವರ್ತಿ) ಕೊಡದೇ ಕೆಟ್ಟ (ದುರ್ಯೋಧನ) ಮುಟ್ಟದೇ ಕೆಟ್ಟ (ರಾವಣ)ಮುಟ್ಟಿ ಕೆಟ್ಟ(ಕೀಚಕ) ಎಂಬಿತ್ಯಾದಿಗಳನ್ನು ನೋಡಬಹುದು.

''ಜಾನಪದ ಒಗಟುಗಳ ಪಡಿಯಚ್ಚಿನಲ್ಲಿ ಅವು ರೂಪ ತಳೆಯುವಂತೆ ಸರ್ವಜ್ಞ ನೋಡಿಕೊಂಡಿದ್ದಾನೆ. ಬಹುಶ: ಈ ನಿಮಿತ್ತವಾಗಿಯೇ ಆತನ ಈ ಬಗೆಯ ವಚನಗಳು ತಮ್ಮ ರಕ್ತಗತ ಸಾಂಕೇತಿಕ ಸತ್ವವನ್ನು ಮಸುಕುಗೊಳಿಸಿಕೊಳ್ಳದ ಒಗಟುಗಳಾಗಿಯೇ ಪರಿಗಣಿತವಾಗಿವೆ'' ( ಸರ್ವಜ್ಞ ಸಮಾಜದರ್ಶನ ಮತ್ತು ಸಾಹಿತ್ಯ ತತ್ವ: ಪು.೨೪೧). ಇಂದು ಆಧುನಿಕ ಪ್ರಜ್ಞೆಯುಳ್ಳವರಾದ ನಾವು ಪರಂಪರೆಯ ಒಗಟುಗಳೆಂದು ಲಘುವಾಗಿ ಪರಿಗಣಿಸದೆ, ಪ್ರತಿಮೆ-ಪ್ರತೀಕಗಳೆಂದು ಗಂಭೀರವಾಗಿ ಪರಿಭಾವಿಸಿ ಅರ್ಥೈಸುವುದರತ್ತ ಗಮನಹರಿಸಿ ಸರ್ವಜ್ಞನ ಸಾಹಿತ್ಯ ಸತ್ವದ ನೈಜ ನೆಲೆಯನ್ನು ಗುರುತಿಸಬೇಕು .

## ೭.೫.೧. ಸರ್ವಜ್ಞನ ವಚನಗಳಲ್ಲಿ ಜಾನಪದ ಒಗಟುಗಳ ಪ್ರಭಾವ:

''ಹಬ್ಬ ಹರಿದಿನಗಳಲ್ಲಿ, ಮದುವೆಗಳಲ್ಲಿ,ಹೊಲ-ಗದ್ದೆಗಳಲ್ಲಿ,ನಾಟಿ ಮಾಡುವಾಗ, ಕಳೆ ತೆಗೆಯುವಾಗ, ಅಳಿಯ ಮಾವನ ಮನೆಗೆ ಬಂದಾಗ, ಬೀಗ ಬೀಗರು ಸೇರಿದಾಗ, ರಾತ್ರಿ ಹೊಲ, ಗದ್ದೆಗಳಲ್ಲಿ ಕಾಯುವಾಗ ಮುಂತಾದ ಅನೇಕ ಸಂದರ್ಭಗಳಲ್ಲಿ ಒಗಟಿನ ಕ್ರಿಯೆಯಲ್ಲಿ ಗಂಡಸರು, ಹೆಂಗಸರು , ವಯಸ್ಸಾದವರು, ಮಕ್ಕಳು ಹಾಗೂ ಹದಿಹರೆಯದ ಹುಡುಗ-ಹುಡುಗಿಯರು ಭಾಗವಹಿಸುವರು (ಜನಪದ ಸಂಸ್ಕೃತಿ , ಪು. ೩೧). ಜನಪದರು ತಮಗೆ ಸಕಲವನ್ನೂ ಕೊಟ್ಟ ಪ್ರಕೃತಿಯನ್ನು ಪೂಜಿಸುತ್ತಾರೆ. ಪ್ರಕೃತಿಯಲ್ಲಿ ಕಾಣುವ ವಸ್ತುಗಳಲ್ಲಿ ಒಗಟುಗಳನ್ನು ಕಟ್ಟುತ್ತಾರೆ. ಉದಾ;

ದೊಡ್ಡ ಹಟ್ಟೀಲಿ
ಕುರಿಗೂಡಿ
ಬೆಳಕರಿವೋತ್ಗ
ಒಂದೂ ಇಲ್ಲ.

ಅಂದರೆ ಆಕಾಶ ಮತ್ತು ನಕ್ಷತ್ರ ಅಂದರೆ, ಜನಪದರು ಕುರಿಗಳನ್ನು ಸಾಕುವುದರಿಂದ ಒಗಟಿಗೆ ಅದೇ ವಸ್ತುವನ್ನು ಆಯ್ದುಕೊಂಡಿರುವುದು ಸಹಜವಾಗಿದೆ (ಜನಪದ ಸಂಸ್ಕೃತಿ, ಪು. ೩೨).

ಜನಪದ ಒಗಟುಗಳ ರಚನಾಕಾರರು ಮೂಲತಃ ಅನಕ್ಷರಸ್ಥ ಜನಪದರೇ ಆಗಿದ್ದರೂ ಶಿಷ್ಟ ಕವಿಗಳೂ ಈ ಪ್ರಕಾರದಲ್ಲಿ ಕೈಯಾಡಿಸಿರುವುದುಂಟು. ಆದರೆ ಅವರು ಶಿಷ್ಟ ಸಾಹಿತ್ಯದ ಚೌಕಟ್ಟಿಗೆ ಅವುಗಳನ್ನು ಅಳವಡಿಸಿದ ಕಾರಣ ಜಾನಪದ ಒಗಟುಗಳಲ್ಲಿರುವ ಸತ್ವಪೂರ್ಣತೆ ಅವುಗಳಲ್ಲಿ ಇಲ್ಲವೆಂದೇ ಹೇಳಬಹುದು. ಇದಕ್ಕೆ ಉದಾಹರಣೆಯಾಗಿ ಸಂಸ್ಕೃತದ 'ಪ್ರಹೇಲಿಕಾ' ಎಂಬ ಪ್ರಕಾರವನ್ನು ನೋಡಬಹುದು. 'ಕೌಶೀತಲ ಗಂಗಾ ಪಾನಿ' ಎನ್ನುವಲ್ಲಿ ದ್ವಂದ್ವಾರ್ಥವನ್ನು ಗಮನಿಸ ಬಹುದೇ ವಿನಃ ಜನಪದ ಒಗಟಿನಲ್ಲಿರಬಹುದಾದ ತಾಜಾತನ, ಶಬ್ದ ಚಮತ್ಕಾರ ಗೌಣವೆಂದೇ ಹೇಳ ಬಹುದು. ಜನಪದ ಒಗಟುಗಳಲ್ಲಿ ' ಒಡಪು ' ಎಂದು ಕರೆಯಲಾಗುವ ಇನ್ನೊಂದು ಪ್ರಕಾರವೂ ಉಂಟು. ಆದರೆ ಈ ಒಡಪು ಪ್ರಕಾರ ಜನಪದ ಹೆಂಗಳೆಯರು ಮದುವೆ, ಸೀಮಂತ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳ ಗಂಡನ ಹೆಸರನ್ನು ಹೇಳಲು ಉಪಯೋಗಿಸಲ್ಪಡುವ ಪ್ರಕಾರಗಳು. ಒಗಟಿಗಿರಬೇಕಾದ ಗೂಢಾರ್ಥತೆ, ಒಗಟು ಒಡೆಯುವ ಪ್ರಕ್ರಿಯೆ ಇವುಗಳಲ್ಲಿ ಇರುವುದಿಲ್ಲ. ಗಂಡನ ಹೆಸರನ್ನು ನೇರವಾಗಿ ಹೇಳಲಾರದೆ, ಸುತ್ತಿ ಬಳಸುವ ಮಾರ್ಗವಾಗಿ ಇವುಗಳು ಉಪಯೋಗಿಸಲ್ಪಟ್ಟಂತಿವೆ. ಉದಾಹರಣೆಗೆ:

ಕಂಬ ಕಂಬ ದಾಟಿ
ಬಾಳಿ ಕಂಬ ದಾಟಿ
ಬಂಕಾಪುರ ದಾಟಿ
ಲೋಕ ನಡದೈತಿ
ಲೋಬಾನ ಸುಟ್ಟೈತಿ
ಕಿಡಿಕಿಡಿ ಬಂಗಾರ
ಆನಿಮ್ಯಾಲ ಕುಂತು
ದಾನ ಮಾಡ್ತಾರ........... ಇವರು.

ಒಗಟಿಗಿರುವ ಗೂಢಾರ್ಥತತೆ ಹಾಗೂ ಒಗಟು ಒಡೆಯುವ ಪ್ರಕ್ರಿಯೆ ಇವಕ್ಕಿಲ್ಲದಿದ್ದರೂ ಪ್ರಾಸಾನುಪ್ರಾಸ ಹಾಗೂ ಗೇಯ ಗುಣಗಳಿಂದ ಇವುಗಳಲ್ಲಿ ಕಾವ್ಯ ಲಕ್ಷಣವಂತೂ ಇವೆ.

ಜಾನಪದ ಒಗಟುಗಳಂತೆಯೇ ಇನ್ನೊಂದು ಪ್ರಕಾರ ಒಡಪುಗಳು ಅಥವಾ ವೀರಭದ್ರ ದೇವರ ಒಡಬುಗಳು. ವೀರಶೈವರಲ್ಲಿ ದಕ್ಷಯಜ್ಞ ವಿನಾಶದ ಸಂಕೇತವಾಗಿ ಉಳಿದುಕೊಂಡು ಬಂದಿರುವ 'ಗುಗ್ಗಳ' ಕಾರ್ಯಕ್ರಮದಲ್ಲಿ ಗುಗ್ಗಳಕ್ಕಾಗಿ ನಿಯೋಜಿತಗೊಂಡ 'ಪುರವಂತರು' ಈ ಒಡಬುಗಳನ್ನು ಹೇಳುತ್ತಾರೆ. ಉದಾಹರಣೆಗೆ;

ಅಹಹಾ$_{sss}$ ..... ರುದ್ರ$_{s}$ ......... ಅಹಹಾ$_{sss}$ ........ ವೀರ$_{s}$ .... ಅಹಹಾ$_{sss}$ ..... ಸರ್ಪ$_{s}$
ಶ್ರೀಮತ್ ಸಜ್ಜನ ಶುದ್ಧ ಶಿವಾಚಾರ್ಯಕ್ಕೆ ಸಂಪನ್ನರಾದಂಥ ಸದ್ಭಕ್ತ ಶರಣ ಜನಂಗಳೆಲ್ಲರೂ ನೀವು ಕೇಳಿರಯ್ಯ !

ಒಂದು ಊರಿನಲ್ಲಿ
ಹಾಯ್ ಹಾಯ್ ಎಂಬ ಗೌಡ
ಹುಯ್ಯಿ ಹುಯ್ಯಿ ಎಂಬ ಕುಲಕರ್ಣಿ
ಮೈ ಮೈ ಎಂಬ ತಳವಾರರಿದ್ದರು
ಆ ತಳವಾರನ ಹೆಂಡತಿಯು
ಒಂದು ದಿನ, ತಳವಿಲ್ಲದ ಕೊಡವನ್ನು ತೆಗೆದುಕೊಂಡು
ಜಲವಿಲ್ಲದ ಬಾವಿಗೆ ಹೋದಳು.
ಆ ಬಾವಿಯ ದಂಡೆಯ ಮೇಲೆ
ಬೇರಿಲ್ಲದ ಬೇವಿನ ಮರವೊಂದು ಹುಟ್ಟಿತ್ತು.
ಆ ಬೇವಿನ ಮರದ ಮೇಲೆ
ರೆಕ್ಕೆ ಇಲ್ಲದ ಪಕ್ಷಿ ಕುಂತಿತ್ತು.
ಅದನ್ನು ಕಣ್ಣಿಲ್ಲದವನು ನೋಡಿ
ಕೈಯಿಲ್ಲದವನು ಹೊಡೆಯಲು ಹೇಳಿದನು.
ಆವಾಗ್ಗೆ, ಕೈಯಿಲ್ಲದವನು ತುದಿಯಿಲ್ಲದ ಬಾಣದಿಂದ
ಆ ಪಕ್ಷಿಗೆ ಹೊಡೆಯಲು
ಆ ಪಕ್ಷಿ ಬಿದ್ದಿತೋ ಅಥವಾ ಇಲ್ಲವೋ
ಹೇಳೆಂದ ನಮ್ಮ ಅಂಬಿಗರ ಚೌಡಯ್ಯ
ಖಡೇ ಖಡೇ ಮಹಾರುದ್ರ.......

(ಸಂಗ್ರಹ: ಶಿವಪ್ಪ ತೋಟಪ್ಪ ಭು ಶೆಟ್ಟಿ, ಸಾ॥ ಸವಣೂರು).

ಇವು ಸಹ ಒಗಟುಗಳಂತೆಯೇ ಕಂಡು ಬಂದರೂ ತುಸು ದೀರ್ಘವಾಗಿದ್ದು, ೧೨ನೆಯ ಶತಮಾನದ ಶರಣರ ಬೆಡಗಿನ ವಚನಗಳಾಗಿವೆ. ಬಹುಶಃ ಕಲ್ಯಾಣದ ಕ್ರಾಂತಿಯ ನಂತರ ಈ ಬಗೆಯ ಬೆಡಗಿನ ವಚನಗಳ ಮೂಲಕ ತಮ್ಮ ತತ್ವ ಪ್ರಚಾರಕ್ಕಾಗಿ ಅವರು ಈ ಮಾಧ್ಯಮವನ್ನು ಬಳಸಿ

ಕೊಂಡಂತಿದೆ. ಈ ಮೇಲಿನ ಬೆಡಗಿನ ವಚನದ ತುಂಬ ಗೂಢಾರ್ಥದ ಶಬ್ದಗಳು ತುಂಬಿಕೊಂಡಿದ್ದು, ಇದು ಬಹುಶಃ ಅನುಭಾವದ ಸಂಗತಿಗಳನ್ನು ಹಲವು ಸಂಕೇತ, ಪ್ರತಿಮೆಗಳ ಮೂಲಕ ತಿಳಿಸುತ್ತಿರುವಂತಿದೆ. ಏನೇ ಆದರೂ ಇದು ಒಗಟಿಗೆ ಹತ್ತಿರವಾದ ಪ್ರಕಾರವೆಂದೇ ಹೇಳಬಹುದು. ಆದರೆ ಇದರ ಉದ್ದೇಶ, ಗುರಿ ಮಾತ್ರ ಅನುಭಾವದತ್ತಲೇ ಎನ್ನಬಹುದು.

ಇದಲ್ಲದೆ, ಒಗಟುಗಳಲ್ಲಿ ' ಒಡಗತೆ ' ಎಂಬ ಒಂದು ಪ್ರಕಾರವೂ ಉಂಟು. ಒಗಟುಗಳು ಭಾಷಿಕ ರೂಪ ಪಡೆಯುವುದಕ್ಕಿಂತ ಮೊದಲಿನ ಸಂಜ್ಞೆ ಮತ್ತು ಸಂಕೇತಗಳು ಈಗ ಒಡಗತೆ ( ಒಗಟಿನ ಕಥೆ)ಗಳಲ್ಲಿ ಉಳಿದುಕೊಂಡು ಬಂದಿವೆ. ಅಲ್ಲಿ ಹೆಣ್ಣು ಗಂಡು ಪರಸ್ಪರ ಆಕರ್ಷಣೆ ಹೊಂದಿದ ನಂತರ ಹೆಣ್ಣು ತಾನು ಮೋಹಿಸಿದ ಪ್ರಿಯಕರನ ಜಾಣತನವನ್ನು ಪರೀಕ್ಷಿಸುವ ಒರೆಗಲ್ಲಾಗಿ ಮತ್ತು ಅವನನ್ನು ಆಮಂತ್ರಿಸುವ ಸೂಚನೆಗಳನ್ನಾಗಿ ಬಳಸಿರುವುದನ್ನು ಕಾಣುತ್ತೇವೆ. ಉದಾಹರಣೆಗೆ: ರಾಜಕುಮಾರಿಯ ಸಾಂಕೇತಿಕ (ಒಗಟಿನ) ಮಾತುಗಳು ಎಂಬ ಮಾದರಿಯಲ್ಲಿ ಒಬ್ಬಳು ತನ್ನ ಪ್ರಿಯಕರನನ್ನು ಕಂಡು, ನಿಂಬೆ ಹಣ್ಣನ್ನು ಹಿಂದೆ ಒಗೆದು ಕಲ್ಲಿನ ಮೇಲೆ ಲಿಂಗದ ಆಕೃತಿ ಮಾಡಿ, ಲಿಂಗದ ಮುಂದೆ ತೆಂಗು ಒಡೆದಳು. ಬೆನ್ನು ತೋರಿಸಿ ಹೊಂಟು ಹೋದಳು ( ಉತ್ತರ: ತವರು ಮನೆ ನಿಂಬೂರು, ಗಂಡನ ಮನೆ ಲಿಂಗಸೂರು, ಗಂಡನ ಮನೆ ಮುಂದೆ ತೆಂಗಿನ ಮರವಿದೆ, ತಿಂಗಳಲ್ಲಿ ನಿನ್ನವಳಾದರೆ ಸರಿ, ಇಲ್ಲವಾದರೆ ಇಲ್ಲ). ಹೀಗೆ ಜಾನಪದ ಒಗಟಿನ ಲೋಕ ವಿಸ್ತಾರಗೊಳ್ಳುತ್ತಾ ಸಾಗುತ್ತದೆ (ಕನ್ನಡ ಜಾನಪದ ಪ್ರಜ್ಞೆ, ಪು.೧೮೨-೧೮೩).

ಜನಪದ ಒಗಟುಗಳ ಪ್ರಭಾವಕ್ಕೊಳಗಾಗಿ ಅನೇಕ ಶಿಷ್ಟ ಕವಿಗಳು ಸಾಹಿತ್ಯ ರಚಿಸಿದ್ದಾರೆ. ಆ ಮೂಲಕ ಶಿಷ್ಟ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ್ದಾರೆ. ಬಹುಶಃ ಇದೇ ಕಾರಣದಿಂದಾಗಿ ಶಿಷ್ಟ ಪರಂಪರೆಯ ಒಗಟುಗಳು ದಾಖಲೆಗೊಳಗಾಗಿ ವಿಶ್ವ ಮನ್ನಣೆ ಪಡೆದಿವೆ ಎನ್ನಬಹುದು. ಆದರೆ ಜನಪದ ಒಗಟುಗಳು ಮಾತ್ರ ಮೌಖಿಕ ಪರಂಪರೆಯಲ್ಲೇ ಮುಂದುವರೆದಿವೆ. ಅವುಗಳ ಪ್ರಕಟಣೆಯಾದದ್ದು ತೀರಾ ಇತ್ತೀಚೆಗೆಯಾದರೂ ಒಗಟುಗಳ ರಚನೆಯಲ್ಲಿ ಮೊದಲಿಗರು ಜನಪದರೇ ಎಂದು ಹೇಳಬಹುದು.

''ಭಾರತದ ಶಿಷ್ಟ ಕವಿಗಳು ಒಗಟು ರಚನೆಗೆ ಪ್ರಾಧಾನ್ಯತೆಯನ್ನು ಕೊಟ್ಟಿರುವಂತೆಯೇ, ಜನಪದ ಕವಿಗಳು ತುಂಬಾ ಆಸಕ್ತಿ ವಹಿಸಿ, ಒಗಟುಗಳನ್ನು ರಚಿಸಿ ಆಸಕ್ತಿಯಿಂದ ಯುಗ ಯುಗಾಂತರಗಳವರೆಗೆ ಕಾಪಾಡಿಕೊಂಡು ಬಂದಿರುವುದನ್ನು ಗಮನಿಸುವುದಗತ್ಯ. ತುಂಬಾ ಪ್ರಾಚೀನ ಜನಪದ ಒಗಟುಗಳು ಅನೇಕ ಅವಸ್ಥಾಂತರಗಳನ್ನು ಹೊಂದಿ ಈಗ ಬಳಕೆಯಲ್ಲಿರುವ ರೂಪದಲ್ಲಿ ಉಳಿದಿರುವುದು. ಎಲ್ಲ ಭಾಷೆಗಳಲ್ಲಿನ ಹಾಗೆಯೇ ಭಾರತೀಯ ಭಾಷೆಗಳ ಮಟ್ಟಿಗೂ ದಿಟ. ನಮ್ಮ ಶಿಷ್ಟ ಕವಿಗಳು ಒಗಟಿನ ಸ್ವಲ್ಪ ಪ್ರಚಾರ ಕಾರ್ಯದಲ್ಲಿ ತೊಡಗುವುದಕ್ಕಿಂತ ಮೊದಲೇ ಜಾನಪದರು ಒಗಟುಗಳನ್ನು ಸೃಷ್ಟಿಸಿ ಬಳಕೆ ತಂದಿದ್ದರೆಂಬುದನ್ನು ವಿದ್ವಾಂಸರು ಒಪ್ಪಿದ್ದಾರೆ (ibid,pp-4, 'The Nature of the riddle' ಕನ್ನಡ ಒಗಟುಗಳ ಸಮೀಕ್ಷೆ, ಪು. ೩೭) .

ಶಿಷ್ಟ ಕವಿಗಳು ಜಾನಪದ ಒಗಟುಗಳನ್ನು ಶಿಷ್ಟ ಸಾಹಿತ್ಯದ ಚೌಕಟ್ಟಿಗೆ ಒಗ್ಗಿಸಿಕೊಂಡಂತೆಯೇ ಹಲ ಕೆಲವಾದರೂ ಶಿಷ್ಟ ಒಗಟುಗಳು ಜಾನಪದ ಒಗಟುಗಳ ಮೇಲೆ ಪ್ರಭಾವ ಬೀರಿರಲಿಕ್ಕೂ ಸಾಕು. ಯಾವುದೇ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಈ ರೀತಿಯ ಕೊಡು-ಕೊಳ್ಳುವಿಕೆ ಸಹಜವಾದದ್ದೂ ಕೂಡಾ. ಆದರೆ ಇಲ್ಲಿ ಪರಸ್ಪರ 'ಕೊಡು-ಕೊಳೆ' ನಡೆದರೂ ಪರಸ್ಪರ ಎರಡೂ ದಾರಿಗಳು ತಮ್ಮ ತಮ್ಮ ಮೂಲ ಪರಂಪರೆಗೆ ಬದ್ಧವಾಗಿ ಕೆಲಸ ಮಾಡಿರುತ್ತವೆ ಎಂದು ಹೇಳಬಹುದು. ಆದಕಾರಣ ಯಾವತ್ತೂ ಶಿಷ್ಟ ಜಾನಪದ ಇಲ್ಲಿಯೂ ಒಂದು ಬಗೆಯ ಅಂತರವನ್ನು ಕಾಯ್ದುಕೊಂಡಿರುವ ಸಾಧ್ಯತೆ ಇದೆ.

"ವಾಸ್ತವವಾಗಿ ದಾಖಲೆಗೊಳಗಾಗಿ ವಿಶ್ವವಿಖ್ಯಾತವಾಗಿರುವುವು ಶಿಷ್ಟ ಮೂಲದ ಒಗಟುಗಳೇ ವಿನಃ ಜನಪದ ಒಗಟುಗಳಲ್ಲ. ಇದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ. ಜನಪದ ಮೂಲದ ಅನೇಕ ಪ್ರಸಿದ್ಧ ಒಗಟುಗಳನ್ನು ಶಿಷ್ಟ ಕವಿಗಳು ಎತ್ತಿಕೊಂಡು, ಅವುಗಳನ್ನು ಪರಿಷ್ಕರಿಸಿ, ಶಿಷ್ಟಗೊಳಿಸಿ, ಪ್ರಸಿದ್ಧಿಯನ್ನು ಒದಗಿಸಿರುವ ಸಾಧ್ಯತೆಗಳು ಬಹಳವಾಗಿವೆ. ಏಕೆಂದರೆ; ನಾಗರಿಕ ಹಾಗೂ ಜನಪದ ಸಮಾಜ ಮತ್ತು ಸಾಹಿತ್ಯಗಳ ನಡುವೆ ನಿರಂತರ ಕೊಳ್ಳು-ಕೊಡುಗೆಗಳಾಗಿರುವುದು ಸ್ಪಷ್ಟ ಸಂಗತಿ. ಆದ್ದರಿಂದ ಮೂಲ ಜನಪದ ಒಗಟುಗಳು ಕ್ರಮೇಣ ನಾಗರಿಕವಾಗಿರಬಹುದು. ಕೆಲವಾದರೂ ನಾಗರಿಕ ಒಗಟುಗಳು ಜಾನಪದರಲ್ಲಿ ಚಲಾವಣೆ ಪಡೆದಿರಬಹುದು"(Charles Francis Potter in 'Standard Dictionary of Folklore Mythology and Legend'Vol.II,PP 941, 'Riddles') " ಇಷ್ಟಾದರೂ ಜಾನಪದೀಯ ಜಾಯಮಾನವುಳ್ಳ, ಜನಪದ ಸಂಸ್ಕೃತಿಯನ್ನು ಸೂಚಿಸಿರುವಂಥ ಒಗಟುಗಳ ಮೂಲವನ್ನು ಪತ್ತೆ ಹಚ್ಚಬಹುದು. ಅಚ್ಚ ನಾಗರಿಕವಾದ ಒಗಟುಗಳನ್ನು ಗುರುತಿಸುವುದು ಸಾಧ್ಯ"(ಕನ್ನಡ ಒಗಟುಗಳ ಸಮೀಕ್ಷೆ, ಪು. ೨೫).

ಒಗಟು ಶಬ್ದದ ನಿಷ್ಪತ್ತಿಯೇ ತಿಳಿಸುವಂತೆ ಗೂಡಾರ್ಥವನ್ನು ಒಳಗೊಂಡುದುದು ಒಗಟನ್ನು ಒಡಚುವುದೆಂದರೆ ಆ ಗೂಡಾರ್ಥವನ್ನು ಬಹಿರಂಗಗೊಳಿಸುವುದು. ಒಗಟಿನ ಮುಖ್ಯ ಲಕ್ಷಣವೇ ಗೌಪ್ಯತೆ. ಎರಡು ಸಾದೃಶ್ಯ ವಸ್ತುಗಳ ಮೂಲಕ ಒಗಟೊಂದನ್ನು ಕಟ್ಟುವುದಾದರೂ, ಆ ಒಗಟಿನಲ್ಲಿ ಶಬ್ದ ಚಮತ್ಕಾರ, ಪ್ರತಿಮೆ , ಸಂಕೇತಗಳ ಮೂಲಕ ಆ ಒಗಟನ್ನು ಸಂಕೀರ್ಣಗೊಳಿಸಿರುತ್ತದೆ. ಮತ್ತು ಒಗಟೊಂದು ತಾನು ಸೃಷ್ಟಿಸಿಕೊಳ್ಳುವ ಸಂಸ್ಕೃತಿಯ ಎಲ್ಲ ಮಗ್ಗಲುಗಳನ್ನು ಒಳಗೊಂಡಿರುತ್ತದೆ. ಅಂತೆಯೇ 'ಅಂಗಿ ಕಳಿ ಬಾವ್ಯಾಗಿಳಿ' (ಬಾಳೆಹಣ್ಣು) ಎಂಬ ಸರಳ ರೂಪಾದ ಒಗಟುಗಳಿಂದ ಹಿಡಿದು 'ಮರದಾಗ ಮರ ಹುಟ್ಟಿ, ಮರಚಿತ್ರ ಕಾಯಾಗಿ, ತಿನ್ನಬಾರದ ಹಣ್ಣು ಬಲುರುಚಿ' (ಮಗು) ಎಂಬ ಸಂಕೀರ್ಣ ಒಗಟುಗಳವರೆಗೆ ಅದರ ರಚನಾ ಕೌಶಲ್ಯವಿರುತ್ತದೆ. 'ಬೆಳ್ಳಿ ಘಡಿ, ನೆಲಕ್ಕೆ ಬಡಿ' (ಸಿಂಬಳ) ಎಂಬ ಹಾಸ್ಯಮಯತೆಯ ಜೊತೆಗೆ 'ಅಂಗೈಯಗಲ ಗದ್ದೆ, ಗದ್ದೆಗೆ ನೀರು, ನೀರಿಗೆ ಬೇರು, ಬೇರಿಗೆ ಬೆಂಕಿ' (ದೀಪ) ಎಂಬ ಗಂಭೀರ ರೂಪದ ಒಗಟುಗಳೂ ಇವೆ.

ಒಂದು ಮರಕ್ಕೆ ಹನ್ನೆರಡು ಕೊಂಬೆ
ಕೊಂಬೆಗೆ ಮೂವತ್ತೆಲೆ
ಅದರಲ್ಲಿ ಅರ್ಧ ಕಪ್ಪು
ಇನ್ನರ್ಧ ಬಿಳುಪು.

( ಒಂದು ವರ್ಷ, ತಿಂಗಳು, ಅಮಾವಾಸೆ, ಹುಣ್ಣಿಮೆ).

ಈ ವಿಚಿತ್ರ ರೀತಿಯ ಸಂಖ್ಯಾತ್ಮಕ ಚಿತ್ರಗಳುಳ್ಳ ಒಗಟುಗಳೂ ಸಹ ಇವೆ. ಹೀಗೆ ಒಗಟುಗಳ ಲೋಕ ತುಂಬಾ ವಿಸ್ತಾರ. ಒಗಟುಗಳ ವಿಸ್ತೃತ ಲೋಕ ಅನೇಕ ಶಿಷ್ಟ ಕವಿಗಳನ್ನು ಪ್ರಭಾವಿಸಿದಂತೆ ಕನ್ನಡದ ನಮ್ಮ ಸರ್ವಜ್ಞ ಕವಿಯನ್ನು ಪ್ರೇರೇಪಿಸಿದ್ದು ಸಹಜವಾಗಿದೆ. ಸರ್ವಜ್ಞ ತಾನು ರಚಿಸಿದ ಅಸಂಖ್ಯ ತ್ರಿಪದಿಗಳಲ್ಲಿ 'ಒಗಟು'ಗಳಿಗೂ ಸ್ಥಾನ ಕೊಟ್ಟಿದ್ದಾನೆ. ಸರ್ವಜ್ಞನು ತನ್ನ ' ಒಗಟೆ ಪದ್ಧತಿ'ಯಡಿ ರಚಿಸಿರುವ ತ್ರಿಪದಿಗಳೆಲ್ಲಾ ವಿವಿಧ ರೀತಿಯ ಒಗಟುಗಳೇ ಆಗಿವೆ. ವರ್ಗೀಕರಣದ ದೃಷ್ಟಿಯಿಂದ ಸರ್ವಜ್ಞನ ಒಗಟುಗಳನ್ನು ಪ್ರಾಕೃತಿಕ ಒಗಟುಗಳು, ಸಾಂಸ್ಕೃತಿಕ ಒಗಟುಗಳು ಎಂದು ಎರಡು ರೀತಿಯಾಗಿ ವಿಭಾಗಿಸಿ ಅಭ್ಯಾಸಿಸಬಹುದು.

ಮೂಲತಃ ಸರ್ವಜ್ಞನ ಅನೇಕ ವಚನಗಳು 'ಬೆಡಗಿನ' ವಚನಗಳ ಮಾದರಿಯವೇ ಆಗಿವೆ.

ಹರಿವ ಹಕ್ಕಿಯ ನುಂಗಿ । ನೊರೆವಾಲ ಕುಡಿದಾತ ।
ಹರಿ ಹರನಕ್ಕು ಅಜನಕ್ಕು ಲೋಕಕ್ಕೆ ।
ಅರಿವು ತಾನಕ್ಕು ಸರ್ವಜ್ಞ.

ಆರರಟ್ಟುಳಿಗಳನು । ಮೂರು ಕಂಟಕರನ್ನು
ಏರು ಜವ್ವನದ ತಡೆದಿಹರೆ ಶಿವ ತಾನು ।
ಬೇರೆ ಇಲ್ಲೆಂದ ಸರ್ವಜ್ಞ.

ವಿಷಯದ ಬೇರನ್ನು । ಬಿಸಿ ಮಾಡಿ ಕುಡಿದಾತ ।
ಪಶುಪತಿಯಕ್ಕು ಸತಿನಕ್ಕು, ಮೆಯ್ಯಣ್ಣ
ಮಿಸುನಿಯಂತಕ್ಕು ಸರ್ವಜ್ಞ.

( ಉತ್ತಂಗಿ ಚೆನ್ನಪ್ಪನ ಸರ್ವಜ್ಞನ ವಚನಗಳು, ಪು.೪೦).

ಮುಂತಾದ ಪಾರಮಾರ್ಥಿಕ ವಚನಗಳು ಬೆಡಗಿನ ವಚನಗಳಾಗಿವೆ.

ಸೀಗೆ ಬಾಗಿಯ ಕಾಯಿ । ಕಾಗೆ ಮೋರೆಯ ಗಡ್ಡ ।
ನಾಗರವು ಸತುವಿನೊಡಗೂಡೆ । ಹೇಮ ತಾ
ನಾಗಲೇಬೇಕು ಸರ್ವಜ್ಞ.

ಎಂಬ ರಸ ಪದ್ಧತಿಯ ಕೆಲವು ವಚನಗಳೂ ಬೆಡಗಿನ ವಚನಗಳ ಮಾದರಿಯವೇ ಆಗಿವೆ. ಸರ್ವಜ್ಞನ 'ಕಾಲಜ್ಞಾನ ಪದ್ಧತಿ' ಹಾಗೂ 'ಜ್ಯೋತಿಷ್ಯ ಪದ್ಧತಿ'ಯ ವಚನಗಳು ಸಹ ಬೆಡಗಿನ ವಚನಗಳೇ ಆಗಿವೆ. ಉದಾಹರಣೆಗೆ;

ರಂಧ್ರಗತಿಯಾದಿತ್ಯ । ನೊಂದಾಗಿಯರ್ಧಿಸುತ
ಅಂದಿನ ತಿಥಿಯನೊಡಗೂಡೆ ನಕ್ಷತ್ರ
ಮುಂದೆ ಬಂದಿಹುದು ಪರಮಾರ್ಥ.

...... ದೇಹದಲ್ಲಿ ಒಂಭತ್ತು ರಂಧ್ರಗಳಿರುವುದರಿಂದ , ಈ ಶಬ್ದ ಒಂಭತ್ತಕ್ಕೆ ಸಂಜ್ಞೆ. ರಂಧ್ರಗತಿ = ಸೂರ್ಯ ಹಾದು ಹೋಗುವ ೯ನೇ ಸ್ಥಾನ (೧೨ ರಾಶಿಗಳು, ೧೨ ಸ್ಥಾನಗಳಾಗಿವೆ). ಯಾವೊಂದು ದಿವಸ ನಕ್ಷತ್ರ ತಿಳಿಯಬೇಕಾದರೆ, ಆ ದಿವಸ ಸೂರ್ಯನಿರುವ ರಾಶಿಗೆ ಧನು ರಾಶಿಯಿಂದ ( ಇದು ೯ನೆಯದು) ಎಣಿಸಿ ಬಂದಷ್ಟರಲ್ಲಿ ಆ ದಿವಸದ ತಿಥಿಯ ಕೂಡಿಸಲಾಗಿ ಯಾವ ಸಂಖ್ಯೆ ಹೊರಡುತ್ತದೆಯೋ ಅದರಲ್ಲಿ ಒಂದನ್ನು ಕಳೆದು ಉಳಿದ ಸಂಖ್ಯೆಯ ನಕ್ಷತ್ರವಿರುವುದು. ಉದಾಹರಣೆಗೆ; ೧೮೬೭ನೇ ಇಸವಿ ೧ನೇ ಜುಲೈ : ಈ ದಿವಸದ ತಿಥಿ : ಆಷಾಢ ಶುದ್ಧ ೪. ಈ ದಿವಸ ಸೂರ್ಯ ಮಿಥುನ ರಾಶಿಯಲ್ಲಿರುವುದರಿಂದ ಧನುರಾಶಿಯಿಂದ ಎಣಿಸಿದರೆ ಏಳು ಬರುತ್ತದೆ. ಇದಕ್ಕೆ ೪ ಕೂಡಿದರೆ ೧೧ ಬರುವುದು. ಇದರಲ್ಲಿ ೧ ಕಳೆದರೆ ೧೦ ಉಳಿಯುತ್ತದೆ. ಹತ್ತನೆಯ ನಕ್ಷತ್ರ ಮಘ. ಈ ಪ್ರಕಾರ ನೋಡಬೇಕು. ಬಹುಳ ಪಕ್ಷವಾದರೆ ಶುದ್ಧ ಪಕ್ಷದ ೧೫ ದಿನಗಳಲ್ಲದೆ, ಆ ಬಹುಳ ಪಕ್ಷದ ತಿಥಿಗಳನ್ನು ಸಹ ಕೂಡಿಸಲಾಗಿ ೨೭ಕ್ಕಿಂತ ಹೆಚ್ಚಿನ ಸಂಖ್ಯೆ ಕೂಡಿಬಂದರೆ ನಕ್ಷತ್ರ ಸಂಖ್ಯೆ ಇಪ್ಪತ್ತೇಳು ಕಳೆದು, ಉಳಿದ ಸಂಖ್ಯೆಯೆಷ್ಟೋ ಅಷ್ಟನೇ ನಕ್ಷತ್ರ ಸರಿ. ಉದಾಹರಣೆಗೆ; ೧೮೬೨ನೆಯ ಇಸ್ವಿ ೨೫ನೆಯ ಜುಲೈ. ಈ ದಿವಸದ ತಿಥಿ ಆಷಾಢ ಬಹುಳ ೧೪. ಈ ದಿವಸ ಸೂರ್ಯ ಕರ್ಕಾಟಕದಲ್ಲಿರುತ್ತಾನೆ. ಧನುರಾಶಿಯಿಂದ ಕರ್ಕಾಟಕಕ್ಕೆ ಎಣಿಸಿದರೆ ೮ ಬರುತ್ತದೆ. ತಿಥಿಗಳು ಶುದ್ಧ ಪಕ್ಷದವು ೧೫, ಬಹುಳ ಪಕ್ಷದವು ೧೪. ಅಂತೂ ೨೯ ಬರುವುದು. ಇದಕ್ಕೆ ೮ ಕೂಡಿಸಲಾಗಿ ೩೭ ಬರುವುದು. ಇದರಲ್ಲಿ ೧ ಕಳೆದರೆ ೩೬ ಉಳಿಯುವುದು. ಇದರಲ್ಲಿ ನಕ್ಷತ್ರ ಸಂಖ್ಯೆ ೨೭ ಹೋಗಲಾಗಿ ೯ ಉಳಿಯುವುದು. ಅಂದರೆ ಈ ದಿವಸದಲ್ಲಿ ೯ನೇ ನಕ್ಷತ್ರವಿರುತ್ತದೆ. ಅದು ಆಶ್ಲೇಷ'' (ಪರಮಾರ್ಥ, ಡಾ॥ ಎಲ್. ಬಸವರಾಜು,ಪು.೧೯೯).

ಸರ್ವಜ್ಞನು ಒಗಟಿ ಪದ್ಧತಿಯಡಿ ರಚಿಸಿದ ವಚನಗಳೆಲ್ಲವೂ ಜನಪದ ಮಾದರಿಯ ವಿವಿಧ ರೀತಿಯ ಒಗಟುಗಳೇ ಆಗಿವೆ. ಅಂದರೆ ಜಾನಪದವನ್ನು ಶಿಷ್ಟಕ್ಕೆ ಒಗ್ಗಿಸಿಕೊಂಡಾಗ ಸಹಜವಾಗಿಯೇ ಅವುಗಳಲ್ಲಿಯ ಜಾನಪದೀಯ ಗಾಢತೆ ನಶಿಸಿ, ಅವು ಶಿಷ್ಟದ ಚೌಕಟ್ಟಿಗೆ ಒಳಗಾಗಿಬಿಟ್ಟಿವೆ. ಮುಖ್ಯವಾಗಿ ಛಂದಸ್ಸಿನ ವಿಷಯದಲ್ಲಿ ಈ ಅಂಶ ಎದ್ದು ಕಾಣುತ್ತದೆ. ಸಾಮಾನ್ಯವಾಗಿ ಜಾನಪದ ಒಗಟುಗಳು ಮುಕ್ತ ಛಂದಸ್ಸಿನಲ್ಲಿ ರಚಿತವಾಗಿವೆ. ಉದಾಹರಣೆಗೆ ''ಅಂಗಿ ಕಳಿ ಬಾವ್ಯಾಗಿಳಿ'' - (ಬಾಳೆಹಣ್ಣು). 'ಗಿಡ್ಡ ಹುಡ್ಗಿ ನೆತ್ತಿಗೆ ಬಡದ್ರ ಮನೆ ತುಂಬ ಮಕ್ಳು'- (ಬಳ್ಳೊಳ್ಳಿ).

ಅಕ್ಕ ಅಕ್ಕಾ ಗಿಡಾ ನೋಡು
ಗಿಡ ತುಂಬಾ ಕಾಯ್ ನೋಡು
ತಿಂದೋವ್ರ ಬಾಯ್ ನೋಡು....... (ಏಲಕ್ಕಿ)

ಆಗ ಮಾವ ಅನಲಿಲ್ಲ
ಈಗ ಮಾವ ಅನಲಿಲ್ಲ
ನನ ಶಾಟ ಬಂದು
ಅವರ ಹಲ್ಲಿಗೆ ಸಿಕ್ಕೊಂಡಾಗ
ಮಾವ ಅಂದ್ರು. (ಮಾವಿನಹಣ್ಣು)

ಕುಂಬದ ಮೇಲೆ ಗುಂಬ
ಗುಂಬದ ಮೇಲೆ ಬಾಗೂರು
ಬಾಗೂರ ಮೇಲೆ ಮೂಗೂರು
ಮೂಗೂರು ಮೇಲೆ ಕಣ್ಣೂರು
ಕಣ್ಣೂರು ಮೇಲೆ ಕರಿಗುಡ್ಡ
ಕರಿಗುಡ್ಡದ ಮೇಲೆ ಕುರಿಹಿಂಡು ಮೇಯ್ತಾವು. (ಹೇನು)

ಹೀಗೆ ಜಾನಪದ ಒಗಟುಗಳ ರಚನೆ ಛಂದಸ್ಸಿನಲ್ಲಿದ್ದರೆ, ಸರ್ವಜ್ಞನ ಒಗಟುಗಳೆಲ್ಲವೂ ತ್ರಿಪದಿಗಳಲ್ಲಿ ರಚಿತವಾಗಿವೆ. ಉದಾಹರಣೆಗೆ;

ಹತ್ತು ಸಾಸಿರ ಕಣ್ಣು ನೆತ್ತಿಲಾದರು ಬಾಲ
ಹುತ್ತಿನ ಹುಳವ ಹಿಡಿಯುವುದು ಕಲಿ ಜನಕ
ಮೊತ್ತವಿದ ಪೇಳಿ ಸರ್ವಜ್ಞ. (ನವಿಲು)

ಈ ತ್ರಿಪದಿ ಜಾನಪದೀಯ ಛಂದೋ ಪ್ರಕಾರವಾದರೂ ಜಾನಪದದಲ್ಲಿ ಅದೊಂದು ಪ್ರಕಾರ ಮಾತ್ರ. ಜಾನಪದದಲ್ಲಿ ತ್ರಿಪದಿಯಂತೆ ದ್ವಿಪದಿ, ಚೌಪದಿ, ಷಟ್ಪದಿ, ಸಾಂಗತ್ಯ ಅಲ್ಲದೆ, ಹಾಡಿನ ರೂಪದ ಒಗಟುಗಳೂ ಇವೆ. ಒಂದೇ ವಾಕ್ಯದ ಸರಳ ಒಗಟುಗಳೂ ಇವೆ.

ಜಾನಪದದಲ್ಲಿ ಮುಕ್ತ ಛಂದಸ್ಸಿನಲ್ಲಿ ರಚಿತಗೊಂಡು ಒಗಟು ಪ್ರಕಾರ ಸರ್ವಜ್ಞನ ವಚನಗಳಲ್ಲಿ ತ್ರಿಪದಿಯೆಂಬ ಛಂದೋ ಪ್ರಕಾರದ ಶಿಸ್ತಿಗೆ ಒಳಪಟ್ಟುಬಿಟ್ಟಿದೆ. ಇದು ಮೊದಲನೆಯ ಅಂಶ. ಇನ್ನು ಎರಡನೆಯದಾಗಿ-ಜಾನಪದ ಒಗಟುಗಳ ಜೀವಾಳವೇ ಸಾದೃಶ್ಯ ಪರಿಜ್ಞಾನ. ಜಾನಪದ ಒಗಟಿನಲ್ಲಿ ಎರಡು ಸಾದೃಶ್ಯ ವಸ್ತುಗಳಿರುತ್ತವೆ. ಒಂದು ಉಪಮಾನ, ಇನ್ನೊಂದು ಉಪಮೇಯ. ಇಲ್ಲಿ ಉಪಮಾನ ವಾಚ್ಯವಾಗಿದ್ದರೆ, ಉಪಮೇಯ ಗೂಢವಾಗಿರುತ್ತದೆ. ಉಪಮಾನದ ಆಧಾರದಿಂದ ಉಪಮೇಯವನ್ನು ಪತ್ತೆಹಚ್ಚಬೇಕಾಗಿರುತ್ತದೆ. ಉದಾಹರಣೆಗೆ ಆಕಾಶಕ್ಕೆ ಸಂಬಂಧಪಟ್ಟ ಕೆಲವು ಒಗಟುಗಳನ್ನು ಪರಿಶೀಲಿಸಬಹುದು.

ಅಮ್ಮನ ಸೀರೆ ಮಡಿಸೋಕಾಗಲ್ಲ,
ಅಪ್ಪನ ದುಡ್ಡು ಎಣಿಸೋಕಾಗಲ್ಲ. (ಆಕಾಶ ಮತ್ತು ನಕ್ಷತ್ರ)

ನಿಸರ್ಗದಲ್ಲಿನ ಅನೇಕ ವಸ್ತುಗಳಲ್ಲಿ ಸಾದೃಶ್ಯವನ್ನು ಗುರುತಿಸಿದ ಮಾನವ ಅವುಗಳನ್ನು ತನ್ನ ಒಗಟುಗಳಲ್ಲಿ ತುಂಬಾ ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾನೆ. '' ಈ ಒಗಟು ಕಟ್ಟಿದ ಕವಿಗೆ ನೀಲಿ ಆಗಸ ಅಮ್ಮನ ಸೀರೆಯಂತೆ ತೋರಿದೆ. ಲೋಕವನ್ನೆಲ್ಲಾ ಆಸ್ವಾದಿಸಿ ನೆರಳಾಗಿ ನಿಂತಿರುವ ಬಾನನ್ನು ಅವನು ಆತ್ಮೀಯ ಶಿಶುಭಾವದಿಂದ ಕಂಡಿದ್ದಾನೆ. ನಿಜಕ್ಕೂ ಈ ಕಲ್ಪನೆ ಭವ್ಯವೆನ್ನಬೇಕು. 'ಮತ್ತೊಂದು ಒಗಟು ಅಂಗೈ ಅಗಲದ ರೊಟ್ಟಿಗೆ ಲೆಕ್ಕವಿಲ್ಲದಷ್ಟು ಉಪ್ಪಿನಕಾಯಿ' ಎನ್ನುತ್ತದೆ. ಇಲ್ಲಿ ರೊಟ್ಟಿ ಎಂದರೆ ಚಂದ್ರ, ಉಪ್ಪಿನ ಕಾಯಿಗಳೆಂದರೆ ನಕ್ಷತ್ರಗಳು. ಈ ಕಲ್ಪನೆ ವಿಲಕ್ಷಣವೆನಿಸಿದರೂ ಅಪೂರ್ವ. ಹೀಗೆಯೇ 'ನೀಲಿ ಕೆರೇಲಿ ಬಿಳಿ ಮೀನು' ಎಂಬ ಒಗಟು (ಜನಪದ ಸಾಹಿತ್ಯ ಪ್ರವೇಶಿಕೆ, ಪು. ೨೯). ಆದರೆ ಸರ್ವಜ್ಞನ ವಚನಗಳಲ್ಲಿ (ಒಗಟುಗಳಲ್ಲಿ) ಈ ರೀತಿಯ ಸಾದೃಶ್ಯ ಕಲ್ಪನೆ ಅಷ್ಟೊಂದು ಪರಿಣಾಮಕಾರಿ ಎನಿಸುವುದಿಲ್ಲ.

ಬಟ್ಟಲದ ಬಾಯಂತೆ ಹುಟ್ಟುವುದು ಜಗದೊಳಗೆ
ಮುಟ್ಟದದು ತನ್ನ ಹೆಂಡಿರನು ಕವಿಗಳಲಿ
ಬಿಟ್ಟರಿವ ಪೇಳಿ ಸರ್ವಜ್ಞ. - (ಸೂರ್ಯ)

ಇಲ್ಲಿ ಸರ್ವಜ್ಞ ಸೂರ್ಯನನ್ನು ಮೊದಲು 'ಬಟ್ಟಲದ ಬಾಯಿಗೆ' ಹೋಲಿಸಿ ಅಂದರೆ ಒಂದು ಪರಿಕರಕ್ಕೆ (ಸಾಮಾನು) ಹೋಲಿಸಿ ಒಡನೆಯೇ 'ಮುಟ್ಟದದು ತನ್ನ ಹೆಂಡಿರನು' ಎಂದು ಆ ಹೋಲಿಕೆಯನ್ನು ಮನುಷ್ಯರತ್ತ ತಿರುಗಿಸಿ ಸುಳಿವು ಕೊಡುತ್ತಾನೆ. ಹೀಗಾಗಿ ಇಲ್ಲಿ ಸಾದೃಶ್ಯ ಕಲ್ಪನೆ ಅಬದ್ಧವೆನಿಸುತ್ತದೆ. ಹೀಗೆ ಸಾದೃಶ್ಯ ದೃಷ್ಟಿಯಿಂದಲೂ ಸರ್ವಜ್ಞನ ಒಗಟುಗಳು ಜಾನಪದೀಯ ಗಾಢತೆಯನ್ನು ಕಳೆದುಕೊಳ್ಳುತ್ತವೆ.

ಸರ್ವಜ್ಞನ ಒಗಟುಗಳನ್ನು ಮುಖ್ಯವಾಗಿ ಪ್ರಾಕೃತಿಕ ಒಗಟುಗಳು ಮತ್ತು ಸಾಂಸ್ಕೃತಿಕ ಒಗಟುಗಳು ಎಂದು ವಿಭಾಗಿಸಿ ಅಭ್ಯಾಸಿಸಬಹುದಾದರೂ, ಒಗಟಿನ ಹೊರಮೈಯಲ್ಲಿಯೇ ಒಗಟಿನ ಗೂಢತೆಯನ್ನು 'ಜಾಣ್ಮೆಯಿಂದ ಬಚ್ಚಿಟ್ಟಿರುವ ಒಗಟುಗಳು' ಮತ್ತು 'ಸನ್ನಿವೇಶವೊಂದನ್ನು ಅನಾವರಣಗೊಳಿಸುವ ಒಗಟುಗಳು' ಎಂದು ಮತ್ತೆ ಇನ್ನೆರೆಡು ಭಾಗಗಳನ್ನು ಮಾಡಬಹುದು.

## ೭.೫.೨. ಪ್ರಾಕೃತಿಕ ಒಗಟುಗಳು :

ಜಾನಪದರೆಲ್ಲರೂ ಸಾಮಾನ್ಯವಾಗಿ ನಿಸರ್ಗಕ್ಕೆ ತುಂಬಾ ಹತ್ತಿರವಾದವರು. ನಿಸರ್ಗವೇ ಅವರಿಗೆ ಪಾಠಶಾಲೆ. ಪ್ರಕೃತಿಯಲ್ಲಿ ನಡೆಯುವ ವಿದ್ಯಾಮಾನಗಳನ್ನು ತುಂಬಾ ಆಸಕ್ತಿ, ಕುತೂಹಲಗಳಿಂದ ಗಮನಿಸುವವರು. ಆ ವಿದ್ಯಾಮಾನಗಳ ಹಿಂದೆ ಅಗೋಚರವಾದ 'ಶಕ್ತಿಯೊಂದಿದೆ' ಎಂದು ಗಾಢವಾಗಿ ನಂಬಿರುವವರು. ಆದಕಾರಣ ಸಹಜವಾಗಿಯೇ ಅವರು ರಚಿಸಿರುವ ಒಗಟುಗಳಲ್ಲಿ ಪ್ರಾಕೃತಿಕ ಅಂಶಗಳಿಗೆ ಅಗ್ರಸ್ಥಾನ. ಪ್ರಕೃತಿಯಲ್ಲಿರುವ ಅನೇಕಾನೇಕ ವಿಷಯ, ವಸ್ತುಗಳು ಅವರ ಒಗಟುಗಳಿಗೆ ಆಕರಗಳಾಗಿವೆ. ಜಾನಪದ ಒಗಟುಗಳಿಂದ ಪ್ರಭಾವಿತನಾದ ಸರ್ವಜ್ಞ ಕವಿಯ ಒಗಟುಗಳಲ್ಲಿಯೂ ಕೂಡ ಪ್ರಾಕೃತಿಕ ಅಂಶಗಳಿವೆ. ಉದಾಹರಣೆಗೆ;

ಕಾಲಿಲ್ಲದೆ ಹರಿಗು ತೋಳಿಲ್ಲದೆ ಒರಗು
ನಾಲಿಗಿಲ್ಲದಲೆ ಉಲಿವುದು ಕವಿ ಕುಲದ
ಮೇಲುಗಳು ಪೇಳಿ ಸರ್ವಜ್ಞ.

ಈ ಮೇಲಿನ ಒಗಟಿನಲ್ಲಿ ಸರ್ವಜ್ಞ ಕವಿ ನದಿಯೊಂದನ್ನು ಕಾಲು, ಕೈ, ನಾಲಿಗೆ ಹೀಗೆ ದೇಹದ ಅವಯವಗಳ ಮನುಷ್ಯನೊಬ್ಬನ ರೂಪಕಗಳನ್ನು ಬಳಸಿ ಒಗಟು ಕಟ್ಟಿದ್ದಾನೆ. ಈ ಒಗಟಿಗೆ ಉತ್ತರ ನದಿಯೆಂದು. ಆದರೆ ಇದೇ ಒಗಟನ್ನು ಜನಪದ ಕವಿಯೊಬ್ಬ ಒಂದು 'ಮರ'ದ ರೂಪಕದಿಂದ ಕಟ್ಟುವುದು ಕುತೂಹಲಕರವಾಗಿದೆ.

ಅಂಕುಡೊಂಕಾದ ಮರ, ಶಂಖ ತೀರ್ಥದ ಮರ
ಬ್ರಹ್ಮ ಭಟ್ಟ ಬಂದರೂ ಕಡಿಯಲಾರದ ಮರ.
(ಕನ್ನಡ ಸಾವಿರದ ಒಗಟುಗಳು, ಪು. ೩).

ನದಿ ಹಾಗೂ ಅದು ಹರಿಯುವ ಪಾತ್ರ ಅಂದರೆ, ಆ ನದಿಯ ಇತರೆ ಕವಲುಗಳು ಜನಪದ ಒಗಟುಗಾರನಿಗೆ ಒಂದು ಮರದಂತೆ ಕಂಡಿದೆ. ಸಹಜವಾಗಿಯೇ ಆತನು ಆ ಮರದ ರೂಪಕವನ್ನು ಬಳಸಿಕೊಂಡು ಅಂಕು ಡೊಂಕಾದ ಮರ , ಶಂಖು ತೀರ್ಥದ ಮರ ಎಂಬ ಸುಳಿವು ನೀಡಿ ಒಗಟನ್ನು ರಚಿಸಿದ್ದಾನೆ. ಇಲ್ಲಿ ಶಿಷ್ಟ ಕವಿಯ ರಚನೆಯಲ್ಲಿ 'ಮನುಷ್ಯ' ರೂಪಕವಾಗಿಯೂ ಜನಪದ ಕವಿಯ ಕೈಯಲ್ಲಿ 'ಮರ' ರೂಪಕವಾಗಿಯೂ ಕೆಲಸ ಮಾಡಿರುವ ಹಿಂದಿನಾಂಶಗಳು ಪ್ರಕೃತಿಗೆ ಹತ್ತಿರವಾದಾಗ ಜನಪದರ ಮನೋಭಾವನೆಯನ್ನೇ ತಿಳಿಸುತ್ತವೆ. ಪ್ರಕೃತಿಯಿಂದ ಅಂತರ ಕಾಯ್ದುಕೊಂಡ ಶಿಷ್ಟ ಕವಿಗಳದು 'ಮನುಷ್ಯ' ಕೇಂದ್ರೀಕೃತವಾದ, ನಾಗರಿಕ ಸಮಾಜದ ಮನೋಭಾವ' ಆತನನ್ನು ಮನುಷ್ಯ ಕೇಂದ್ರಿತ ರೂಪಕಕ್ಕೆ ಪ್ರೇರೇಪಿಸದೆ ಸರ್ವಜ್ಞ ಕವಿಯು ಇದೇ ಒಗಟು ಜನಪದರಲ್ಲಿ ತುಸು ಬದಲಾವಣೆಯೊಂದಿಗೆ;

ಕಾಲಿಲ್ಲದೇ ನಡೆವುದು
ತಲೆ ಇಲ್ಲದೆ ನುಡಿವುದು
ಮೇಲು ಕೆಳಗಾಗಿ ಓಡುವುದು.

ಎಂದು ಚಾಲ್ತಿಯಲ್ಲಿದೆ (ಕನ್ನಡ ಸಾವಿರದ ಒಗಟುಗಳು, ಪು. ೪೪). ಹೀಗೆಯೇ ಜೇನನ್ನು ಕುರಿತ ಒಂದು ಒಗಟನ್ನು ಪರಿಶೀಲಿಸಬಹುದು.

ಹುಟ್ಟಿಗೆ ಅಲಿವಕ್ಕು, ಕೊಟ್ಟಗೆ ಕೆಸರಕ್ಕು
ಬಟ್ಟಲ ಮೇಲೆ ಗಿಳಿಯಕ್ಕು ತೋಟ ದೊ
ಳಿಟ್ಟಗೆಯಕ್ಕು ಪರಮಾರ್ಥ.
(ಪರಮಾರ್ಥ, ವಚನ ೪೩, ಪು. ೧೯೫).

'' ಈ ಒಗಟಿಗೆ ಉತ್ತರ ಜೇನು. ಹುಟ್ಟಿ, ಹಿಂಡಿ ಹಾಳಾಗುತ್ತದೆ. ಹಿಂಡಿ ಕೊಟ್ಟವನಿಗೆ ಕೈ ಅಂಟಾಗುತ್ತದೆ. ಬಟ್ಟಲಲ್ಲಿ ತಿಳಿಯಾಗುತ್ತದೆ. ಈ ಜೇನು ಯಾರ ತೋಟದಲ್ಲಿರುವುದೋ ಅದು ಅವನದೇ ಆಗಿರುತ್ತದೆ''.

ಇದೇ ಒಗಟು ಅಂದರೆ ಜೇನಿಗೆ ಸಂಬಂಧ ಪಟ್ಟ ಒಗಟು ಜನಪದರಲ್ಲಿ ಈ ರೀತಿಯಾಗಿವೆ;

ಆ ನಾಡದ ಹಕ್ಕಿ ಈ ನಾಡದ ಹಕ್ಕಿ
ಬರಬರ ಬಂತು ಬಂಗಾರದ ಗುಡಿ ಕಟ್ಟಿತು
ದುಷ್ಕಾಳ ಬಂತು ಹಾಳಾಗಿ ಹೋಯ್ತು.

(ಕನ್ನಡ ಸಾವಿರದ ಒಗಟುಗಳು, ಪು. ೧೮).

ಆರಿನಾಡವರ ಬಂದಾರ
ಕಾರೀ ಕಂಟ್ಯಾಗ ಇಳಿದಾರ
ಮುತ್ತಿನ ಡೇರೆ ಹೊಡದಾರ (ಅದೇ ಪುಟ).

ಅತ್ತಲಿಂದೆ ಬಂದೇವಮ್ಮ
ಮುತ್ತಿನ ಡೇರೆ ಹೊಡೆದೇವಮ್ಮ
ಪಾಪಿ ಕೈಯಾಗ ಸಿಕ್ಕೇವಮ್ಮ
ಪರದೇಶಕ್ಕಾಗಿ ನಡೆದೇವಮ್ಮಾ. (ಪು. ೯).

ಕುಠಾರಿ ಗೊಂಬೆ, ಮಿಠಾಯಿ ಪಟ್ಟಣ ( ಪು. ೪೯).

ಗುಡು ಗುಡು ಸಿದ್ಧಪ್ಪ
ಮರದ ಮ್ಯಾಲ ಮನಿ ಕಟ್ಯಾನ. (ಪು. ೫೭)

ಭಲೆಲೇ ಬೀರ ಬಂದ
ಜಾಡಿಸಿ ಕಂಬಳಿ ಹೊದ್ದುಕೊಂಡ
ಕುರಿ ಹೊಡದು ದಡ್ಡಿ ಹಿಂಡಿ ಕೊಂಡ (ಪು. ೯೩).
ಹಡಗದಂತಹ ಎಮ್ಮೆ
ಹೆಡಿಗೆಯಂತಹ ಕೆಚ್ಚಲು
ಹಾಲು ಅಳೆದು ಮಾರೋದು
ಸೆಗಣಿ ತೂಗಿ ಮಾರೂದು. (ಪು. ೧೧೯).

ಈ ಮೇಲಿನ ಜೇನಿಗೆ ಸಂಬಂಧಪಟ್ಟ ಎಲ್ಲ ಒಗಟುಗಳಲ್ಲಿ ಪ್ರಾಕೃತಿಕ ಅಂಶಗಳು ದಟ್ಟವಾಗಿ ಒಡಮೂಡಿವೆ. ಹಕ್ಕಿ, ಮುತ್ತಿನ ಡೇರೆ, ಕುರಿ ಹಿಂಡು, ಹಡಗದಂತಹ ಎಮ್ಮೆಯ ಕೆಚ್ಚಲು, ಹಾಲು, ಸೆಗಣಿ, ಎಮ್ಮೆಯ ಹಿಂಡು ಮೊದಲಾದ ಎಲ್ಲ ರೂಪಕಗಳನ್ನು ಜಾನಪದರು ಪ್ರಕೃತಿಯೊಂದಿಗೆ ಹಾಸುಹೊಕ್ಕಾದ ಅಂಶಗಳನ್ನು ತಿಳಿಯಪಡಿಸುತ್ತಾರೆ. ಅದೇರೀತಿ ಸರ್ವಜ್ಞನ ಪ್ರಾಕೃತಿಕ ಅಂಶಗಳನ್ನು ಆತನ ವಚನಗಳ ಒಗಟುಗಳಲ್ಲಿ ನೋಡಬಹುದು.

**ಮೆಣಸಿನಕಾಯಿ :**

ಕಚ್ಚಿದರೆ ಕಚ್ಚುವುದು ಕಿಚ್ಚಲ್ಲ, ಚೇಳಲ್ಲ
ಆಶ್ಚರ್ಯವಲ್ಲ । ಅರಿದಲ್ಲ ಈ ಮಾತು
ನಿಶ್ಚಯವೆಂದ ಸರ್ವಜ್ಞ.

೧. ಉದ್ದುದವನೇ ಉರಿಮುಖದವನೆ
ಸುದ್ದಿ ಹೇಳೋ ಸೂಳೇಮಗನೆ
ಬಾಯಿ ತೆರಿಸೋ ಬಾಡ್ಯಾನ ಮಗನೆ (ಪು.೨೩)

೨. ಕುಡನಿ ಚೀಲದಾಗ ರತ್ನ ತುಂಬ್ಯಾವ (ಪು.೪೬)

೩. ಕೆಂಪನ್ನ ಹುಡುಗಿ ಸಣ್ಣನ್ನಾಕಿ ರಾಜನನ್ನೂ
ಅಳಸಾಕಿ (ಪು. ೫೨).

೪. ರತ್ನದ ಚೀಲದಾಗ ಮುತ್ತ ತುಂಬ್ಯಾರ
(ಪು.೧೦೮)

೫. ಹಸಿರು ಸೀರೆಯ ಹುಡುಗಿ ಎಲ್ಲರಿಗೆ ಬೇಕಾಗಿ
ಕಡಿಯಾಕ ಹೋದ್ರ ಸುಡುತಾಳ (ಪು. ೧೨೫).

೬. ಹೊರಕೋಟೆಯಲ್ಲ ಕುಂಕುಮ ಶೃಂಗಾರ
ಒಳಕೋಟೆಯೆಲ್ಲ ಬೆಳ್ಳಿ-ಬಂಗಾರ ಒಳಗಿರೆ
ಹಾಹಾಕಾರ, ಹೊರಗಿರೆ ನಮಸ್ಕಾರ
(ಪು. ೧೩೧).

**ತೆಂಗು ಮತ್ತು ತೆಂಗಿನಕಾಯಿ :**

ಮೀನು ಮುಟ್ಟದ ವಾರಿ ದಾನವಾರಿಯ ತಾನು
ಮಾನವರಿಗಾಗಿ ಬೆಳೆಸಿಹನು ಕವಿಗಳಲಿ
ಮಾನಿಸರು ಪೇಳಿ ಸರ್ವಜ್ಞ.

೧. ಅಂತರದಾಗ ಆಡೋ ಗಿಡಗ
ಅದರ ಹೊಟ್ಯಾಗ ಸೇರ ಬಳ್ಳಿ ಕಡಗ
ಆದನ್ನ ಹೊಡದೋನು ಹುಬ್ಬಳ್ಳಿ ಹುಡುಗ
(ಪು. ೯).

೨. ಅಬ್ಬಾಬ್ಬಾ ಈ ಮರದ ಉದ್ದಾ ನೋಡು
ಹತ್ತಲಾರದ ಬಡ್ಡಿ ಮಗ ಹತ್ತಿದ್ದು ನೋಡು
ನೀರಿಲ್ಲದ ಕೆರೆ ತುಂಬಿದ್ದು ನೋಡು
ಸುಗ್ಗಿಲ್ಲದ ಗೋಡೆ ಬೆಳ್ಳಗಾದುದು ನೋಡು
(ಪು. ೧೧).

೩. ಊರೆಲ್ಲಾ ಅಡ್ಡಾಡಿ ಬಂದು ದೇವರ ಮುಂದೆ
ಉಚ್ಚಿ ಹೊಯ್ತೈತಿ (ಪು. ೨೪)

೪. ಕಬ್ಬಿಣ ಕೊಡ, ಕಲ್ಲ ಪಡ
ನೀರದಾವು ಮೀನಿಲ್ಲ (ಪು. ೩೯).

೫. ಕಲ್ಲಿಗೊಡಿತೈತಿ, ಹುಲ್ಲಿಗೊಡಿಯಲ್ಲ (ಪು.೪೩)

೬. ಕಿರಿಗೆರೆ, ಬರಿಗೆರೆ, ತುಂಬಿದ ಕೆರೆ (ಪು.೪೬)

೭. ಚಿಪ್ಪುಂಟು ಆಮೆಯಲ್ಲ ಜುಟ್ಟುಂಟು ಪೂಜಾರಿ
ಅಲ್ಲ, ಮೂರು ಕಣ್ಣುಂಟು ಮುಕ್ಕಣ್ಣನಲ್ಲ
(ಪು. ೯೧).

೮. ನೆಲಕ್ಕ ನೆಲಾ ಮ್ಯಾಲ ಮುಗಲ ನಡುವ ನೀರು
(ಪು. ೮೦).

೯. ಸಂತ್ಯಾಗಿಂದ ಎಮ್ಮಿ ತಂದೇನಿ
ಹುಲ್ಲಾಕಿದರ ಹಿಂಡೋದಿಲ್ಲ
ಕಲ್ಲಾಕಿದರ ಹಿಂಡತೈತಿ (ಪು. ೧೧೬).

೧೦. ಹೋಕ್ತಾ ಕೆಂದೆತ್ತು, ಬರ್ತಾ ಬಿಳೇ ಎತ್ತು
(ಪು. ೧೩೨).

**ಮೋಡ :**

ಕೋಡಗವು ಕುದುರೆಯಲಿ ನೋಡುತ ಹುಟ್ಟಿ
ಕಾಡಾನೆಗೆರಡು ಗರಿ ಮೂಡಿ ಗಗನದಿರಿ
ದಾಡುವುದ ಕಂಡೆ ಸರ್ವಜ್ಞ.

೧. ಅಂಬುದಿಯಲಿ ಹುಟ್ಟುವ ಕುದುರೆ
ಅಂಬಾರದಲ್ಲಿ ಬಿಡುವ ಕುದುರೆ
ತಂಬೆಲರಲ್ಲಿ ಬೆವರುವ ಕುದುರೆ
ಇಂಬಾಗಿ ಬೆಟ್ಟದಲೊರಗುವ ಕುದುರೆ
(ಕನ್ನಡ ಒಗಟುಗಳ ಸಮೀಕ್ಷೆ, ಪು. xix)

೨. ಯಾವುದಾ ದೇಶದ ಮ್ಯಾಲಾದ್ರೂ
ಒಂದಾ ಹಾಲುಗಲ್ಲು ಅಂತರಲೆ ನಿಂತೈತಿ
(ಕನ್ನಡ ಸಾವಿರದ ಒಗಟುಗಳು, ಪು.೧೦೭).

**ಕಣ್ಣು :**

ಕಡೆ ಬಿಳಿದು ನಡುಗಪ್ಪು । ಉಡುವ ವಸ್ತ್ರವಲ್ಲ
ಬಿಡದೆ ನೀರುಂಟು ಮಡುವಲ್ಲ । ಕವಿಗಳೇ
ಬೆಡಗ ಪೇಳುವುದು ಸರ್ವಜ್ಞ.

೧. ಎರಡು ಹಕ್ಕಿ ಗೂಡಿನ್ಯಾಗ ಕುತುಗೊಂಡು
ನಾಡೆಲ್ಲಾ ನೋಡುತಾವು. (ಅದೇ ಪು.೨೮).

೨. ಕಬ್ಬಿಣದ ಕದ ಡಬ್ಬನೆ ಹಾಕಿದರೆ
ಮುಂದಿನದೆಲ್ಲಾ ಕತ್ತಲು (ಪು. ೩೯).

೩. ಕಪ್ಪುಂಟು ಕಸ್ತೂರಿಯಲ್ಲ, ಬಿಳುಪುಂಟು
ಸುಣ್ಣವಲ್ಲ, ಜಲವುಂಟು ಬಾವಿಯಲ್ಲ,
ರೆಕ್ಕೆಯುಂಟು ಪಕ್ಷಿಯಲ್ಲ, ಇದ ಹೇಳಬಲ್ಲ
ಜಾಣನಿಗೆ ಕಂಡಿತಲ್ಲ. (ಪು.೩೯).

೪. ಗೂಡಿನ್ಯಾಗಿನ ಪಕ್ಷಿ ನಾಡೆಲ್ಲಾ ನೋಡತೈತಿ
(ಪು. ೫೮).

೫. ಸಾವಿರ ರೂಪಾಯಿ ತೋಟ, ಮೂರು
ರೂಪಾಯಿ ಬಟ್ಟೆ, ಸಾಸುವೆ ಗಾತ್ರದ ಕಲ್ಲು
ಬಿದ್ರೆ ಹಾಳು (ಪು. ೧೧೩).

೬. ಹಸನುಳ್ಳ ಹೊಲ ಮಾಡಿ, ಕುಶಲಾದ ಬೇಲಿ
ಹಚ್ಚಿ ಕಸಬಿದ್ರ ನನ್ನೊಲ ಹಸಗೆಡತೈತಿ.
(ಪು. ೧೨೪).

**ಮಾವು ;**

ಹರೆಯಲ್ಲಿ ಹಸುರಾಗಿ ನೆರೆಯಲ್ಲಿ ಕಿಸುವಾಗಿ
ಸರರಿಯದಮೃತವು ನರರಿಂಗೆ ದೊರೆದಿಹುದು
ಅರಿಯರಿದ ಪೇಳಿ ಸರ್ವಜ್ಞ.

೧. ಆಕಾಶಕ್ಕೆ ಅಪ್ಪಣ್ಣ, ನೆಲಕ್ಕೆ ತುಪ್ಪಣ್ಣ,
ಹಿಂಡಿ ಹಿಚಕಣ್ಣ, ಮುಂಡಿ ಮುಚಕಣ್ಣ
(ಪು. ೧೬).

೨. ಮಲ್ಲಾಡಕ ಹೋಗಿ, ಎರಡೆಮ್ಮಿ ತಂದೀನಿ
ಒಂದು ಕೀವ ಹಿಂಡತೈತಿ, ಒಂದು ರಕ್ತ
ಹಿಂಡತೈತಿ (ಪು. ೯೮).

೩. ಹಸರಂಗಿ ತೊಟ್ಟಾನ, ಹಳದಿ ಚಣ್ಣಾ ಉಟ್ಟಾನ
ವರ್ಷಕ್ಕೊಮ್ಮೆ ಬರತಾನ, ಎಲ್ಲರ ಮನಿ
ಹೊಕ್ಕಾನ, ಗಡ್ಡಾ ಸೀಪಾಕ ಹಚ್ಯಾನ(ಪು.೧೨೪).

**ಈರುಳ್ಳಿ :**

ಬೆಳ್ಳಗೆ ಇರುತಿಹುದು ಉಳ್ಳಾಡಿ ಬರುತಿಹುದು
ಸುಳ್ಳಲ್ಲ ಸತಿಯರಳಿಸುವುದು ಕವಿಗಳಲಿ
ಉಳ್ಳವರು ಪೇಳಿ ಸರ್ವಜ್ಞ.

೧. ಅಡ್ಡ ಕೋದರ ಚಕ್ರಲ್ಲ, ಉದ್ದ ಕೋದ್ರ ಶಂಖಲ್ಲ
ಮೂಸಿದ್ರ ವಾಸ್ನಿ, ಹಿಂಡಿದ್ರ ನೀರು, ಬಿಡಿಸಿದ್ರ
ಹತ್ತಿಪ್ಪತ್ತು (ಪು.೮).

೨. ಅಂ ಬ್ರಂ ಭಟ್ಟಾ, ತುಂ ಬ್ರಂ ಭಟ್ಟಾ, ಏಳ
ಪದರಿನ ಅಂತಿ ತೊಟ್ಟಾ, ಹೈದ್ರಾಬಾದ್ಕೆ ಕಾಲಿಟ್ಟ
ಮುಂಬೈಕ್ಹೋಗಿ ಜೀವ ಬಿಟ್ಟ (ಪು. ೧೮).

೩. ಕಾಟಿಕಮಂಡಲಧರಿಸಿದೋರ್ಯಾರು,ಮೂರು ತಿಂಗಳು ಭೂಮಿಲಿಡ್ವೋರ್ಯಾರು,ಗುಡ್ಲಪ್ಪ ನವರನ ಎಬ್ಬಿಸಿದವರ್ಯಾರು (ಪು.೪೫).
೪. ಜುಟ್ಟಾ ಬಿಡಗೊಂಡು,ರೊಟ್ಟಿಗೆ ಬಂದಾನ (ಪು.೬೪).
೫. ಸಂತೀಗಿ ಬರ್ತೀರ್ಯಾಕ,ನನ್ನ ತರ್ತೀರ್ಯಾಕ,ಮುಂದ ಕುತ್ಕೊಂಡು ಅಳ್ತೀರ್ಯಾಕ (ಪು. ೧೧೭).

**ಕೂದಲು :**

ಕತ್ತಿಗದು ಹರಿದಿಹದು ಮತ್ತೆ ಬರುತೇಳುವುದು
ಕಿತ್ತು ಬೀಸಾಡಲದು ನಡದು, ಕವಿ ಜನರು
ಅರ್ತಿಯಿಂದ ಪೇಳಿ ಸರ್ವಜ್ಞ.

೧. ಆಸರೇ ಬಳ್ಳಿ ಸಾಸಿರ ಬಳ್ಳಿ, ನೀರಲ್ಲಿ ಒಗದ್ರ ಕೊಳೆಯದ ಬಳ್ಳಿ (ಪು.೧೯).
೨. ಬರಗಾಲ ಬಿದ್ರೂ ಬೆಳಿಗೆ ನೀರ್ ಬ್ಯಾಡ(ಪು.೮೫)
೩. ಬೆಳೆಗೆ ಮಳೆ,ಭೂಮಿ ಬ್ಯಾಡ, ಬರಗಾಲದ ಲೆಕ್ಕ ಬ್ಯಾಡ ಆದ್ರೂ ಬೆಳೆ ಚೆನ್ನಾಗಿ ಬರುತ್ತೆ (ಪು.೯೦)
೪. ಕಪ್ಪತ ಗುಡ್ಡದ ಮ್ಯಾಲ ಇಪ್ಪತ್ತರ ಸೇರ ನವಣಿ ಬಿತ್ಯಾರ,ಅಳ್ಯಾಂವ ಬೀಗಿಲ್ಲ,ಲೆಕ್ಕಾ ಮಾಡಂವ ಒಕ್ಕಲಿಗ್ಯಾ ಇಲ್ಲ .
೫. ಸೂಜಿಯಟು ಸಣ್ಣ, ಕಾಗಿ ಬಣ್ಣ (ಕನ್ನಡ ಜಾನಪದ ಪ್ರಜ್ಞೆ, ಪು. ೧೮೬).

**ಹುಂಜ :**

ಹಲವು ಮಕ್ಕಳ ತಂದೆ ತಲೆಯಲ್ಲಿ ಜುಟ್ಟವಗೆ
ಸಲೆಗಳಿಗೆ ಜಾವದರಿವನ ಹೆಂಡತಿಗೆ
ಮೊಲೆಯಿಲ್ಲ ನೋಡ ಸರ್ವಜ್ಞ.

೧. ಕುತನಿ ಕೊಂಚಿಗಿ,ರತ್ನದ ಗೊಂಡೆ,ಸಾರಂಗ ಪ್ಯಾಟ್ಯಾಗ ಸರಕೋತ ಹೋದ್ರ, ಸತ್ತವ್ರೂ(ರ) ಎದ್ದ ಕೂತಾರ (ಕನ್ನಡ ಒಗಟುಗಳ ಸಮೀಕ್ಷೆ, ಪು. ೭೦).
೨. ಕಿರೀಟವಿದೆ ರಾಜನಲ್ಲ,ಕಾಲು ಇವೆ ಮನುಷ್ಯ ನಲ್ಲ, ವೇಳೆಯನ್ನು ಸೂಚಿಸುತ್ತೆ ಗಡಿಯಾರ ವಲ್ಲ (ಅದೇ ಪು. ೪೬).
೩. ಹಳ್ಳಿಯಾ ಗಡಿಯಾರ, ಒಳ್ಳೆಯಾ ಆಹಾರ ಮಲ್ಲ ಯುದ್ಧದ ಜಾತ್ರೆ ರುದ್ರ ಗಂಭೀರ (ಪು. ೧೨೬).

ಹೀಗೆ ಜನಪದರು ಒಗಟಗುಗಳ ತುಂಬಾ ಪ್ರಾಕೃತಿಕ ಅಂಶಗಳು ದಟ್ಟವಾಗಿ ಹರಡಿಕೊಂಡಿವೆ. ಆ ಒಗಟುಗಳು ಒಂದು ರೀತಿಯ ಪ್ರಾಕೃತಿಕ ಶಬ್ದ ಚಿತ್ರಗಳೇ ಆಗಿವೆ. ಇವು ಸರ್ವಜ್ಞನ ಮೇಲೂ ತುಂಬಾ ಪ್ರಭಾವ ಬೀರಿವೆ.

ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ
ಬಲ್ಲವರು ಪೇಳಿ ಸರ್ವಜ್ಞ.

ಇಲ್ಲಿ ಸುಣ್ಣದ ಕಲ್ಲಿನ ಆಗು-ಹೋಗುಗಳನ್ನು ಚಮತ್ಕಾರವಾಗಿ ಬಣ್ಣಿಸುವ ಒಂದು ಒಗಟು ಅಡಗಿಕೊಂಡಿದೆ ಎಂದು ಉತ್ತಂಗಿ ಚೆನ್ನಪ್ಪನವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದು ಮೇಲಿನ ಅರ್ಥ. ಅಂತರ ಗಂಗೆಯಂತೆ ಇಲ್ಲಿ ಜೀವದಳೆದು ಹರಿದಾಡುತ್ತಿರುವ ಬೇರೊಂದು ಅರ್ಥವೂ ಇದೆ. ಜಗತ್ತಿಗಾಗಿ,ಜನರ ಕಲ್ಯಾಣಕ್ಕಾಗಿ ಸುಣ್ಣ ಸುಣ್ಣವಾಗುವ ಕರ್ಮಯೋಗಿಯ ತ್ಯಾಗ ಶೀಲ ಜೀವನ ಇಲ್ಲಿ ವ್ಯಂಜಿತವಾಗಿದೆ. ಸುಣ್ಣ ಹೇಗೆ ದೇವರ ಸೇವೆಗೂ ಸಂದು, ದೇಗುಲದ ಶಿಖಿರಕ್ಕೆ ಬೆಳಕಾಗಿ ತನ್ನ ಬಾಳನ್ನು ಕೃತಾರ್ಥಗೊಳಿಸಿಕೊಳ್ಳುತ್ತದೆಯೋ ಹಾಗೆ ಜನಪದರು ಕಲ್ಲಿನಂತಹ ಎದೆಯಿಟ್ಟುಕೊಂಡು ಬದುಕಿನ ಕಷ್ಟ ಕಾರ್ಪಣ್ಯಗಳಿಗಾಗಿ ಬೆಂದು, ಕರಗಿ ಮತ್ತೊಬ್ಬರಿಗೆ ಆದರ್ಶರಾಗಿ ಬಾಳುವೆ ನಡೆಸುತ್ತಾರೆ. ಅಲ್ಲದೆ, ಹೂವಾಗಿ ಗಮಗಮಿಸಿ ಎಲ್ಲರ ಪ್ರೀತಿಗೆ ಪಾತ್ರರಾಗುತ್ತಾರೆ.

ಮನುಷ್ಯನಿಗೆ ಜೀವನದಲ್ಲಿ ಕಷ್ಟ ಕಾರ್ಪಣ್ಯಗಳು ಬರುವುದು ಸಹಜ. ನಮ್ಮ ಜನಪದರು ತಮಗೆ ಎದುರಾಗುವ ಅನೇಕ ತೊಂದರೆಗಳನ್ನು ಆ ದೇವರ ಮೇಲೆ ಹಾಕಿ ತಾವು ನಿಶ್ಚಿಂತರಾಗುತ್ತಾರೆ. ಈ ಒಗಟಿನಲ್ಲಿ ಅಡಕವಾಗಿರುವ ಒಳಾರ್ಥ ಕುರಿತು ಇನ್ನಷ್ಟು ವಿಚಾರ ಮಾಡಿದಾಗ, ಮನುಷ್ಯರಾಗಿ ಭೂಮಿಯ ಮೇಲೆ ಹುಟ್ಟಿದ ನಂತರ ಎದೆಯೊಳಗಿದ್ದ ಕಲ್ಲಿನಂತಹ ನೋವುಗಳನ್ನು ಬಚ್ಚಿಟ್ಟುಕೊಂಡು ಮುಖದೊಳಗೆ ನಗು ತಂದುಕೊಂಡು ಎಲ್ಲರಿಗೂ ಪ್ರಿಯರಾಗಿ ಬಾಳುವುದಾಗಿದೆ.

### ೭.೫.೩. ಸಾಂಸ್ಕೃತಿಕ ಒಗಟುಗಳು :

ಸರ್ವಜ್ಞನ ಸಾಂಸ್ಕೃತಿಕ ಒಗಟುಗಳನ್ನು ವಿಶ್ಲೇಷಿಸುವ ಮುನ್ನ ಸಂಸ್ಕೃತಿಯ ಬಗ್ಗೆ ಒಂದಿಷ್ಟು ವಿವೇಚಿಸುವುದು ಒಳಿತು. ಸಂಸ್ಕೃತಿಯನ್ನು ಮಾನವನ ಜೀವನ ಶ್ರಮದ ಒಟ್ಟು ಮೊತ್ತವೆನ್ನಬಹುದು. ''ಅದು ಒಂದು ಮಾನವ ಸಮಾಜದ ಮೊತ್ತ ,ಸಾಧನೆ, ಸಿದ್ಧಿಗಳ, ಜೀವನಾದರ್ಶಗಳ ಅಂಶಗಳನ್ನು ಒಳಗೊಳ್ಳುತ್ತದೆ. ಪ್ರಕೃತಿ ದೈವದತ್ತವಾದುದು. ಸಂಸ್ಕೃತಿ ಮಾನವ ಕಷ್ಟಪಟ್ಟು ಕಲಿತು ರೂಢಿಸಿಕೊಂಡಂತದ್ದು. ಸಂಸ್ಕೃತಿ ಇಲ್ಲದ ಮನುಷ್ಯ ಎಂದೂ , ಎಲ್ಲಿಯೂ ಇರಲೇ ಇಲ್ಲ ಎಂಬ ಹೇಳಿಕೆ ಸಂಸ್ಕೃತಿಗೂ, ಮಾನವನಿಗೂ ಇರುವ ಅವಿನಾಭಾವ ಬಾಂಧವ್ಯವನ್ನು ಸೂಚಿಸುತ್ತದೆ. ಈ ಪ್ರಕಾರ ಅಸಂಸ್ಕೃತ ವ್ಯಕ್ತಿ ಎಂಬಾತನೊಬ್ಬ ಇರಲು ಸಾಧ್ಯವೇ ಇಲ್ಲ. ಒಟ್ಟಿನಲ್ಲಿ ಒಂದು ಜನತೆಯ ಮೊತ್ತ ಜೀವನ ಶ್ರಮವೇ ಸಂಸ್ಕೃತಿ''(ಕನ್ನಡ ಒಗಟುಗಳ ಸಮೀಕ್ಷೆ, ಪು. ೭೯).

ನಮ್ಮ ಸಂಸ್ಕೃತಿಯಲ್ಲಿ 'ತಾಂಬೂಲ' ಎಲ್ಲರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ವಸ್ತು. ಮಂಗಳ ಕಾರ್ಯ, ಪೂಜೆ ಪುನಸ್ಕಾರ, ಸುಖ ಬೋಜನದ ನಂತರ ಹೀಗೆ ಎಲ್ಲಕ್ಕೂ ತಾಂಬೂಲ ಬೇಕೇ ಬೇಕು. ಈ ತಾಂಬೂಲದ ಬಗ್ಗೆ ಸರ್ವಜ್ಞನ ಒಗಟೊಂದು ಹೀಗಿದೆ;

ಅಟ್ಟರಾ ವಾಡಿಗನ ಸುಟ್ಟಿಹರು ಕುಂಟಿಗೆಯ
ಹುಟ್ಟಿಯ ಮೂಗ ಹರಿದರೀ ಮೂರು ಭವ
ಗೆಟ್ಟು ಕೂಡಿದರು ಸರ್ವಜ್ಞ.

ಇಲ್ಲಿ ಅಟ್ಟು, ಸುಟ್ಟು, ಮೂಗು ಹರಿದ ಕ್ರಿಯೆಗಳು ಕ್ರಮವಾಗಿ ಅಡಿಕೆ, ಸುಣ್ಣ, ಎಲೆಗೆ ಸಂಬಂಧಿಸಿದವುಗಳಾದರೂ ಈ ಒಗಟಿನ ಹಿನ್ನೆಲೆಯಾಗಿ ಜನಪದ ಕಥೆಯೊಂದು ಅಡಗಿ ಕುಳಿತಿದೆ. :''ಒಬ್ಬ ಹಾವಾಡಿಗನಿಗೆ ಒಂದು ಹೆಣ್ಣನ್ನು, ಒಬ್ಬ ಕುಂಟಿಣಿ ಕೂಡಿಸಿದಳು. ಅವರು ಸಿಕ್ಕಿ ಬಿದ್ದಾಗ - ಜನ ಹಾವಾಡಿಗನನ್ನು ಅಟ್ಟರು. ಆ ಕುಂಟಣಿಯನ್ನು ಸುಟ್ಟರು, ಆ ಹೆಣ್ಣಿನ ಮೂಗು ಕೊಯ್ದರು. ಇವರು ಮೂವರು ಮುಂದಿನ ಜನ್ಮದಲ್ಲಿ ಅಡಕೆ-ಸುಣ್ಣ-ವೀಳ್ಯದೆಲೆಯಾಗಿ ಜನಕ್ಕೆ ತಾಂಬೂಲವಾದರೆಂದು. ಅಡಕೆಯನ್ನು ಬೇಯಿಸಬೇಕು, ಸುಣ್ಣವನ್ನು ಸುಡಬೇಕು, ವೀಳ್ಯೆದೆಲೆಯ ತೊಟ್ಟನ್ನು ತೆಗೆಯಬೇಕು- ತಾಂಬೂಲ ಹಾಕುವಾಗ (ಪರಮಾರ್ಥ, ಪು. ೧೮೮). ಈ ಕಥೆಯಲ್ಲಿ ಸತ್ಯಾಸತ್ಯತೆ ಏನೇ ಇರಲಿ, ಆದರೆ ಜಾನಪದರು ವ್ಯಭಿಚಾರಿಗಳಿಗೆ ವಿಧಿಸುತ್ತಿದ್ದ ಕಠಿಣ ಶಿಕ್ಷೆಗಳ ಸುಳಿವಂತೂ ಇದು ನೀಡುತ್ತದೆ. ಇದೇ ತಾಂಬೂಲದ ಬಗ್ಗೆ ಜನಪದರಲ್ಲಿ ಪ್ರಚಲಿತವಿರುವ ಒಗಟುಗಳು ಹೀಗಿವೆ;

ಕೆರೆ ಏರಿ ಮೇಲೆ ಮೂವರು
ಒಬ್ಬನು ತೇಲುವನು
ಒಬ್ಬನು ಮುಳುಗುವನು
ಮತ್ತೊಬ್ಬ ಕರಗುವನು (ಕನ್ನಡ ಒಗಟುಗಳ ಸಮೀಕ್ಷೆ, ಪು. ೪೭).
ಕೆಂಪನ್ನ ಹುಡುಗ ಕ್ಯಾಕರಸ್ತಾನ (ಅದೇ, ಪು. ೫೨).

ಇಲ್ಲಿ ತೇಲುವ, ಮುಳುಗುವ, ಕರಗುವ ರೂಪಕಗಳೊಂದಿಗೆ ಒಗಟನ್ನು ಕಟ್ಟಲಾಗಿದೆ.

ಬೀಸುವಕಲ್ಲು ನಮ್ಮ ಸಂಸ್ಕೃತಿಯ ಜೀವಾಳ. ಗ್ರಾಮೀಣ ಪ್ರದೇಶದಲ್ಲಂತೂ ಮಹಿಳೆಯರು ಬೀಸುವ ಕಲ್ಲನ್ನು 'ಗೌರಮ್ಮ'ನೆಂದು ಪೂಜಿಸುತ್ತಾರೆ. ಈ ಬೀಸುವ ಕಲ್ಲಿಗೆ ಸಂಬಂಧಪಟ್ಟ ಸರ್ವಜ್ಞನ ವಚನವೊಂದು ಹೀಗಿದೆ;

ನೆತ್ತಿಯಲಿ ಉಂಬುವುದು ಸುತ್ತಲೂ ಸುರಿಸುವುದು
ಎತ್ತಿದರೆ ಎರಡು ಹೋಳಹುದು ಕವಿಗಳಿಗಿದ
ಕುತ್ತರವ ಪೇಳಿ ಸರ್ವಜ್ಞ.

ಸರ್ವಜ್ಞ ಕವಿ ಈ ತ್ರಿಪದಿಯಲ್ಲಿ ಬಳಸಿರುವ ರೂಪಕದ ಚಿತ್ರ ನೆತ್ತಿಯಲಿ ಉಂಡು, ಸುತ್ತಲೂ ಸುರಿಸಿ, ಎತ್ತಿದರೆ ಎರಡು ಹೋಳಾಗುವ ಚಿತ್ರಣ ಬೀಸುಕಲ್ಲಿಗೆ ಅನುಗುಣವಾಗಿದೆಯಾದರೂ, ಇಡಿಯಾದ ಒಂದು ರೂಪಕವನ್ನು ಇಲ್ಲಿ ಕಾಣಲಾಗುವುದಿಲ್ಲ. ಇದೇ ಬೀಸು ಕಲ್ಲಿನ ಮೇಲೆ ಜನಪದರು ರಚಿಸಿರುವ ಒಗಟುಗಳು ಹೀಗಿವೆ;

೧. ಒಂದ ಕೋಡಿನ ಎತ್ತು ಊರಿನ ಜ್ವಾಳಾನೆಲ್ಲಾ ಮುಕ್ಕುತೈತಿ (ಅದೇ, ಪು. ೩೨).
೨. ಕಲ್ಲ ಬಸವಗ ಮರದ ಮುಗುದಾಣ (ಪು. ೪೩).
೩. ಗುಡ್ಡದಾಗ ಹುಟ್ಟಿ ಗುಂಡವ ಮೇದು ನೆತ್ತಿಲಿ ತಿಂದು ಏಕದಲ್ಲಿ ಉಗುಳತೈತಿ (ಪು. ೫೬).
೪. ತೇರು ಉರಳತೈತಿ ಕುಂಕುಮ ಸುರೀತೈತಿ (ಪು. ೭೦).
೫. ನಮ್ಮವ್ವ ನಿಮ್ಮವ್ವಗ ಗುರ‍್ರ ಅಂತಾಳ (ಪು.೭೫).
೬. ನಾರಾಯಣನ ನಡುವಿನ ಸುತ್ತ ಬೆಳ್ಳಿ ಉಡದಾರ (ಪು.೭೫).
೭. ಬಾಯಾಗ ತಿಂದು ಬಗಲಾಗ ಕಾರತೈತಿ (ಪು.೮೬).
೮. ಜುಟ್ಟು ಹಿಡಿದರೆ ಗುರ್ ಅಂತೈತಿ (ಪು. ೮೭).
೯. ಬಂಡಿ ಹೋಗತೈತಿ ಭಂಡಾರ ಚೆಲ್ಲತೈತಿ (ಪು. ೯೧).

ಎಂಬ ಮುಂತಾದ ಒಗಟುಗಳಲ್ಲಿ 'ಬಸವ' ( ಎತ್ತು)ನ ರೂಪಕವನ್ನು ಸಮರ್ಥವಾಗಿ ಬಳಸಲಾಗಿದೆ. ಇನ್ನು ಕೆಲವು ಒಗಟುಗಳಲ್ಲಿ ಬಂಡಿ, ಭಂಡಾರ, ತೇರು, ಕುಂಕುಮ ಮುಂತಾದ ರೂಪಕಗಳನ್ನು ಬಳಸಿ ಕಟ್ಟಲಾಗಿದೆ. ಅಂದರೆ, ಈ ಒಗಟುಗಳಲ್ಲಿ ಬರುವ ರೂಪಕದ ಚಿತ್ರಣ ಒಂದು ವಸ್ತುವಿನ ಇಡಿಯಾದ ಚಿತ್ರಣವಾಗಿದ್ದು, ಸ್ಪಷ್ಟತೆಯಿಂದ ಕೂಡಿದೆ.

'ಹಚ್ಚೆ' ನಮ್ಮ ಸಂಸ್ಕೃತಿಯಲ್ಲಿನ ಒಂದು 'ಕ್ರಿಯಾ ವಿಧಾನ' ಹಾಗೂ ಕುಸುರಿ ಕಲೆಗಾರಿಕೆ ಬಹುಶಃ ಗ್ರಾಮೀಣ ಪ್ರದೇಶದಲ್ಲಿ ಹಚ್ಚೆ ಹಾಕಿಸಿಕೊಳ್ಳದ ಹೆಂಗಸರೇ ಇಲ್ಲವೆಂದರೂ ಸರಿಯೇ. ಹಚ್ಚೆ ಹಾಕಿಸಿಕೊಂಡವರ ಕೈಯಡಿಗೆ ಹಳಸುವುದಿಲ್ಲ, ''ನಾವು ಸತ್ತಾಗ ನಮ್ಮ ಜೊತೆ ಬರುವುದಾದರೆ ಹಚ್ಚೆಯೊಂದೆ'' ಎಂಬ ನಂಬಿಕೆಗಳು ಗ್ರಾಮೀಣರಲ್ಲಿ ಇಂದಿಗೂ ಚಾಲ್ತಿಯಲ್ಲಿವೆ. ಇಂತಹ 'ಹಚ್ಚೆ' ಪ್ರಕಾರ ಸರ್ವಜ್ಞನನ್ನು ಪ್ರಭಾವಿಸಿದೆ. ಹಚ್ಚೆಗೆ ಸಂಬಂಧಪಟ್ಟ ಸರ್ವಜ್ಞನ ಒಗಟೊಂದು ಹೀಗಿದೆ;

ಕರಚರಣವದಕಿದ್ದು । ಕರೆದಲ್ಲಿ ಬಾರದದು ।
ಕರದಲ್ಲಿ ಹುಟ್ಟಿ ಸ್ಥಿರವಾಗಿ ಇರುವುದಿದ ।
ರಿರವರಿದು ಪೇಳಿ ಸರ್ವಜ್ಞ.

ಇಲ್ಲಿ ಕರ, ಚರಣ (ಕೈ,ಕಾಲು) ಅದಕ್ಕಿದ್ದರೂ ಅದು ಕರೆದಲ್ಲಿಗೆ ಬಾರದು. ಕರದಲ್ಲಿ ಹುಟ್ಟಿದ ಅದು ಸ್ಥಿರವಾಗಿರುವುದು. ಇದು ಸರ್ವಜ್ಞನ ರೂಪಕ ಚಿತ್ರಣ. ಇದೇ ಹಚ್ಚೆಯ ಬಗ್ಗೆ ಜನಪದರು ರಚಿಸಿರುವ ಒಗಟುಗಳು ಹೀಗಿವೆ ;

೧. ಸೊಲ್ಲಾಪುರದ ಬೀಜಾ ಬಿತ್ತಾಕ ಬತ್ತದ ಕಿತ್ತಾಕ ಬರಲ್ಲ
(ಕನ್ನಡ ಒಗಟುಗಳ ಸಮೀಕ್ಷೆ, ಪು.೮೭ )
೨. ಉತ್ರಾಸದ ಮೇಲೆ ಉತ್ರಾಣಿ ಗಿಡ ಹುಟ್ಟಿದೆ. ಕಿತ್ರೂ ಬರಲ್ಲ, ಕೀರಾಡಿದ್ರೂ ಬರಲ್ಲ ( ಅದೇ, ಪು. ೮೯ )
೩. ಅಂತಪ್ಪನ ಹಿತ್ತಲದಾಗ ಅಂತ್ರಾಣಿ ಗಿಡ ಹುಟ್ಟೈತಿ ಅತ್ರೂ ಬರವಲ್ದು ಕಿತ್ತರೂ ಬರವಲ್ದು (ಅದೇ, ಪು. ೯).
೪. ಅಲಕು ಮಲಕು ಚಿಲಕು ಚಿತ್ತಾರ ಹಾಕಲು ಬರತೈತಿ, ತಗಿಯಾಕ ಬರೋದಿಲ್ಲ (ಪು. ೧೨೬).
೫. ಹಚ್ಚಿದ ಕುಳ್ಳು ಕಿತ್ತೋದಲ್ಲ , ಹಚ್ಚೋ ಮುಂದ ನೋಗೋದಲ್ಲ(ಪು.೧೯೯).

ಈ ಎಲ್ಲಾ ಒಗಟುಗಳಲ್ಲಿ ಬೀಜ, ಉತ್ರಾಣಿ ಗಿಡ, ಬಿತ್ತುವ, ಕಿತ್ತುವ ಕ್ರಿಯೆ, ಕುಳ್ಳು ಹೀಗೆ ಜನಪದರೊಂದಿಗೆ ಅನ್ಯೋನ್ಯತೆ ಸಾಧಿಸಿರುವ ಪ್ರಾಕೃತಿಕ ಅಂಶಗಳು ದಟ್ಟವಾಗಿವೆ. ಬಳಸಿರುವ ರೂಪಕಗಳು ಸಮರ್ಥವಾಗಿವೆ. ಉದಾಹರಣೆಗೆ ''ಉತ್ರಾಸ, ಉತ್ರಾಣಿ ಎಂಬ ರೂಪಕಗಳನ್ನು ನೋಡ ಬಹುದು. ಉತ್ರಾಸ ಎಂದರೆ ಬಾಗಿಲ ನಿಲುವಿನ ಮೇಲಿನ ಭಾಗ. ಅಂದರೆ, ಪರ್ಯಾಯವಾಗಿ ಹೆಂಗಸಿನ ಹಣೆಯ ಭಾಗ. ಉತ್ರಾಣಿ ಗಿಡವೆಂಬುದು ಕಲಾತ್ಮಕವಾದ ಮುಳ್ಳು ಬೀಜಗಳನ್ನುಳ್ಳ ಸಣ್ಣ ಹುಲ್ಲು ಗಿಡ''(ಕನ್ನಡ ಒಗಟುಗಳ ಸಮೀಕ್ಷೆ, ಪು.೮೯-೯೦). ಸಾಮಾನ್ಯವಾಗಿ ಹೆಂಗಸರು ಹಚ್ಚೆಯನ್ನು ಮೊದಲು ಹಣೆಯ ಮೇಲೆ ಹಾಕಿಸಿಕೊಂಡು ನಂತರ, ತಮ್ಮ ಕೈಗಳ ಮೇಲೆ ಹಾಕಿಸಿಕೊಳ್ಳುತ್ತಾರೆ. ಹಣೆಯನ್ನು ಉತ್ರಾಸಕ್ಕೂ ಹಾಗೂ ಹಣೆಯ ಮೇಲೆ ಹಾಕಿಸಿಕೊಳ್ಳುವ ಹಚ್ಚೆಯ ವಿನ್ಯಾಸವನ್ನು ಉತ್ರಾಣಿ ಗಿಡಕ್ಕೂ ಹೋಲಿಸಿರುವ ಪರಿ ನಿಜಕ್ಕೂ ಅದ್ಭುತವಾಗಿದೆ.

'ಏತ' ವ್ಯವಸಾಯದಲ್ಲಿ ಬಳಕೆಯಾಗುವ ಒಂದು ಸಾಧನ. ಹೊಲಕ್ಕೆ ನೀರು ಹಾಯಿಸಲು ಚರ್ಮದಿಂದ ತಯಾರಿಸಿದ 'ಏತ' ಅಥವಾ ಕಪ್ಪಲಿಯನ್ನು ಬಳಸುತ್ತಾರೆ. ಈ ಏತಕ್ಕೆ ಸಂಬಂಧಿಸಿದ ಸರ್ವಜ್ಞನ ಒಗಟೊಂದು ಹೀಗಿದೆ;

ಪಾತಾಳಕ್ಕಿಳಿಯುವುದು ಸೀತಳವ ತರುತಿಹುದು।
ಭೂತಳದ ಮೇಲೆ ಇರುತಿಹುದು ಅದು ತಾನು
ಏತರದು ಪೇಳಿ ಸರ್ವಜ್ಞ.

ಪಾತಾಳ (ಬಾವಿ)ಕ್ಕಿಳಿದು ಸೀತಳವ (ನೀರು) ತರುವ ಏತ ಬಾವಿಯಿಂದ ಮೇಲೆ ಬಂದು ನೀರನ್ನೆಲ್ಲಾ ಒಡ್ಡಿನಲ್ಲಿ ಸುರುವಿ, ಭೂತಲಕ್ಕೆ (ಭೂಮಿಗೆ) ಅಂಟಿಕೊಳ್ಳುವ ಪರಿಯನ್ನು ವರ್ಣಿಸಿ ಸರ್ವಜ್ಞ ಕವಿ ಒಗಟು ಕಟ್ಟಿದ್ದಾನೆ. ಈ ಒಗಟನ್ನು ಜಾನಪದರು ಕಟ್ಟಿರುವ ಬಗೆಯನ್ನು ನೋಡೋಣ;

ತೆಗ್ಗಿಗಿ ತವರ್ಮನಿ
ಬಡ್ಡಿಗಿ ಗಂಡನ ಮನಿ
ತವರ್ಮನಿಗೆ ಹೋಗ್ವಾಗ ನಕ್ಕೋತ ಹೊಕ್ಕಾಳ
ಗಂಡನ ಮನಿಗೆ ಬರುವಾಗ ಅಳಕೋತ ಬರ್‍ತಾಳ.
(ಕನ್ನಡ ಒಗಟು ಸಮೀಕ್ಷೆ, ಪು. ೯೬)

ಒಂಟಿ ಕಾಲಿನ ಕೊಕ್ಕರೆ
ಬಾವಿಯಲ್ಲಿ ಬಗ್ಗಿ ಬಗ್ಗಿ
ನೀರು ಕುಡಿತೈತಿ (ಅದೇ, ಪು. ೩೧).

ಒಳಗ ಬಸರಾಗಿ ಬರತೈತಿ
ಮ್ಯಾಲ ಬಂದು ಹಡಿತೈತಿ (ಪು.೩೫).

ಈ ಮೇಲಿನ ಒಗಟುಗಳಲ್ಲಿ ಏತವನ್ನು ಒಬ್ಬ ಹೆಣ್ಣು ಮಗಳು ತವರುಮನೆಯಿಂದ ಗಂಡನ ಮನೆಗೆ ಹೋಗುವ ಕ್ರಿಯೆಯು ಒಂಟಿ ಕಾಲಿನ ಕೊಕ್ಕರೆ ಬಗ್ಗಿ ನೀರು ಕುಡಿಯುವ ಕ್ರಿಯೆಯು ಹಾಗೂ ಬಸಿರು ಹೆರಿಗೆಯ ಕ್ರಿಯೆಯು ಈ ರೂಪಕಗಳನ್ನು ಇಲ್ಲಿ ಬಳಸಲಾಗಿದೆ. ಹೀಗೆ ಜನಪದರು ತಮ್ಮ ಪರಿಸರದಿಂದ ಆಯ್ದು ರೂಪಕಗಳನ್ನು ಒಗಟುಗಳಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಹೀಗೆಯೇ ಹಲವಾರು ಸಾಂಸ್ಕೃತಿಕ ಒಗಟುಗಳನ್ನು ಇಲ್ಲಿ ನೋಡಬಹುದು. ಉದಾಹರಣೆಗೆ;

**ಬೆಂಕಿ :**

ಇರಿಯದರೆಯ ಏರಿಲ್ಲ ಹರಿ ದರೆಯು ಸೀಳಿಲ್ಲ
ತಿರಿಗೂಳ ಕೊಂಡು ಋಣವಿಲ್ಲ ಕವಿಗಳಲಿ
ಆರಿದರಿದು ಪೇಳಿ ಸರ್ವಜ್ಞ.

ಹತ್ತೇಳ ತಲೆ ಕೆಂಪು ಮತ್ತಾರು ತಲೆ ಕಪ್ಪು
ಹೆತ್ತವ್ವ ದೊಡಲನುರಿಸುವುದು ಕವಿಗಳಿದ
ರರ್ಥವ ಪೇಳಿ ಸರ್ವಜ್ಞ.

೧. ಅಜ್ಜ ಏನ್ ಕೊಟ್ರೂ ತಿಂತಾನ
ನೀರು ಕೊಟ್ರ ಸಾಯ್ತಾನ
(ಅದೇ ಪು.LXXVII)

೨. ಕೆರಿಯಾನ ಕೆಂದೆತ್ತು
ತಿಪ್ಯಾಗ ಬಿಳಿ ಎತ್ತು
ಹೋದದ್ದು ದೇಸಗತಿ (ಪು.೪೭).

೩. ಕೆಂಪು ಕೆನ್ನೆಯ ಹುಡುಗಿ
ಎಲ್ಲರ ಮನೆಯ ತುಡುಗಿ
ಮುಟ್ಟಾ ಕೋದ್ರ ಕಟ್ಟ ಕಡಿತಾಳ (ಪು.೫೨).

೪. ತಕ್ಕಡ್ಯಾಗಿಟ್ಟು ತೂಗುವುದಲ್ಲ
ದುಡ್ಡಿಗೆ ಕೊಡೋದಲ್ಲ
ಅದಿಲ್ದ ನಡಿಯೋದಿಲ್ಲ (ಪು.೬೭).

೫. ನಮಸ್ಯಾಗ ನೊಣ ಮುಟ್ಟದ ದೇವರೈತಿ
(ಪು.೭೫).

೬. ಹಿಡಿಯಾಕ ಹೋದ್ರ ಕಡಿಯಾಕ ಬರತೈತಿ
(ಪು.೧೨೮).

೮. ಹುಟ್ಟುವಾಗ ಕೆಂಪು ಸತ್ತಾಗ ಕಪ್ಪು (ಪು.೧೩೧).

**ಉಪ್ಪು :**

ನೀರಲ್ಲಿ ತಾ ಹುಟ್ಟಿ ನೀರ ನೆರೆ ನಂಬುದದು
ನಾರಿಯರ ನಂಬಿ ಕೆಟ್ಟಿದುದು, ಈ ಮಾತು
ಆರಿಗರಿದಲ್ಲ ಸರ್ವಜ್ಞ.

೧. ಗಿಡ ಕೊಡಲಾರದ್ದು
ಮರ ಬೆಳಸಲಾರದ್ದು
ಅದಿಲ್ಲದ ಊಟ ಸೇರಲಾರದ್ದು(ಪು.೫೪)

೨. ನೀರಲ್ಲಿ ಹುಟ್ಟಿ,ನೀರಲ್ಲಿ ಬೆಳೆದು
ನೀರು ಸೋಕಿದರೆ ನಾ ಉಳಿಯಲಾರೆ(ಪು.೭೮)

೩. ಸಮುದ್ರದಲಿ ಹುಟ್ಟಿ, ಸರ್ವರಿಗೂ ಬೇಕಾಗಿ
ಬೆಲೆಯಲ್ಲಿ ಕಿರಿದಾಗಿ, ಊಟಕ್ಕೆ ಮುಂದಾಗಿ
ನೋಟಕ್ಕೆ ಹಿಂದಾಗಿ ಉಳಿದಿರುವುದು ಏನದು?
(ಪು. ೧೧೧)

೪. ಸೆರಗು ಇಲ್ಲದ ಸೆಲ್ಲೆ
ಬೀಜ ಇಲ್ಲದ ಪಲ್ಲೆ
ನೆಚ್ಚಿಲ್ಲದ ಹೆಂಗಸರು
ನಿಧಾನ ಇಲ್ಲದ ಗಂಡಸು (ಪು.೧೧೬).

**ಸುಣ್ಣ :**

ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ
ಬಲ್ಲವರು ಪೇಳಿ ಸರ್ವಜ್ಞ.

೧. ಗಿಡ ಕೊಡಲಾರದ್ದು
ಮರ ಬೆಳಸಲಾರದ್ದು
ಅದಿಲ್ಲದೆ ಊಟ ಸೇರಲಾರದ್ದು (ಪು.೫೪)

**ಬೆಣ್ಣೆ :**

ಮಂಡೆ ಬಾಯೊಳಗಿಕ್ಕು ಚುಡಿಕೆಯು ಹೊರಗಿಕ್ಕು
ಹೆಂಡತಿಯು ಕಡೆಯೇ ಬರುತಿಕ್ಕು ಕಡೆಗೊಂದು
ಉಂಡೆಯಂತಕ್ಕು ಸರ್ವಜ್ಞ.

೧. ಅಂತಪ್ಪನ ತೋಟದಾಗ
ಇಂತಿಂಥಾ ಕುಂಬಳಕಾಯಿ
ತುಂಬಿಲ್ಲ, ತೊಗಲಿಲ್ಲ (ಪು. ೯).

೨. ಎಲುಬಿಲ್ಲದವ ಹೊಳಿಯಾಗ ಈಸಾಡತಾನ
(ಪು.೨೮).

೩. ತತ್ತಾ ಗಿಂಡಿ,ತಾರಾಗಿಂಡಿ,ನೀರಾಗಿಟ್ಟರ
ಮುಳುಗದ ಗಿಂಡಿ (ಪು.೯೭).

೪. ತೂಕದ ಗುಂಡು,ತುಫಾಕಿ ಗುಂಡು ನೀರಿಗೆ
ಹಾಕಿದರ ಮುಳುಗದ ಗುಂಡು (ಪು.೭೦).

**ಕಡಗೋಲು :**

ತಮ್ಮ ಸುತ್ತಲು ಮಣಿಯ ಬೆಣ್ಣೆ ಕುಡಿವಾಲುಗಳ
ತಿನ್ನದಲೆ ಹಿಡಿದು ತರುತಿಹುದು । ಕವಿಗಳಿಂದ
ನನ್ನಿಂ ಪೇಳಿ ಸರ್ವಜ್ಞ.

೧. ಹಾರೂರ ಹುಡಗೀಗೆ ಹತ್ರ (ಪು.೧೨೮).
೨. ಹಗೇದಾಗ ಹಾವು ಬೋರಾಡತೈತಿ(ಪು.೧೯೯)
೩. ಕರೀಕಂಠ ಬಿಳಿನೀರು ಆದರೊಳಗ ಆದೊಂದು
ರಾಣಿ (ಪು.೪೦).
೪. ಅವ್ವನ ಮುಂದ ದೆವ್ವ ಕುಂತೈತಿ(ಪು. ೧೪).
೫. ಕರೇ ಕಲ್ಲ ಮ್ಯಾಲೆ ಬಿಳೇ ರಂಗೋಲಿ ಹಾಕಿ
ಎದ್ದೆದ್ದು ಕುಣಿತಾಳ ಪದ್ಮಾವತಿ (ಪು.೪೨).

**ವೀಣೆ - ತಂತಿ :**

ಹಾಡೆಂದರಾಡದದು । ಆಡಮರನೇರುವುದು
ಕೂಡದೆ ಕೊಂಕಿ ನಡೆವುದು, ಕಡಿದರೆ
ಬಾಡದದು ಪೇಳಿ ಸರ್ವಜ್ಞ.

೧. ಮೂಲ್ಯಾಗ ಕುಂತ ಮಂಜುಳ್ಯಾರು
ಮುಟ್ಟಿದ ಕೂಡ್ಲೆ ಚಿಟ್ಟನೆ ಚೀರ್‍ತಾರೆ
(ಪು.೧೦೩).
೨. ಕತ್ತಲು ಮನೆಯಾಗ ಕಾಳವ್ವ ಕುಂತಾಳ
ಮುಟ್ಟಿದರ ಕುರುಕುರು ಅಂತಾಳ (ಪು.೩೮).

**ತೊಟ್ಟಿಲು :**

ಕಾಲುಂಟುನಡೆಯದದುಮೂಲೆಯಲಿ ಕಟ್ಟಿಹುದು
ಬಾಲಕರ ಸೊಮ್ಮ ಹೊರುತಿಹುದು ಕವಿಗಳಲಿ
ಬಾಲರಿದ ಪೇಳಿ ಸರ್ವಜ್ಞ.

೧. ನಾಲ್ಕು ಕಾಲಿನ ಎತ್ತು ಅಂತರಲೇ
ಅಡ್ಯಾಡುತ್ತೈತಿ (ಪು.೭೭).

**ಬಲೆ :**

ಹಲ್ಲು ನಾಲಿಗೆಯಿಲ್ಲ ಸೊಲ್ಲು ಸೋಜಿಗದಲ್ಲ
ಕೊಲ್ಲದೇ ಮೃಗವ ಹಿಡಿಯುವುದು ಲೋಕದೊಳ
ಗೆಲ್ಲ ಠಾವಿನೊಳು ಸರ್ವಜ್ಞ.

೧. ಏಳು ನೂರು, ಎಂಟು ನೂರು
ಗಂಟು ನೂರು, ಮಂಟಪ ನೂರು
ಮನೆ ನೂರು ನಾನ್ಯಾರು ? (ಪು.೩೦).
೨. ಹಿಡಿದರೆ ಹಿಡಿಕಿ ಬಿಟ್ಟರೆ ಬಯಲು ತುಂಬ
ಪಾತಾಳಕ್ಕೆ ಹೋಗಿ ಪ್ರಾಣೀ ತಂದು
ತಾನೂ ತಿಂದು ಒಡಿಯಾಗ ಕೊಡತೈತಿ
(ಪು. ೧೨೯).

### ೭.೫.೪. ಒಗಟಿನ ಹೊರಮೈಯಲ್ಲೇ ಬಚ್ಚಿಟ್ಟ ಗೂಢತೆ :

ಸರ್ವಜ್ಞನ ಕೆಲವು ಒಗಟುಗಳು ಗೂಢತೆಯನ್ನು ಒಗಟಿನ ಹೊರಮೈಯಲ್ಲಿಯೇ ಜಾಣ್ಮೆಯಿಂದ ಬಚ್ಚಿಟ್ಟುಕೊಂಡ ಒಗಟುಗಳಾಗಿವೆ. ಉದಾಹರಣೆಗೆ;

ನಾಡೆಲೆಯ ಮೆಲ್ಲುವಳ । ಕೂಡೆ ಬೆಳ್ಳಗೆ ಬಾಯಿ
ಊಡಿದ ಅರುವೆ ಮೊಲೆ ಕಟ್ಟಿನಾಕೆಯನು
ಕಾಡಬೇಡೆಂದ ಸರ್ವಜ್ಞ.

ಈ ಒಗಟಿನಲ್ಲಿ ಕಾಡಬೇಡೆಂಬ ಶಬ್ದದಲ್ಲಿ ವ್ಯಂಜನಾತ್ಮಕವಾಗಿ ಈ ಒಗಟಿನ ಉತ್ತರದಲ್ಲಿ ಆಡು ಹುದುಗಿದೆ.

ಪಾತಾಳಕ್ಕಿಳಿವುದು । ಸೀತಳವ ತರುತಿಹುದು
ಭೂತಳದ ಮೇಲೆ ಇರುತಿಹುದು ಅದು ತಾನು
ಏತರದು ಪೇಳಿ ಸರ್ವಜ್ಞ.

ಈ ಒಗಟಿನಲ್ಲಿ ಏತರದು ಎಂಬ ಶಬ್ದದಲ್ಲಿ ಒಗಟಿನಲ್ಲಿ ಉತ್ತರ ಏತ ಹುದುಗಿದೆ.

ಅರಮನೆಯಲ್ಲಿರುತಿಹುದು । ಕರದಲ್ಲಿ ಬರುತಿಹುದು
ಕೊರೆದು ವಂಶಜರ ತಿನುತಿಹುದು, ಕವಿಗಳಲಿ
ದೊರೆಗಳಿದ ಪೇಳಿ ಸರ್ವಜ್ಞ.

ಈ ಒಗಟಿನಲ್ಲಿ ಅರಮನೆಯಲ್ಲಿರುತಿಹುದು ಎಂಬ ಶಬ್ದದಲ್ಲಿ ಈ ಒಗಟಿನ ಉತ್ತರ ಅರ (ಖಡ್ಗ) ಹುದುಗಿದೆ. ಮುಂದಿನ ಒಗಟುಗಳು ಜಾನಪದ ಚತುರೋಕ್ತಿಗಳಂತಹ ಒಗಟುಗಳನ್ನು ಹೋಲುತ್ತವೆ. ಉದಾಹರಣೆಗೆ

| | | |
|---|---|---|
| ೧. | ಸಂದ್ಯಾಗ ಸಂದಿ ಯಾ ಸಂದಿ ? | ಅಲಸಂದಿ |
| ೨. | ಅಂಕಡೊಂಕಾ 'ಅ' ಅಂದಾ. | |
| | ಅವನ ತಮ್ಮ 'ಶು' ಅಂದಾ. | |
| | ಕರೆ ಕಾಳ್ಯಾ 'ಮೆ' ಅಂದಾ ನೀ ಏನಂದಿ ? | ಉತ್ತರ :- ಅಲ್ಲ-ಶುಂಠಿ-ಮೆಣಸು. |
| ೩. | ಕಣ್ಯಾಗ ಕಣ್ಣಿ, ಯಾವ ಕಣ್ಣಿ - | ಕೊಳಕಣ್ಣಿ |
| ೪. | ಒಂದಾ ಬಂಡ್ಯಾಗ ಮೂರು 'ಗಿ' | ಉತ್ತರ :- (ಡಂಬರಗಿ, ಜತಿಗಿ, ಉದ್ದಿಗಿ). |

(ಕನ್ನಡ ಸಾವಿರದ ಒಗಟುಗಳು, ಪು.xxxix)

## ೭.೫.೫. ಸನ್ನಿವೇಶವೊಂದನ್ನು ಅನಾವರಣಗೊಳಿಸುವ ಒಗಟುಗಳು :

ಸರ್ವಜ್ಞನ ಕೆಲವು ಒಗಟುಗಳು ಸನ್ನಿವೇಶವೊಂದನ್ನು ಅನಾವರಣಗೊಳಿಸುವ ಒಗಟುಗಳಾಗಿದ್ದು, ಸನ್ನಿವೇಶವೊಂದರ ಚಿತ್ರಣ ಆ ಒಗಟಿನಲ್ಲಿರುತ್ತದೆ. ಆ ಚಿತ್ರದ ಸಹಾಯದಿಂದ ಆ ಸನ್ನಿವೇಶವನ್ನು ಪತ್ತೆ ಹಚ್ಚಬೇಕಾಗುತ್ತದೆ. ಉದಾರಹಣೆಗೆ;

ಕೂತು ಮಾತನಾಡುತ್ತಾ ಯಾತವನು ಹೊಡೆದಿರೆ
ಕಾತ ಕಾಯಿಗಳು ಹೆಡಗೆಯಲಿ ಮಿನುಪ ಮಿಡಿ
ಸೌತೆಯಂತಿಹವು ಸರ್ವಜ್ಞ.

ಈ ಒಗಟು ಮೀನು ಹಿಡಿಯುವ ಸನ್ನಿವೇಶವನ್ನು ತುಂಬಾ ಸುಂದರವಾಗಿ ಕಟ್ಟಿಕೊಡುತ್ತದೆ. ಮೀನಿನ ಬಲೆಯನ್ನು ಯಾವಕ್ಕೆ ಹಾಗೂ ಮೀನುಗಳನ್ನು ಕಾತಕಾಯಿ, ಮಿಡಿ ಸೌತೆಗೆ ಹೋಲಿಸಿರುವ ಪರಿ ಸೊಗಸಾಗಿದೆ.

ಅರೆವ ಕಲ್ಲಿನ ಮೇಲೆ ಮರವು ಹುಟ್ಟಿದ ಕಂಡೆ
ಮರದ ಮೇಲೆರೆಡು ಕರ ಕಂಡೆ, ವಾಸನೆಯು
ಬರುತಿಹುದು ಕಂಡೆ ಸರ್ವಜ್ಞ.

ಈ ಒಗಟಿನಲ್ಲಿ ಗಂಧವನ್ನು ತೇಯುವ ಸನ್ನಿವೇಶದ ಚಿತ್ರಣವಿದೆ. ಅರೆವ ಕಲ್ಲನ್ನು ಸಾಣೇ ಕಲ್ಲಿಗೂ, ಮರವನ್ನು ಗಂಧದ ಕೊರಡಿಗೂ ಹೋಲಿಸಿ ರಚನೆಯಾದ ಈ ಒಗಟು ಗಂಧ ತೇಯುವ ಸನ್ನಿವೇಶವನ್ನು ಅರ್ಥವತ್ತಾಗಿ ಚಿತ್ರಿಸುತ್ತದೆ. ಇದೇ ಸನ್ನಿವೇಶವನ್ನು ಸೂಚಿಸುವ ಒಗಟು ಜಾನಪದದಲ್ಲಿ;

ಮೂರು ಕಾಲಿನ ಕೋಲೆ
ಪಾನಿ ಪೀತಿ ಪತಾಪತಾ ಹೇತಿ (ಪು. ೧೦೨).

ಎಂಬುದಾಗಿದೆ. ಅನ್ಯ ಭಾಷೆಯ ಶಬ್ದಗಳನ್ನೊಳಗೊಂಡ ಈ ಒಗಟು ಬಹುಶಃ ಉರ್ದು ಭಾಷೆಯ ವಲಯದಲ್ಲಿ ಸೃಷ್ಟಿಯಾಗಿರಬಹುದು.

ಸರ್ವಜ್ಞನ ಒಗಟಿನಲ್ಲಿ ಗಂಧ ತೇಯುವ ಸನ್ನಿವೇಶದಲ್ಲಿ 'ಸುವಾಸನೆ'ಯು ಬರುತ್ತಿದ್ದರೆ, ಜನಪದ ಒಗಟಿನಲ್ಲಿ ತೇಯ್ದು ಗಂಧವನು 'ಪತಪತ ಹೇಲೆ' ಎಂಬುದಾಗಿ ವರ್ಣಿಸಿರುವ ಪರಿ ಕುತೂಹಲ ಕಾರಿಯಾಗಿದೆ. ಸಾಮಾನ್ಯವಾಗಿ ದೇವರ ಪೂಜೆಯಲ್ಲಿ ಉಪಯೋಗಿಸಲ್ಪಡುವ 'ಗಂಧ' ಶಿಷ್ಟ ಸಮುದಾಯಕ್ಕೆ 'ಪವಿತ್ರ' ವಸ್ತು. ಜನಪದರಿಗಾದರೋ ಈ ಭೂ ತಾಯಿಯನ್ನು ಬಿಟ್ಟು ಬೇರೆ ದೈವವಿಲ್ಲ. ಅಂತೆಯೇ ಅವರು ;

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ
ಎಳ್ಳುಜೀರಿಗಿ ಬೆಳವಂಥ ಭೂಮ್ತಾಯ್ನ
ಎದ್ದೊಂದು ಗಳಿಗೆ ನೆನದೇನ.

ಎಂದು ಹಾಡುತ್ತಾರೆ. ಹೀಗೆ ಭೂಮಿ ತಾಯಿಯನ್ನೇ ದೇವರನ್ನಾಗಿ ಭಾವಿಸಿದ ಜನಪದರು ಶಿಷ್ಟ ಸಮುದಾಯದ 'ಗಂಧ'ದಂಥ ವಸ್ತುವಿನ ಪವಿತ್ರತೆಯನ್ನು ಭಂಜಿಸುವ ಕ್ರಮ ಅವರ ಮನೋಭಾವಕ್ಕೆ ಅನುಗುಣವಾಗಿಯೇ ಇದೆ. ಅವರದು ಒಂದು ಬಗೆಯ ಬಂಡಾಯ ಮನೋಭಾವವೇ ಸರಿ.

ಕಪ್ಪು ಬಣ್ಣದ ನೀರೆ । ಒಪ್ಪುವಳು ಗಗನದಲಿ
ಕಪ್ಪಿನ ಸೀರೆ ಬಿಳಿಯಾಗೆ ಅವಳನ್ನು
ಅಪ್ಪುವವರಿಲ್ಲ ಸರ್ವಜ್ಞ.

ಈ ಒಗಟು ಮುಗಿಲಿನಲ್ಲಿ ಕಪ್ಪನೆಯ ಮೋಡಗಳು ಕರಗಿ ಮಳೆ ಬರುವ ಸನ್ನಿವೇಶವನ್ನು ಅನಾವರಗೊಳಿಸುತ್ತದೆ. ಮುಗಿಲಿನಲ್ಲಿರುವ ಕಪ್ಪನೆಯ ಮಳೆ ಮೋಡಗಳನ್ನು ಕಪ್ಪು ಬಣ್ಣದ 'ನೀರೆ'ಗೆ ಹೋಲಿಸಿ, ನಂತರ ಮೋಡ ಕರಗಿ ಮಳೆಯಾಗುತ್ತಿರುವ ಸನ್ನಿವೇಶವನ್ನು 'ಕಪ್ಪಿನ ಸೀರೆ ಬಿಳಿಯಾಗೆ' ಎಂಬಲ್ಲಿ ರೂಪಕ ಒಂದಿಷ್ಟು ಅಬದ್ಧವೆನಿಸುತ್ತದೆ. ನೀರೆ ಕಪ್ಪೋ? ಅವಳುಟ್ಟ ಸೀರೆ ಕಪ್ಪೋ? ಎಂದು ಕೊಳ್ಳುವಂತಾದರೂ ಒಟ್ಟಿನಲ್ಲಿ ಈ ಒಗಟು ಮೋಡ ಕರಗಿ ಮಳೆಯಾಗುವ ಸನ್ನಿವೇಶವನ್ನು ತುಂಬ ಸುಂದರವಾಗಿ ಕಡೆದು ನಿಲ್ಲಿಸುತ್ತದೆ.

ಸಂದ ಮೇಲ್ಹಾಡುತಿಹುದು ಬೆಂದ ಮೇಲುರಿದಿಹುದು
ಬಂಧುಗಳನೆದ್ದು ಬಡಿದಿಹುದು ಕವಿಗಳಲಿ
ನಂದನರು ಪೇಳಿ ಸರ್ವಜ್ಞ.

ಈ ಒಗಟು 'ಇದ್ದಿಲು ಮಾಡುವ ಕ್ರಿಯೆ'ಯ ಸನ್ನಿವೇಶವನ್ನು ಒಗಟಾಗಿಸಿದೆ. ''ಹಸಿಯ ಮರಗಳನು ಕಡಿದು, ಗೂಡಿಗೆ ತುಂಬಿ, ಬೆಂಕಿ ಹಚ್ಚಿ, ಸುಯ್ಯೆನ್ನುವಂತೆ ಸುಟ್ಟು,ಆರಿಸಲು ಮಣ್ಣನ್ನು ಬಳಸಿ,ಬಂದ ಉಂಡೆಯ ಇದ್ದಿಲ್ಲನ್ನು ಕೋಲಿಂದ ಒಡೆದು ಸಣ್ಣ ಸಣ್ಣ ಉಂಡೆ ಮಾಡುವ ಘಟನೆಯೇ ಈ

ಬೆಡಗಿನ ಅರ್ಥ. ಸಂದಾತ ಎಂದರೆ ಸತ್ತವ ಅಥವಾ ಸುಟ್ಟಮರ. ಬೆಂದಾತನುಳಿದ ಎಂದರೆ ಇದ್ದಿಲು. ಬಂಧುಗಳೆದ್ದು ಬಡಿದರು ಎಂದರೆ, ಕೋಲಿನಿಂದ ಚಚ್ಚುವುದು''(ಪರಮಾರ್ಥ,ಪು.೧೮೭). ಈ ಬಗೆಯ ''ಸನ್ನಿವೇಶವೊಂದನ್ನು ಅನಾವರಣ ಗೊಳಿಸುವ'' ಒಗಟುಗಳು ಜನಪದರಲ್ಲಿಯೂ ಇವೆ. ಉದಾಹರಣೆಗೆ;

ಅತ್ತಲಿಂದ ಬಂದೇವಮ್ಮಾ
ಮುತ್ತಿನ ಡೇರೆ ಹೊಡೆದೇವಮ್ಮ
ಪಾಪಿ ಕೈಯಾಗ ಸಿಕ್ಕೇವಮ್ಮಾ
ಪರದೇಶವಾಗಿ ನಡೆದೇವಮ್ಮ.

ಈ ಒಗಟಿಗೆ ಉತ್ತರ 'ಜೇನು ಹುಳುಗಳ ಪಾಡು' ಎಂದು ಲಯಬದ್ಧವಾದ ಪದ್ಯ ರೂಪದಲ್ಲಿರು ಈ ಒಗಟು ಜೇನು ಹುಳುಗಳ ದುರಂತಮಯ ಸನ್ನಿವೇಶವನ್ನು ಧ್ವನಿ ಪೂರ್ಣವಾಗಿ ಅನಾವರಣಗೊಳಿಸಿದೆ.

ಹೀಗೆ ಸನ್ನಿವೇಶವನ್ನು ಅನಾವರಣಗೊಳಿಸುವ ಸರ್ವಜ್ಞನ ಒಗಟುಗಳು ರೂಪಕದ ಬಳಕೆಯಲ್ಲಿ ಧ್ವನಿ, ಅರ್ಥವಂತಿಕೆ ಮುಂತಾದ ಅಂಶಗಳೊಂದಿಗೆ ಆತ ಉಳಿದ ಒಗಟುಗಳಿಗಿಂತ ಸಮರ್ಥವಾಗಿ ಚಿತ್ರಿಸಿದ್ದಾನೆ. ಅಂತೆಯೇ ಉಳಿದ ಪ್ರಕಾರಗಳ ಹಲವಾರು ಒಗಟುಗಳೊಂದಿಗೆ ಸನ್ನಿವೇಶವನ್ನೂ ಅನಾವರಣಗೊಳಿಸುವ ಒಗಟುಗಳೂ ಸೇರಿ, ಅನೇಕ ಒಗಟುಗಳು ಜನಪದರ ಒಗಟುಗಳಲ್ಲಿ ಸೇರಿ ಹೋಗಿವೆ.

ಛಂದಸ್ಸು, ಸಾದೃಶ್ಯ, ಪ್ರಾಕೃತಿಕ ಅಂಶಗಳು ಹಾಗೂ ಭಾಷೆ ಈ ನಾಲ್ಕು ಅಂಶಗಳ ದೃಷ್ಟಿಯಿಂದ ಸರ್ವಜ್ಞನ ಒಗಟುಗಳು ಜಾನಪದ ಒಗಟುಗಳಿಗೆ ಭಿನ್ನವಾಗಿ ನಿಲ್ಲುತ್ತವೆ. ಜಾನಪದ ಒಗಟುಗಳು ಮುಕ್ತ ಛಂದಸ್ಸಿನಲ್ಲಿ ಸಾದೃಶ್ಯ ಪರಿಜ್ಞಾನದೊಂದಿಗೆ ಪ್ರಾಕೃತಿಕ ಅಂಶಗಳನ್ನು ಒಳಗೊಂಡು ಪಕ್ಕಾ ಗ್ರಾಮ್ಯ ಭಾಷೆಯಲ್ಲಿ ರಚಿತಗೊಂಡಿದ್ದರೆ ಸರ್ವಜ್ಞನ ಒಗಟುಗಳು ಜನಪದ ಛಂದಸ್ಸಿನ ಒಂದು ಪ್ರಕಾರವಾದ ತ್ರಿಪದಿಯ ಚೌಕಟ್ಟಿಗೆ ಒಳಗಾಗಿ ಅಷ್ಟಾಗಿ ಸಾದೃಶ್ಯ ಪರಿಜ್ಞಾನವಿಲ್ಲದೆ, ಪ್ರಾಕೃತಿಕ ಅಂಶಗಳನ್ನು ಅಲ್ಲಲ್ಲಿ ಅಳವಡಿಸಿಕೊಳ್ಳುತ್ತಾ ಗ್ರಾಂಥಿಕ ಭಾಷೆಯಲ್ಲಿ ರಚಿತಗೊಂಡಿವೆ. ಸರ್ವಜ್ಞ ಜನಪದ ಒಗಟುಗಳಿಂದ ಪ್ರಭಾವಿತನಾದರೂ ಸಹ ಜನಪದ ಅಂಶಗಳಿಂದಾಗ ಭಿನ್ನವಾಗಿ ಅಥವಾ ಆ ಅಂಶಗಳನ್ನು ಶಿಷ್ಟಕ್ಕೆ ಒಗ್ಗಿಸಿಕೊಂಡು ಒಗಟುಗಳನ್ನು ರಚಿಸಿರುವುದನ್ನು ಗುರುತಿಸಬಹುದು.

## ೭.೬. ಐತಿಹ್ಯ :

'ಐತಿಹ್ಯ' ಪದವನ್ನು ಇಂಗ್ಲೀಷಿನ LEGEND (ಲೆಜೆಂಡ್) ಎಂಬ ಪದಕ್ಕೆ ಸಂವಾದಿಯಾಗಿ ನಾವು ಬಳುಸುತ್ತಿದ್ದರೂ ಅದರ ಅರ್ಥವ್ಯಾಪ್ತಿ ಇಂದು ಅಷ್ಟಕ್ಕೇ ಸೀಮಿತವಾಗಿ ಉಳಿದಿಲ್ಲ. ನಿಘಂಟುಗಳ ಪ್ರಕಾರ 'ಐತಿಹ್ಯ' ಪದದ ಅರ್ಥ ೧೩ನೇಯ ಶತಮಾನದಲ್ಲಿ ಇಂಗ್ಲೀಷಿನಲ್ಲಿ ಸಂಗ್ರಹಿಸದ ಸಾಧು ಸಂತರ ಜೀವನ ಕಥಾ ಸಂಗ್ರಹ'' (ಇಂಗ್ಲೀಷ-ಕನ್ನಡ ನಿಘಂಟು , ಮೈ.ವಿ.ವಿ. :೧೯೭೦ ,ಪು.೬೬೦) ಆದರೆ ಇಂದು ಐತಿಹ್ಯದ ಅರ್ಥವ್ಯಾಪ್ತಿ ವಿಸ್ತರಿಸಿದೆ . ಇದಕ್ಕೆ ಕಾರಣ ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನಗಳಲ್ಲಿ ಉಂಟಾದ ಬೆಳವಣಿಗೆ ಎನ್ನಬಹುದು . ಈ ಬೆಳವಣಿಗೆಗಳನ್ನು ಅನುಸರಿಸಿಕೊಂಡೇ 'ಲೆಜೆಂಡ್' ಪದದ ಅರ್ಥ ವ್ಯಾಪ್ತಿ ವಿಸ್ತರಿಸಿದೆ. '' ಚಾರಿತ್ರಿಕವಾಗಿ ಈ ಲೆಜೆಂಡ್ ಪದದ ಅರ್ಥ ಒಂದೇ ರೀತಿಯಾಗಿ ಉಳಿದಿಲ್ಲ ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದು ಬಂದಂತೆ ಅದರ ಅರ್ಥದಲ್ಲಿ ವ್ಯತ್ಯಾಸವಾಗತೊಡಗಿತ್ತು. ಮೊದಲಿನ ಸಾಧು ಸಂತರ ಜೀವನ ಕತೆಯೆಂಬ ಅರ್ಥವನ್ನು ಉಳಿಸಿಕೊಂಡು ಅದು ಇನ್ನಷ್ಟು ಹಿಗ್ಗತೊಡಗಿತು. ೧೯-೨೦ ನೆಯ ಶತಮಾನದ ಹೊತ್ತಿಗೆ ಲೆಜೆಂಡ್ ಪದವು 'ಪರಪರೆಯಿಂದ ಬಂದದ್ದು ' ಎಂಬ ವಿಶಾಲಾರ್ಥದಲ್ಲಿ ಬಳಕೆಯಾಗತೊಡಗಿತು . ಕನ್ನಡ ನಿಘಂಟುಗಳು ಈ ಹೊಸ ಅರ್ಥವನ್ನು ದಾಖಲಿಸಿವೆ .

''ವ್ಯಕ್ತಿಗಳಿಗೆ, ಸ್ಥಳಗಳಿಗೆ, ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೋ ನಿರ್ಧಿಷ್ಟ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳು ಐತಿಹ್ಯ''ವಾಗುತ್ತವೆ (Standard Dictionary of Folklore-Edited by Maria Leach) ''ಕಾಲ್ಪನಿಕ ಕಥೆಗಿಂತ ಚಿಕ್ಕದಾದ, ಗದ್ಯಾತ್ಮಕವಾದ, ಮಿತ ಪಾಠಾಂತರಗಳುಳ್ಳ ಕತೆಯೇ ಐತಿಹ್ಯ'' (The Scinence of Folklore by Krappe)ಎಂಬ ವ್ಯಾಖ್ಯಾನವಿದೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು. ೪೬)

(೧) ''ಕಿಟ್ಟೆಲ್ ನಿಘಂಟುವಿನಲ್ಲಿ: 'Oral tradition a legend' ಎಂಬುದನ್ನು ಸಮಾನಾರ್ಥಕವಾಗಿ ಬಳಸಿದ್ದಲ್ಲದೆ ಕನ್ನಡದಲ್ಲಿ ಅದಕ್ಕೆ ' ಐತಿಹ್ಯ' ಎಂಬ ಪದವಿರುವುದನ್ನು ಗುರುತಿಸಲಾಗಿದೆ. (೧೮೯೪ : ಪು. ೨೯೫).

(೨) ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ 'ಪರಂಪರೆಯಿಂದ ಬಂದಿರುವುದು (೧೯೭೦, ಪು. ೧೧೩೬) ಎಂಬುದನ್ನು ಐತಿಹ್ಯಕ್ಕೆ ಸಂವಾದಿಯಾಗಿ ಬಳಸಲಾಗಿದೆ.

(೩) ಮಚ್ಚಿಮಲೆ ಶಂಕರನಾರಾಯಣರಾವ್ ಅವರು 'ಪರಂಪರಾಗತ ವೃತ್ತಾಂತ' (೧೯೫೧, ಪು.೪೯) ಎಂದಿದ್ದಾರೆ.

(೪) ಶಿವರಾಮ ಕಾತಂತರು - ಇತಿಹಾಸಕ್ಕೆ ಸಂಬಂಧಿಸದ ಚರಿತ್ರೆ' (೧೯೭೭ : ಪು.೭೭) ಎಂದಿದ್ದಾರೆ. ಕನ್ನಡ ನಿಘಂಟುಗಳಲ್ಲಿ ಕಂಡುಬರುವ ಈ ಹೊಸ ಅರ್ಥವು ಪಾಶ್ಚಾತ್ಯ ದೇಶಗಳಲ್ಲಿ ನಡೆದ ಚರ್ಚೆಯನ್ನು ಆಧರಿಸಿದೆ. ಇಲ್ಲಿ ಸಾಧು ಸಂತರ ಜೀವನ ಕತೆಯೊಂದಿಗೆ ಮೌಖಿಕ ಪರಂಪರೆಯಲ್ಲಿ ಬಂದ ಇತರ ಅಂಶಗಳನ್ನು ಒಳಗೊಳ್ಳುವ ಯತ್ನವಿದೆ.

ಮೇಲಿನ ಪ್ರಯೋಗಗಳನ್ನು ಗಮನಿಸಿದರೆ, ಈ ಐತಿಹ್ಯದ ಅರ್ಥವ್ಯಾಪ್ತಿ, ನಿಘಂಟುಗಳಲ್ಲಿರುವುದಕ್ಕಿಂತ ಸ್ವಲ್ಪ ಮಟ್ಟಿಗೆ ಬೇರೆಯೇ ಆಗಿರುವುದು ಕಂಡುಬರುತ್ತದೆ, ನಾಚಿರಾಜನ ಪ್ರಕಾರ ಐತಿಹ್ಯಕ್ಕೆ ಪ್ರಮಾಣ ಬೇಡ, ನಿಜಗುಣ ಶಿವಯೋಗಿಯ ಪ್ರಕಾರ ಲೋಕವಾರ್ತೆಯೇ ಐತಿಹ್ಯಕ್ಕೆ ಪ್ರಮಾಣ, ಸುಮಾರು ೧೪-೧೫ನೆಯ ಶತಮಾನದಲ್ಲಿ ಇಂಥ ಚರ್ಚೆ ನಡೆದಿರುವುದನ್ನು ಗಮನಿಸಿದರೆ ಇಂಗ್ಲೀಷಿಗಿಂತ ಸಾಕಷ್ಟು ಮುಂಚೆಯೇ ಐತಿಹ್ಯದ ಬಗೆಗೆ ಒಂದು ಕಲ್ಪನೆ ಇಲ್ಲಿ ಮೂಡುತ್ತಿರುವುದು ಖಚಿತವಾಗುತ್ತದೆ ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮತ್ತೊಂದು ಜನಪ್ರಿಯವು ನಂಬುವಂತೆಯೂ ಇದ್ದಾಗ ಆದನ್ನು ಇಲ್ಲಿಯ ಜನರು 'ಐತಿಹ್ಯ'ವೆಂದು ಕರೆಯುತ್ತಿದ್ದರು ಸತ್ಯದ ಶೋಧಕ್ಕೆ ಇದೂ ಒಂದು ಪ್ರಮಾಣವಾಗಿದೆ(ಕರಾವಳಿ ಜಾನಪದ, ಪು.೧೪)ಅಂದ ಮೇಲೆ ಐತಿಹ್ಯವನ್ನು 'ಇತಿಹಾಸ ಅಥವಾ ಚರಿತ್ರೆಗೆ ಸಮೀಪವರ್ತಿ' ಎಂದೂ ಪರಿಗಣಿಸಬಹುದಾಗಿದೆ.

ಒಂದು ನೈಜ ಘಟನೆಯ ಒಬ್ಬ ಅಥವಾ ಒಂದು ಜನಸಮೂಹವನ್ನು ಪ್ರಭಾವಿಸಿದಾಗ ಆ ಪ್ರಭಾವ ವಲಯದಲ್ಲಿಯೇ ಒಂದು ಐತಿಹ್ಯ ಜನ್ಮತಾಳಬಹುದು. ಈ ದೃಷ್ಟಿಯಿಂದ ಐತಿಹ್ಯವೊಂದು ಐತಿಹಾಸಿಕ ಸತ್ಯವೊಂದನ್ನು ತನ್ನೊಳಗೆ ಹುದುಗಿಸಿಟ್ಟುಕೊಂಡಿರಲೂಬಹುದು. ಎಷ್ಟೋ ಬಾರಿ ಇದು ಚರಿತ್ರಕಾರರು ಬರೆದಿಟ್ಟುಹೋದ ಲಿಖಿತಿ ರೂಪದ ಚರಿತ್ರೆಗಿಂತ ಭಿನ್ನವೂ, ವಸ್ತು ನಿಷ್ಠವು ಆಗಿರಬಹುದು .ಉದಾಹರಣೆಗೆ ಹಂಪಿಯ ಸಮೀಪದ ಕಂಪಿಲಿಯ (ಕಂಪ್ಲಿ) 'ಕುಮಾರ ರಾಮನ ' ಐತಿಹ್ಯವನ್ನೇ ಗಮನಿಸಬಹುದು. ಹಾಗೆಯೇ ಟಿಪ್ಪುಸುಲ್ತಾನನ ಮಂತ್ರಿ ಪೂರ್ಣಯ್ಯನ ಬಗೆಗಿನ ಐತಿಹ್ಯಗಳನ್ನು ಪರಿಶೀಲಿಸಬಹುದು. ಲಿಖಿತ ಐತಿಹಾಸಿಕ ದಾಖಲೆಗಳು ಟಿಪ್ಪುವಿನ ಮಂತ್ರಿ ಸಲಹೆಗಾರ ಎಂದು ಬಣ್ಣಿಸಿದರೆ, ಟಿಪ್ಪು ಪೂರ್ಣಯ್ಯರಿಗೆ ಸಂಬಂಧ ಪಟ್ಟ ಜನಪದ ಕಥನಗೀತೆಗಳು ಅತನನ್ನೇ ದ್ರೋಹಿ ವಾಚಕ ಎಂದು ಬಣ್ಣಿಸುತ್ತವೆ! ''ಹಾಗಾದರೆ ಐತಿಹ್ಯಗಳ ಹಿಂದೆಯೂ ಒಂದು ಚಿಂತನೆ ಇರುವುದು ಸ್ಪಷ್ಟವಾಯಿತು.

ಭಾರತೀಯ ಚಿಂತನೆಯಲ್ಲಿ ಐತಿಹ್ಯದೇ ಇತಿಹಾಸ ಅಥವಾ ಆಧುನಿಕ ಪರಭಾಷೆಯಲ್ಲಿ ಚರಿತ್ರೆ ಅಥವಾ History. ಪರಂಪರೆಯಿಂದ ಬಂದ ತಿಳುವಳಿಕೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದ ಚರಿತ್ರೆ. ಅದು 'ಇದು ಹೀಗೆಯೇ ಇತ್ತು' ಎಂಬುದರ ನಿರೂಪಣೆ, ಅದನ್ನು ನಿರೂಪಿಸುವವನ ದೃಷ್ಟಿಯಲ್ಲಿ ಅದು ನಡೆದ ಘಟನೆಗಳ ನಿರೂಪಣೆ. ಈ ಘಟನೆಗಳ ನಿರೂಪಣೆಯ ಉದ್ದೇಶ ಮನರಂಜನೆಯಲ್ಲ, ಬದಲಾಗಿ ಸಮಕಾಲೀನ ಬದುಕಿಗೆ ಹಿರಿದಾದ ಮಹತ್ವವನ್ನು ಪ್ರಾಪ್ತಿಸಿಕೊಳ್ಳುವುದು . ಈ ಕೆಲಸ ಮಹತ್ತರವಾದ ಮೌಲ್ಯಗಳನ್ನು ವರ್ತಮಾನದಲ್ಲಿ ಸಾಕ್ಷಾತ್ಕರಿಸಿಕೊಳ್ಳುವ ಗಂಭೀರ ಪ್ರಯತ್ನ . ಲಘುಧಾಟಿಯಾಗಲೀ, ಲೇವಡಿತನವಾಗಲೀ ಇಲ್ಲಿ ಸಲ್ಲದು . ಹೀಗಾಗಿ ಇತಿಹಾಸದ ನಿರೂಪಣೆಯಲ್ಲಿ ವ್ಯತ್ಯಾಸ ಮಾಡತಕ್ಕದ್ದಲ್ಲ . ಅದು ಯಾರು ಬೇಕಾದರೂ ಹೇಳಬಹುದಾದದ್ದೂ ಅಲ್ಲ. ಮೌಖಿಕ ಪರಂಪರೆಯಲ್ಲಿಯೇ ಮುಂದುವರಿದುಕೊಂಡು ಬಂದರೂ ಇತಿಹಾಸ ತುಂಬ ಜಾಗೃತ ಸ್ಥಿತಿಯನ್ನು ಕಾಯ್ದುಕೊಂಡಿರುತ್ತದೆ . (ಕರಾವಳಿ ಜಾನಪದ : ಪು. ೭೫) ಆದ್ದರಿಂದ ಸಹಜವಾಗಿಯೇ ಚರಿತ್ರೆಯ ರಚನಾಶಾಸ್ತ್ರದಲ್ಲಿ ' ಐತಿಹ್ಯ' ಗಳ ಪ್ರಯೋಜನಗಳ ಬಗ್ಗೆಯೂ ಉಲ್ಲೇಖಗಳಿವೆ. ''ಚರಿತ್ರೆಯ ಬರವಣಿಗೆಯನ್ನು ನಾವು

ಪಾಶ್ಚಾತ್ಯರಿಂದ ಕಲಿತೆವು . ಚರಿತ್ರೆಯ ರಚನಾಶಾಸ್ತ್ರ (Historiography)ದಲ್ಲಿ ದಾಖಲೆಗಳ ಪೂರ್ಣ ಪ್ರಯೋಜನವನ್ನು ಪಡೆಯುವ ಬಗ್ಗೆ ಮಾಹಿತಿಗಳಿವೆ . ಆ ದಾಖಲೆಗಳಲ್ಲಿ ಐತಿಹ್ಯವೂ ಒಂದಾಗಿದೆ. ಚರಿತ್ರೆಯ ಬರವಣಿಗೆಯಲ್ಲಿ ವೈಜ್ಞಾನಿಕ ದೃಷ್ಟಿಕೋನ ಇರುವುದರಿಂದ ಅಲ್ಲಿ ತರ್ಕಬದ್ಧ ಪ್ರಮೇಯಗಳಿರಬಹುದೇ ವಿನಃ ಅತಿರಂಜಕತೆ ಇರುವುದಿಲ್ಲ . ಈ ಹಿನ್ನೆಲೆಯಲ್ಲಿಯೇ ಚರಿತ್ರಕಾರ ಐತಿಹ್ಯವನ್ನು ಅಭ್ಯಾಸ ಮಾಡುತ್ತಾನೆ'' (ಕರಾವಳಿ ಜಾನಪದ : ಪು. ೭೫) ಈ ಎಲ್ಲಾ ಆಧಾರಗಳಿಂದ ಈಗ ನಾವು ಐತಿಹ್ಯವನ್ನು ' ಇತಿಹಾಸಕ್ಕೆ ಸಮೀಪವರ್ತಿ' ಎಂದು ನಿಸ್ಸಂದಿಗ್ಧವಾಗಿ ಹೇಳಬಹುದಾದರೂ ಚರಿತ್ರೆಗೂ - ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗುವುದಿಲ್ಲ.

ಡಾ॥ ತಾಳ್ತಜೆ ವಸಂತ ಕುಮಾರರವರ ಅಭಿಪ್ರಾಯದಂತೆ ''ಐತಿಹ್ಯ ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ಕಲ್ಪಿತ ದಂತ ಕಥೆಯೂ ಅಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ ಅಥವಾ ವ್ಯಕ್ತಿಯೊಬ್ಬನ ಸಾಧನೆ, ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಆ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಅನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತಿದೆ. ಇಂಥ ಐತಿಹ್ಯದ ಸೃಷ್ಟಿಯಲ್ಲಿ ಉಪಲಬ್ಧ ದಾಖಲೆಗಳನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಇವು ನೈಜ ಚರಿತ್ರೆಯಾಗಲು ಬೇಕಾದ ವಸ್ತು ನಿಷ್ಠತೆಯಿಂದ ವೈಜ್ಞಾನಿಕ ದೃಷ್ಟಿಕೋನದಿಂದ ದೂರ ಸರಿದು ಕಲ್ಪನೆಯ ಆಶ್ರಯವನ್ನು ಪಡೆದು, ಕಾವ್ಯದ ಧಾಟಿಯಲ್ಲಿ ಸಾಗುತ್ತವೆ. ಭಾವುಕತೆ ವಿಜೃಂಭಿಸುತ್ತದೆ ಅಂದಾಗಲೂ ನಡೆದಿರಬಹುದಾದ ಘಟನೆಯೆಂದು ಅದರ ತಳಭಾಗದಲ್ಲಿ ರೂಪಾಂತರಗೊಳ್ಳದೇ ಇರುವುದುಂಟು. ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಸತ್ಯ ಪೂರ್ತಿ ನಾಶವಾಗುವುದಿಲ್ಲ. ಕಲಾಕೃತಿಯೊಂದರಲ್ಲಿ ನಡೆಯುವಂತೆ ಹೊಸ ಮೈಯನ್ನು ಪಡೆಯುವುದಿಲ್ಲ. ಅಂದರೆ ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಅಥವಾ ಸಂಗತಿಯ ಬಗೆಗಣ ವದಂತಿಯು ಕ್ರಮೇಣ ಅಪೂರ್ವವೂ, ಅದ್ಭುತವೂ ಅದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಒಂದು ಹಂತದಲ್ಲಿ ಐತಿಹ್ಯ ನಿಧಾನವಾಗಿ ರೂಪುಗೊಳ್ಳುತ್ತ ಸಾಗಿ ಕೊನೆಗೆ ನಿರ್ದಿಷ್ಟ ಅಕೃತಿಯನ್ನು ಪಡೆದು ಗಟ್ಟಿಯಾಗುತ್ತದೆ . ಇಲ್ಲಿ ಚಾರಿತ್ರಿಕ ಸಂಗತಿಯೊಂದು ಕಲ್ಪನೆಯಲ್ಲಿ ಹೇಗೆ ಬೇಕೋ ಹಾಗೆ ರೂಪು ತಳೆಯುತ್ತದೆ. ನಿರೂಪಕನ ಅಥವಾ ನಿರೂಪಕನ ವರ್ಗವೊಂದು ನಿಜ ಜೀವನದಲ್ಲಿ ಅನುಭವಿಸದೇ ಇದ್ದ ಆಸೆಗಳ ಪೂರೈಕೆಯ ಪರಿಣಾಮಕಾರೀ ಅಭಿವ್ಯಕ್ತಿಗಳೇ ಐತಿಹ್ಯಗಳು. ಸಮಾಜವು ಇಚ್ಛಿಸಿದ ಆಸೆಗಳ ಪೂರೈಕೆಯ ಪ್ರಯತ್ನಗಳವು. ಇವು ಮಾನವನ ಆಲೋಚನಗಳ ಮಿತಿಯನ್ನು, ಪರೋಕ್ಷವಾಗಿ ಧ್ವನಿಸುತ್ತವೆ. ಇಂಥ ಕಡೆ ಕಲ್ಪನೆ ಎಂದರೆ 'ಸತ್ಯಕ್ಕೆ ವಿರುದ್ಧವಾದ ಸುಳ್ಳು' ಎಂದೇನೂ ಅಲ್ಲ. ಈ ಅರ್ಥದಲ್ಲಿ ಐತಿಹ್ಯಗಳು ವಾಸ್ತವ ಜೀವನದಲ್ಲಿ ಮನುಕುಲವು ಅನುಭವಿಸುವ ಅರಕೆಗಳನ್ನು ಧ್ವನಿಸುತ್ತವೆ.

ಈಗಾಗಲೇ ಸ್ಪಷ್ಟಪಡಿಸಿದಂತೆ ಚರಿತ್ರೆಗೂ -ಐತಿಹ್ಯಕ್ಕೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಕಥನಗಳು ಐತಿಹ್ಯಗಳಾದರೆ, ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಠ, ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗಬಹುದು . ಜನಪದರ ಮಟ್ಟಿಗೆ ಐತಿಹ್ಯಗಳೇ ಚರಿತ್ರೆಗಳಾಗಿವೆ. ಇಲ್ಲಿ ಇನ್ನೊಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಅದೆಂದರೆ ಐತಿಹ್ಯಗಳ ಶೈಕ್ಷಣಿಕ ಪ್ರವೃತ್ತಿ. ಐತಿಹ್ಯಗಳಲ್ಲಿ ಗಾಢವಾಗಿ ಹುದುಗಿರುವ ಅದರ ಶೈಕ್ಷಣಿಕ ಪ್ರವೃತ್ತಿಯು ಅದನ್ನು ಮನರಂಜನೆಯ ಉದ್ದೇಶದಿಂದ ಬೇರ್ಪಡಿಸಿದೆ. ಜನರಿಗೆ ತಿಳುವಳಿಕೆ ನೀಡಬಯಸುವ ಐತಿಹ್ಯದ ಶೈಕ್ಷಣಿಕ ಪ್ರವೃತ್ತಿಯೇ ಅದರ ವಿವರಣಾತ್ಮಕ ಭಾಗವನು ನಿಯಂತ್ರಿಸುತ್ತದೆ. ಅಂದರೆ ಐತಿಹ್ಯಗಳು ಸತ್ಯವೆಂಬ ಭಾವದಲ್ಲಿ ಸಂಕ್ಷಿಪ್ತವಾಗಿರುತ್ತವೆ. ಇಲ್ಲಿಯೇ ಐತಿಹ್ಯಗಳು ಜನಪದ ಕತೆಗಳಿಗಿಂತ ಭಿನ್ನವಾಗಿರುತ್ತವೆ . ಒಬ್ಬಾತನು ಸತ್ಯ ಅಥವಾ ನಿಜ(Truth or Real)ವನ್ನು ನಿರೂಪಿಸವು ಬಗೆಯಲ್ಲಿಯೇ ಚರಿತ್ರೆ ಅಥವಾ ಐತಿಹ್ಯ ಅಥವಾ ಕಥೆ ಅಥವಾ ಪುರಾಣ ಸೃಷ್ಟಿಯಾಗುತ್ತದೆ. 'ನಿಜ' ಕ್ಕೆ ಚರಿತ್ರೆಯಲ್ಲಿ ವಿವರಣೆ ಮತ್ತು ವ್ಯಾಖ್ಯಾನ ಇರುತ್ತದೆ. ಐತಿಹ್ಯದಲ್ಲಿ ಕೇವಲ ನಿರೂಪಣೆ ಇರುತ್ತದೆ. ಕಥೆಯಲ್ಲಿ ರಂಜನಾಂಶ ಪ್ರಧಾನವಾಗಿರುತ್ತದೆ . ಪುರಾಣದಲ್ಲಿ ಸರ್ವಕಾಲಿಕತೆ ಮುಖ್ಯವಾಗುತ್ತದೆ . ಇವುಗಳೆಲ್ಲದರ ಹುಟ್ಟಿಗೆ ವ್ಯಕ್ತಿಯೊಬ್ಬನ ಪ್ರತಿಭೆ (ವಸಂತಕುಮಾರ ತಾಳ್ತಜೆ, ೧೯೮೫ : ಪು.೧೨೨) ಮಾತ್ರ ಸಾಲದು. ಆ ಪ್ರತಿಭೆ ಅರಳುವುದಕ್ಕೆ ಪೋಷಕವಾದ ಸಾಮಗ್ರಿಯೊಂದು ಭೌತಿಕ ಜಗತ್ತಿನಲ್ಲಿಯೇ ಬೇಕು. ಅದರ ಸಹಾಯದಿಂದ ಅನಂತರ ನಿರೂಪಕನ ಕವಿ ಪ್ರತಿಭೆ ಪ್ರಾಚೀನ ಸತ್ಯಗಳನ್ನು ಸಾಕ್ಷಾತ್ಕರಿಸಬಹುದು'' (ಕರಾವಳಿ ಜಾನಪದ, ಪು.೭೭). ಐತಿಹ್ಯಗಳನ್ನು ಅನೇಕ ವಿದ್ವಾಂಸರು ಬಗೆಬಗೆಯಾಗಿ ವರ್ಗೀಕರಿಸಿದ್ದಾರೆ. ''ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳ ಕುರಿತು ವಿಶ್ಲೇಷಣಾತ್ಮಕ ಪ್ರಬಂಧ ಬರೆದ ತಾಳ್ತಜೆ ವಸಂತಕುಮಾರರವರು ಡಾರ್ಸನ್ನರ ವರ್ಗೀಕರಣವನ್ನೇ ಆಶ್ರಯಿಸಿ, ಜಿಲ್ಲೆಯ ಐತಿಹ್ಯಗಳನ್ನು ಮೂರು ರೀತಿಯಾಗಿ ವಿಭಜಿಸಿಕೊಂಡಿದ್ದಾರೆ.

೧. ವ್ಯಕ್ತಿ ಪ್ರಧಾನ ಐತಿಹ್ಯಗಳು.
೨. ಸ್ಥಳ ಪ್ರಧಾನ ಐತಿಹ್ಯಗಳು.
೩. ಘಟನಾ ಪ್ರಧಾನ ಐತಿಹ್ಯಗಳು.

ಕನ್ನಡ ಸಂದರ್ಭದಲ್ಲಿ ಮೇಲಿನ ವರ್ಗೀಕರಣವು ಸಮರ್ಪಕವಾಗಿ ಹೊಂದಿಕೆಯಾಗುವುದರಿಂದ ಅದೇ ಕ್ರಮವನ್ನು ಉಳಿಸಿಕೊಳ್ಳಬಹುದು. ತನ್ನೆಲ್ಲಾ ಮಿತಿಗಳ ಮಧ್ಯೆಯೂ ಡಾರ್ಸನ್ನರ ವರ್ಗೀಕರಣವೇ ನಮಗೆ ಮಾದರಿಯಾಗಬಹುದು (ಪುರುಷೋತ್ತಮ ಬಿಳಿಮಲೆ, ಕರಾವಳಿ ಜಾನಪದ, ಪು. ೮೩).

ಹೀಗೆ ಐತಿಹ್ಯಗಳು ಐತಿಹಾಸಿಕ ಘಟನೆಗಳನ್ನು ಗರ್ಭೀಕರಿಸಿಕೊಂಡು ನಿರೂಪಣೆಗೊಳುತ್ತ ಸಾಗುವಾಗ ತಮ್ಮ ಸಮಕಾಲೀನ ಜನಪದ ಸಮುದಾಯವನ್ನು ಪ್ರಭಾವಿಸಿದಂತೆಯೇ ಶಿಷ್ಟ ಸಮುದಾಯವನ್ನು ಪ್ರಭಾವಿಸದೇ ಬಿಡುವುದಿಲ್ಲ. ಅಂತೆಯೇ ಕವಿ ಸರ್ವಜ್ಞ ಕೂಡ ತನ್ನ ಸಮಕಾಲೀನ ಐತಿಹ್ಯಗಳಿಂದ ಪ್ರಭಾವಿತನಾಗಿದ್ದಾನೆ. ಸರ್ವಜ್ಞನ ಕಾಲಜ್ಞಾನ ವಚನಗಳಲ್ಲಿ ಹಲವಾರು ಐತಿಹ್ಯಗಳು

ಮುಖ್ಯವಾಗಿ ಹನ್ನೆರಡನೇ ಶತಮಾನದಲ್ಲಿ ನಡೆದು ಹೋದ ವಚನ ಚಳುವಳಿಗೆ ಸಂಬಂಧಪಟ್ಟ ಐತಿಹ್ಯಗಳ ಪ್ರಸ್ತಾಪ ಇರುವುದನ್ನು ಕಾಣಬಹುದಾಗಿದೆ. ಅಲ್ಲದೆ ಹಂಪೆ, ಇಕ್ಕೇರಿ, ನಂದಿದುರ್ಗ ಮುಂತಾದ ಸ್ಥಳಗಳಿಗೆ ಸಂಬಂಧ ಪಟ್ಟಂತೆಯೂ ಐತಿಹ್ಯಗಳಿವೆ.

ನಮಗೆಲ್ಲಾ ತಿಳಿದಿರುವಂತೆ ಹನ್ನೆರಡನೆಯ ಶತಮಾನದಲ್ಲಿ ನಡೆದ ವಚನಕ್ರಾಂತಿ ಸಮಾಜದ ಅನಿಷ್ಟ ಗಳಾದ ವರ್ಗ ಬೇಧ, ವರ್ಣ ಬೇಧ, ಲಿಂಗ ತಾರತಮ್ಯ ಮೊದಲಾದ ಅಸಮಾನತೆಗಳ ವಿರುದ್ಧ ನಡೆದ ಚಳುವಳಿಯಾಗಿದೆ. ಈ ಚಳುವಳಿಯಲ್ಲಿ ಪಾಲ್ಗೊಂಡವರು ಅಸಂಖ್ಯ ಜನರಾಗಿದ್ದರೂ ಚಳುವಳಿಯ ಮುಂಚೂಣಿಯಲ್ಲಿದ್ದವರು. ಬಸವಣ್ಣನವರು ಅಂತೆಯೇ ಸರ್ವಜ್ಞ ತನ್ನ 'ಕಾಲಜ್ಞಾನ' ಪದ್ಧತಿಯ ವಚನಗಳನ್ನು ಪ್ರಾರಂಭಿಸುವುದು ಬಸವಣ್ಣನಿಗೆ ವಂದಿಸುವುದರ ಮೂಲಕವೇ ;

ಬಸವನೆನಗೆ ನಿರೂಪಿಸಿದ ಕಾಲ ಜ್ಞಾನ ।
ಬಸಿತವಿಟ್ಟು ಮರ್ತ್ಯರಿರವಿನು ನಿಮ್ಮ ।
ಸಿಸುವಾಗ ಪೇಳ್ವೆ ಸರ್ವಜ್ಞ.

ಸರ್ವಜ್ಞ ಕಾಲಜ್ಞಾನದ ವಚನಗಳನ್ನು ಹೇಳುವಾಗ ಬಸವಣ್ಣನವರನ್ನು 'ಮಾದರಿ'ಯಾಗಿ ತೆಗೆದುಕೊಳ್ಳುತ್ತಾನೆ. ಮತ್ತು ತಾನು ಅವನ 'ಶಿಶು' ಎಂಬ ವಿನಮ್ರಭಾವದಿಂದ ಮರ್ತ್ಯರಿರವನ್ನು - ಅಂದರೆ ತನ್ನ ಸಮಕಾಲೀನ ಸಾಮಾಜದ ಬಗೆಗೆ ವಿವರಿಸುತ್ತಾನೆ. ಇಲ್ಲಿ 'ಕಾಲಜ್ಞಾನ' ಅಂದರೆ ಭೂತ, ವರ್ತಮಾನ, ಭವಿಷ್ಯ ಹೀಗೆ ಮೂರು ಕಾಲಗಳ ಅರಿವು ಸರ್ವಜ್ಞನ ಇರುವಿನಲ್ಲಿ ಆಗಲೇ ಶರಣರು ಭೂತಕಾಲಕ್ಕೆ ಸಂದು ಹೋದವರು. ಶರಣರ ಬದುಕು, ಬವಣೆ ಏನಿದ್ದರೂ ಅವನು ಇತರರಿಂದ ಕೇಳಿಯೇ ತಿಳಿದವನು. ಅವನ ವರ್ತಮಾನ ಕಾಲಕ್ಕಾಗಲೇ ಶರಣರು ಐತಿಹಾಸಿಕ ವ್ಯಕ್ತಿಗಳು ಮತ್ತೆ ಇನ್ನೂ ಮುಖ್ಯವಾಗಿ ಐತಿಹ್ಯಗಳ ಮೂಲಕವಾಗಿ ಜನ ಮಾನಸವನ್ನು ತಟ್ಟುತ್ತಿರುವವರು.

ಹನ್ನೆರಡನೇ ಶತಮಾನದ ನಂತರ ರಚಿತವಾದ ಹರಿಹರನ ಬಸವರಾಜ ದೇವರರಗಳೆ ಪಾಲ್ಕುರಿಕೆ ಸೋಮನಾಥನ ಚೆನ್ನಬಸವ ರಗಳೆ, ಶರಣ ಬಸವ ರಗಳೆ ನಂತರದ ಸಿಂಗಿರಾಜ ಪುರಾಣ............ ಮೊದಲಾದವುಗಳ ಮೂಲಕ ಹಾಗೂ ಜನಪದ ಹಾಡು, ಲಾವಣಿ ಮುಂತಾದವುಗಳ ಮೂಲಕ ವಚನಕಾರರು ಅದರಲ್ಲೂ ಪ್ರಮುಖವಾಗಿ ಬಸವಣ್ಣ, ಚೆನ್ನಬಸವಣ್ಣ ಮುಂತಾದ ಚಳುವಳಿಯ ಮುಂಚೂಣಿಯಲ್ಲಿದ್ದ ಶರಣರ ಸುತ್ತ ಐತಿಹ್ಯಗಳು ಹುಟ್ಟಿ ಬೆಳೆಯತೊಡಗಿದ ಸೂಚನೆಗಳು ಸಿಗುತ್ತವೆ. ಇಂದಿಗೂ ಸಹ ಜನಪದ ಹಾಡುಗಳಲ್ಲಿ ಚೆನ್ನಬಸವಣ್ಣ ಹುಟ್ಟಿದ್ದು, 'ಕಕ್ಕಯ್ಯನ ಮನೆಯ ಮಿಕ್ಕ ಪ್ರಸಾದ'ದಿಂದ ಹೀಗೆ ಸರ್ವಜ್ಞ ತನ್ನ ಕಾಲದ ಐತಿಹಾಸಿಕ ವ್ಯಕ್ತಿಗಳಾದ ಬಸವಣ್ಣ, ಚೆನ್ನಬಸವಣ್ಣನ ಬಗ್ಗೆ ಬರೆದ ಕಾಲಜ್ಞಾನದ ವಚನಗಳು ಅವರ ಬಗ್ಗೆ ಇದ್ದ ಐತಿಹ್ಯಗಳ ಮೂಲಕವಾಗಿ ತಿಳಿದು, ವರ್ತಮಾನದ ಪಾತಳಿಯಲ್ಲಿ ನಿಂತು ಮನನಿಸಿ, ಬರೆದ ವಚನಗಳಾಗಿವೆ. ಕಾಲಜ್ಞಾನದ ಅರಿವೆಂದರೆ; ಸರ್ವಜ್ಞನಿಗೆ ಪವಾಡ ಸದೃಶ್ಯವಾಗಿ 'ಟೆಲಿಪತಿಯ' ಮಾದರಿಯಲ್ಲಿ ಧುತ್ತನೆ ಬಂದ ಅರಿವಲ್ಲ. ಅದು

ಅವನು ತನ್ನ ಕಾಲದ ವಿದ್ಯಾಮಾನಗಳಿಗೆ ಭೂತ, ವರ್ತಮಾನ, ಭವಿಷ್ಯತ್ತು ಹೀಗೆ ಮೂರು ಕಾಲಗಳನ್ನು ಆರೋಪಿಸಿ ಸತತವಾಗಿ ಚಿಂತನ, ಮಂಥನ ನಡೆಯಿಸಿ ಪಡೆದ ಅರಿವಾಗಿದೆ. ಇಲ್ಲಿ ಕೆಲಸ ಮಾಡಿದ್ದು 'ಕವಿ ಪ್ರತಿಭೆ'ಯೇ ವಿನಃ ಯಾವುದೇ ಅದೃಶ್ಯ ಶಕ್ತಿಯಲ್ಲ. ಆತನ ಕವಿ ಪ್ರತಿಭೆ ಅರಳುವುದಕ್ಕೆ ಪೋಷಕ ಸಾಮಗ್ರಿಯಾಗಿ ತನ್ನ ಕಾಲದ ಆದ್ಯರ ವಚನಗಳು, ಬದುಕು, ಬವಣೆ ಎಲ್ಲವೂ ಐತಿಹ್ಯಗಳ ಮೂಲಕವಾಗಿ ಅವನಿಗೆ ಧಕ್ಕಿದೆ. ಈ ಭೌತಿಕ ಜಗತ್ತಿನ ಸಾಮಗ್ರಿಯನ್ನು ಬಳಸಿಕೊಂಡೇ ಅವನು 'ಕಾಲ ಜ್ಞಾನ'ದ ವಚನಗಳನ್ನು ರಚಿಸಿದ್ದಾನೆ. ಅಂತೆಯೇ ಆತನ ಬಸವಣ್ಣನವರ ಇಡೀ ಬದುಕು, ಬವಣೆಯನ್ನು ಕೇವಲ ಮೂರೇ ಮೂರು ಸಾಲುಗಳಲ್ಲಿ ಕಟ್ಟಿಕೊಡುವ ಪರಿ ಅದ್ಭುತ;

ನಂದಿಯ ಹೆಸರಿನವನೊಂದು ರಾಜ್ಯವನಾಳಿ।
ಬಂಧನ ಪಟ್ಟು, ಭಯಪಟ್ಟು ನೀರಿನೊಳು।
ಸಂದು ಹೋದಾನು ಸರ್ವಜ್ಞ.

ಕೈಲಾಸದಲ್ಲಿ ಶಿವ ಪಾರ್ವತಿಯರ ವಾಹನವಾಗಿದ್ದ ನಂದಿಯು ಸಮಾಜೋದ್ದಾರಕ್ಕಾಗಿ ಭೂಲೋಕದಲ್ಲಿ ಬಸವಣ್ಣನಾಗಿ ಅವತರಿಸಿದನೆಂಬ ದಂತ ಕಥೆ ಪ್ರಚಲಿತದಲ್ಲಿದೆ. ಬಸವಣ್ಣನವರು ಅತೀ ಸಣ್ಣ ವಯಸ್ಸಿನಲ್ಲಿಯೇ ಅಗಾಧವಾದ ಭಕ್ತಿಯ ಮೂರ್ತಿಯಾಗಿದ್ದರು. ತಮ್ಮ ನಡೆ-ನುಡಿಗಳಿಂದ ಎಲ್ಲರ ಮನ ಗೆದ್ದು, ಉನ್ನತ ಮಟ್ಟದ ಕರಣಿಕನಾಗಿ ಅಧಿಕಾರದ ಗದ್ದುಗೆಯನ್ನು ಅಲಂಕರಿಸಿದ್ದರು.

ಮೇಲು ಕೀಳುಗಳನ್ನು ಸರಿಸಮವಾಗಿಸಬೇಕೆಂದು ಹಾಗೂ ಜಾತಿಗಳ ನಂಬಿಕೆಯನ್ನು ಕಿತ್ತೊಗೆಯಬೇಕೆಂದು ಸಮಾನತೆ ಕ್ರಾಂತಿಯನ್ನು ಬಿತ್ತಿದರು. ಇದನ್ನು ಸಹಿಸದ ಕೆಲವು ಅಜ್ಞಾನಿಗಳು ಬಸವಣ್ಣವರ ಕುರಿತಾಗಿ ರಾಜನಲ್ಲಿ ಅಪನಂಬಿಕೆಯ ವಿಷಬೀಜ ಬಿತ್ತಿ ಧಂಗೆ ಎದ್ದರು. ಇದನ್ನರಿತ ಬಸವಣ್ಣನವರು ಜನರಲ್ಲಿದ್ದ ಅಂದಕಾರವನ್ನು ಕಂಡು ಭೀತಿಗೊಳಗಾಗಿ, ನೊಂದು ಕೂಡಲಸಂಗಮದಲ್ಲಿ ಐಕ್ಯವಾದರೆಂಬ ಐತಿಹ್ಯದ ಸಂಗತಿಯನ್ನು ಸರ್ವಜ್ಞ ಇಲ್ಲಿ ಕಟ್ಟಿಕೊಟ್ಟಿದ್ದಾನೆ. ಬಸವಣ್ಣನಂತೆಯೇ ಚಳುವಳಿಯ ಇನ್ನೊಬ್ಬ ಮುಂಚೂಣಿಯ ಶರಣ ಚನ್ನಬಸವಣ್ಣ ಬರುವ ಕುರುಹುಗಳ ತಿಳಿಸುವ ವಚನಗಳು ಇಂತಿವೆ;

ಇರಿವೆತ್ತು ಮಡಿವಲ್ಲಿ। ಕೆರೆಕಟ್ಟೆ ಒಡೆದೀತು
ಬರನಟ್ಟಿ ಬಡಿದು ಜನಮಡಿಯೆ, ಶಿವಶರಣ
ಬರುವುದಕ್ಕೆ ಕುರುಹು ಸರ್ವಜ್ಞ.

ಧಾರುಣಿಯ ನಡುಗುವುದು। ಮೇರುವಲ್ಲಾಡುವುದು।
ವಾರಿನಿಧಿ ಬತ್ತಿ ಬಯಲಹುದು। ಶಿವಭಕ್ತಿ।
ಏರದಿಹುದಂದು ಸರ್ವಜ್ಞ (೧೦೫೧).

ಒತ್ತಿದ ಜಗಳಕ್ಕೆ । ಸುತ್ತಮುತ್ತಿಗೆಯಾಗಿ ।
ತೊತ್ತಳಂ ತುಳಿದು ಕೊಲುವಾಗ ಉಳುವೆಯ ।
ಕರ್ತ ಬಂದಾನು ಸರ್ವಜ್ಞ (೧೦೫೨).

ಈ ಮೇಲಿನ ಮೂರು ವಚನಗಳು ಚನ್ನಬಸವಣ್ಣನ ಆಗಮನವನ್ನು ಸೂಚಿಸುತ್ತವೆ. ಕಲ್ಯಾಣದ ಕ್ರಾಂತಿಯ ನಂತರ ಎಲ್ಲಾ ಶರಣರೂ ದಿಕ್ಕಿಗೊಬ್ಬರಂತೆ ಚದುರಿ ಚೆನ್ನಬಸವಣ್ಣ ಉಳುವೆಯ ಹಾದಿ ಒಡಿದು, ಅಲ್ಲಿಯೇ ನೆಲೆಸಿದನೆಂಬ ಐತಿಹ್ಯಗಳಿವೆ. ಅಂತೆಯೇ ಉಳುಮೆಯಲ್ಲಿ ಚೆನ್ನಬಸವಣ್ಣನ ಗುಡಿಯನ್ನು ಇಂದಿಗೂ ಕಾಣಬಹುದಾಗಿದೆ. ಈ ಐತಿಹ್ಯವನ್ನು ಬಳಸಿಕೊಂಡೇ ಸರ್ವಜ್ಞ ಚೆನ್ನಬಸವಣ್ಣನನ್ನು 'ಉಳುಮೆಯ ಕರ್ತ' ಎಂದು ಸಂಭೋದಿಸಿದ್ದಾನೆ. ಮತ್ತೆ ಈ ವಚನಗಳ ಮೂಲಕ ನಮಗೆ ತಿಳಿದು ಬರಬಹುದಾದ ಇನ್ನೊಂದು ವಿಚಾರವೆಂದರೆ; ಯಾವುದೇ ಚಳುವಳಿ, ಕ್ರಾಂತಿ ನಡೆಯಬೇಕಾದಲ್ಲಿ ಆಯಾ ಕಾಲದ ಸಮಾಜ ತಲುಪಬೇಕಾದ ತುರೀಯ ಸ್ಥಿತಿ. ಇಲ್ಲಿ 'ಇರಿವೆತ್ತು ಮಡಿವಲ್ಲಿ ಕೆರೆಕಟ್ಟೆ ಒಡೆದೀತು', 'ವಾರಿನಿಧಿ ಬತ್ತಿ ಬಯಲಹುದು', 'ತೊತ್ತಳು ತುಳಿದು ಕೊಲುವಾಗ' ಎಂದರೆ ಸಾಮಾಜಿಕ ವಿಷಯಮತೆಗಳು ತುರಿಯಾವಸ್ಥೆಗೆ ತಲುಪಿದ ಸ್ಥಿತಿ ಎಂದರ್ಥ. ವರ್ಗಬೇಧ, ವರ್ಣಬೇಧ, ಲಿಂಗಬೇಧ ಮೊದಲಾದ ಸಾಮಾಜಿಕ ಅನಿಷ್ಟಗಳ ಮೇರೆ ಮೀರಿದಾಗ ಜನ ಬಂಡೇಳುತ್ತಾರೆ. ಅಂತಹ ಬಂಡಾಯದ ಒಡಲೊಳಗಿಂದ ಉಳುಮೆಯ ಕರ್ತನಂತಹ ಒಬ್ಬ ಪ್ರತಿನಿಧಿಯ ಮೂಲಕ ಅವರೆಲ್ಲಾ ಚಳುವಳಿ ಪ್ರಾರಂಭಿಸುತ್ತಾರೆ. ಹೀಗೆ ಐತಿಹ್ಯಗಳ ಮೂಲಕ ಸರ್ವಜ್ಞ ಕವಿ ತನ್ನ ಸಮಕಾಲೀನ ಸಮಾಜದ ಮನುಜರ ವಾಸ್ತವ ಬದುಕಿನ ಅರಕೆಗಳನ್ನು ತುಂಬಿಕೊಡುವ ಪ್ರಯತ್ನವನ್ನಿಲ್ಲಿ ಕಾಣಬಹುದಾಗಿದೆ. ತನಗಿಂತ ಹಿಂದೆ ಆಗಿಹೋದುದನ್ನು ಸರ್ವಜ್ಞ ವರ್ಣಿಸಿರುವ ಪರಿಯೊಂದು ಹೀಗಿದೆ;

ಬಸವ ಪೀಠವು ಎದ್ದು । ಒಸೆದು ನಾಣ್ಯವು ಹುಟ್ಟಿ ।
ಬಸವನ ಮುದ್ರೆ ಮೆರೆದಾವು, ಧರೆಯವಗೆ ।
ವಶವಾಗದಿಹುದೆ ಸರ್ವಜ್ಞ - (ವ.ಸು. ೧೦೫೮).

ಕಲ್ಯಾಣ ಕ್ರಾಂತಿಯ ನಂತರ ವಚನ ಚಳುವಳಿ ವೈಫಲ್ಯ ಕಂಡು ಸಮಾಜದ ಹಿಮ್ಮುಖ ಚಲನೆಯ ಯಥಾ ಚಿತ್ರಣವನ್ನು ಕಂಡ ಸರ್ವಜ್ಞ ಅ ಬಂದು ಆವಸ್ಥೆವನ್ನು 'ಕಲಿಗಾಲ' ಎಂದು ಕರೆದು ರಚಿಸಿದ ವಚನವೊಂದು ಹೀಗಿದೆ;

ವೀರಬಸವಂತನು । ಧೀರ ಬಿಜ್ಜಳ ತಾನು ।
ಮೀರಿ ಕಲಿದೇವ ನಡೆದಾನು ಅವನೊಡನೆ
ಹೋರವವರಿಲ್ಲ ಸರ್ವಜ್ಞ । - (೧೦೪೪)

ಮಳೆಗಳನು ಕುಡಿದಿಹನು। ಬೆಳೆಗಳನು ಮುಕ್ಕಿಹನು।
ಬಳಗಗಳನ್ನೆಲ್ಲ ಮುರಿದಿಹನು ಜಗದೊಳಗೆ।
ಉಳಿವರಿನ್ನಲ್ಲ ಸರ್ವಜ್ಞ - (೧೦೪೫)

ಈ ಎಲ್ಲಾ ಪ್ರಕ್ಷುಬ್ಧ ಸ್ಥಿತಿಯನ್ನು ತಿಳಿಗೊಳಸಲು ಬಸವಣ್ಣ ಮತ್ತೆ ಹುಟ್ಟಿ ಮಂದೆ ಬರುವ ಎಂದು ಆಶಿಸುವ ವಚನ

ಅಂದು ರಾಮನು ಬಂದು। ಸಂದು ದಿರ್ಸಾನೆರದ।
ಮುಂದೆ ಬಂದಿಹನು ವೀರ ಬಸವಂತ ತಾ।
ಕುಂದದಿಳೆಗೆಂದ ಸರ್ವಜ್ಞ (೧೦೪೯)

ಶರಣರು ಸಮಾನತೆಯ ಹರಿಕಾರರು. ತನ್ನ ಕಾಲಕ್ಕೆ ಅದರ ಸಂಪೂರ್ಣ ವಿಘಟನೆ , ಈ ವಿಘಟನಾ ಪ್ರಕ್ರಿಯೆಯೇ ಆತನಿಗೆ ಅಂತಹ ಶರಣರ ಬಗೆಗೆ ಹಾತೊರೆಯುವಂತೆ ಮಾಡಿದೆ. ಸರ್ವಜ್ಞ ಕವಿಯ ಕಾಲಜ್ಞಾನದ ವಚನಗಳಲ್ಲಿ ಸಿಗುವ ಇನ್ನಿತರ ಐತಿಹ್ಯಗಳೆಂದರೆ; ಆನೆಗೊಂದಿ, ಹಂಪೆಗೆ ಸಂಬಂಧಪಟ್ಟ ಐತಿಹ್ಯಗಳು ;

ಆನೆಗೊಂದಿಯ ಅರಸ। ನಾನೇ ಕುದುರೆಯ ಕಟ್ಟಿ।
ಮಾನ ಮನ್ನೆಯರು ಮಡಿಯಲಾ ನಗರವನು।
ಖಾನರಾಳುವರು ಸರ್ವಜ್ಞ.

ಹೆತ್ತ ತಂದೆಯ ಕೊಂದು। ಮತ್ತತೆಯ ವಿರುಪಾಕ್ಷ।
ಬತ್ತಲೆಯ ಹೆಣ್ಣಿಗೊಳಗಾಗಿ ರಾಜ್ಯದೊಳು।
ಕತ್ತಲಾದೀತು ಸರ್ವಜ್ಞ.

ಪಶುವ ನಂದಿಯ ಕಡಿದು। ಬಿಸುಮಿಲ್ಲಗಳ ಮಾಡಿ।
ಹಸು, ಕೋಳಿ, ಕುರಿಯ ಕಡಿಯಲಾ ಹಂಪೆಯಲಿ।
ಕಿಸುಕುಳವಾಯ್ತು ಸರ್ವಜ್ಞ.

ಕುರುಬ ಕುಲದೊಳಗೊಬ್ಬ। ಧರಣಿ ಪಾಲಕ ಹುಟ್ಟಿ।
ಉರವಣಿಸಿ ಕದನ ಹಣ್ಣಲಾ ಹಂಪೆಗೆ।
ಕರಿಯ ನಟ್ಟಿಹರು ಸರ್ವಜ್ಞ.

ಅಶ್ವಪತಿ ಗಜಪತಿಯು । ವಿಶ್ವನುತ ಹಂಪೆಯಲಿ ।
ದುಸ್ಮಾನರೊಡನೆ ಹೊಡೆದಾಡೆ ನರಪತಿಗೆ ।
ಮಸಣವಾಹುದೆಂದ ಸರ್ವಜ್ಞ.

ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯವು ಕೊನೆಯ ದಿನಗಳಲ್ಲಿ ತನ್ನ ಅವನತಿಗೆ ತಾನೇ ತಂದುಕೊಂಡ ಘಟನೆಗಳನ್ನು ಇಲ್ಲಿ ಸರ್ವಜ್ಞ ವಿವರಿಸಿದ್ದಾನೆ. ನಂತರ ಹಂಪೆಯು ಮುಸ್ಲಿಂರಿಂದ ಅನೇಕ ತಿಂಗಳುಗಳ ಕಾಲ ಲೂಟಿಯಾಯಿತು. ಆಗ ಈ ಸ್ಥಳವು ಹಾಳು ಹಂಪೆಯಾಯಿತು. ಇಲ್ಲಿನ ಜನರು ಬದುಕಲು ಹೆಣಗಾಡಬೇಕಾದ ಪರಿಸ್ಥಿತಿ ತಲೆದೋರಿರಬೇಕಾದರೆ ಇನ್ನು ಪ್ರಾಣಿ ಪಕ್ಷಿಗಳ ಸ್ಥಿತಿ ಚಿಂತಾಜನಕವಾಗಿತ್ತೆಂದು ಸರ್ವಜ್ಞ ಬಹಳ ನೋವಿನಿಂದ ಹೇಳಿದ್ದಾನೆ.

ಅಲ್ಲದೆ ಈ ವಚನಗಳಲ್ಲಿ ಖಾನ, ಬಿಸುಮಿಲ್ಲ, ದುಸ್ಮಾನ ಮೊದಲಾದ ಶಬ್ದಗಳ ಆಧಾರದಿಂದ ಆನೆಗೊಂದಿ, ವಿಜಯನಗರದರಸರು ಹಾಗೂ ಮುಸ್ಲಿಂ ರಾಜರುಗಳ ವಿರುದ್ಧ ನಡೆದ ಯುದ್ಧಗಳ ಕಾರಣದಿಂದ ವಿಜಯನಗರ ಸಾಮ್ರಾಜ್ಯದ ಪತನವಾಯಿತೆಂದು ಊಹಿಸಬಹುದಾದರೂ 'ಹೆತ್ತ ತಂದೆಯ ಕೊಂದು ಮತ್ತತೆಯ ವಿರೂಪಾಕ್ಷ, ಬತ್ತಲೆ ಹೆಣ್ಣಿಗೊಳಗಾಗಿ ಹಾಗೂ 'ಕುರುಬಕುಲದೊಳಗೊಬ್ಬ ಧರಣಿ ಪಾಲಕ ಹುಟ್ಟಿ ಉರವಶಿವ ಕದನ ' ಮುಂತಾದ ಉಲ್ಲೇಖಗಳು ಆ ಸಾಮ್ರಾಜ್ಯದ ಆಂತರಿಕ ಸಂಘರ್ಷಗಳನ್ನು ತಿಳಿಯಪಡಿಸುತ್ತವೆ. ದೊರೆಗಳ ದುರಾಸೆ , ಸ್ತ್ರೀ ಲಂಪಟತನ ಮುಂತಾದುವುಗಳೂ ಸಹ ವಿಜಯನಗರ ಸಾಮ್ರಾಜ್ಯದ ಪತನಕ್ಕೆ ಕಾರಣವಾಗಿರಬಹುದಾದ ಪ್ರಬಲ ಸುಳಿವನ್ನು ನೀಡುತ್ತವೆ.

## ೭.೭. ಪುರಾಣ :

ಐತಿಹ್ಯದ ಮುಂದುಯವರೆದ ಅವಸ್ಥೆಯೇ ಪುರಾಣವೆನ್ನಬಹುದು. ಐತಿಹ್ಯದಲ್ಲಿ ಐತಿಹಾಸಿಕ ಘಟನೆಯೊಂದು .........? ತುಸು ಕಲ್ಪನೆ, ರಂಜಕತೆಯ ಕವಚದೊಂದಿಗೆಯೂ ಸಹ ರೂಪಾಂತರಗೊಳ್ಳದೇ ಇದ್ದರೆ ಪುರಾಣದಲ್ಲಿ ಕಲ್ಪನೆ, ರಂಜಕತೆ ಅತಿಯಾಗಿ ಮತ್ತೆ ಅದಕ್ಕೆ ಧಾರ್ಮಿಕ ಬಂಧನವೂ ಸೇರಿಕೊಂಡು ಐತಿಹಾಸಿಕ ಘಟನೆಯ ರೂಪ ಪೂರ್ತಿ ಮಸುಕು ಮಸುಕಾಗಿ ಬಿಟ್ಟಿರುತ್ತದೆ. ಧಾರ್ಮಿಕ ಕಟ್ಟುಪಾಡಿನಲ್ಲಿ ಬಂಧಿತವಾಗುವುದರಿಂದ ಅದಕ್ಕೆ ಒಂದು ಬಗೆಯ 'ಪಾವಿತ್ರ್ಯವೂ' ಸೇರಿಕೊಂಡು ಬಿಡುತ್ತದೆ. "ಪುರಾಣ ಪದವು ಹಳೆಯ-ಪ್ರಾಚೀನ ಎಂಬಿತ್ಯಾದಿ ಅರ್ಥಗಳನ್ನು ಧ್ವನಿಸುವುದರೊಂದಿಗೆ ಬಳಕೆಯಲ್ಲಿ ತುಂಬಾ ದೀರ್ಘವಾಗಿರುವ ನಿರೂಪಣೆ" ಎಂಬ ಅರ್ಥವನ್ನು ಹೊಂದಿದೆ. ಕನಿಷ್ಠ ಐತಿಹ್ಯಗಳೊಂದಿಗೆ ಹೋಲಿಸಿದಾಗ ಪುರಾಣಗಳು ದೀರ್ಘವಾಗಿರುವುದು ಸ್ಪಷ್ಟವೇ ಇದೆ. ಲೀಚನ ಪ್ರಕಾರ ಹಿಂದೆ ನಡೆದವುಗಳೆಂದೇ ಹೇಳಲಾಗುವ ಅತಿಮಾನುಷ ವ್ಯಕ್ತಿಗಳ, ದೈವ ದೇವರುಗಳ, ಸಾಂಸ್ಕೃತಿಕ ವೀರ ಪುರುಷರ ಸಾಹಸ, ಮಹಿಮೆ ಪವಾಡ ಗಳನ್ನು, ಪುರಾತನ ಸಂಪ್ರದಾಯ ಹಾಗೂ ಧಾರ್ಮಿಕ ನಂಬಿಕೆಗಳನ್ನು ವಿವರಿಸುವ ಕಥೆಗಳನ್ನು ಪುರಾಣ ಎಂದು ಕರೆಯಲಾಗುತ್ತದೆ (ಕೂಡು-ಕಟ್ಟು, ಪು.೯೭).

"ಹಿಂದಿನ ಯುಗದಲ್ಲಿ ನಡೆದದ್ದೆಂದು ಹೇಳುವ, ಸೃಷ್ಟಿ ಪ್ರಳಯಗಳನ್ನು ಜನರ, ನಾಕರ, ದೇವತೆಗಳ ಉಗಮ, ವಿಕಾಸ ಮತ್ತು ಮಹಿಮೆಗಳನ್ನು ಇವರ ಸಾಂಸ್ಕೃತಿಕ ಮತ್ತು ಮತೀಯ ವಿಚಾರಗಳನ್ನು ವಿವರಿಸುವ ಕಥೆಯೇ ಪುರಾಣ"ವೆಂದು ವ್ಯಾಖ್ಯಾನಿಸಲಾಗಿದೆ (Standard Dictionary of Folkore – Ed. by Maria Leach). ರೂತ್ವೆನ್ ಪ್ರಕಾರ "ಪುರಾಣವೊಂದು ತೆರೆದ ಮುಕ್ತಾಯದ ಪ್ರಕ್ರಿಯೆ. ಸಾಹಿತ್ಯ ಕೃತಿಯೊಂದು ಮುಗಿದ ಉತ್ಪನ್ನ". "ಪುರಾಣವು ಕಾವ್ಯದಿಂದ ಬೇರ್ಪಡಿಸಲಾಗದ ಉಪರಚನಾ ರೂಪ"ವೆಂದು ಮಾರ್ಕ್‌ಶೋರರ್ ಹೇಳಿದ್ದಾನೆ (ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ, ಪು.೪೭).

ಅಂತೆಯೆ ಪುರಾಣಗಳ ಉದ್ದಕ್ಕೂ ಅತಿಮಾನುಷ ವ್ಯಕ್ತಿಗಳ , ದೈವ-ದೇವರುಗಳ, ಸಾಂಸ್ಕೃತಿಕ ವೀರ ಪುರುಷರ ಸಾಹಸ-ಮಹಿಮೆ-ಪವಾಡಗಳು ಅತಿರಂಜನೀಯವಾಗಿ ಬಣ್ಣಿಸಲ್ಪಟ್ಟಿರುತ್ತದೆ. ಉದಾಹರಣೆಗೆ: ೧೨ನೇ ಶತಮಾನ ಐತಿಹಾಸಿಕ ವ್ಯಕ್ತಿ ಬಸವಣ್ಣನ ಬಗೆಗೆ ಪರಿಶೀಲಿಸಬಹುದು. ಒಂದು ಐತೀಹ್ಯದ ಪ್ರಕಾರ ಬಸವಣ್ಣನ ತಂದೆ-ತಾಯಿ ಮಾದರಸ,ಮಾದಲಾಂಬಿಕೆಯಾದರೆ, ಪುರಾಣಗಳು ಆತನನ್ನು ಕೈಲಾಸದಲ್ಲಿ ಶಿವ ಪಾರ್ವತಿಯರ ವಾಹನವಾದ ನಂದಿಯ ಅವತಾರವೆಂದು ಬಣ್ಣಿಸುತ್ತವೆ.

ಪುರಾಣಗಳಲ್ಲಿ ಲಿಖಿತ ಪುರಾಣ ಹಾಗೂ ಜಾನಪದ ಪುರಾಣಗಳು ಮೇಲ್ನೋಟಕ್ಕೆ ಒಂದೇ ಬಗೆಯಾಗಿ ಕಂಡರೂ ಆಂತರಿಕವಾಗಿ ಅವುಗಳಲ್ಲಿ ಸಾಕಷ್ಟು ವ್ಯತ್ಯಾಸಗಳು ಇರುವುದನ್ನು ಕಾಣಬಹುದಾಗಿದೆ. ''ಲಿಖಿತ ಪುರಾಣಗಳು ಈಗಾಗಲೇ ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ಕಾನೂನುಬದ್ಧಗೊಳಿಸುತ್ತವೆ. ಜಾತಿ-ವರ್ಣ ವ್ಯತ್ಯಾಸಗಳನ್ನು ಅವು ಬಹುಮಟ್ಟಿಗೆ ಸಮರ್ಥಿಸುತ್ತವೆ. ಆದರೆ ಜನಪದ ಪುರಾಣಗಳು ಜಾತಿ ಸಮಾಜದ ಒಳಗಿನ ಸಂಘರ್ಷಗಳನ್ನು ಬಹಿರಂಗಕ್ಕೆ ತರುತ್ತವೆ. ಅದರ ಹುಳುಕುಗಳನ್ನು ಬಯಲಿಗೆಳೆಯುತ್ತವೆ. ಇದಕ್ಕೆ ಜನಪದ ಪುರಾಣದಲ್ಲಿ ಅನುಸರಿಸಲಾಗುವ ವಿಧಾನವೂ ತುಂಬ ಕುತೂಹಲ ಕರವಾಗಿರುತ್ತದೆ. ಈ ಪುರಾಣಗಳ ನಾಯಕರು ಜಾತಿ ಸಮಾಜದ ವೈರುಧ್ಯಗಳಿಗೆ ಬಲಿಯಾಗುತ್ತಾರೆ. ಹಾಗೆ ಬಲಿಯಾದಾಗಲೂ ಪುರಾಣಗಳ ನಿರೂಪಣಾ ಪ್ರಜ್ಞೆ ನಾಯಕನ ಪರವಾಗಿ ನಿಲ್ಲುವುದರಿಂದಾಗಿ ಆತನನ್ನು ಬಲಿ ತೆಗೆದುಕೊಂಡ ಸಾಮಾಜಿಕ ವ್ಯವಸ್ಥೆಯ ಬಗೆಗೆ ಅಸಹನೆ ಹುಟ್ಟಿಸಲಾಗುತ್ತದೆ. ಈ ಅಸಹನೆ ತೀವ್ರಗೊಳ್ಳುವುದು ನಾಯಕನ ಅಕಾಲ ಮೃತ್ಯುವಿನಲ್ಲಿ (ಕೂಡು ಕಟ್ಟು,ಪು.೧೦೦-೧೦೧).

ಇದಕ್ಕೆ ಉದಾಹರಣೆಯಾಗಿ '' ಬಲಿ ಚಕ್ರವರ್ತಿ''ಗೆ ಸಂಬಂಧಿಸಿದಂತೆ ಪೌರಾಣಿಕ ಅಂಶ ಗಳನ್ನು ಪರಿಶೀಲಿಸಬಹುದು. ಶಿಷ್ಟ ಪುರಾಣಗಳಲ್ಲಿ ಬಲಿ ಚಕ್ರವರ್ತಿ ರಾಕ್ಷಸ ರಾಜ. ಆತನಿಗೆ ಇಂದ್ರ ಪದವಿಗೇರುವ ಎಲ್ಲ ಅರ್ಹತೆಗಳಿದ್ದಾಗ್ಯೂ ಆತನುರಾಕ್ಷಸನೆಂಬ ಕಾರಣಕ್ಕೆ ಸ್ವತಃ ವಿಷ್ಣುವೇ ಬ್ರಾಹ್ಮಣ ವಟುವಿನ ರೂಪದಲ್ಲಿ ಬಂದು, ಮೋಸದಿಂದ ಆತನ ಯಾಗವನ್ನು ನಿಲ್ಲಿಸಿ ಆತನನ್ನು ಪಾತಾಳಕ್ಕೆ ತುಳಿಯುತ್ತಾನೆ. ಆದಾಗ್ಯೂ ಬಲಿಯು ತನಗಾದ ಅನ್ಯಾಯಕ್ಕೆ ಕೊಂಚವೂ ನೊಂದುಕೊಳ್ಳದೇ, ಪ್ರತಿಭಟಿಸದೇ ಹರಿನಾಮ ಸ್ಮರಣೆ ಮಾಡುತ್ತ ಪಾತಾಳ ಸೇರುತ್ತಾನೆ !. ಆದರೆ ಬಲಿಯ ಬಗ್ಗೆ ನಮಗೆ ಜನಪದ ಪುರಾಣಗಳು ಕಟ್ಟಿಕೊಡುವ ಚಿತ್ರಣವೇ ಬೇರೆ. ಅಲ್ಲಿ ಆತ 'ಬಲಿಂಧ್ರ'ನಾಗಿ ಪೂಜೆಗೊಳ್ಳುತ್ತಾನೆ. ಜನಪದ ಪುರಾಣಗಳಲ್ಲಿ 'ಬಲಿ'ಯ ಚಿತ್ರಣ, ಲಿಖಿತ ಪುರಾಣಗಳ ಮೂಲ ಆಶಯಗಳನ್ನೇ ವಿರೋಧಿಸುವ ನೆಲೆಯಲ್ಲಿದೆ. ಈ ಪುರಾಣಗಳಲ್ಲಿ ಬಲಿಯೇ-ದೇವೇಂದ್ರನಾಗಿ ಪೂಜ್ಯ ಸ್ಥಾನದಲ್ಲಿ ನಿಲ್ಲುತ್ತಾನೆ. ಇಲ್ಲಿ ವಿಷ್ಣು- ಇಂದ್ರ ಆತನ ವಿರುದ್ಧ ನೆಲೆಗಳಲ್ಲಿ ಅಂದರೆ, 'ಖಳನಾಯಕ'ರ ಸ್ಥಾನದಲ್ಲಿ ನಿಲ್ಲುತ್ತಾರೆ. ಇದೇರೀತಿ 'ಮಂಟೇಸ್ವಾಮಿ' ಪುರಾಣವನ್ನು ನೋಡಬಹುದು. ಮಂಟೇಸ್ವಾಮಿ ಪುರಾಣವು ೧೨ನೆಯ ಶತಮಾನದ ವಚನ ಚಳುವಳಿಯ ನಂತರ ಹುಟ್ಟಿಕೊಂಡ ಲಿಖಿತ ಪುರಾಣಗಳಿಗೆ ಪ್ರತಿಯಾಗಿ ಹುಟ್ಟಿಕೊಂಡ ಪುರಾಣವಾಗಿದೆ. ವಚನ ಚಳುವಳಿಯ ನಂತರದ ಚಳುವಳಿಯ ಆಶಯಗಳನ್ನೇ ಬುಡಮೇಲು ಮಾಡುವಂತೆ ಸಮಾಜದಲ್ಲಿ ಉಂಟಾದ ಪುರೋಹಿತಶಾಹಿಯ ವಿರುದ್ಧ ಜನ್ಮ ತಳೆದ ಒಂದು ವಿಚಾರಧಾರೆಯ ಹಿನ್ನೆಲೆಯಲ್ಲಿ 'ಮಂಟೇಸ್ವಾಮಿ' ಜನಪದ ಕಾವ್ಯ (ಪುರಾಣ) ಜನ್ಮ ತಾಳಿದೆ. ಈ ಕಾವ್ಯದ ಉದ್ದಕ್ಕೂ ಪುರೋಹಿತ ಶಾಹಿಯನ್ನು, ಧಾರ್ಮಿಕ ಯಜಮಾನ್ಯವನ್ನು, ಧಿಕ್ಕರಿಸುವ ನಿಲುವುಗಳನ್ನು ಕಾಣಬಹುದಾಗಿದೆ.

ಈ ಎಲ್ಲ ಉದಾಹರಣೆಗಳಿಂದ ಲಿಖಿತ ಪುರಾಣ ಮತ್ತು ಜನಪದ ಪುರಾಣಗಳ ನಡುವೆ ಖಚಿತವಾದ ಅಂತರವನ್ನು ನಾವು ಕಾಣಬಹುದಾಗಿದೆ. ಹೀಗೆ ಪುರಾಣ ಮತ್ತು ಐತಿಹ್ಯಗಳು ನಮ್ಮ ಸಮಾಜ ಜೀವನದ ಬಹುಮುಖ್ಯ ಸಂಗತಿಗಳಾಗಿವೆ. ಅವುಗಳ ಉದ್ದೇಶ ಮನರಂಜನೆಯಲ್ಲ. ಅವುಗಳಿಗೆ ಅವುಗಳದ್ದೇ ಆದ ಶೈಕ್ಷಣಿಕ ಉದ್ದೇಶಗಳಿರುತ್ತವೆ. ಅವುಗಳು ಜನರಿಗೆ ಒಂದು ಬಗೆಯ ತಿಳುವಳಿಕೆ ನೀಡುತ್ತಾ ಸಾಂಪ್ರದಾಯಿಕ ಶಿಕ್ಷಣದ ಭಾಗವಾಗಿ ಕಾರ್ಯನಿರ್ವಹಿಸುತ್ತವೆ. ಸಂಸ್ಕೃತಿಯ ಕೇಂದ್ರ ಉದ್ದೇಶಕ್ಕೆ ಅನುಗುಣವಾಗಿ ಜನರನ್ನು ಅವು ತಯಾರು ಮಾಡುತ್ತವೆ. ಉದಾಹರಣೆಗೆ ''ಕೋಟಿ-ಚನ್ನಯ''ರ ಐತಿಹ್ಯವು ಸೂಕ್ಷ್ಮವಾಗಿ ಬಿಲ್ಲವರ ಸಮುದಾಯದಲ್ಲಿ, ಸ್ಥೂಲವಾಗಿ ಹಿಂದುಳಿದ ವರ್ಗದ ಜನರಲ್ಲಿ ಸ್ವಾಭಿಮಾನ ಮೂಡಿಸುತ್ತದೆ. ಅವರಲ್ಲಿ ಕೆಚ್ಚನ್ನು ಕುದುರಿಸುತ್ತದೆ. ಈ ಅರ್ಥದಲ್ಲಿ ಐತಿಹ್ಯ-ಪುರಾಣಗಳು ಸಂಸ್ಕೃತಿ ಪ್ರಸಾರದ ಪ್ರಬಲ ಸಾಧನಗಳೂ ಹೌದು. ಅವು ಜನರಿಗೆ ಯಾವುದು ಒಳ್ಳೆಯದು ?, ಯಾವುದು ಕೆಟ್ಟದ್ದು ?, ಯಾವುದು ಔಚಿತ್ಯ ಪೂರ್ಣವಾದದ್ದು ? , ಯಾವುದು ಅನೌಚಿತ್ಯವಾದದ್ದು ? ಎಂಬ ಬಗೆಗೆಲ್ಲಾ ಅರಿವು ಮೂಡಿಸುತ್ತದೆ. ಈ ಅರಿವಿನ ಮೂಲಕ ಪರೋಕ್ಷವಾಗಿ ಅದು ಜನರ ಆಂತರಿಕ ಸಂಘರ್ಷಗಳನ್ನು ನಿವಾರಿಸಲು ಪ್ರಯತ್ನಿಸುತ್ತದೆ.

ಐತಿಹ್ಯ-ಪುರಾಣಗಳು ಜನರು ತಮ್ಮ ಪರಂಪರೆಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಮಾಡುವ ಪ್ರಯತ್ನಗಳಂತೆಯೂ ಕಂಡುಬರುತ್ತವೆ. ಏಕೆಂದರೆ ಅಲ್ಲಿನ ಕಥಾ ನಾಯಕರು ಸಾಮಾನ್ಯವಾಗಿ ಸಂಸ್ಕೃತಿ ವೀರರಾಗಿದ್ದು, ಆ ಸಮುದಾಯದ ಆಶೋತ್ತರಗಳನ್ನು ವಿಸ್ತರಿಸಿದ ವ್ಯಕ್ತಿಗಳಾಗುತ್ತಾರೆ. ಅಂಥವರ ನೆನಪು ಮತ್ತು ಕಥನಗಳಿಂದ ಜನರು ತಮ್ಮ ವರ್ತಮಾನಕ್ಕೆ ಒಂದು ಬಗೆಯ ಅರ್ಥವಂತಿಕೆಯನ್ನು ತಂದುಕೊಳ್ಳುತ್ತಾರೆ ಮತ್ತು ಆ ಮೂಲಕ ಸಲೀಸಾಗಿ ಪರಂಪರೆ ಯೊಂದಿಗೆ ತಮ್ಮನ್ನು ಜೋಡಿಸಿಕೊಳ್ಳುತ್ತಾರೆ'' (ಕೂಡುಕಟ್ಟು, ಪು.೧೦೬).

ಹೀಗೆ ಸರ್ವಜ್ಞ ಕವಿಯೂ ಕೂಡ ತನ್ನ ವಚನಗಳಲ್ಲಿ ಅನೇಕ ಪೌರಾಣಿಕ ಅಂಶಗಳನ್ನು ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ. ಪ್ರಾರಂಭದಲ್ಲಿ ಸರ್ವಜ್ಞ;

ನಂದಿಯನು ಏರಿದನ। ಚಂದಿರನ ಸೂಡಿದನ।
ಕಂದನ ಬೇಡಿ ನಲಿದಾನು ನೆನೆವುತ್ತಾ।
ಮುಂದೆ ಪೇಳುವೆನು ಸರ್ವಜ್ಞ.

ಎಂದು ಗಣೇಶನಿಗೆ ವಂದಿಸುತ್ತಾ, ತನ್ನ ವಚನಗಳನ್ನು ಪ್ರಾರಂಭಿಸುತ್ತಾನೆ. ಸರ್ವಜ್ಞ ತನ್ನ ಹುಟ್ಟಿನ ಹಿನ್ನೆಲೆಯನ್ನು ವಿವರಿಸುತ್ತಾ;

ಅಂದು ಜೇಡರ ದಾಸ । ಹಿಂದೆ ನಾ ವರರುಚಿಯು ।
ಇಂದು ಸರ್ವಜ್ಞ ನಾ ನಿಮ್ಮ ಕರುಣದ ।
ಕಂದ ಕಾಣಯ್ಯ ಸರ್ವಜ್ಞ.

ಎಂದು ಜೇಡರ ದಾಸೀಮಯ್ಯ ಮತ್ತು ವರರುಚಿಯ ಪ್ರಸ್ತಾಪದೊಂದಿಗೆ ಮುಂದುವರಿಸುತ್ತಾ, ಪೂರ್ವಜನ್ಮ ಸ್ಮರಣೆ ಮಾಡಿಕೊಳ್ಳುವುದು ಹೀಗೆ;

ಮುನ್ನ ಕೈಲಾಸದಲಿ । ಪನ್ನಗಧರನಾಳು ।
ಎನ್ನಯ ಪೆಸರು ಪುಷ್ಪದತ್ತನು ಎಂದು ।
ಮನ್ನಿಪರುದಯದಿ ಸರ್ವಜ್ಞ ।

ಅಂದಿನ ಪೂದತ್ತ । ಬಂದ ವರರುಚಿಯಾಗಿ ।
ಮುಂದೆ ಅವಸಾಲೆ ಸರ್ವಜ್ಞನೆಂದೆನಿಸಿ
ನಿಂದವನು ನಾನೇ ಸರ್ವಜ್ಞ.

ಮುಂಚೆ ಕೈಲಾಸದಲ್ಲಿ ಶಿವಗಣದ ಸಮೂಹದಲ್ಲಿ ತಾನು ಪುಷ್ಪದತ್ತ ಎಂಬುವನಾಗಿದ್ದಾಗಿಯೂ, ಮುಂದೆ ವರರುಚಿಯಾಗಿಯೂ, ನಂತರ ಈಗ ಸರ್ವಜ್ಞನಾಗಿಯೂ ಹುಟ್ಟಿ ಬಂದಿರುವಂತೆ ಸರ್ವಜ್ಞ ತನ್ನ ಜನನದ ಬಗ್ಗೆ ತಿಳಿಸುತ್ತಾನೆ. ಸರ್ವಜ್ಞ ಕವಿ ತನ್ನ ಜನನದ ಬಗ್ಗೆ ಈ ರೀತಿಯ ಪೌರಾಣಿಕ ಅಂಶಗಳನ್ನು ಯಾಕಾಗಿ ಬಳಸಿಕೊಳ್ಳುತ್ತಾನೆ ?, ಕಾರಣ ಮುಂದೆ ಅವನೇ ಸ್ಪಷ್ಟವಾಗಿ ವಿವರಿಸುವಂತೆ ಆತನ ಲೌಕಿಕ ತಂದೆ-ತಾಯಿಗಳ ವಿಚಾರವೂ ಇದೆ.

ಮಕ್ಕಳಿಲ್ಲವು ಎಂದು । ಅಕ್ಕ ಮಲ್ಲಮನು ।
ದುಕ್ಕವ ಬಸವರಸಗರುಪಲು ಕಾಶಿಯ ।
ಮುಕ್ಕಣ್ಣನೊಲಿದ ಸರ್ವಜ್ಞ.

ಮಾಸೂರ ವಸವರಸ । ಕೂಸ ನೀಶನ ಕೇಳೆ ।
ಕಾಶಿಯ ಅನುಭವದೊಳು ಪಡೆದ ವರವಧುವೆ ।
ಸೂಸಿತೆಂತೆನಲು ಸರ್ವಜ್ಞ.

ಗಂಡನಾಗಬೇಕೆಂದು । ಪಿಂಡವನು ನುಂಗಲದು ।
ರಂಡೆ ಮಾಳವ್ವೆಯೊಳು ಬರುವದೆಂತೆನಲು ।
ಕಂಡದನು ಪೇಳ್ದೆ ಸರ್ವಜ್ಞ.

ಗಡಿಗೆ ಮಡಕೆಯ ಕೊಂಡು । ಅಡಿಗೆ ವೇಳೆಯೊಳು ।
ಬಿಡದೆ ಮಳೆ ಮೋಡ ಪೊಡೆಯಲ್ಕೆ ಈರ್ವರಿಗೆ ।
ತಡಬಡಲಾಯ್ತು ಸರ್ವಜ್ಞ.

ಅಂಬಲೂರೊಳಗೆಸೆವ । ಕುಂಬಾರ ಸಾಲೆಯಲಿ ।
ಇಂಬಿನ ಕಳೆಯ ಮಾಳಿಯೊಳು ಬಸವರಸ ।
ನಿಂಬಿಟ್ಟನೆನ್ನ ಸರ್ವಜ್ಞ.

ಬಿಂದುವನು ಬಿಟ್ಟು ಹೋ । ದಂದು ಬಸಿರಾದವಳು ।
ಒಂದಾಗಿ ಹೊತ್ತ ದಶಮಾಸ ಉದರದೊಳು ।
ನಿಂದಾನು ಬೆಳೆದೆ ಸರ್ವಜ್ಞ.

ಹೆತ್ತವಳು ಮಾಳಿಯೆ।ನೊತ್ತಿ ತೆಗೆದವಳು ಬೆ ।
ನ್ನೊತ್ತಿ ಹಿಡಿದವಳು ಕಾಳಿ ತಾ ಮೊರದೊಳಗೆ
ಬಿತ್ತರಿಸಿದವಳು ಸರ್ವಜ್ಞ.

ಹೀಗೆ ಈ ಮೇಲಿನ ವಚನಗಳ ಆಧಾರದಿಂದ ಸರ್ವಜ್ಞನ ಜನನದ ಸುಳಿವುಗಳು ನಮಗೆ ತಿಳಿಸುವುದೇನೆಂದರೆ; ''ಮಾಳ-ಮಾಳಿ'' ಎಂಬ ಮಕ್ಕಳಿಲ್ಲದ ದಂಪತಿಗಳಿಗೆ ಒಂದು ಗಂಡು ಮಗುವನ್ನು ಕರುಣಿಸಿದವ 'ಬಸವರಸ ' ಎಂಬ ವ್ಯಕ್ತಿ. ಆ ವ್ಯಕ್ತಿ ಕರುಣಿಸಿದ ಮಗುವೇ 'ಸರ್ವಜ್ಞ' ಇದಿಷ್ಟು ಈ ವಚನಗಳ ಸಾರ. ಮುಂದೆ;

ನೂಕಿದರು ಅವರಾಗ । ಕೂಕತನದೊಳು ಬೇಗ ।
ಲೋಕದೊಳಗೆಲ್ಲ ಕಂಡುದನು ನುಡಿದ ತಾ ।
ನೇಕವಾಗಿಹನು ಸರ್ವಜ್ಞ.

ಹೀಗೆ ಜನಿಸಿದ ಈ ಮಗು ತನ್ನ ಜನನದ ಹಿನ್ನೆಲೆಯ ದೆಸೆಯಿಂದಲೇ 'ಖಂಡಿತ' ವಾದಿಯಾಗಿ ಮನೆಯಿಂದ ಹೊರಬಿದ್ದ ಸನ್ನಿವೇಶವನ್ನು ಈ ಮೇಲಿನ ವಚನ ಕಟ್ಟಿಕೊಡುತ್ತದೆ. ಅಂದರೆ; ತನ್ನ ಬದುಕಿನ , ತನ್ನ ಜನನದ ಹಿನ್ನೆಲೆಯನ್ನು ಪೌರಾಣಿಕ ಅಂಶಗಳೊಂದಿಗೆ ಸಮೀಕರಿಸಿ ಕಟುವಾಸ್ತವಗಳನ್ನು ಹಗರುಮಾಡಿಕೊಳ್ಳಲೆತ್ನಿಸುತ್ತಿದ್ದಾನೆಯೇ ? ಕಾರಣ ಹಿಂದೆಯೇ ತಿಳಿಸಿರುವಂತೆ ''ಪುರಾಣಗಳು ಜನರು ತಮ್ಮ ಪರಂಪರೆಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಮಾಡುವ ಪ್ರಯತ್ನಗಳಂತೆಯೂ ಕಂಡುಬರುತ್ತದೆ. ಏಕೆಂದರೆ; ಅಲ್ಲಿನ ಕಥಾನಾಯಕರು ಸಾಮಾನ್ಯವಾಗಿ ಸಂಸ್ಕೃತಿ ವೀರರಾಗಿದ್ದು, ಆ ಸಮುದಾಯದ ಆಶೋತ್ತರಗಳನ್ನು ವಿಸ್ತರಿಸುವ ವ್ಯಕ್ತಿಗಳಾಗುತ್ತಾರೆ. ಅಂಥವರ ನೆನಪು ಮತ್ತು

ಕಥನಗಳಿಂದ ಜನರು ತಮ್ಮ ವರ್ತಮಾನಕ್ಕೆ ಒಂದು ಬಗೆಯ ಅರ್ಥವಂತಿಕೆಯನ್ನು ತಂದುಕೊಳ್ಳುತ್ತಾರೆ ಮತ್ತು ಆ ಮೂಲಕ ಸಲೀಸಾಗಿ ಪರಂಪರೆಯೊಂದಿಗೆ ತಮ್ಮನ್ನು ಜೋಡಿಸಿಕೊಳ್ಳುತ್ತಾರೆ'' ಎಂದು ಪುರುಷೋತ್ತಮ ಬಿಳಿಮಲೆಯವರು ಅಭಿಪ್ರಾಯ ಪಡುತ್ತಾರೆ.

ಜೇಡರ ದಾಸೀಮಯ್ಯ, ವರರುಚಿ, ಪುಷ್ಪದತ್ತ ಮೊದಲಾದ ಪೌರಾಣಿಕ ವ್ಯಕ್ತಿಗಳ ಜೊತೆಗೆ ತನ್ನನ್ನು ಸಮೀಕರಿಸಿಕೊಳ್ಳುವ ಸರ್ವಜ್ಞನ ಆಶಯ ಆ ಪೌರಾಣಿಕ ವ್ಯಕ್ತಿಗಳ ನೆನಪು ಮತ್ತು ಕಥನಗಳಿಂದ ತನ್ನ ವರ್ತಮಾನಕ್ಕೆ ಒಂದು ಬಗೆಯ ಅರ್ಥವಂತಿಕೆಯನ್ನು ತಂದುಕೊಳ್ಳುವುದೇ ಆಗಿದೆ ಎನ್ನಬಹುದು.

ಇನ್ನು ವಿಧಿ ಎಂಬ ವಿಷಯವನ್ನು ಪುರಾಣದ ಮಹಾಕಾವ್ಯಗಳಲ್ಲಿ ಕಾಣಬಹುದಾಗಿದೆ. ಜಾನಪದರು ತಮ್ಮ ತ್ರಿಪದಿಗಳಲ್ಲಿ ವಿಧಿಯ ಕುರಿತಾಗಿ ಬಹಳ ಮಾರ್ಮಿಕವಾಗಿ ನುಡಿದಿದ್ದಾರೆ. ವಿಧಿ ಎಂಬುದು ಮನುಷ್ಯನ ಕಣ್ಣಿಗೆ ಕಾಣದೇ ಅದು ತನ್ನ ಕೆಲಸ ಸಾಧಿಸುತ್ತಿರುತ್ತದೆ. ಅದರಿಂದ ಹೊರತಾದವರೇ ಇಲ್ಲವೆಂಬ ದೃಢನಂಬಿಕೆ ಅವರಲ್ಲಿ ಕಂಡು ಬರುತ್ತದೆ. ಈ ವಿಧಿ ಕೆಲವೊಮ್ಮೆ ಸರಿದಾರಿಗೆ ಕೊಂಡೊಯ್ಯುವುದಕ್ಕಿಂತ, ಕ್ಲಿಷ್ಟ ದಾರಿಗಳನ್ನು ಎದುರಾಗಿಸುವುದೇ ಹೆಚ್ಚು. ವಿಧಿಯನ್ನು ಹಣೆಬರಹವೆಂದು ಜಾನಪದರು ಕರೆಯುವುದುಂಟು.

ಹಣೆಬರಹದ ಗೆರೆಯು । ಹೆರೆದರೂ ತಪ್ಪದು
ಹರಿ ಚಂದರಾಯ ಸುಡಗಾಡ । ಸೇರಿದ
ಇದಿಯವನ ಬೆನ್ನು ಬಿಡಲಿಲ್ಲ.

ಹಣೆಬರಹವನ್ನು ಹೆತ್ತ ತಾಯಿಯಾದವಳಿಗೂ ಬದಲಾಯಿಸಲಿಕ್ಕಾಗುವುದಿಲ್ಲ. ಸತ್ಯವಂತನಾದ ರಾಜ ಹರಶ್ಚಂದ್ರನಂಥವರಿಗೂ ಈ ವಿಧಿ ತನ್ನ ಕೈಚಳಕ ತೋರಿಸದೇ ಬಿಟ್ಟಿಲ್ಲ. ಇನ್ನು ಸಾಮಾನ್ಯ ಮಾನವರ ಮಾತೇಕೆ? ವಿಧಿಯೆಂಬುದರಿಂದ ತಪ್ಪಿಸಿಕೊಳ್ಳಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗುವುದಿಲ್ಲವೆಂಬುದನ್ನು ಸರ್ವಜ್ಞ;

ಅಲ್ಲಿರಲೊಲ್ಲದೆ ಬಲ್ಲಿದರ ಮೊರೆ ಬೀಳೆ
ಕಲ್ಲು ಮಾಳಿಗೆಯ ಒಳಗಿರಲು । ವಿಧಿ ತಾನು
ಕೊಲ್ಲದೇ ಬಿಡದು ಸರ್ವಜ್ಞ.

ವಿಧಿಯಿಂದ ತಪ್ಪಿಸಿಕೊಳ್ಳಬೇಕೆಂದು ಕಲ್ಲುಗಳಿಂದ ಭದ್ರವಾಗಿರುವ ನೆಲಮಾಳಿಗೆಯಲ್ಲಿ ಅವಿತು ಕುಳಿತರೂ ಸಹ ಈ ವಿಧಿಯು ಕಾಡದೇ, ಕೊಲ್ಲದೇ ಬಿಡಲಾರದೆಂಬ ಸತ್ಯವನ್ನು ಈತ ತಿಳಿಸಿದ್ದಾನೆ.

ಅದೇರೀತಿ ಸರ್ವಜ್ಞನ ವಚನಗಳಲ್ಲಿ ಇನ್ನಷ್ಟು ಕಂಡುಬರುವ ಪ್ರಮುಖ ಪೌರಾಣಿಕ ಅಂಶಗಳೆಂದರೆ; ರಾಮಾಯಣ ಮತ್ತು ಮಹಾಭಾರತಗಳಿಗೆ ಸಂಬಂಧಪಟ್ಟವುಗಳಾಗಿವೆ. ಸರ್ವಜ್ಞ ತನ್ನ 'ವಿಧಿವಶ' ಪದ್ಧತಿಯಡಿ ರಚಿಸಿದ ವಚನಗಳಲ್ಲಿ ಹೇರಳವಾಗಿ ಈ ಎರಡು ಪುರಾಣಗಳಲ್ಲಿನ ಅಂಶಗಳನ್ನು ಬಳಸಿಕೊಂಡಿದ್ದಾನೆ;

ಕರ್ಮದಿಂದಲೆ ಹರನು । ಚರ್ಮವನು ತಾನುಟ್ಟ ।
ಹೊಮ್ಮರಾಲ ನಜನಾದ ಗೋವಿಂದ ।
ನೆಮ್ಮೆಯನು ಕಾದ ಸರ್ವಜ್ಞ.

ವಿಧಯು ತ್ರಿಮೂರ್ತಿಗಳನ್ನೂ ಬಿಟ್ಟಿಲ್ಲವೆಂದು ಸರ್ವಜ್ಞನ ಎಣಿಕೆ ಇಲ್ಲಿ, ಹರ ಚರ್ಮವನುಟ್ಟಿದ್ದು, ಅಜನು (ಬ್ರಹ್ಮ) ...............?, ಗೋವಿಂದ (ಹರಿ) ಎಮ್ಮೆಯನು ಕಾಯ್ದದ್ದು (ಗೊಲ್ಲನಾಗಿದ್ದು) ಎಲ್ಲವೂ ವಿಧಿವಶದಿಂದ ಎಂಬುದು ಸರ್ವಜ್ಞನ ಎಣಿಕೆ.

ಅಕ್ಕರವು ಬರೆದಿರಲು । ಬೆಕ್ಕೆದ್ದು ಹಿಡಿಯುವುದು ।
ರಕ್ಕಸನು ಸೀತೆ ಸೆಳೆವಾಗ ರಾಮ ತರಿ ।
ದಿಕ್ಕದೇಕಿರ್ದ ಸರ್ವಜ್ಞ ।

ಅಂಬು ತಾಗಿದ ಎರಳೆ । ಕೊಂಬೂರಿ ಬೀಳ್ವಂತೆ ।
ಇಂಬರಿವ ಸೀತೆಯನಗಲಿದಾ ರಾಮನ ।
ಅಂಬು ಮುರಿದಿತ್ತೇ ? ಸರ್ವಜ್ಞ.

ಅಂಬು ತಾಗಿದ ಹುಲ್ಲೆ । ಇಂಬಿಲ್ಲದಲೆವಂತೆ ।
ನಂಬಿರ್ದ ಸೀತೆಯ ತಾನಗಲಿ ಶ್ರೀರಾಮ ।
ಕುಂಬಿನಿಯೊಳಲೆದ ಸರ್ವಜ್ಞ.

ಈ ಮೂರು ವಚನಗಳೂ ಮರ್ಯಾದಾ ಪುರುಷೋತ್ತಮನಂತಹ ರಾಮನನ್ನು ಸಹ ವಿಧಿ ಬಿಡದು ಎಂಬುದನ್ನು ತಿಳಿಸುತ್ತವೆ. ಇದೇ ರೀತಿ ಅಭಿಮನ್ಯು ಬಗ್ಗೆಯೂ ಹಲವಾರು ವಚನಗಳಿವೆ.

ಮಂದರಧರನಿಂದ್ರ । ಗಂಡುಗಲಿಗಳು ಪಾಡು ।
ನಂದನರಿರ್ದು ಮಡಿದ ಭೀಮನ್ಯು ವಿಧಿ
ಯಂದವನು ನೋಡ ಸರ್ವಜ್ಞ.

ಹೆತ್ತಯ್ಯನರ್ಜುನನು ಮುತ್ತಯ್ಯ ದೇವೇಂದ್ರನ
ಮತ್ತೆ ಮಾತುಲನು ಹರಿ ಇರಲು । ಅಭಿಮನ್ಯು
ಸತ್ತನೇಕಯ್ಯ ಸರ್ವಜ್ಞ.

ಅಭಿಮನ್ಯು ಅರ್ಜುನನ ಮಗ, ದೇವೇಂದ್ರನ ಮೊಮ್ಮಗ ಹಾಗೂ ಸೋದರ ಮಾವನಾದ ಶ್ರೀ ಕೃಷ್ಣ ಇಂಥವರ ಕೃಪಾಶೀರ್ವಾದ, ಶ್ರೀರಕ್ಷೆಗಳೆಲ್ಲಾ ಆತನ ನೆರವಿಗೆ ಇದಾಗ್ಯೂ ಸಾವು ಎಂಥಹ ವಿಚಿತ್ರ ರೀತಿಯಲ್ಲಿ ಬಂದಿತು !. ಚಕ್ರವ್ಯೂಹದಲ್ಲಿ ನುಗ್ಗಿ ಹೊರ ಬರಲಾರದ ಪ್ರಸಂಗದಲ್ಲಿ ಹೋರಾಡಿ ಸಾಯುವಂತಹ ದುಸ್ಥಿತಿ ಅಭಿಮನ್ಯುವಿಗೆ ಬಂದಿರಬೇಕಾದರೆ, ಈ ವಿಧಿಯೆಂಬುದರ ಕೈವಾಡ ಎಂಥಹದಿದ್ದರಬೇಕು ?.

ಪ್ರಾರಬ್ಧ ಕರ್ಮವದು । ಆರನೂ ಬಿಡದಯ್ಯ ।
ಮಾರಾಂತನಪ್ಪ ಯೋಗಿಯ ಒಡಲಲ್ಲಿ ।
ಊರಿಕೊಂಡಿಹುದು ಸರ್ವಜ್ಞ.

ಎನ್ನುವ ಸರ್ವಜ್ಞ ತನ್ನ ವಚನಗಳ ಮೂಲಕ ಪೌರಾಣಿಕ ಅಂಶಗಳನ್ನು ಬಳಸಿಕೊಂಡು, ಮತ್ತದೇ ಲಿಖಿತ ಪುರಾಣಗಳ ಕರ್ಮ ಸಿದ್ಧಾಂತಕ್ಕೆ ಅಂಟಿಕೊಂಡಿರುವಂತೆ ಕಂಡು ಬಂದರೂ;

ಕಂಡದ್ದು ತಿರವಾಗಿ । ಉಂಡದ್ದು ಬರಿದಾಗಿ ।
ಖಂಡಿತದಿ ನಡೆವ ಪುರುಷ ತಾ ಮೃತ್ಯುವಿನ ।
ಗಂಡನೆಂದರಿಗು ಸರ್ವಜ್ಞ.

ನಡೆವುದನೆ ತಾ ಹಾಸಿ । ನಡೆವುದನೆ ತಾ ಹೊದೆದು ।
ನಡೆಯುವ ಪಥದಿ ಅಡಿಯಿಡಲು ವಿಧಿಯ ತಾ ।
ತಡೆಯ ದೋಡುವುದು ಸರ್ವಜ್ಞ.

ಎನ್ನುತ್ತ ನಡೆ-ನುಡಿ ಶುದ್ಧವಾಗಿದ್ದಲ್ಲಿ ವಿಧಿಯಾಟವೇನೂ ನಡೆಯದು ಎಂದು ಸೇರಿಸುತ್ತಾನೆ. ಮತ್ತೆ ಇನ್ನು ವಿಸ್ಮಯಕಾರಿ ಸಂಗತಿ ಎಂದರೆ; ಸರ್ವಜ್ಞ ಕವಿ ಇಡೀ ಮಹಾಭಾರತದಂತಹ ಬೃಹತ್ ಪುರಾಣವನ್ನು;

ಹಾದರದ ಕಥೆಯನ್ನು । ಸೋದರರ ವಧೆಯನ್ನು ।
ಆದರಿಸಿ ಪುಣ್ಯ ಕಥೆಯೆಂದು ಕೇಳುವರು ।
ಮಾದಿಗರು ನೋಡ ಸರ್ವಜ್ಞ.

ಎಂದು ಅತೀ ಕಟುವಾಗಿ ಮೂರು ಸಾಲುಗಳಲ್ಲಿ ಖಂಡಿಸುತ್ತಾನೆ. ಮತ್ತು ಅಷ್ಟೇ ನಮ್ರವಾಗಿ;

ಹಣ ಗುಣವು ಬಲವುಳ್ಳ ।ರಣಧೀರ ರಾವಣನ ।
ತೃಣವೆಂದು ಬಗೆದ ಪತಿವ್ರತೆ ಸೀತೆಗೆ ।
ಎಣೆಯಾರು ಹೇಳು ಸರ್ವಜ್ಞ.

ಎಂದು ರಾಮಾಯಣದ ಸೀತೆಯನ್ನು ಕೊಂಡಾಡುತ್ತಾನೆ.

ಎಂಟೆರೆಡು ತಲೆಯುಳ್ಳ ಬಂಟ ರಾವಣ ಕಂಡ ।
ತುಂಟ ಕೀಚಕನು ಕೆಯ್ದೆಗೆದ ಪರಸತಿಯ ।
ನಂಟು ಬೇಡೆಂದ ಸರ್ವಜ್ಞ.

ಸುರಪ ಹಂಸನು ಶಶಿಯು । ಕರಕರದ ರಾವಣನು ।
ವರಕೀಚಕಾದಿ ಬಲಯುತರು ಕೆಟ್ಟಿಹರು ।
ಪರಸತಿಯ ಪಿಡಿದು ಸರ್ವಜ್ಞ.

ಎಂದು 'ಪರಸತಿ'ಯ ಸಂಗ ಸಲ್ಲದು ಎಂದು ಹೇಳುವ ಸರ್ವಜ್ಞ;

ಅನ್ಯ ಸತಿಯನು ಕಂಡು । ತನ್ನ ಹೆತ್ತವಳೆಂದು ।
ಮನ್ನಿಸಿ ನಡೆವ ಪುರುಷಂಗೆ ಇಹಪರದಿ ।
ಮುನ್ನ ಭಯವಿಲ್ಲ ಸರ್ವಜ್ಞ. ಎಂದು ಹೇಳುತ್ತಾನೆ.

ಪುರಾಣಗಳಲ್ಲಿ ಬರುವ ಸ್ವರ್ಗ-ನರಕ ಕಲ್ಪನೆಗಳನ್ನು ಸರ್ವಜ್ಞ ತನ್ನ ವಚನಗಳ ಮೂಲಕ ಖಂಡಿಸುತ್ತಾ;

ಒಂದಾಡ ತಿಂಬಾತ । ಹೊಂದಿದಡೆ ಸ್ವರ್ಗವನು ।
ಎಂದೆಂದು ಆಜನ ಕಡಿಲೆಂಬ ಕಟಿಗ ತಾ ।
ನಿಂದ್ರನೇಕಾಗ ? ಸರ್ವಜ್ಞ.

ಎಳ್ಳುಗಳ ಮುಳ್ಳುಗಳ । ಕುಳ್ಳಿರ್ದು ತಾ ಸುಟ್ಟು ।
ನಿಲ್ಲದಲೆ ಸ್ವರ್ಗಕ್ಕೇರಿದರೆ ಪುರ ಸುಟ್ಟ ।
ಕಳ್ಳನೇಕೇರ ? ಸರ್ವಜ್ಞ. ಎಂದು ಹೇಳುತ್ತಾನೆ.

ಆಡಕೊಂದಾ ಪಾಪ। ಕಾಡದಲೆ ಬಿಡುವುದೇ?
ನೋಡಿರಾದಕ್ಷನೊಡಲ ಮೇಲ ಜನತಲೆ।
ಮೂಡಿರುವುದೇಕೆ? ಸರ್ವಜ್ಞ.

ಇಲ್ಲಿ ಯಾಗ-ಯಜ್ಞಗಳ ಖಂಡನೆಯ ಜೊತೆಗೆ ''ಹಿಂಸೆ'' ಸಲ್ಲದು ಎಂಬ ಆಶಯವೂ ಇದೆ. ಹಿಂಸೆಯೆಂದರೆ ಇಲ್ಲಿ ಎಲ್ಲ ಬಗೆಯ ಹಿಂಸೆಯೂ ಸೇರುತ್ತದೆ. ಇದಕ್ಕೆ ಉದಾಹರಣೆಯಾಗಿ ಪೌರಾಣಿಕ ಪ್ರಸಂಗವೊಂದಾದ 'ದಕ್ಷಯಜ್ಞ ವಿನಾಶ'ದ ಘಟನೆಯೊಂದಿಗೆ ವಿವರಿಸುತ್ತಾನೆ ಸರ್ವಜ್ಞ ಕವಿ.

ದಕ್ಷಬ್ರಹ್ಮ ತನ್ನ ಅಹಂಕಾರದಿಂದ ಮಗಳಾದ ದಾಕ್ಷಾಯಣಿಯನ್ನು ಅವಮಾನಿಸಿ ಅವಳನ್ನು ಯಜ್ಞ ಕುಂಡದಲ್ಲಿ ಹಾರಿ ಮಡಿಯುವಂತೆ ಮಾಡಿದ್ದು ಒಂದು ಘೋರ ಹಿಂಸೆಯೇ ಸರಿ. ಪರಿಣಾಮ ಯಾಗ ಯಜ್ಞಗಳಲ್ಲಿ ಬಲಿ ಕೊಡುವ ಆಡಿನ ತಲೆಯೇ ಅವನಿಗೆ ಗತಿಯಾದದ್ದು. ಆತನ ಅಹಂಕಾರ-ಹಿಂಸೆಗೆ ತಕ್ಕ ಶಾಸ್ತಿಯೇ ಸರಿ ಎನ್ನುವುದರೊಂದಿಗೆ ಯಜ್ಞ-ಯಾಗಗಳ ನಿರರ್ಥಕತೆಯನ್ನು ಸಹ ತಿಳಿಸುವುದು ಸರ್ವಜ್ಞನ ಆಶಯವಾಗಿದೆ. ವ್ಯಕ್ತಿಯೊಬ್ಬ ತನ್ನ ಉತ್ತಮ ನಡೆ-ನುಡಿಗಳಿಂದ ಉನ್ನತಿಗೇರಬಹುದೆಂದು ತಿಳಿಸುತ್ತಾ;

ಸತ್ಯ ನುಡಿದತ್ತರೂ। ಸುತನೊಬ್ಬ ಸತ್ತರೂ।
ಸತ್ಯವನು ಬಿಡದ ಹರಿಶ್ಚಂದ್ರ ಜಗದೊಳಗೆ।
ಸ್ತುತ್ಯನಾಗಿಹನು ಸರ್ವಜ್ಞ.

ಎಂದು ಹರಿಶ್ಚಂದ್ರನನ್ನು ಉದಾಹರಿಸುತ್ತಾ, 'ಸತ್ಯಂ ಶಿವಂ ಸುಂದರಂ' ಎಂಬ ಉಕ್ತಿಯನ್ನು ನೆನಪಿಸುತ್ತಾನೆ. ಸತ್ಯವಂತರಿಗೆ ಇಹ-ಪರಗಳೆರಡರಲ್ಲೂ ಮಾನ್ಯತೆ ಇದೆ ಎಂದು ತಿಳಿಸುತ್ತಾ;

ಸತ್ಯರಿಗೆ ಧರೆಯಲ್ಲ। ಮಸ್ತಕವನೆರಗುವುದು।
ಹೆತ್ತ ತಾಯ್ ಮಗನ ಕರೆವಂತೆ ಶಿವನವರ।
ನೆತ್ತಿ ಕೊಂಬವನು ಸರ್ವಜ್ಞ.

ಕುಂದನಳಿದವ ದೈವ। ಬಂಧ ಕಳೆದವ ದೈವ।
ನೊಂದು ತಾ ನೋಯಿಸದವ ದೈವ ಹುಸಿಯದನು।
ಇಂದುಧರನೆಂದ ಸರ್ವಜ್ಞ.

ಎಂದು 'ತಾ ನೊಂದರೂ ಇತರರಿಗೆ ನೋಯಿಸದವ'ನು ದೈವತ್ವಕ್ಕೇರುವ ಬಗೆಯನ್ನು ತಿಳಿಸಿದ್ದಾನೆ.

ಎಂತಿರಲು ಪರರ ನೀ । ಮುಂತೆ ನಂಬಲು ಬೇಡ ।
ಕುಂತಿ ಹೆಮ್ಮಗನ ಕೊಲಿಸಿದಳು, ಮಾನವರ ।
ನೆಂತು ನಂಬುವದು ಸರ್ವಜ್ಞ.

ಆರ ನೆರೆ ನಂಬುವಡೆ । ಆರಯ್ದು ನಂಬುವದು ।
ನಾರಾಯಣನಿಂದ ಬಲಿ ಕೆಟ್ಟ ಮಿಕ್ಕವರ ।
ನಾರು ನಂಬುವುದು ಸರ್ವಜ್ಞ.

ನಂಬಿಕೆಗೆ ಸಂಬಂಧಪಟ್ಟಂತೆ ಲಿಖಿತ ಪುರಾಣಗಳ ಅಂಶಗಳನ್ನು ಬಳಸಿಕೊಂಡು ಸರ್ವಜ್ಞ ತನ್ನ ವಚನಗಳ ಮೂಲಕ ತಾಳುವ ನಿಲುವುಗಳು ಕುತೂಹಲಕಾರಿಯಾಗಿವೆ. ಈ ಮೇಲಿನ ಎರಡು ವಚನಗಳಲ್ಲಿ ಸರ್ವಜ್ಞ ಮಹಾಭಾರತ ಪುರಾಣದಿಂದಾಯ್ದ ಎರಡು ಪ್ರಸಂಗಗಳನ್ನು ಎತ್ತಿಕೊಂಡು ನಂಬಿಕೆಯ ಬಗ್ಗೆ ವಿಶ್ಲೇಷಿಸಿದ್ದಾನೆ. ಮಹಾಭಾರತದಲ್ಲಿ ಕುರುಕ್ಷೇತ್ರ ಯುದ್ಧಕ್ಕೆ ಮುಂಚಿತವಾಗಿ ಕೃಷ್ಣ ಕುಂತಿಯ ಮೂಲಕ ಕರ್ಣನನ್ನು 'ತೊಟ್ಟ ಬಾಣವನ್ನು ತೊಡದಿರು' ಎಂಬಂತೆ ಭಾಷೆ ತೆಗೆದುಕೊಳ್ಳುತ್ತಾನೆ. ಮತ್ತೆ ತಾನೂ ಸಹ ಬ್ರಾಹ್ಮಣನ ವೇಷಧರಿಸಿ, ಆತನ ಕರ್ಣ ಕುಂಡಲಗಳನ್ನು ಪಡೆದು, ಆತನ ಸಾವಿಗೆ ಕಾರಣನಾಗುತ್ತಾನೆ. ಕುಂತಿಗೆ ಕರ್ಣ ತನ್ನ ಹಿರಿ ಮಗನೆಂದು ಗೊತ್ತಿರುತ್ತದೆ. ತಾನು ಆತನಿಂದ ಭಾಷೆ ತೆಗೆದುಕೊಂಡಾದ ಮೇಲಾಗುವ ಪರಿಣಾಮವೂ ಗೊತ್ತಿರುತ್ತದೆ. ಆದರೂ ಅವಳು 'ಹಿರಿಮಗ'ನೆಂಬ ಪ್ರೀತಿ-ಮಮತೆಗಳನ್ನು ತೊರೆದು ಕರ್ಣನ ಸಾವಿಗೆ ಕಾರಣಳಾಗುತ್ತಾಳೆ. ಇಲ್ಲಿ ಕುಂತಿಯ ನಡುವಳಿಕೆ ತಾಯ್ತನಕ್ಕೆ ವ್ಯತಿರಿಕ್ತವಾಗಿದೆ. ತನ್ನ ಹೃದಯವನ್ನು ಕಿತ್ತುಕೊಂಡು ಹೆಂಡತಿಗೆ ಕೊಡಲು ಹೊರಟ ಮಗ ಎಡವಿ ಬಿದ್ದಾಗ 'ಪೆಟ್ಟಾಯ್ತಾ ಮಗೂ?' ಎಂದು ಮಿಡಿಯುವ ಜನಪದ ತಾಯಿಯ ಹೃದಯವೆಲ್ಲಿ ?, ಕುಂತಿಯ ಈ ಬಗೆಯ ಹೃದಯಮಿಡಿತವೆಲ್ಲಿ ?. ''ಒಲೆ ಹತ್ತಿ ಉರಿದೆಡೆ ನಿಲಬಹುದಲ್ಲದೆ, ಧರೆ ಹತ್ತಿ ಉರಿದರೆ ನಿಲಬಹುದೇ ? , ಏರಿ ನೀರುಣ್ಬೆಡೆ , ಬೇಲಿ ಎದ್ದು ಹೊಲವ ಮೇದೊಡೆ, ತಾಯ ಹಾಲು ವಿಷವಾಗಿ ಕೊಲುವೆಡೆ ಇನ್ನಾರಿಗೆ ದೂರುವೆ ಕೂಡಲಸಂಗಮದೇವ '' ಎಂಬ ಬಸವಣ್ಣನವರ ವಚನ ನೆನಪಾಗುತ್ತದೆ. ತಾಯಿಯೇ ಮಗನನ್ನು ಕೊಲ್ಲಿಸಿದ ಮೇಲೆ ಇನ್ನಾರನ್ನು ನಂಬುವುದು ಎಂದು ಸರ್ವಜ್ಞ ಕೇಳಿರುವುದು ಮಾರ್ಮಿಕವಾಗಿದೆ. ಇನ್ನು ಬಲಿಯ ವಿಚಾರ. ಬಲಿ ಚಕ್ರವರ್ತಿ ಇಂದ್ರ ಪದವಿಗಾಗಿ ಯಾಗ ಮಾಡುವಾಗ ವಿಷ್ಣು ಉಪಾಯದಿಂದ ಆ ಯಜ್ಞವನ್ನು ನಿಲ್ಲಿಸಿ, ಅವನಿಂದ ಮೂರಡಿ ಜಾಗ ಕೇಳಿ ಕೊನೆಗೆ ಆತನನ್ನೇ ಪಾತಾಳಕ್ಕೆ ತುಳಿಯುತ್ತಾನೆ. ಇಲ್ಲಿ ರಕ್ಷಿಸಬೇಕಾದ ದೇವರೇ ಕೇಡು ಬಗೆಯುವಂತಾದರೆ ?. ಕರ್ಣನಿಗೆ ಕೇಡು ಬಗೆದವಳು ತಾಯಿ ದೇವರಾದರೆ, ಬಲಿಗೆ ಕೇಡು ಬಗೆದವರು ಆತ ನಂಬಿದ ನಾರಾಯಣನೇ. ಕುಂತಿ ಹಾಗೂ ನಾರಾಯಣನನ್ನು 'ಖಳ' ನಾಯಕರ ಸ್ಥಾನದಲ್ಲಿಟ್ಟು ನೋಡುವ ಸರ್ವಜ್ಞನ ನಿಲುವುಗಳು 'ಜನಪದ' ಪುರಾಣಗಳು ತಳೆಯುವ ನಿಲುವುಗಳೇ ಆಗಿವೆ. ಅಂದರೆ ಸರ್ವಜ್ಞ ತನ್ನ ವಚನಗಳಲ್ಲಿ ಪೌರಾಣಿಕ ಅಂಶಗಳನ್ನು ಬಳಸಿಕೊಂಡರೂ ಆ ಪುರಾಣಗಳ ನಿಲುವುಗಳಿಗೆ ಪ್ರತಿಯಾಗಿ ನಿಂತು ತನ್ನ ಆಶಯಗಳನ್ನು ಮಂಡಿಸುತ್ತಾನೆ.

ರುದ್ರಕರ್ತನು ತಾನು । ಅರ್ಧ ನಾರಿಯು ಆದ ।
ಇದ್ದವರೊಳಾರು ಸತಿಯರ ಹೃದಯವನು ।
ಗೆದ್ದವರು ಯಾರು ? ಸರ್ವಜ್ಞ.

ಹರಿಯ ಉರವನು ಮೆಟ್ಟಿ । ಹರನ ಶಿರವನು ಏರಿ ।
ಸರಸಿಜೋದ್ಭವನ ಮೊಗಗೆಡಿಸಿ ಮೀರಿದಳು ।
ಹಿರಿಯರಿನ್ನಾರು ? ಸರ್ವಜ್ಞ.

ಉಚ್ಚೈಯ ಬಚ್ಚಲವ । ತುಚ್ಛವೆಂದೆನಬೇಡ ।
ಅಚ್ಯುತ ಬಿದ್ದ ನಜ ಬಿದ್ದ, ದೇವೇಂದ್ರ ।
ನೆಚ್ಚತ್ತು ಬಿದ್ದ ಸರ್ವಜ್ಞ.

ಈ ಮೂರೂ ವಚನಗಳು ದೇವಾನು ದೇವತೆಗಳೂ ಸಹ ಸ್ತ್ರೀವಶದಿಂದ ಮುಕ್ತರಾಗಿಲ್ಲವೆಂದು ತಿಳಿಸುತ್ತವೆ. ಶಿವ ಅರ್ಧನಾರೀಶ್ವರನಾದದ್ದು, ಹರಿಯ ಶೇಷ ಶಯನವನ್ನು ಲಕ್ಷ್ಮಿ ಮೆಟ್ಟಿದ್ದು, ಗಂಗೆ ಶಿವನ ಮುಡಿ ಏರಿದ್ದು, ಸರಸ್ವತಿ ಬ್ರಹ್ಮ ಒಲಿಸಿಕೊಂಡದ್ದು ಈ ಎಲ್ಲಾ ಸಂಗತಿಗಳು ಸ್ತ್ರೀ ಶಕ್ತಿಯ ಬಗೆಯನ್ನು ತಿಳಿಸುತ್ತವೆ. ಹೆಂಗಸರನ್ನು ತುಚ್ಛವಾಗಿ ಕಾಣುವುದು ಬೇಡ. ಅಚ್ಯುತ, ಅಜ, ಇಂದ್ರ ಮುಂತಾದವರು ಸೃಷ್ಟಿಯಾದದ್ದು ಹೆಣ್ಣಿಂದಲೇ ಎಂದು ಆತನ ಅಭಿಪ್ರಾಯಗಳಾಗಿವೆ.

ಸ್ತ್ರೀ ಶಕ್ತಿಯನ್ನು ಗೌರವಿಸುತ್ತಲೇ ಕೆಟ್ಟ ಹೆಂಗಸರ ಬಗ್ಗೆ ಟೀಕೆಯನ್ನು ಸಹ ಸರ್ವಜ್ಞ ಮಾಡುತ್ತಾ

ಹನುಮನಿಂ ಲಂಕೆ ಫಾಲ್ಗುಣನಿಂದ ಖಾಂಡವನ ।
ತ್ರಿಣಯನಿಂ ತ್ರಿಪುರ ಕೆಟ್ಟಂತೆ ಜಗವು ಕುಂ ।
ಟಣಿಯಿಂದ ಕೆಡಗು ಸರ್ವಜ್ಞ.

ಹನುಮಂತನಿಂದ ಲಂಕೆ, ಅರ್ಜುನನಿಂದ ಖಾಂಡವ ವನ, ತ್ರಿಣಯನಿಂದ ತ್ರಿಪುರಗಳು ಸುಟ್ಟಂತೆ ಕೆಟ್ಟ ಹೆಂಗಸಾದ ಕುಂಟಣೆಯಿಂದ ಜಗಕ್ಕೆ ಕೇಡು ಎನ್ನುತ್ತಾನೆ. ಅದೇರೀತಿ ಜೂಜಾಡುವ (ಲೆತ್ತ, ಪಗಡೆ)ವರ ಹೀನ ಸ್ಥಿತಿಯ ಬಗ್ಗೆ ವಿವರಿಸುತ್ತಾ;

ನೆತ್ತವೂ ಕುತ್ತವೂ । ಹತ್ತಿದೊಡೆ ಅಳವಲ್ಲ ।
ಕುತ್ತದಿಂದ ದೇಹ ಬಡವಕ್ಕು ನೆತ್ತದಿಂ ।
ಬತ್ತಲೆಯಕ್ಕು ಸರ್ವಜ್ಞ.

ಆಡಿ ನಳ ಕೆಟ್ಟ । ಮತ್ತಾಡಿ ಧರ್ಮಜ ಕೆಟ್ಟ ।
ನೋಡಿದ ನಾಲ್ವರು ತಿರಿದುಣಲು ಲೆತ್ತವನು ।
ಆಡಬೇಡೆಂದ ಸರ್ವಜ್ಞ ।

ಜೂಜಾಡಿ ನಳ, ಧರ್ಮರಾಯ ಕೆಟ್ಟಿದ್ದಲ್ಲದೆ, ಅದಕ್ಕೆ ಅನುಮೋದಿಸಿದ ಧರ್ಮಜನ ನಾಲ್ವರು ತಮ್ಮಂದಿರೂ ಕೆಟ್ಟರು. ಜೂಜು ಸರ್ವನಾಶಕ್ಕೆ ದಾರಿ ಎಂದು ಸರ್ವಜ್ಞನ ಅಭಿಮತವಾಗಿದೆ. ಲೆತ್ತದಂತೆಯೇ 'ಛಲ' ಮನುಜನ ಇನ್ನೊಂದು ಅವಗುಣ.

ಜಾವಕ್ಕೆ ಬದುಕುವರೆ । ಹೇವಕ್ಕೆ ಬದುಕುವರು ।
ರಾವಣನು ಸತ್ತನೆನಬೇಡ । ರಾಮಂಗೆ ।
ಹೇವ ಬಿಟ್ಟಿಹುದೇ ? ಸರ್ವಜ್ಞ.

ಬಲವಂತ ನಾನೆಂದು । ಬಲಿದು ಹೋರಲು ಬೇಡ ।
ಬಲವಂತವಾಲಿ ಶ್ರೀರಾಮನೊಡನಾಡಿ ।
ಛಲದಿಂದ ಕೆಟ್ಟ ಸರ್ವಜ್ಞ.

ಸೀತೆಯಂತಹ ಸುಂದರಿಯನ್ನು ಒಲಿಸಿಕೊಳ್ಳಬೇಕೆಂಬ 'ಛಲ'ದಿಂದ ರಾವಣ ಅವಳನ್ನು ಕದ್ದೊಯ್ದು ಅಶೋಕವನದಲ್ಲಿಟ್ಟ. ಅವಳಿಗಾಗಿಯೆ ರಾಮನೊಡನೆ ಯುದ್ಧಮಾಡಿ ಮಡಿದ. ಆತ ಮಡಿದು ಸೀತೆ ರಾಮನಿಗೇನೋ ದಕ್ಕಿದಳು. ಆದರೆ ಈ ಒಂದು ಪ್ರಸಂಗ ಆತನ ಬಾಳಿನಲ್ಲಿ ಎಬ್ಬಿಸಿದ ಅಲೆಗಳೆಷ್ಟು ? ಆತನಿಗೆ ಬ್ರಹ್ಮಹತ್ಯಾ ದೋಷ ಬಂದು ಲಿಂಗು ಪ್ರತಿಷ್ಠಾಪಿಸಿ ಪೂಜಿಸಿದ.

ವಾಲಿಯೂ ಸಹ ತಾನು ಬಲಶಾಲಿ ಎಂಬ ಅಹಂಕಾರದಲ್ಲಿ ಮೆರೆಯುತ್ತಾ ವಸ್ತು ಸ್ಥಿತಿಯನ್ನು ಅರಿಯದೇ ಛಲತೊಟ್ಟು, ತಮ್ಮನಾದ ಸುಗ್ರೀವನನ್ನು ಗಡಿಪಾರು ಮಾಡಿ ಆತನ ಮಡದಿಯನ್ನು ವಶಪಡಿಸಿಕೊಂಡ. ಆತ ಎಷ್ಟೇ ಬಲಶಾಲಿಯಾದರೂ ಅಹಂಕಾರ, ಛಲಗಳಿಂದೊಡಗೂಡಿ ಅನ್ಯಾಯ ಮಾರ್ಗದಲ್ಲಿ ನಡೆದಿದ್ದರಿಂದಾಗಿ ರಾಮನಿಂದಲೇ ಹತನಾದ. ರಾಮಾಯಣದ ಈ ಪೌರಾಣಿಕ ಸಂಗತಿಗಳ ಮೂಲಕ ಸರ್ವಜ್ಞ ಕವಿ ಅಹಂಕಾರ, ಛಲಗಳು ಸ್ವತಃ ಅಹಂಕಾರಿ ಛಲಗಾರರನ್ನಲ್ಲದೆ ಅವರ ಸಂಪರ್ಕಕ್ಕೆ ಬಂದವರನ್ನೂ ಸಹ ಸಂಕಷ್ಟಕ್ಕೀಡು ಮಾಡುತ್ತವೆಂದು ತಿಳಿಸುತ್ತಾನೆ.

ಹೀಗೆ ಸರ್ವಜ್ಞ ಕವಿ ತನ್ನ ವಚನಗಳ ಮೂಲಕ ಪೌರಾಣಿಕ ಅಂಶಗಳನ್ನು ಬಳಸಿಕೊಳ್ಳುತ್ತಾನೆ. ಇಲ್ಲಿ ಆತ ಲಿಖಿತ ಪುರಾಣಗಳಿಂದ ಅನೇಕ ದೃಷ್ಟಾಂತಗಳನ್ನು ಆಯ್ದುಕೊಂಡು ವಚನಕಟ್ಟಿದ್ದರೂ ಒಂದೊಂದು ವೇಳೆ ಪುರಾಣದ ಕೇಂದ್ರ ಬಿಂದುವಾದ ಕರ್ಮ ಸಿದ್ಧಾಂತದ ಕಡೆ ವಾಲಿದಂತೆ ಕಂಡರೂ ಬಹುತೇಕವಾಗಿ ಲಿಖಿತ ಪುರಾಣಗಳ ಆಶಯಗಳಿಗೆ ಪ್ರತಿಯಾಗಿ ಜನಪದ ಪುರಾಣಗಳ ನಿಲುವುಗಳ ಮಾದರಿಯಲ್ಲಿ ತನ್ನ ಆಶಯಗಳನ್ನು ಮಂಡಿಸುತ್ತಾನೆ.

ಕನ್ನಡ ಕುಲಕೋಟಿಯ ನಾಲಿಗೆಯ ಮೇಲೆ ನಲಿದಾಡುತ್ತಿರುವ ಸರ್ವಜ್ಞ ಕನ್ನಡ ನೆಲದ ಅಂತಃ ಸತ್ವವನ್ನೆಲ್ಲ ಮೈಗೂಡಿಸಿಕೊಂಡು ಸುಪುಷ್ಟವಾಗಿ ಬೆಳೆದ ಕುಲ ದೀಪಕ. ಕರದಿ ಕಪ್ಪರವಿಡಿದು ಹಿರಿದಾದ ನಾಡನ್ನು ಪರಿವ್ರಾಜಕವಾಗಿ ಸುತ್ತಾಡಿದಾತ. ಜನಪದದ ಅಂತರ್ವಾಣಿಗೆ ಅಭಿವ್ಯಕ್ತಿ ಮಾಧ್ಯಮವಾಗಿ ತ್ರಿಪದಿಯನ್ನು ಬಳಸಿ, ಬೆಳೆಸಿದ ಇವನ ಕಾವ್ಯವಾಣಿಯಿಂದ ತ್ರಿಪದಿಗೆ ನವ ನವೀನ ಓಜಸ್ಸು ಪ್ರವಹಿಸಿತು, ಶಕ್ತಿ ಸಂಚಯವಾಯಿತು. ಈ ಕಾರಣದಿಂದ ಸರ್ವಜ್ಞ ಒಬ್ಬ ತ್ರಿಪದಿ ಚಕ್ರವರ್ತಿ.

ಕನ್ನಡ ಸಾಹಿತ್ಯ ಕ್ಷೇತ್ರವನ್ನು ಈ ಕೆಳಗಿನಂತೆ ವಿಂಗಡಿಸಿ ನೋಡಬಹುದು.



ಈ ಪಂಡಿತ ಕಾವ್ಯದ ಸಾಲಿನಲ್ಲಿ ಪಂಪ, ರನ್ನ, ಪೊನ್ನ, ಜನ್ನ, ನಾಗಚಂದ್ರ, ಆಂಡಯ್ಯ, ಷಡಕ್ಷರ ದೇವ, ನಯಸೇನ ಮುಂತಾದವರನ್ನು ಹೆಸರಿಸಬಹುದು. ಇವರು ಸಂಸ್ಕೃತ ಭೂಯಿಷ್ಠ ಪದಗಳ ಬಳಕೆಯಿಂದ ವಿದ್ವತ್‌ಪೂರ್ಣ ಮಹಾಕಾವ್ಯಗಳನ್ನು ಬರೆದು, ರಾಜ ಮಹಾರಾಜರುಗಳಿಂದ ಸನ್ಮಾನಕ್ಕೊಳಗಾಗಿ ಕೀರ್ತಿಶಾಲಿಗಳಾದವರು. ಇವರ ಸಾಹಿತ್ಯ ಕಬ್ಬಿಣದ ಕಡಲೆಯಾದುದರಿಂದ ಸಾಮಾನ್ಯಜನರಿಗೆ ತಲುಪಲಿಲ್ಲ. ಎರಡನೆಯ ವರ್ಗದಲ್ಲಿ ಪಂಡಿತ ಮತ್ತು ಪಾಮರರಿಬ್ಬರಿಗೂ ಸಾಹಿತ್ಯದ ಕೊಂಡಿಯಂತೆ ಬದುಕಿದವರು ಹರಿಹರ, ರಾಘವಾಂಕ, ಭೀಮಕವಿ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶ, ರತ್ನಾಕರವರ್ಣಿ ಈ ಮುಂತಾದವರು. ಇವರು ಅತೀ ಸಮೀಪದಲ್ಲಿ ತಮ್ಮ ಹಿಂದೆ ಆಗಿಹೋದ ಜನ ಸಾಮಾನ್ಯರಾಗಿ ಬಾಳಿದ್ದ ಶರಣರ ವ್ಯಕ್ತಿತ್ವವನ್ನಿಟ್ಟುಕೊಂಡು ಬರೆದ ಕಾವ್ಯಗಳು ಹೆಚ್ಚು ಜನರನ್ನು ತಲುಪಿದವು. ಇವರ ಸಾಹಿತ್ಯ ಪಾಂಡಿತ್ಯಪೂರ್ಣವಾಗಿದ್ದಂತೆಯೇ ಜನಸಾಮಾನ್ಯರೂ ಅರ್ಥೈಸಿಕೊಳ್ಳ ಬಹುದಾಗಿತ್ತು. ಕೊನೆಯ ವರ್ಗದಲ್ಲಿ ಜನಸಾಮಾನ್ಯರ ಆಡು ಮಾತಿನ ಲಯವಾದ ದೇಸೀಯತೆಯನ್ನು ಮೈಗೂಡಿಸಿಕೊಂಡು ಸಾಹಿತ್ಯ ಬರೆದವರ ಸಾಲಿನಲ್ಲಿ ಶರಣರು, ದಾಸರು, ತತ್ವಪದಕಾರರು ಮುಂತಾದವರನ್ನು ಹೆಸರಿಸಬಹುದು. ಇಂತಹ ದೇಸೀಯತೆಯನ್ನು ಮೈಗೂಡಿಸಿಕೊಂಡವರ ಸಾಲಿನಲ್ಲಿ ಸರ್ವಜ್ಞನು ಕಂಡುಬರುತ್ತಾನೆ. ಸರ್ವಜ್ಞನ ವಚನಗಳು ಓದುಗಬ್ಬವಾಗಿದ್ದಂತೆಯೇ ಪ್ರಾಸದಿಂದೊಡ ಗೂಡಿದ ಹಾಡುಗಬ್ಬಗಳಾಗಿವೆ. ಇದರಿಂದಾಗಿಯೇ ಸರ್ವಜ್ಞನ ವಚನಗಳು ಮತೀಯ ದಿಗ್ಬಂಧನಗಳನ್ನು ಮೀರಿ ಸರ್ವಮತದವರ ಪ್ರೀತ್ಯಾದರಗಳಿಗೆ ಪಾತ್ರವಾಗಿವೆ (ಸರ್ವಜ್ಞ ಸಮಾಜ ವಿಮರ್ಶೆ ಮತ್ತು ಸಾಹಿತ್ಯ ತತ್ವ, ಪು. ೨೬೨).

ಪ್ರಸ್ತುತ ಮಹಾ ಪ್ರಬಂಧದಲ್ಲಿ ನಿತ್ಯ ಸಂಚಾರಿಯಾದ ಸರ್ವಜ್ಞ ಮೂಡಣ,ಪಡುವಣ, ತೆಂಕಣ, ಬಡಗಣ ಈ ನಾಲ್ಕು ದಿಕ್ಕಿನ ಪ್ರದೇಶಗಳಿಗೆಲ್ಲಾ ಭೇಟಿ ನೀಡಿ ಅಲ್ಲೆಲ್ಲಾ ಕಂಡುಬರುವ ಸ್ತ್ರೀಯರ ಸ್ಥಾನ ಮಾನ, ವೃತ್ತಿಗಳವರ ಆಚಾರ ವಿಚಾರ, ಊಟ- ಉಡುಗೆ, ವೇಷ-ಭೂಷಣಗಳು ಹೇಗಿದ್ದವೆಂಬುದನ್ನು ನಾಲ್ಕನೆಯ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಆತನ ಕಾಲದಲ್ಲಿದ್ದ ಸಂಸ್ಕೃತಿಯ ವಿಚಾರವಾಗಿ ತಿಳಿಸುತ್ತಾ, ಆಹಾರ, ವೈದ್ಯ, ಆರೋಗ್ಯ, ಆಚರಣೆಗಳು, ನಂಬಿಕೆಗಳು, ಶಕುನಗಳು, ನಡಾವಳಿಕೆಗಳು ಮುಂತಾದ ವಿಷಯಗಳನ್ನು ಕುರಿತಾಗಿ ಜಾನಪದೀಯ ಅಂಶಗಳ ಮುಂಖಾಂತರ ಆತನ ಕಾಲದಲ್ಲಿದ್ದ ಸಾಂಸ್ಕೃತಿಕ ಚಿತ್ರಣವನ್ನು ವಿವರಿಸುವ ಪ್ರಯತ್ನವನ್ನು ಐದನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಸರ್ವಜ್ಞ ತನ್ನ ಕಾಲದ ಸಾಮಾಜಿಕ ಸಂದರ್ಭದಲ್ಲಿ ಜ್ವಲಂತ ಪ್ರಜ್ಞೆಯಿಂದ ಸ್ಪಂಧಿಸಿದ ಕವಿ. ಈತ ಕಾಲಮಾತ್ರದಿಂದ ಅಂದಿನವನಾದರೂ ಮನೋಧರ್ಮ, ಯುಗಧರ್ಮಗಳ ದೃಷ್ಟಿಯಿಂದ ಇಂದಿನವನೂ ಆಗಿದ್ದಾನೆ. ಅವನು ನಿರೂಪಿಸಿರುವ ಕೆಲವು ಆಚಾರ ವ್ಯವಹಾರಗಳು ಇಂದಿಗೆ ಸಲ್ಲದಿರಬಹುದು. ಆದರೆ ಅವನು ಬೋಧಿಸಿದ ಕೆಲವು ಮೌಲ್ಯಗಳು ಸಾರ್ವಕಾಲಿಕ ಹಾಗೂ ಸಾರ್ವ ದೇಶಿಕವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಅವನು ವಿವರಿಸಿದ ಅನೇಕ ಮೌಲ್ಯಗಳ ವಿಚಾರಗಳಲ್ಲಿ ಕೆಲವು ಮೌಲ್ಯಗಳ ಬಗೆಗೆ ಅಧ್ಯಾಯ ಆರರಲ್ಲಿ ವಿವರಿಸಲಾಗಿದೆ.

ಇನ್ನು ಸಾಹಿತ್ಯ ಪ್ರಕಾರಗಳೆಂಬ ೭ನೇ ಅಧ್ಯಾಯದಲ್ಲಿ ತ್ರಿಪದಿಯ ಬಗೆಗೆ ತಿಳಿಸುತ್ತಾ, ಯಾರೂ ಕಣ್ಣೆತ್ತಿ ನೋಡದಂತಹ ಅವ ಕೃಪೆಗೆ ಒಳಗಾಗಿದ್ದ ಜನಪದ ಕಾವ್ಯ ರೂಪ 'ತ್ರಿಪದಿ' ಎಂಬ ಕಬ್ಬಿಣದ ತುಣುಕು ಸರ್ವಜ್ಞನ ಅಭಿಜಾತ ಪ್ರತಿಭೆಯ ಪರುಷ ಸ್ಪರ್ಶದಿಂದ ಸುವರ್ಣ ಕಣವಾಗಿ ಪರಿವರ್ತಿತವಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟ ಧೀಮಂತ ಕವಿ ಎಂಬುದನ್ನು ತಿಳಿಯಪಡಿಸುತ್ತಾ, ಈ ತ್ರಿಪದಿಯ ಛಂದಸ್ಸು ಆತನ ವಚನಗಳಲ್ಲಿ ಹೇಗೆ ಬಳಕೆಯಾಗಿದೆ ಎಂಬುದರ ಬಗೆಗೆ ಉಲ್ಲೇಖಿಸಲಾಗಿದೆ. ಸರ್ವಜ್ಞ ತನ್ನ ಸಾವಿರಾರು ತ್ರಿಪದಿಗಳ ಮೂಲಕ ತ್ರಿಕಾಲಬಾಧಿತವಾದ ಸತ್ಯ ಸಂದೇಶಗಳನ್ನು ಸಾರಿ ಅಮರನಾಗಿದ್ದಾನೆ. ಮೂರು ಸಾಲಿನ ಪದ್ಯಗಳ ಮೂಲಕ ಮೂರು ಲೋಕಗಳ ವಿಷಯವನ್ನು ವಿಷದವಾಗಿ ವಿವರಿಸಿದ್ದಾನೆ(ಪ್ರಸಾದ: ದ್ವೈಮಾಸಿಕ ಪತ್ರಿಕೆ, ಪು.೨೫).

ಹಾಗೆಯೇ ಸರ್ವಜ್ಞನ ಭಾಷೆಯ ಬಗೆಗೆ ತಿಳಿಸುತ್ತಾ, ಆತನ ಭಾಷೆ ಗಂಡು ಭಾಷೆಯಾಗಿದೆ. ಆತನ ವಚನಗಳಲ್ಲಿ ದೊರೆತ ದೇಸಿ ಪದಗಳು, ವಿಜಾತಿ ಪದಗಳು, ನುಡಿಗಟ್ಟುಗಳು ಹಾಗೂ ಬಯ್ಗುಳ ಪದಗಳ ಸಂಗ್ರಹವನ್ನು ನೀಡಲು ಪ್ರಯತ್ನಿಸಲಾಗಿದೆ. ಅಲ್ಲದೆ, ಗಾದೆ ಮಾತುಗಳಿಗೆ ಸಮೀಪವಾದ ಅಥವಾ ಗಾದೆ ಮಾತುಗಳಂತೆಯೇ ಬಳಕೆಗೊಂಡ ನುಡಿಗಟ್ಟುಗಳನ್ನು ಸಂಗ್ರಹಿಸಲಾಗಿದೆ. ಒಗಟು, ಐತಿಹ್ಯ, ಪುರಾಣ ಇವುಗಳು ಜನ ಸಾಮಾನ್ಯ ವರ್ಗದಲ್ಲಿ ಬಳಕೆಗೊಂಡ ರೀತಿ ಮತ್ತು ಸರ್ವಜ್ಞ ತನ್ನ ವಚನಗಳಲ್ಲಿ ಇವುಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾನೆಂಬುದರ ಮಾಹಿತಿಯನ್ನು ಹೆಕ್ಕಿತೆಗೆದು ಅಧ್ಯಾಯ ಏಳರಲ್ಲಿ ವಿಶ್ಲೇಷಿಸಲಾಗಿದೆ.

**ಹಿನ್ನೋಟ :**

ಸರ್ವಜ್ಞನ ವಚನಗಳು ಸಾಗರದಷ್ಟು ವಿಸ್ತಾರವಾದವುಗಳು. ಬಗೆದಷ್ಟು ಅವು ಮುಗಿವುದಿಲ್ಲ. ಈಗಾಗಲೇ ಅನೇಕ ವಿದ್ವಾಂಸರು ಸರ್ವಜ್ಞನ ಕುರಿತಾಗಿ ನಾನಾ ರೀತಿಯ ಸಾಹಿತ್ಯ ಪ್ರಕಾರದಲ್ಲಿ ಪುಸ್ತಕ, ಲೇಖನಗಳು ಪ್ರಕಟಿಸಿದಾಗ್ಯೂ ಜಾನಪದೀಯವಾದ ರೀತಿಯ ಅಧ್ಯಯನ ಸ್ವಲ್ಪ ಭಿನ್ನವೆಂದೇ ಹೇಳಬಹುದು. ಆತನ ವಚನಗಳೆಲ್ಲಾ ತುಂಬಾ ಸ್ವಾರಸ್ಯಕರವಾಗಿವೆ; ಧ್ವನಿ ಪೂರ್ಣವಾಗಿವೆ; ಅನುಭವ ಮತ್ತು ವಿವೇಕಗಳಿಂದ ಕೂಡಿ ಪರಿಪಕ್ವವಾಗಿವೆ. ಸರ್ವಜ್ಞ ಎಲ್ಲವನ್ನೂ ತಿಳಿದಿದ್ದ ಮಹಾಜ್ಞಾನಿ. "ಅವನ ವಚನಗಳು ಎಲ್ಲರ ನಾಲಿಗೆಯ ಮೇಲೆ ಉಳಿದಿರುವುದೇ ಅವು ಜೀವಂತ ಸಾಹಿತ್ಯವೆಂಬುದಕ್ಕೆ ನಿದರ್ಶನವಾಗಿವೆ" (ಸರ್ವಜ್ಞ,ಪು.೫).

ಉತ್ತರ ಕರ್ನಾಟಕವು ಜನಪದ ಸಾಹಿತ್ಯ, ಸಂಸ್ಕೃತಿ ಹಾಗೂ ಕಲೆಗಳ ನೆಲೆವೀಡಾಗಿದೆ. ಈ ದೃಷ್ಟಿಯಿಂದ ಕರ್ನಾಟಕ ಇನ್ನುಳಿದ ಪ್ರದೇಶಗಳೊಂದಿಗೆ ಹೋಲಿಸಿ ನೋಡಲಾಗಿ ಉತ್ತರ ಕರ್ನಾಟಕವು ಅತ್ಯಂತ ಸಮೃದ್ಧ ಹಾಗೂ ಸಂಪದ್ಭರಿತ ಪ್ರದೇಶವಾಗಿದೆ. ಇಂತಹ ಹಿನ್ನೆಲೆಯಲ್ಲಿ ಮೂಡಿಬಂದ ಸರ್ವಜ್ಞನಿಗೆ ಸಹಜವಾಗಿಯೇ ಜಾನಪದ ಪ್ರಜ್ಞೆ ಅಳವಟ್ಟಿದೆ. ಈ ನೆಲದ ದೇಸೀ ಅಂಶಗಳನ್ನು ಬಳಸಿಕೊಳ್ಳುವುದರ ಮೂಲಕ ಸರ್ವಜ್ಞನು ಸಾಧಿಸಿ ತೋರಿಸಿದ ಬದುಕಿನ ಆದರ್ಶಗಳು, ರೀತಿ-ನೀತಿಗಳು

ಸಾರ್ವಕಾಲಿಕ ಮೌಲ್ಯಗಳನ್ನು ಒಳಗೊಂಡಿವೆ. ಈತನ ಸಾರ್ವಕಾಲಿಕ ಸತ್ಯಗಳೆಲ್ಲಾ ಸರ್ವಜನಾಂಗಕ್ಕೆ ಒಪ್ಪಿತವಾಗಿ, ಜನಪ್ರಿಯವಾಗಿ ಬೆಳೆದವು. ಸರ್ವಜ್ಞನ ದೃಷ್ಟಿಯಲ್ಲಿ ಜೀವನ ಅಖಂಡವಾದುದು; ಪರಿಪೂರ್ಣವಾದುದು. ವಿವಿಧತೆಯಲ್ಲಿ ಏಕತೆಯನ್ನು ಕಾಣಬಯಸಿದವನು. ಈತ ಜನಸಾಮಾನ್ಯರ ಬದುಕನ್ನು ಸಾರ್ಥಕಗೊಳಿಸಲು ಹೆಣಗಿದವನು.

ತನ್ನ ಭಾವನೆ- ಆಲೋಚನೆಗಳನ್ನು ಜನಪದ ಶೈಲಿಯ ತ್ರಿಪದಿಯಲ್ಲಿ ನಿರೂಪಿಸಿ, ಜನಪದ ಸಾಹಿತ್ಯ ಪ್ರಪಂಚಕ್ಕೆ ಮಹತ್ತರ ಕೊಡುಗೆಯನ್ನು ನೀಡಿದವನು. ಇಲ್ಲಿಯ ಸರ್ವಜ್ಞನ ವಚನಗಳ ಅವಲೋಕನ ಕೇವಲ ಜಾನಪದ ದೃಷ್ಟಿಯದು. ಸರ್ವಜ್ಞ ಸದಾ ಸಂಚಾರಿಯಾಗಿ ತನ್ನ ಇಡೀ ಬದುಕಿನಲ್ಲಿ ಅನೇಕ ಜನರನ್ನು ಭೇಟಿಯಾಗಿ , ಅವರ ಕುಲಕಸುಬುಗಳನ್ನು ಕಂಡು ಅರಿತು ಅನುಭವಿಸಿರುವ ವ್ಯಕ್ತಿ. ಜೀವನವನ್ನು ಅತ್ಯಂತ ಪ್ರೀತಿಯಿಂದ ಸವಿಯುವ ಮನಸ್ಸನ್ನು ಪಡೆದಿದ್ದ. ಸರ್ವಜ್ಞ ಸಾಮಾನ್ಯ ಜನರ ಬದುಕಿನ ಅನೇಕ ಮಗ್ಗುಲುಗಳನ್ನು ಬಹಳ ಸೂಕ್ಷ್ಮವಾಗಿ ನೋಡಿದವನು.

ಸರ್ವಜ್ಞ ಯಾವ ವಿಷಯವನ್ನು ಕುರಿತು ವಚನ ಬರೆದಿದ್ದಾನೆ ? ಯಾವುದನ್ನು ಬಿಟ್ಟಿದ್ದಾನೆ? ಎಂದು ಹುಡುಕುವುದೇ ಕಷ್ಟವೆನಿಸುತ್ತದೆ. ''ಆಡು ಮುಟ್ಟದ ಸೊಪ್ಪಿಲ್ಲ, ಸರ್ವಜ್ಞ ಬರೆಯದ ವಿಷಯವಿಲ್ಲ'' ವೆನ್ನಬಹುದು. ಗುರು ಪದ್ಧತಿ, ಲಿಂಗ ಪದ್ಧತಿ, ಇಷ್ಟಲಿಂಗ ಪದ್ಧತಿ, ದೈವ ಪದ್ಧತಿ, ಭಕ್ತ ಪದ್ಧತಿ, ಜ್ಞಾನ ಪದ್ಧತಿ, ಯೋಗ ಪದ್ಧತಿ, ಶಿವಯೋಗ ಪದ್ಧತಿ, ದಾನ ಪದ್ಧತಿ,ರಾಜನೀತಿ ಪದ್ಧತಿ, ವಿಧಿವಶ ಪದ್ಧತಿ, ಸಂಘ ಪದ್ಧತಿ, ಬ್ರಾಹ್ಮಣ ಪದ್ಧತಿ, ಜೈನ ಪದ್ಧತಿ, ಮೂರ್ಖರ ಪದ್ಧತಿ, ಕಾಲ ಜ್ಞಾನ ಪದ್ಧತಿ, ಲೇಸು ಪದ್ಧತಿ, ಹೊಲ್ಲ ಪದ್ಧತಿ, ನೀತಿ ಪದ್ಧತಿ, ಜೋತಿಷ್ಯ ಪದ್ಧತಿ, ದೇಶ ಪದ್ಧತಿ, ಸ್ತ್ರೀವರ್ಗ ಪದ್ಧತಿ, ಸ್ತ್ರೀನಿಂದಾ ಪದ್ಧತಿ, ಜಾರರ ಪದ್ಧತಿ, ಜಾರೆಯರ ಪದ್ಧತಿ, ವೇಶ್ಯಾ ಸ್ತ್ರೀ ಪದ್ಧತಿ, ರಸವಾದ ಪದ್ಧತಿ, ಅನ್ನ ಪದ್ಧತಿ, ವೈದ್ಯ ಪದ್ಧತಿ, ಬೆಡಗಿನ ಪದ್ಧತಿ. ಅಷ್ಟೇ ಅಲ್ಲದೇ ಷಟ್ಸ್ಥಲಗಳಾದ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಇವುಗಳ ಬಗೆಗೂ ವಚನಗಳನ್ನು ಬರೆದಿದ್ದಾನೆ.

ಪ್ರತಿಯೊಂದರಲ್ಲೂ ಆಳವಾದ ಅಭಿವ್ಯಕ್ತಿ, ಸ್ವಾನುಭಾವದ ಸ್ಪರ್ಶ ಗಾಂಭೀರ್ಯಕ್ಕೆ ಕೊರತೆ ಇಲ್ಲ. ಲಘುತ್ವಕ್ಕೆ ಅಡ್ಡಿಯಿಲ್ಲ; ಹಾಸ್ಯಕ್ಕೂ ಅವಕಾಶವುಂಟು. ಕಾವ್ಯದ ಹೊಳಪಿದೆ, ಜ್ಞಾನದ ಹರವೂ ಇದೆ. ಎಷ್ಟು ಮೊಗೆದರೂ ಮುಗಿಯದ ಸರ್ವಜ್ಞನ ಲೋಕಜ್ಞಾನ ಸರ್ವ ಕಾಲಕ್ಕೂ ಮೆಲಕು ಹಾಕಬಹುದಾದ ನೀತಿ ನಿಧಿಯಾಗಿದೆ. ಸರ್ವಜ್ಞನ ವಚನಗಳು ಸಹೃದಯರಲ್ಲಿ ಹಲವು ಬಗೆಯ ಭಾವಗಳನ್ನು ಬಡಿದೆಬ್ಬಿಸುತ್ತವೆ. ಒಂದೆರಡನ್ನು ನೋಡೋಣವೆಂದು ಕೈಗೆತ್ತಿಕೊಂಡರೆ, ಹಲವು ಆಕರ್ಷಿಸುತ್ತವೆ. ಒಂದನ್ನು ಓದಿ ನಿಲ್ಲಿಸುತ್ತಿದ್ದಂತೆ ಇನ್ನೊಂದು, ಮತ್ತೊಂದು ಹೀಗೆಯೇ ಗಮನ ಸೆಳೆಯುತ್ತವೆ. ಸರ್ವಜ್ಞನು ಜನಪದರ ತತ್ವಾನುಭವದ ಲಹರಿಯನ್ನು ಮುಂದುವರಿಸಿಕೊಂಡು ಬಂದಿದ್ದರೂ ಸಹ ತನ್ನ ವೈಯಕ್ತಿಕತೆಯನ್ನು ಹಾಗೂ ಸ್ವಾಭಿಮಾನವನ್ನು ಉಳಿಸಿಕೊಂಡು, ವಿಚಾರಗಳ ವಾಸ್ತವತೆಯನ್ನು ಕಂಡುಂಡು, ಕೇಳಿ ಆಲೋಚಿಸಿದ್ದಾನೆ. ತನ್ನ ಹೃದಯ ತಾಕಿ ಹೊಳೆದ ಕೋಲ್ಮಿಂಚನ್ನು ನೈಜ ಪರಿಸ್ಥಿತಿಯ ತ್ರಿಪದಿಯ ಛಂದಸ್ಸಿನ ಚೌಕಟ್ಟಿನಲ್ಲಿ ಹಿಡಿದಿಟ್ಟು ಅಭಿವ್ಯಕ್ತಿಸಿದ್ದಾನೆ.

ಕರ್ನಾಟಕದಲ್ಲಿ ಉಜ್ವಲ ಯಶಸ್ಸನ್ನು ಗಳಿಸಿದ ಈತ ಒಬ್ಬ ಉದಾತ್ತ ಚಿಂತಕ, ಧೀರ ವಿಮರ್ಶಕ ಸಾಮಾನ್ಯರ ನೆಲೆಯಲ್ಲಿ ನಿಂತು ಅವರ ಆಲೋಚನೆಗಳಿಗೆ ಸ್ಪಂಧಿಸಿದ ಮಹಾಮಾನವ. ಲೋಕದ ಡೊಂಕುಗಳನ್ನು ತಿದ್ದಲು ಬದುಕಿನ ಸಾರ್ಥಕತೆಯನ್ನು ಮೆರೆಸಲು ಸರ್ವಜ್ಞ ತನ್ನ ನೀತಿಯ ಮಾರ್ಗವನ್ನನುಸರಿಸಿದ್ದಾನೆ. ''ಸರ್ವಜ್ಞನನ್ನು ಕನ್ನಡಿಗರ ತಿರುವಳ್ಳುವರ್,ಕನ್ನಡಿಗರ ವೇಮನ, ಅವರಂತೆ ಇವನಿಗೂ ನೀತಿ ಸಾಹಿತ್ಯದಲ್ಲಿ ಉಚ್ಚಸ್ಥಾನವು ಸಲ್ಲುತ್ತದೆ'' (ಸರ್ವಜ್ಞ ಕವಿ, ಎ.ಆರ್.ಕೃ.,ಪು ೫೩). ಸರ್ವಜ್ಞನ ಸಾರೋಕ್ತಿಗಳಲ್ಲಿ ದರ್ಶನಗಳ, ಜೀವನ ವಿಮರ್ಶೆಯ, ಸಾಹಿತ್ಯ ಸಂಸ್ಕಾರದ ಸಾರಸರ್ವಸ್ವ ಅಡಕವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಈತ ನಮ್ಮ ಕನ್ನಡ ಸಾಹಿತ್ಯದಲ್ಲಿ ಸೀಮಾಪುರುಷನಾಗಿದ್ದಾನೆ. ''ಅವನ ವಚನಗಳು ಜನತೆಯ ಜ್ಞಾನ ಕೋಶಗಳಾಗಿವೆ, ಸ್ಫೂರ್ತಿ ವಾಕ್ಯಗಳಾಗಿವೆ, ಗಾದೆಮಾತುಗಳಾಗಿವೆ, ಕನ್ನಡ ಸಾಹಿತ್ಯದ ದೇಸೀ ತತ್ತ್ವವು ಆತನಲ್ಲಿ ಸಾರ್ಥಕ್ಯವನ್ನು ಪಡೆದಿವೆ'' ಎಂದು ಹೇಳುವ ರಂ.ಶ್ರೀ.ಮುಗುಳಿಯವರ ಮಾತು ಪ್ರಶಂಸನೀಯವಾಗಿವೆ (ಕನ್ನಡ ಸಾಹಿತ್ಯ ಚರಿತ್ರೆ,ಪು.೩೫೬).

ಸರ್ವಜ್ಞ ವರಕವಿ. ಅವನ ಮಾತಿನ ಮೋಡಿಗೆ ಮರುಳಾಗದವರೇ ಇಲ್ಲ. ಆತನ ಭಾಷಾಸಂಪತ್ತು ಪ್ರಸ್ತುತಪಡಿಸುವ ವೈಖರಿ ಆತನು ಬೆಳೆದು ಬಂದ ಪರಿಸರದ ಹಿನ್ನೆಲೆ ಹಾಗೂ ಅಪಾರವಾದ ಅನುಭವಗಳ ದ್ಯೋತಕವಾಗಿದೆ. ಆದರೂ ಈತನಿಗೆ ಎಲ್ಲವನ್ನು ಬಲ್ಲೆನೆಂಬ ಅಹಂಕಾರವಿಲ್ಲ; ಜನಸಾಮಾನ್ಯರ ನಡುವೆ ಇದ್ದು ಕಲಿತಿರುವೆನೆಂದು ಬಹಳ ಸೌಜನ್ಯದಿಂದ ಹೇಳಿದ್ದಾನೆ.

ಸರ್ವಜ್ಞನೆಂಬುವನು ಗರ್ವದಿಂದಾದವನೆ?  
ಸರ್ವರೊಳೊಂದೊಂದು ನುಡಿಗಲಿತು, ವಿದ್ಯೆಯ  
ಪರ್ವತವೇ ಆದ ಸರ್ವಜ್ಞ.

ಬಾಳಿನ ಕಹಿಯನ್ನುಂಡರೂ ಸರ್ವಜ್ಞನು ಬಾಳನ್ನು ಎಂದಿಗೂ ತಿರಸ್ಕರಿಸಿದವನಲ್ಲ. ಅಂದಿನ ಸಮಾಜದ ನಿಂದೆಗೆ ಗುರಿಯಾಗಿದ್ದರೂ, ಸದ್ಗುರುವಿನ ಆಶೀರ್ವಾದಕ್ಕೆ ಪಾತ್ರನಾಗಿದ್ದನು. ಯಾರಲ್ಲಿಯೂ ರಾಗ ದ್ವೇಷರಹಿತನಾಗಿ ಎಲ್ಲರಲ್ಲಿಯೂ ಪ್ರೀತಿ ವಿಶ್ವಾಸವಿರಿಸಿ ಬಾಳಿದವನು. ಸತ್ಯ ದರ್ಶನ, ಪರಿಶುದ್ಧ ಪ್ರೀತಿ, ನಿರ್ಭೀತ ಮನೋವೃತ್ತಿ, ವೀರ ವಿರಕ್ತಿಯ ಗುಣಗಳಿಂದ ತುಂಬಿದ ಈ ಕವಿಯ ವಚನಗಳು ಸದಾ ಸತ್ಯದ ಕಡೆಗೆ ಮುಖ ಮಾಡಿದವುಗಳು. ಸಮಾಜದಲ್ಲಿ ಕಂಡುಬರುವ ಸಂಗತಿಗಳು ಪ್ರಿಯವಾಗಿದ್ದರೆ ಒಪ್ಪಿಕೊಂಡು, ಅಪ್ರಿಯವಾಗಿದ್ದರೆ ನೇರವಾಗಿ ಖಂಡಿಸುವುದರ ಮೂಲಕ ಉತ್ತಮ ಮಾರ್ಗವನ್ನು ಸೂಚಿಸುವವನಾಗಿದ್ದನು.

ನಾಡಿನ ಉದ್ದಗಲವನ್ನೆಲ್ಲಾ ಸಂಚರಿಸಿದ ಸರ್ವಜ್ಞನ ಅನುಭವ ತುಂಬಾ ವಿಸ್ತಾರವಾದದ್ದು. ಪಂಡಿತ ಮಾನ್ಯ ಕವಿಗಳ ಸಂಸ್ಕೃತಿ ಭೂಯಿಷ್ಠವಾದ, ದೀರ್ಘ ಕಾವ್ಯಗಳ ಶೈಲಿ ಸರ್ವಜ್ಞನದಲ್ಲ. ಈತನನ್ನು ಸುಸಂಸ್ಕೃತರೆನ್ನುವವರು ಮೆಚ್ಚದ ಗ್ರಾಮ್ಯವನ್ನೂ ಬಳಸಿದ್ದಾನೆ. ಅವನಲ್ಲಿ ದೇಸೀಯ ಸೊಬಗಿನೊಡನೆ ಗ್ರಾಮ್ಯದ ಒರಟುತನವನ್ನೂ ಕಾಣುತ್ತೇವೆ. ಅಂತೆಯೆ ಅವನನ್ನು 'ಪ್ರಾಕೃತರ ಪ್ರಾಕೃತ ಕವಿ' ಎಂದು ಹೇಳಲಾಗುತ್ತದೆ.

ಆಲದ ಬಿಳಲಂತೆ ಜೋಲು ಜಡೆಗಳ ಬಿಟ್ಟು
ನಾಲಿಗೆ ಕೌಪ ಶುದ್ಧಿಲ್ಲ, ಮರಿ ನಾಯ
ಬಾಲದಂತಕ್ಕು ಸರ್ವಜ್ಞ.

ಹೀಗೆ ಮೇಲಿನ ವಚನದಲ್ಲಿ 'ಮರಿನಾಯ ಬಾಲದಂತಕ್ಕು' ಎಂದು ಹೇಳುವಾಗ 'ನಾಯಿ ಬಾಲ ಡೊಂಕು' ಎಂಬರ್ಥದಲ್ಲಿ ಗಾದೆಯನ್ನು ಬಳಸಿದ್ದಾನೆ. ಆತನ ವಚನಗಳಲ್ಲಿ ಹೇಳಿರುವ ವಿಷಯಗಳೆಲ್ಲಾ ಹೃದಯಂಗಮವಾಗಿ ಆಕರ್ಷಣೀಯವಾಗಿವೆ. ಒಂದು ವಿಷಯವನ್ನು ಬೇರೆ ಬೇರೆ ತ್ರಿಪದಿಯಲ್ಲಿ ಹೇಳುವುದರ ಮೂಲಕ ಅದರಲ್ಲಿಯೇ ಹೋಲಿಕೆಗಳನ್ನು, ಉದಾಹರಣೆಗಳನ್ನು ಕೊಟ್ಟಿದ್ದಾನೆ. ಇವನ ಕವಿತ್ವದಲ್ಲಿ ಮಹಾ ಕವಿಗಳ ರಚನಾ ಸೌಂದರ್ಯ, ವಾಙ್ಮಯತೆಯಂಥಹ ಗುಣಗಳಿದ್ದಾಗ್ಯೂ ಜನಸಾಮಾನ್ಯರ ನಾಲಿಗೆಯಲ್ಲಿ ಸದಾ ಉಳಿಯುವಂತಹ ಮಾತುಗಳಲ್ಲಿ ವಚನಗಳನ್ನು ಕಟ್ಟಿದ್ದಾನೆ. ಶೂನ್ಯ ಹೃದಯದಲ್ಲಿ ಹೊಸ ಚೈತನ್ಯವನ್ನುಂಟು ಮಾಡುವ ಉನ್ನತ, ನೈತಿಕ ಮಾರ್ಗ ಈತನ ಕವಿತ್ವದಲ್ಲಿದೆ. ಸಮಾಜದಲ್ಲಿರುವ ಅನೀತಿ, ಆಲಸ್ಯ, ಅಸಮರ್ಪಕತೆ, ಅನಾರೋಗ್ಯ, ಅಪಕ್ವತೆ ಮುಂತಾದ ರೋಗಗಳಿಗೆ ಸಂಜೀವಿನಿ ಮಾತ್ರೆಗಳಿಂತಿರುವ ಆತನ ವಚನಗಳು ಕನ್ನಡ ಅಮೂಲ್ಯ ಸ್ವತ್ತು. ಅರ್ಥೌಚಿತ್ಯ, ಭಾಷಾಮಿತಿ, ಭಾವಗಾಂಭೀರ್ಯ ಇವೆಲ್ಲವೂ 'ಕರಿಯ ಕನ್ನಡಿಯೊಳಗೆ ತಾನಡಗಿ ಕುಳಿತಂತೆ' ತ್ರಿಪದಿಗಳಲ್ಲಿ ಅಡಗಿಸಿಟ್ಟಿರುವ ಈತನ ನೈಪುಣ್ಯವು ತುಂಬಾ ಅಸಮಾನ್ಯವಾದುದು.

ಕವಿ ಗಜಾರಣ್ಯದಲ್ಲಿ ಅವನು ಹಿಂಡನಗಲಿದ ಒಂಟಿ ಸಲಗ. ಅವನು ನಡೆದದ್ದೇ ದಾರಿ. ಲೋಕದ ಉದ್ಧಾರ ಅವನ ಧ್ಯೇಯ. ರಸಾನುಭೂತಿಯಲ್ಲಿ ಸರ್ವಜ್ಞನನ್ನು ಯಾವುದೇ ದೃಷ್ಟಿಯಿಂದ ವಿವೇಚಿಸುವಾಗ ಈ ಅಂಶಗಳನ್ನು ನೆನಪಿನಲ್ಲಿಡಬೇಕು. ಸರ್ವಜ್ಞ ಪದ್ಯಗಳನ್ನು ಬರೆದಿಡಲಿಲ್ಲ. ಬರೆದಿಡುವುದರಲ್ಲಿ ಅವನಿಗೆ ನಂಬಿಕೆ ಇಲ್ಲ. ಬರೆಯುವ ಗೋಜಿಗೆ ಹೋಗಿರಲಾರ ''ಬರೆವವರ ಕೂಡ ಹಗೆ ಬೇಡ'' ಎಂದು ಭಾಗಶಃ ವ್ಯಂಗ್ಯವಾಗಿ ಬರೆಯಬಲ್ಲವರ ಶಕ್ತಿಯನ್ನು ಎತ್ತಿ ಆಡಿರುವ ಅವನು ಬರೆಯುವ ಹವ್ಯಾಸದಿಂದ ದೂರವಾದವನೇ.

ಹೇಳಲರಿಯೆ ನಾನು ಹೇಳೆನೆ ಹೇಳಿದೆ
ಬಾಳಲೋಚನಾ ಶರಣರ ಆಳಾಗಿ
ಹೇಳಿದ ನೋಡಾ ಸರ್ವಜ್ಞ. ಎಂದಿದ್ದಾನೆ.

ಈತನ ವ್ಯಕ್ತಿತ್ವಕ್ಕೆ ಮಾರು ಹೋಗಿ ಕೆಲವರು ಆತನ ವಚನಗಳ ಹೃದ್ಗತ ಮಾಡಿಕೊಂಡು ಬಾಯಿಂದ ಬಾಯಿಗೆ ಹರಡಿರಬಹುದು. ನಂತರ ಗ್ರಂಥಸ್ಥವಾಗಿರಿಸಿರಲೂಬಹುದು. ಸರ್ವಜ್ಞನು ಆಶುಕವಿ ಅಂದರೆ ಯಾವುದಾದರೊಂದು ವಿಷಯವು ನೆನಪಾದೊಡನೆಯೇ ಅದರ ಮೇಲೆ ವಚನ ಹೇಳತಕ್ಕವನೇ ಹೊರತು 'ಹಲಗೆ ಬಳಪವ ಪಿಡಿದು' ಪೇಚಾಡಿದವನಲ್ಲ. 'ಬರೆ ಬರೆದಂತೊಡೆದು ತೊಟ್ಟನೆ ನಿಟ್ಟಿಸಿ ಕಷ್ಟ ಪಟ್ಟವನಲ್ಲ' ಇವನ ಕವಿತೆಯು ಸರಳವಾದುದು, ಸಹಜವಾದದು, ಪ್ರಸಂಗ ಬಂದಾಗ ಮಿಂಚಿನಂತೆ ಹೊಳೆದು,ನೀರಿನಂತೆ ಉಕ್ಕಿ ಮಾಯವಾಗಬಹುದು. ಪಂಪಾದಿ ಪ್ರತಿಷ್ಠಿತ ಕವಿಗಳ ಸ್ವ ಹಸ್ತಕ್ಷಾರದ ಪ್ರತಿಗಳೇ ಅನ್ಯ ಲಿಪಿಕಾರರ ಕೈವಾಡದಿಂದ ಪಾಠ ವ್ಯತ್ಯಾಸಗಳಿಗೆ ಎಡೆಗೊಟ್ಟಿರುವಲ್ಲಿ, ಮುಖಸ್ಥವಾಗಿ , ಗ್ರಂಥಸ್ಥವಾಗಿ ಎರಡೂ ವಿಧಾನಗಳಲ್ಲಿ ಸಾಗಿ ಬಂದಿರುವ ಸರ್ವಜ್ಞನ ವಚನಗಳಲ್ಲಿ ಹೇರಳವಾದ ಪಾಠ ವ್ಯತ್ಯಾಸಗಳಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.

ಸರ್ವಜ್ಞನ ವಚನಗಳಲ್ಲಿ ಪ್ರಾಚೀನ ಸೂಕ್ತಿಗಳು , ವಚನಕಾರರನ್ನು ನೆನಪಿಸುವ ಸಾಲುಗಳು, ಜನಪದರ ಗಾದೆ, ಒಗಟು, ನುಡಿಗಟ್ಟುಗಳು, ಜನಸಾಮಾನ್ಯರ ಬಳಕೆಯ ಉಪಮೆ- ಉಪಮಾನಗಳು ಲೀಲಾಜಾಲವಾಗಿ ಬಳಕೆಯಾಗಿವೆ. ಕೆಲವು ಆತನ ವಚನಗಳಂತೂ ನಮ್ಮ ಪ್ರಾಚೀನ ಪರಂಪರೆಯನ್ನು, ಅರ್ಥವಂತಿಕೆಯನ್ನು ಅನಾಯಾಸವಾಗಿ ಅನಾವರಣಗೊಳಿಸಿ ಅಮರವಾಗಿವೆ.

ಸರ್ವಜ್ಞ ತನ್ನ ಸಮಕಾಲೀನ ಸಮಾಜವನ್ನು ತೆರೆದ ಕಣ್ಣುಗಳಿಂದ ನೋಡಿ, ಜನಪದರಲ್ಲಿದ್ದ ಅಂಶಗಳನ್ನು ತುಂಬು ಹೃದಯದಿಂದ ಕೊಂಡಾಡಿ, ಅನಿಷ್ಟಗಳನ್ನು ಕಟುವಾಗಿ ಟೀಕಿಸಿದ್ದಾನೆ. ಆತನಿಗೆ ಯಾರ ಮುಲಾಜು ಇಲ್ಲ; ಭಯವೂ ಇಲ್ಲ. ''ಸರ್ವ ಸ್ವತಂತ್ರನಾದ ಇಂತಹ ಕವಿ ಕರ್ನಾಟಕದಲ್ಲಿ ಬಾಳಿ ಹೋದನೆಂಬುದು ನಮಗೆಲ್ಲರಿಗೂ ಅಭಿಮಾನವೆನ್ನಿಸುವ ಸಂಗತಿಯಾಗಿದೆ'' (ಬಸವಪಥ, ಪು.೪೧).

ಪ್ರತಿಯೊಬ್ಬರಲ್ಲೂ ಜಾನಪದವೆಂಬುದು ಆತ್ಮೀಯತೆಯ ನೆಲೆಯಲ್ಲಿ ನಿಂತರೆ, ಶಿಷ್ಟತೆ ಎಂಬುದು ಸ್ವಲ್ಪ ಅಂತರವನ್ನು ಕಾಯ್ದುಕೊಳ್ಳುತ್ತದೆ. ಸಾಹಿತ್ಯದ ದೃಷ್ಟಿಯಿಂದ ನೋಡಿದಾಗ ಇವೆರಡೂ ಒಂದಕ್ಕೊಂದು ಪೂರಕವಾಗಿವೆ. ಆದರೂ ಸಾಮಾನ್ಯ ಜನರಿಗೆ ಸುಲಿದ ಬಾಳೆ ಹಣ್ಣಿನಂತಿರುವ ಹಾಗೂ ಬಹಳ ಸುಲಭವಾಗಿ ಅರ್ಥವಾಗುವ ಸಾಹಿತ್ಯವು ಅವರ ಹೃದಯವನ್ನು ಮುಟ್ಟುತ್ತದೆ. ಇಂತಹ ಕೆಲಸವನ್ನು ಸರ್ವಜ್ಞನು ತನ್ನ ವಚನಗಳ ಮೂಲಕ ಮಾಡಿದ್ದಾನೆ. ಜಾನಪದವು ಸರ್ವಜ್ಞನ ವಚನಗಳಲ್ಲಿ ತನ್ನ ಸಾರ್ವಭೌಮತೆಯನ್ನು ಪಡೆದಿದೆ ಎಂದರೆ ಅತಿಶಯೋಕ್ತಿಯಾಗಲಾರದು.

**ಸರ್ವಜ್ಞನ ಪ್ರಸ್ತುತತೆ :**

ಇದು ವಿಜ್ಞಾನಯುಗ. ಈ ಯುಗದಲ್ಲಿ ಜನರ ಜೀವನವೆಲ್ಲಾ ಯಾಂತ್ರಿಕವಾಗಿದೆ. ಪ್ರತಿಯೊಬ್ಬರಲ್ಲೂ ವೈಜ್ಞಾನಿಕ ಚಿಂತನೆ ಅಗತ್ಯವೆಂದು ನಾವು ಮಾತನಾಡಿಕೊಳ್ಳುವಂತೆಯೇ ಸುಮಾರು ೪೦೦ ನೂರು ವರ್ಷಗಳ ಹಿಂದೆಯೇ ಸರ್ವಜ್ಞನೂ ಸಹ ವೈಜ್ಞಾನಿಕ ಮನೋಭಾವದವನಾಗಿದ್ದ ನೆಂಬುದಕ್ಕೆ ಆತನ ವಚನಗಳೇ ಸಾಕ್ಷಿ. ಹಿಂದೂ ದೇಶವು ವಿಜ್ಞಾನ ಕಲೆಯಲ್ಲಿ ಹಿಂದುಳಿಯುವುದಕ್ಕೆ ಭಾರತೀಯರಾದ ನಾವು 'ಜಗತ್ತು ಮಾಯೆ' ಎಂಬ ಸಿದ್ಧಾಂತಕ್ಕೆ ಬಂದಿರುವುದೇ ಕಾರಣ. ಜಗತ್ತು ಸತ್ಯವೆಂದು ತಿಳಿದ ಪಾಶ್ಚಾತ್ಯರೆಲ್ಲಿ, ಮಿತ್ಯವೆಂದು ತಿಳಿದ ನಾವೆಲ್ಲಿ !. ಈ ಉಭಯ ವಿದ್ಯೆಗಳೂ ಪೂರ್ವ ಪಶ್ಚಿಮಗಳಂತೆ ಒಂದಕ್ಕೊಂದು ವಿರೋಧಾಬಾಸಗಳಾಗಿವೆ. ಅಂತೆಯೇ ಸರ್ವಜ್ಞ ವಿಜ್ಞಾನದ ಬಗೆಗೆ;

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದೊಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ.

ಇಲ್ಲಿ ಬಿನ್ನಾಣವೆಂದರೆ 'ವಿಜ್ಞಾನ'. ವಿಜ್ಞಾನದಿಂದ ಆವಿಷ್ಕಾರಗೊಂಡಿರುವ ರೇಡಿಯೋ ವಿಚಾರ ಸರ್ವಜ್ಞನಿಗೆ ತಿಳಿದಿತ್ತೆನ್ನಬಹುದು. ಹಿಂದೂ ವಿಜ್ಞಾನ ಶಾಸ್ತ್ರದ ಪ್ರಕಾರ ಶಬ್ದ, ಶ್ರೋತ್ರೇಂದ್ರಿಯ, ಮನಸ್ಸು ಇವು ಆಕಾಶ ದ್ರವ್ಯದಿಂದುಂಟಾದವುಗಳು. ಹೀಗಾಗಿ ಶಬ್ದವನ್ನು ಕೇಳುವ ಕಿವಿಗೂ, ಅರ್ಥವನ್ನು ಗ್ರಹಿಸುವ ಮನಸ್ಸಿಗೂ ನಿಕಟವಾದ ಸಂಬಂಧವಿದೆ. ಮನಸ್ಸು ಆಕಾಶದಿಂದ ಹುಟ್ಟಿದ ಕಾರಣ ಅದಕ್ಕೆ ಆಕಾಶದಂತೆ ವಿಶ್ವವ್ಯಾಪಕ ಗುಣವುಂಟು. ಆದುದರಿಂದ ಸರ್ವಜ್ಞ 'ಸೃಷ್ಟಿಯೆಲ್ಲವು ಮನವು ಮುಟ್ಟುವುದು ನಿಮಿಷದಲಿ' ಎಂದು ವಚನಿಸಿದ್ದಾನೆ. ಇದನ್ನೇ ನಾವಿಂದು ' ಆಕಾಶವಾಣಿ' ಎನ್ನುತ್ತಿದ್ದೇವೆ (ಸರ್ವಜ್ಞನ ವಚನಗಳು- ಉತ್ತಂಗಿ ಚೆನ್ನಪ್ಪ, ಪು.೬೦).

ಅಲ್ಲದೆ, ಭೌತವಿಜ್ಞಾನ, ಸಸ್ಯವಿಜ್ಞಾನದ ರಹಸ್ಯಗಳು ಸರ್ವಜ್ಞನಿಗೆ ತಿಳಿದಿತ್ತೆಂಬುದು ಗಮನಿಸಬೇಕಾದ ಅಂಶ. ಹೀಗೆ ವೈಜ್ಞಾನಿಕ ಮನೋಭಾವನೆಯ ದೂರ ದೃಷ್ಟಿ ಸರ್ವಜ್ಞನ ನಲ್ಲಿತ್ತೆಂಬುದು ತಿಳಿದುಬರುತ್ತದೆ. ಈತ ಶಿಷ್ಟ ನಾಗರೀಕತೆಯ ಮೆಟ್ಟಿಲನ್ನು ತುಳಿದಿರುವಂತೆಯೇ ಜಾನಪದರ ನಾಡೀ ಮಿಡಿತಗಳನ್ನು ಸ್ಪರ್ಶಿಸಿದ್ದಾನೆ. ಆದ್ದರಿಂದ ಆತನ ಪ್ರಸ್ತುತತೆ ಸರ್ವ ಕಾಲಕ್ಕೂ ಮಾನ್ಯ ವಾದುದೇ.

ಈಗ ಕಾಲ ಬದಲಾಗಿದೆ. ನಮ್ಮ ಆಚಾರ-ವಿಚಾರ, ನಂಬುಗೆಗಳಲ್ಲಿ ಕಲ್ಪಿಸಿಕೊಳ್ಳಲಾರದಷ್ಟು ಅನೇಕ ವ್ಯತ್ಯಾಸಗಳನ್ನು ಕಾಣುತ್ತಲಿದ್ದೇವೆ. ನಾವು ಭೌತಿಕ ಅನುಕೂಲಕ್ಕೆಂದು ಸಾಧಿಸಿರುವ, ಈಗಲೂ ಸಾಧಿಸುತ್ತಿರುವ ವೈಜ್ಞಾನಿಕ, ತಾಂತ್ರಿಕ ಪ್ರಗತಿಗಳೆಲ್ಲ ನಮ್ಮ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮುಂತಾದ ಸಾಂಸ್ಕೃತಿಕ ಬದುಕಿನ ಮೇಲೆ ದಿನಕ್ಕೊಂದು ರೀತಿಯ ಪ್ರಬಲ ಧಾಳಿ

ಮಾಡುತ್ತಲೇ ಇವೆ. ಮನುಷ್ಯ ಮನುಷ್ಯರಲ್ಲಿ ಧರ್ಮ, ಜಾತಿಗಳಿಂದ ನಿತ್ಯವೂ ಹಿಂಸೆ ತಾಂಡವವಾಡುತ್ತಲೇ ಇವೆ. ಜನಸಾಮಾನ್ಯರಲ್ಲಿ ಶಾಂತಿ ಇಲ್ಲವಾಗಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಉತ್ಪಾದನೆ ಹಾಗೂ ಅರ್ಥ ವ್ಯವಸ್ಥೆಗಳೆಲ್ಲಾ ದಿಕ್ಕು ತಪ್ಪಿವೆ. ಇಂತಹವುಗಳ ಮಧ್ಯ ಸಿಲುಕಿಕೊಂಡಿರುವ ನಮ್ಮ ಆಂತರಿಕ ಬದುಕು ಚಿಂತಾತ್ಮಕವಾಗಿದೆ.

ಇಂತಹ ಪರಿಸ್ಥಿತಿಯಲ್ಲಿಯೂ ನಮ್ಮ ಬದುಕು ಸರ್ವಾಂಗ ಸುಂದರಗೊಳಿಸಬೇಕಾದರೆ ಸರ್ವಜ್ಞನ ವಚನಗಳು ಪ್ರತಿಯೊಬ್ಬರಿಗೂ ದಾರಿದೀಪವಾಗಿವೆ. ಸರ್ವಜ್ಞನ ವಚನಗಳಲ್ಲಿ ಉಲ್ಲೇಖಗೊಂಡ ಜಾನಪದೀಯ ಅಂಶಗಳು ಆಧುನಿಕ ಬದುಕಿನಲ್ಲಿಯೂ ಒಂದಲ್ಲಾ ಒಂದು ರೂಪದಲ್ಲಿ ಗೋಚರಿಸುತ್ತವೆ. ಅವುಗಳನ್ನು ಜನ ಸಂಸ್ಕೃತಿಯ ಪಳೆಯುಳಿಕೆಗಳೆಂದು ಕರೆಯಬಹುದು. ಸಮಕಾಲೀನತೆ ಹಾಗೂ ಸಾರ್ವಕಾಲೀನತೆಯನ್ನು ಗರ್ಭೀಕರಿಸಿಕೊಂಡಿರುವ ಈತನ ಜಾನಪದೀಯ ಸತ್ವವುಳ್ಳ ವಚನಗಳು ನಿತ್ಯನೂತನವಾಗಿವೆ ಎಂದು ಹೇಳಲು ಅಡ್ಡಿಯಿಲ್ಲ. ಆದ್ದರಿಂದ ವಚನಗಳ ಅಧ್ಯಯನ, ಚಿಂತನೆ ಇನ್ನೂ ಎಲ್ಲರಿಗೂ ಮುಟ್ಟಬೇಕಾಗಿದೆ. ಇದಕ್ಕೆಲ್ಲಾ ಪ್ರತಿಯೊಬ್ಬರ ಸಂಕಲ್ಪ ಮುಖ್ಯವಾಗಬೇಕೇ ವಿನಃ ಮತ್ತೇನೂ ಅಲ್ಲ. ಈ ಹಿನ್ನೆಲೆಯಲ್ಲಿ ಸರ್ವಜ್ಞನು ವ್ಯಕ್ತಗೊಳಿಸಿರುವ ವಿಚಾರಗಳು ಪ್ರಸ್ತುತ ವಿದ್ಯಾಮಾನಗಳಿಗೂ ಅನ್ವಯಿಸುವಂತಿವೆ. ಆದ್ದರಿಂದ ಈ ನೆಲೆಗಟ್ಟಿನಲ್ಲಿಯೂ ಸಹ ಜಾನಪದ ಅಂಶಗಳನ್ನು ಅವನ ವಚನಗಳ ಮೂಲಕ ಸಂಶೋಧಿಸುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

# ಅನುಬಂಧ

## ಸರ್ವಜ್ಞನ ವಚನಗಳಲ್ಲಿ ಬಳಕೆಯಾಗಿರುವ ಗಾದೆ ಮಾತುಗಳು ಮತ್ತು ನುಡಿಗಟ್ಟುಗಳು

### - ಅ -

- ಅಟ್ಟಡಿಗೆಯಾ ರುಚಿಯ ಹುಟ್ಟು ತಾ ಬಲ್ಲುದೇ ?.
- ಅದ್ವಯಿತ ತಾನಾಗಿ ಯುದ್ಧವಿನ್ನಾರೊಡನೆ ?.
- ಅಪಮಾನದೂಟದಿಂದುಪವಾಸವಿರೆ ಲೇಸು.
- ಅರಸಿಗೆ ಆಳು ಸರಿಯಹನೆ ?.
- ಅರಿವಿಗೆ ಹಿರಿದು ಕಿರಿದಿಲ್ಲ.
- ಅರಿತು ಕರ್ಮವ ಬಿಟ್ಟು, ಮರೆತು ಧರ್ಮವ ಮಾಡು.
- ಅಕ್ಕಿಯಿಂದಲೇ ತೆಂಗು ಮೆಕ್ಕೆಯುಂ ಕಣಜ.
- ಅತ್ತಿ ಗಿಡಕ್ಹೂವಿಲ್ಲ, ಕತ್ತೆಗೆ ಕೋಡಿಲ್ಲ.
- ಅರಿತಂಗೆ ಅರವತ್ತು, ಮರೆತಂಗೆ ಮೂವತ್ತು.
- ಅಲ್ಲ ಅರಿಸಿನವುಂಟು, ಬೆಲ್ಲ ಬಿಳಿಯಲೆಯುಂಟು.
- ಅಳಿಯಾರ,ತಳವಾರ ಕಳೆಯುಳ್ಳ ಸೂಳೆ.
- ಅಳೆಯಾಸೆ ಹೆಪ್ಪಿಂಗೆ, ಮಳೆಯಾಸೆ ಸಕಲರ್ಗೆ.
- ಅಂದಗೇಡಿಯು ಹೊಲ್ಲ, ಮಂದಮತಿ ಸುತ ಹೊಲ್ಲ.
- ಅಂದವಿಲ್ಲದ ಹೆಣ್ಣು, ಚೆಂದವಿಲ್ಲದ ಮದುವೆ.
- ಅಂಬುತಾಗಿದ ಹುಲ್ಲೆ, ಇಂಬಿಲ್ಲದಲೆವಂತೆ.
- ಅಂಬು ಬಿಲ್ಲಿಗೆ ಲೇಸು, ಇಂಬು ಕೋಣೆಗೆ ಲೇಸು.
- ಅಕ್ಕಿಯೋಗರ ಲೇಸು, ಮೆಕ್ಕೆ ಹಿಂಡಿಯು ಲೇಸು.
- ಅಗಡೆತ್ತು ಕೊಳಹೊಲ್ಲ, ನೆಗಡಿ ಮೂಗಿಗೆ ಹೊಲ್ಲ.
- ಅಗಸ ಊರಿಗೆ ಲೇಸು, ಸೊಗಸು ಬಾಳಿಗೆ ಲೇಸು.
- ಅಚ್ಚು ಇಲ್ಲದ ಬಂಡಿ, ಮೆಚ್ಚು ಇಲ್ಲದ ದೊರೆಯು.
- ಅಜ್ಜಿ ಇಲ್ಲದ ಮನೆ, ಮಜ್ಜಿಗೆ ಇಲ್ಲದ ಊಟ.
- ಅಡಿಕೆ ಇಲ್ಲದ ವೀಳ್ಯ, ಕಿಡಿಕಿ ಇಲ್ಲದ ಮನೆಯು.
- ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ.

- ಅಡ್ಡ ಬಡ್ಡಿಯ ಹೊಲ್ಲ, ಗಿಡ್ಡ ಬಾಗಿಲು ಹೊಲ್ಲ.
- ಅತ್ತ ಸೂಳೆಯ ಸಂಗ, ಇತ್ತ ಚೋಳಿಯ ಸಂಗ.
- ಅರಿವಿಲ್ಲದಾ ಯೋಗ ಎರೆಯಿವಿಲ್ಲದ ಊಟ.
- ಅನ್ನದಾನಗಳಿಂದ ಮುನ್ನದಾನಗಳಿಲ್ಲ.
- ಅನ್ನವನು ಇಕ್ಕಿದನು, ಉನ್ನತವ ಪಡೆಯುವನು.
- ಅಪ್ಪಿ ಸಪ್ಪಾದವಳನಪ್ಪುವನು ಕಡು ಹೆಡ್ಡ.
- ಅರಸನಿಲ್ಲದ ನಾಡು, ವರುಷವಿಲ್ಲದ ಬೆಳೆಯು.
- ಅರಸು ಇಲ್ಲದ ಊರು, ಹೊರಸು ಇಲ್ಲದ ನಿದ್ರೆ.
- ಅರಸು ಮಡಿದರೆ ಕೇಡು, ಬಿರಸು ಬಡವಗೆ ಕೇಡು.
- ಅರಳೆಯಲ್ಲಿ ರಸವಿಲ್ಲ, ಕರುಳಿಗೆ ನಾಚಿಕೆ ಇಲ್ಲ.
- ಅರಿತು ಮಾಡಿದ ಪಾಪ, ಮರೆತರದು ಪೋಪುದೇ ?.
- ಅರಿವುನರಿಯದ ಗುರುವು, ಪರವನರಿಯದ ಶಿಷ್ಯ.
- ಅಲ್ಲದ ಮಾತೇಕೆ, ಸಲ್ಲದ ಸುತನೇಕೆ ?.
- ಅಲ್ಲಪ್ಪನೂರಲ್ಲಿ ಬಲ್ಲಪ್ಪನೇ ನಲ್ಲಪ್ಪ.
- ಅಲ್ಲವಿಲ್ಲದ ಊಟ, ನಲ್ಲೆಯಿಲ್ಲದ ನಿದ್ರೆ.
- ಅಗ್ಗ ಬಡವಗೆ ಲೇಸು, ಬುಗ್ಗೆಯಗಸಗೆ ಲೇಸು.
- ಅಕಾರಣ ನಗೆ ಹೊಲ್ಲ, ವಿಕಾರಿಯ ಕೆಳೆ ಹೊಲ್ಲ.

- ಆ -

- ಆಡದಲೆ ಮಾಡುವನು ರೂಢಿಯೊಳುತ್ತಮನು.
- ಆಡಿ ನಳ ಕೆಟ್ಟ, ಲೆತ್ತಾಡಿ ಧರ್ಮಜ ಕೆಟ್ಟ.
- ಆದಿಯಲ್ಲಿ ಜಿನನಿಲ್ಲ, ವೇದದಲ್ಲಿ ಹುಸಿಯಿಲ್ಲ.
- ಆನೆಗಂಜಿಕೆಯೇಕೆ ? ಶ್ವಾನಂಗೆ ಸಭೆಯೇಕೆ ?
- ಆನೆ ನೀರಾಟದಲಿ ಮೀನ ಕಂಡಂಜುವುದೇ ?
- ಆನೆ ಮೇಲಿದ್ದವನು ಶ್ವಾನ ಕಂಡೋಡುವನೇ ?
- ಆನೆ ಮುಕುರದೊಳಡಗಿ ಭಾನು ಶಶಿಯೊಳಡಗಿ
- ಆಪತ್ತಿಗಣಲೇಸು, ಭೂಪತಿಗೆ ಗುಣ ಲೇಸು.
- ಆಲಕ್ಕೆ ಹೂವಿಲ್ಲ, ಸಾಲಕ್ಕೆ ಕೊನೆಯಿಲ್ಲ.
- ಆಸರೆ ಇಲ್ಲದ ಮನೆಯು, ಮೀಸೆಯಿಲ್ಲದ ಮೋರೆ.

- ಆಳು ಇದ್ದರೆ ಅರಸು, ಕೂಳು ಇದ್ದರೆ ಬಿರಸು.
- ಆಳಾಗ ಬಲ್ಲವನು, ಆಳುವನು ಅರಸಾಗಿ.
- ಆಗ ಬಾ, ಈಗ ಬಾ, ಹೋಗಿ ಬಾ ಎನಬೇಡ.
- ಆಕೆಯ ಕಂಡು ಮನೆಯಾಕೆಯ ಮರೆತರೆ ?.
- ಆನೆ ಬೀದೀಲಿ ಬರೆ, ಶ್ವಾನ ಬೊಗಳುವುದು !.
- ಆಸನದಲುಂಬುವುದು ಸೂಸುವುದು ಬಾಯಲ್ಲಿ.
- ಆಡಿಗಂದಣವೇಕೆ, ಕೋಡಂಗೆ ಕನ್ನಡಿಯೇಕೆ ?.

- ಇ -

- ಇಂದು ನಾಳೆಗೆ ಎಂದು ತಂದು ಕೂಡಿಡಬೇಡ.
- ಇಂಬಿನ ಮನೆ ಲೇಸು, ಶಂಭುವಿನ ದಯೆ ಲೇಸು.
- ಇದ್ದಾಗ ಉಣದನೆದ್ದಾಗ ಉಣ್ಣುವನೇ ?.
- ಇದ್ದಿಲಿಂ ಕರಿದಿಲ್ಲ, ಬುದ್ಧಿಯಿಂ ಹಿರಿದಿಲ್ಲ.
- ಇಚ್ಛೆಯ ನರಿದಿತ್ತ ನುಚ್ಚೊಂದು ಮಾಣಿಕ್ಯ.
- ಇಕ್ಕಿದಾತನು ಉಂಡು, ನಕ್ಕು ಸ್ವರ್ಗಕ್ಕೆ ಹೋದ.

- ಈ -

- ಈಚಲ ಮರ ಹೀನ, ನೀಚರ ನೆರೆಹೀನ.
- ಈವಂಗೆ, ದೇವಂಗೆ ಆವುದಂತರವಯ್ಯ.
- ಈಚಲ ಮರ ಹೊಲ್ಲ, ನೀಚರ ನೆರೆ ಹೊಲ್ಲ.
- ಈಶನ ನೆನಹಿಲ್ಲ ಮೀಸಲ ತಲುವಿಲ್ಲ.

- ಉ -

- ಉಣ್ಣೆ ಕೆಚ್ಚಲೊಳಿದು, ಉಣ್ಣದು ನೊರೆಹಾಲು.
- ಉದ್ದುರುಟು ಮಾತಾಡಿ, ಇದ್ದುದ ಹೋಗಾಡಿ.
- ಉಳ್ಳಲಿ ಉಣಲಿಲ್ಲ, ಉಳ್ಳಲ್ಲಿ ಉಡಲಿಲ್ಲ.
- ಉನ್ನತವಪ್ಪ ಗಜವೇರಿ ಬಪ್ಪವನ ಕುನ್ನಿ ಕಚ್ಚುವುದೇ ?.
- ಉಂಬಳಿಯು ಇದ್ದವರು, ಕಂಬಳಿಯ ಹೊದೆಯುವರೇ ?.
- ಉದ್ದಿನ ಒಡೆ ಲೇಸು, ಬುದ್ಧಿಯ ನುಡಿಲೇಸು.

- ಉದ್ದು ಮದ್ದಿಗೆ ಹೊಲ್ಲ, ನಿದ್ದೆ ಯೋಗಿಗೆ ಹೊಲ್ಲ.
- ಉಪ್ಪಲ್ಲದುಣ ಹೊಲ್ಲ, ಮುಪ್ಪು ಬಡವಗೆ ಹೊಲ್ಲ.

- ಊ -

- ಊರಿಂಗೆ ದೊರೆ ರೂಪು, ನಾರಿಂಗೆ ಗುಣ ರೂಪು.
- ಊರಿಂಗೆ ದಾರಿಯನು ಯಾರು ತೋರಿದಡೇನು ?.

- ಎ -

- ಎಣ್ಣೆ ಇಲ್ಲದ ಮೀಹ, ಸುಣ್ಣವಿಲ್ಲದ ವೀಳ್ಯೆ.
- ಎರೆಯಿಲ್ಲದಾರಂಬ, ದೊರೆಯು ಇಲ್ಲದ ಊರು.
- ಎಂಜಲು ಹೊಲೆಯಲ್ಲ, ಸಂಜೆ ಕತ್ತಲೆಯಲ್ಲ.
- ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ.
- ಎಲುವಿಲ್ಲ ನಾಲಿಗೆಗೆ, ಬಲವಿಲ್ಲ ಬಡವಂಗೆ.
- ಎಲೆಗೆ ಬೀಜಗಳಿಲ್ಲ, ಮೊಲೆಗೆ ಎಲುಬುಗಳಿಲ್ಲ.
- ಎಲೆಯು ಕೊಳೆತರೆ ಹೊಲ್ಲ, ತೊಲೆಯು ಮುರಿದರೆ ಹೊಲ್ಲ.
- ಎಲ್ಲ ಆಶೆಯ ಬಿಟ್ಟರಿಲ್ಲಿಯೇ ಕೈಲಾಸ.
- ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ.
- ಎಂತಿರಲು ಪರರ ನೀ ಮುಂತೆ ನಂಬಲುಬೇಡ.
- ಎರೆಯನೂಳುವುದು ದೊರೆಯನೋಲೈಸುವುದು.
- ಎಲೆಯ ಮೆಲ್ಲದ ಬಾಯಿ ಹಲವನೋದದ ಬಾಯಿ.

- ಐ -

- ಐರಿ ಮೇಲಣ ಪಂಜು, ನೀರೊಳು ಉರಿದಂತೆ.
- ಐತದ ಗಣೆ ಚಿಗುತು, ಕಾತು ಫಲವಾದಂದು.

- ಒ -

- ಒಕ್ಕಲಿಗನೋದಲ್ಲ, ಬೆಕ್ಕು ಹೆಬ್ಬುಲಿಯಲ್ಲ.
- ಒಳ್ಳೆಯ ಮಾತಿಗೂ ಉಳ್ಳುಡವೆ ಬಿಡನೆಂದು.
- ಒಂದೊಂದು ಹನಿ ಬಿದ್ದು, ನಿಂದಲ್ಲಿ ಮಡುವಕ್ಕು.
- ಒಕ್ಕಲಿಗನಿಲ್ಲದ ಊರು, ಮಕ್ಕಳಿಲ್ಲದ ಮನೆಯು.
- ಒಡಕ ಮಡಿಕೆಯು ಹೊಲ್ಲ, ಕುಡುಕ ನೆರೆಯೊಳು ಹೊಲ್ಲ.

- ಒಡಲೆಂಬ ಹುತ್ತಕ್ಕೆ ನುಡಿಯುವ ನಾಲಿಗೆ ಸರ್ಪ.
- ಒಮ್ಮೆ ಉಂಡವ ತ್ಯಾಗಿ, ಇಮ್ಮೆ ಯುಂಡವ ಭೋಗಿ, ಮುಮ್ಮೆ ಯುಂಡುವ ರೋಗಿ.
- ಒಮ್ಮೆ ಸೀತರೆ ಹೊಲ್ಲ, ಇಮ್ಮೆ ಸೀತರೆ ಲೇಸು.
- ಒಸರುವ ತೊರೆ ಲೇಸು, ಹಸನಾದ ಕೆರೆ ಲೇಸು.
- ಒಂದುವನು ಎರಡೆಂಬ ಹಂದಿಯನ ಮೊಲನೆಂಬ.
- ಒಗರು ಜೋಳವು ಹೊಲ್ಲ, ಬಗರೆಯ ಜಲ ಹೊಲ್ಲ.

## - ಕ -

- ಕಟ್ಟಾಳು ತಾನಾಗಿ, ಬಟ್ಟೆಯಲಿ ನೆರವೇಕೆ ?
- ಕಟ್ಟೆಯನು ಕಟ್ಟಿದರೆ, ಬಿಟ್ಟಿಹರು ಕೋಡಿಯನು.
- ಕುರಿ ಕಬ್ಬಿನೊಳು ಹೊಕ್ಕು, ಅರಿವುದೇ ತನಿರಸವ ?.
- ಕೇಡು ಬಹ ಕಾಲಕ್ಕೆ, ಕೂಡುವವು ಬುದ್ಧಿಗಳು.
- ಕೇಳುವವರಿದ್ದರೆ, ಹೇಳುವುದು ಬುದ್ಧಿಯನು.
- ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಂಗೆ.
- ಕೊಡಬೇಡ, ಕೊಡದೆ ಇರಬೇಡ, ಧರ್ಮವ ಬಿಡಬೇಡ.
- ಕೊಡುವಾತನೇ ಹರನು, ಪಡೆವಾತನೇ ನರನು.
- ಕಂಡಿತವನಾಡುವರ ಕಂಡಿಹುದೆ ಕಷ್ಟ ?.
- ಕಂಚಿನ ನುಡಿಲೇಸು, ಕೆಂಚನೆಯ ಸತಿ ಲೇಸು.
- ಕಂಚಿಯ ಫಲಲೇಸು, ಮಿಂಚು ಮುಗಿಲಿಗೆ ಲೇಸು.
- ಕಂಡುವುದನಾಡುವೊಡೆ, ಕೆಂಡವಾಗುವುದೇಕೆ ?
- ಕಣ್ಣು ಬೇನೆಯು ಹೊಲ್ಲ, ಹುಣ್ಣಾದ ಮೊಗ ಹೊಲ್ಲ.
- ಕತ್ತಿ ಖಂಡುಗ ಭಾರ, ಹೊತ್ತು ತಿರುಗಿದಡೇನು ?
- ಕತ್ತಿಯನು ಹಿಡಿಯುವಡೆ, ಶಕ್ತಿ ತುಂಬಿರಬೇಕು.
- ಕತ್ತೆಗಂ ಕೋಡಿಲ್ಲ, ತೊತ್ತಿಂಗೆ ಗುಣವಿಲ್ಲ.
- ಕತ್ತೆಯಲಿ ಗುಣವಿಲ್ಲ, ಖಡ್ಗಕ್ಕೆ ದಯೆಯಿಲ್ಲ.
- ಕರಿಕೆ ಹೊಲ ಹೊಲ್ಲ, ಅರಿಕೆ ಹಾದರ ಹೊಲ್ಲ.
- ಕರೆವಾಸೆ ಗೊಲ್ಲಂಗೆ, ಸಿರಿಯಾಸೆ ಸೂಳೆಗೆ.
- ಕಳ್ಳನಾರಿಗೆ ಹೊಲ್ಲ, ಮುಳ್ಳು ಕಾಲಿಗೆ ಹೊಲ್ಲ.
- ಕಾಲನಿಗೆ ದಿನವಿಲ್ಲ, ಸಾಲಕ್ಕೆ ಕೊನೆಯಿಲ್ಲ.

- ಕಿವಿಗೆ ಗಾನವು ಲೇಸು, ಕವಿಗೆ ನವರಸ ಲೇಸು.
- ಕುದಿಯದ ಕೂಳಿಂದೆ ಹದುಳಂಬಲಿ ಲೇಸು.
- ಕುದುರೆಯಿಲ್ಲದ ಅರಸು, ಮಧುರವಿಲ್ಲದ ಊಟ.
- ಕುರುಬಂಗೆ ಕುರಿಯಾಸೆ, ಮರಿಗಳಿಗೆ ಮೊಲೆಯಾಸೆ.
- ಕುಲವಿಲ್ಲ ಯೋಗಿಗೆ, ಛಲವಿಲ್ಲ ಜ್ಞಾನಿಗೆ.
- ಕೂಡುವುದು ದುರ್ಬುದ್ಧಿ, ಕೇಡ ಬಹ ಕಾಲಕ್ಕೆ.
- ಕೂಳಿಲ್ಲದವನೊಡಲು, ಹಾಳು ಮನೆಯಂತಿಕ್ಕು.
- ಕೂಳು ಇಲ್ಲದ ಬಾಳು, ವೇಳೆಗೆ ಇಲ್ಲ [illegible]ಳು.
- ಕೆಡುಕು ಕೂಡುವುದೆಂದು ಅಡವಿಗೋಡಲು ಬೇಡ.
- ಕೇಡು ತಾ ಬರುವಲ್ಲಿ, ಕೂಡುವುದು ದುರ್ಬುದ್ಧಿ.
- ಕೊಂಬು ಹೋರಿಗೆ ಲೇಸು, ತುಂಬು ಕೇರಿಗೆ ಲೇಸು.
- ಕೋತಿಂಗೆ ಗುಣವಿಲ್ಲ, ಮಾತಿಂಗೆ ಕೊನೆಯಿಲ್ಲ.
- ಕಂಡದ್ದನಾಡೆ, ಭೂಮಂಡಲ ಮುನಿವುದು.
- ಕಪ್ಪರದಲುಂಬರು, ಒಪ್ಪರದಿ ನಡೆವರು.
- ಕುದಿಯದ ಕೂಳಿಂದೆ ಹದುಳದಂಬಲಿ ಲೇಸು.
- ಕುದುರೆಯನ್ನೇರದ ಕದನವ ಜಯಿಸಿದ.
- ಕೊಟ್ಟಾತ ಬರಡಾದ, ಬಿಟ್ಟಾತ ಹಯನಾದ.
- ಕೊಲ್ಲುವ ಕೆಯ್ಯೊಳು ಪೂಜೆ, ಮೆಲ್ಲುವ ಬಾಯೊಳು ಮಂತ್ರ.
- ಕೋಪಿಗೆ ಯಮರಾಜ, ಪಾಪಿಗೆ ಜವರಾಯ.
- ಕ್ರೀಡೆಯಲಿ ಪ್ರೌಢತ್ವ, ಪ್ರೌಢಿಯಲ್ಲಿ ತರುಣತ್ವ.
- ಕುಂಡಲಿಯ ಬಲ್ಲಾತ, ಮಿಂಡಿಯರಿಗೊಲಿವನೆ ?.
- ಕಂಗಳಿಚ್ಚೆಗೆ ಹರಿದು ಭಂಗಗೊಳದಿರು.

- ಖ -

- ಖಂಡಿಸಿದ ಮನವಲ್ಲ, ದಂಡಿಸಿದ ತನುವಲ್ಲ.

- ಗ -

- ಗುರಿಯ ತಾಗದ ಕೋಲ, ನೂರಾರೆಸೆದೇನು ?
- ಗಂಗೆಯಲಿ ಹೊಲೆಯಿಲ್ಲ, ಲಿಂಗಕ್ಕೆ ಕಡೆಯಿಲ್ಲ.
- ಗಂಡನಿಲ್ಲದ ನಾರಿ, ಮಿಂಡನಿಲ್ಲದ ಸೂಳೆ.

- ಗಡ್ಡವಿಲ್ಲದ ಮೋರೆ, ದುಡ್ಡು ಇಲ್ಲದ ಚೀಲ.
- ಗಾನ ವಿದ್ಯೆಯು ಲೇಸು, ಮಾನವತಿ ಸತಿ ಲೇಸು.
- ಗುರುವಿಲ್ಲದ ಮಠವು, ಹಿರಿಯರಿಲ್ಲದ ಮನೆಯು.
- ಗುರುವ ನಿಂದಿಸಬೇಡ, ಪರವ ಹಳಿಯಲು ಬೇಡ.

## - ಚ -

- ಚಿಂತಿಸಿ ದೇಹ ಬಸವಳಿವಕ್ಕು.
- ಚೋಳಿಗೆ ಮೊಲೆಯಿಲ್ಲ, ಕೋಳಿಗೆ ತಲೆಯಿಲ್ಲ.
- ಚಾಟು ಇಲ್ಲದ ಪುರುಷ, ಕೋಟೆ ಇಲ್ಲದ ಅರಸ.

## - ಜ -

- ಜಾತಿ ಹೀನನ ಮನೆಯು ತಾ ಹೀನವೇ ?.
- ಜನಕೆ ರಂಜನೆ ಲೇಸು, ವನಕೆ ಪುಷ್ಪವು ಲೇಸು.
- ಜಲವುಂಡ ಭೂಮಿಯೊಳು, ನಿಲ್ಲದದು ನಿಲುಗಂಬ.
- ಜಾಣಂಗೆ ಮುನಿಸಿಲ್ಲ, ಕೋಣಂಗೆ ಮತಿಯಿಲ್ಲ.
- ಜಾಣ ಜಾಣಗೆ ಲೇಸು, ಕೋಣ ಕೋಣಗೆ ಲೇಸು.
- ಜಾಣೆಯ ನುಡಿಲೇಸು, ವೀಣೆಯ ಸ್ವರ ಲೇಸು.
- ಜಾತಿ ಜಾತಿಗೆ ವೈರ, ನೀತಿ ಮೂರ್ಖಗೆ ವೈರ.
- ಜ್ವರ ಬಂದ ಮನುಜಗೆ ನೊರೆ ಹಾಲು ವಿಷವಕ್ಕು.
- ಜ್ಯೋತಿ ಇಲ್ಲದ ಮನೆಯು, ರೀತಿ ಇಲ್ಲದ ಸತಿಯು.

## - ತ -

- ತನ್ನ ತಾನರಿದಂಗೆ ಭಿನ್ನ ಬೇಧಗಳಿಲ್ಲ.
- ತನ್ನ ನೋಡಲಿ ಎಂದು ಕನ್ನಡಿಯು ಕರೆವುದೇ ?.
- ತಂತಿ ವಾದ್ಯವು ಲೇಸು, ಮಂತ್ರಿಯ ಕೆಳೆ ಲೇಸು.
- ತನ್ನ ತಾನರಿದವಗೆ ಭಿನ್ನ ಭಾವನೆಯಿಲ್ಲ.
- ತಾಗದ ಬಿಲ್ಲು ಹೊಲ್ಲ, ಆಗದ ಮಗ ಹೊಲ್ಲ.
- ತಾಗುವ ಮುನ್ನವೇ, ಬಾಗುವ ತಲೆ ಲೇಸು.
- ತುಪ್ಪ ಓಗರಲೇಸು, ಉಪ್ಪರಿಗೆ ಮನೆ ಲೇಸು.
- ತೊಗರೆಯ ತೊಗೆ ಲೇಸು, ಬುಗುರಿಗೆ ಮೊಳೆ ಲೇಸು.

- ತಿರಿ ತಂದು ಒಬ್ಬನಾ ಕರಕೊಂಡು ಉಣಬೇಕು.
- ತಿರಿವರನಡರಿ ತಿರಿವರೇನ್ ?.
- ತುಂಬಿದಾ ಕೆರೆ ಬಾವಿ ತುಂಬಿದಂತಿರುವುದೇ ?
- ತಿಗುಳರ ಗೆಣೆಯಿಂದ ಬಗುಳುವ ಶುನಿ ಲೇಸು.
- ತುಡುತಿನ್ನಿ ಗಂಡನ ಬಡತನವ.
- ತುತ್ತು ತುತ್ತಿಗೆ ದೇಹ ತಿತ್ತಿಯಂತಾಗುವುದು.
- ತಿಳಿಯ ಕಾಸಿದ ತುಪ್ಪವಳಿದು ಹಾಲಪ್ಪುದೆ.

- ದ -

- ದಂತಿ ವಾಹನ ಲೇಸು, ಪಂಕ್ತಿ ಭೋಜನ ಲೇಸು.
- ದಯಾಳು ದೇವರನ್ನು ಭಕ್ತಿಯಿಂ ನೆನೆದರೆ ಆಳಿನಾಳು.
- ದಂಡು ಇಲ್ಲದ ಅರಸು, ಕೊಂಡವಿಲ್ಲದ ಹೋಮ.
- ದಾನ ಭಕ್ತಿಗಳಲ್ಲಿ 'ನಾನು' ಮರೆದಿರಬೇಕು.
- ದೊರೆಯ ಒಲುಮೆಗೆ ಹೆಣಗುವನ ಕಾಯವು ಸೊರಗಿ ಸಾಯುವುದು.
- ದಿನಪತಿಗೆಣೆಯಿಲ್ಲ, ಧನಪತಿಗೆ ಸ್ಥಿರವಿಲ್ಲ.
- ದಿಟವೇ ಪುಣ್ಯದ ಪುಂಜ, ಸಟೆಯೇ ಪಾಪದ ಬೀಜ.

- ಧ -

- ಧನಕನಕವುಳ್ಳನಕ ದಿನಕರನಂತಕ್ಕು.

- ನ -

- ನರಲೋಕ ಪಾಪಿಷ್ಟರಿಗೆ ಸುರಲೋಕ ನಿಷ್ಠರಿಗೆ.
- ನರೆಬಂದ ಮುದುಕಂಗೆ ಭರದ ಜವ್ವನೆ ಏಕೆ ?.
- ನಾಟಿ ರಾಗವು ಲೇಸು, ತೋಟ ಮಲ್ಲಿಗೆ ಲೇಸು.
- ನಾಯ ಬಾಲವ ನಂಬಿ, ಹಾಯುವರೆ ಹಳ್ಳವನು ?.
- ನಾಲಿಗೆಯ ಕಟ್ಟಿಹನು ಕಾಲನಿಗೆ ದೂರನಹ.
- ನುಡಿಯಿಲ್ಲದ ಮಂತ್ರ, ಗಿಡವಿಲ್ಲದ ಮದ್ದು.
- ನೆತ್ತವದು ಒಳಿತಂದು ನಿತ್ಯವಾಡಲು ಬೇಡ.
- ನಡೆಯುವ ಪಥದಿ ಅಡಿಯಿಡಲು, ವಿಧಿಯು ತಡೆಯದೋಡುವುದು.
- ನಲ್ಲ ಒಲ್ಲೀ ವಲ್ಲ; ನೆಲ್ಲಕ್ಕಿ ಬಾನೊಲ್ಲ..... ಯಾಕೊಲ್ಲ ? ಇಲ್ಲದ್ದಕೆ ಒಲ್ಲ.

- ನಾಡಳಿಯೆ ರೂಢಿಪತಿ ಕೆಡಗು; ಅರಸಳಿಯೆ ನಾಡೆಲ್ಲ ಕೆಡಗು.
- ನಾರಿ ಪರರುಪಕಾರಿ, ನಾರಿ ಸ್ವರ್ಗಕೆ ದಾರಿ.
- ನಾರಿ ಸಕಲರಿಗೆ ಹಿತಕಾರಿ, ಮುನಿದರೆ ನಾರಿಯೇ ಮಾರಿ.
- ನಾರಂಗಿಯ ಸಸಿಗೆ ನೀರು ತಂದೆರೆದಿಹರೆ ?.
- ನೂರು ಕಂಡುಗ ಹೊಟ್ಟು ತೂರಿದರೆ ಫಲವೇನು ?.
- ನೆತ್ತದಾ ಹಾಸಂಗಿ, ಎತ್ತ ಬಿದ್ದರುದಾಯ.
- ನೊಂದು ತಾ ನೋಯಿಸದವ ದೈವ.
- ನಡೆಯೋದೊಂದೇ ಭೂಮಿ, ಕುಡಿಯೋದೊಂದೇ ನೀರು.
- ನಾರಿಯ ಗಂಡ ಬೇಲೂರಿಗೆ ಹೋದರೆ.

## - ಪ -

- ಪರುಶ ಲೋಹವ ಸೋಕಿ, ವರುಷವಿರಬಲ್ಲುದೇ ?.
- ಪುಣ್ಯತನಗುಳ್ಳನಕ ಮನ್ನಣೆಯು ಪಿರಿದಕ್ಕು.
- ಪರ್ವತವನೇರಿದೊಡೆ ಗರ್ವ ತನಗೇಕಯ್ಯ ?.
- ಪುಷ್ಪವಿಲ್ಲದ ಪೂಜೆ, ಅಶ್ವವಿಲ್ಲದ ಅರಸು.
- ಪ್ರಸ್ತಕ್ಕಿಲ್ಲದ ಮಾತು ಹತ್ತು ಸಾಸಿರ ವ್ಯರ್ಥ.
- ಪರರ ಹಳಿಯಲು ಬೇಡ, ಗುರುವ ನಿಂದಿಸಬೇಡ.
- ಪಡಿಯಾಸೆ ಹರದಂಗೆ, ನುಡಿಯಾಸೆ ವೇಶ್ಯೆಗೆ.

## - ಬ -

- ಬೆಣ್ಣೆ ಬೆಂಕಿಯ ನಡುವೆ ತಣ್ಣಗಿರಬಲ್ಲುದೇ ?.
- ಬ್ರಹ್ಮವನರಿದಾತ ಸುಮ್ಮನೆ ಇರಬೇಕು.
- ಬರಡೆಮ್ಮೆ ಕರೆದಹಾಗೆ.
- ಬಂಧನವ ಮಾಡಿದರು, ಸಂದ ಜ್ಞಾನಿಯೇ ಲೇಸು.
- ಬಲ್ಲವರೊಡನಾಟ, ಬೆಲ್ಲವನು ಮೆದ್ದಂತೆ.
- ಬಲ್ಲೆನೆಂದೆಂಬುವವರೆಲ್ಲರೂ ಹಿರಿಯರೇ ?
- ಬೇಡಂಗೆ ಕೊಡೆ ಹೊಲ್ಲ, ಆಡಿಂಗೆ ಮರಿ ಹೊಲ್ಲ.
- ಬೇಡದೇ ಮುನ್ನೀವ ರೂಢಿಯೊಳಗುತ್ತಮನು.
- ಬಚ್ಚಲಿಲ್ಲದ ಮನೆಯು, ಕೆಚ್ಚಲಿಲ್ಲದ ಹಸುವು.

- ಬಲ ಹೋದ ಕಾಲಕ್ಕೆ, ನೆಲ್ಲವೆದ್ದು ಬಡಿಯುವುದು.
- ಬಾಳೆಗೆ ಮುಳ್ಳಿಲ್ಲ, ಕೋಳಿಗೆ ಮೊಲೆಯಿಲ್ಲ.
- ಬಾಳೆಯ ವನಲೇಸು, ಮಾಳಿಗೆಯ ಮನೆ ಲೇಸು.
- ಬಿಲ್ಲಾಸೆ ಬೇಡಂಗೆ, ಕೊಲ್ಲಾಸೆ ಕಟುಗಂಗೆ.
- ಬೆಕ್ಕು ಮನೆಯೊಳು ಲೇಸು,ಮುಕ್ಕು ಕಲ್ಲಿಗೆ ಲೇಸು.
- ಬೆಲ್ಲದಂಬಲಿ ಲೇಸು, ಬಿಲ್ಲು ಶಬರಂಗೆ ಲೇಸು.
- ಬೇಡ ಕಾಯದೇ ಕೆಟ್ಟ, ಜೇಡ ನೇಯದೇ ಕೆಟ್ಟ.
- ಬೇಡಗಡವಿಯ ಚಿಂತೆ, ಆಡಿಂಗೆ ಮಳೆ ಚಿಂತೆ.
- ಬಲವಂತರಾದವರು ಕಲಹದಿಂ ಕೆಟ್ಟಿಹರು.
- ಬಲ್ಲರೆ ಬಲ್ಲೆನೆನಬೇಡ.
- ಬಲ್ಲವರು ಹಾವಸೆಯ ಕಲ್ಲ ತಾ ಮೆಟ್ಟುವರೆ ?.
- ಬೇವು ಫಲವಾಗಲದು ಸೇವಿಸಲು ಯೋಗ್ಯವೇ ?
- ಬಂದುದನೆಲ್ಲವ ನುಂಗಿದರೆ ವಿಧಿ ಕರ್ಮ ನಂದಿ ಹೋಗುವುದು.
- ಬಂಧುಗಳಾದವರು ಬಂದುಂಡು ಹೋಗುವರು.
- ಬೆಂದ ಮನೆ ಬಾಗಿಲಿಗೆ ಮುಂದೆ ತೋರಣವೇಕೆ ?.
- ಬೇಡಂಗೆ ಶುಚಿ ಇಲ್ಲ, ಬೋಡಂಗೆ ರುಚಿಯಿಲ್ಲ.

**- ಭ -**

- ಭಂಗವಿಲ್ಲದ ಬದುಕು ತಿಂಗಳಿದ್ದರೆ ಸಾಕು.
- ಭೂಪತಿಗೆ ದಳ ಲೇಸು, ಆಪತ್ತಿಗೆ ಹಣ ಲೇಸು.
- ಭಿಕ್ಷದ ಅನ್ನವು ಮೋಕ್ಷಕ್ಕೆ ಸಾಧನವು.

**- ಮ -**

- ಮಾತು ಬಲ್ಲಾತಂಗೆ ಮಾತೊಂದು ಮಾಣಿಕ್ಯ.
- ಮುಟ್ಟಾದ ಹೊಲೆಯೊಳು ಹುಟ್ಟೋದು ಜಗವೆಲ್ಲ.
- ಮುತ್ತು ನೀರಲ್ಲಿ ಹುಟ್ಟಿ, ಮತ್ತೆ ನೀರಪ್ಪುದೇ ?
- ಮುನ್ನ ಮಾಡಿದ ಪಾಪ ಹೊನ್ನಿಲೆ ಪೋಪುದೇ ?
- ಮಂಜು ಮಳೆ ಬರಲೇಸು, ಪಂಜು ಇರುಳಲಿ ಲೇಸು.
- ಮಂದಿ ಇಲ್ಲದ ರಾಜ್ಯ, ಕಂದನಿಲ್ಲದ ಭಾಗ್ಯ.

- ಮಕ್ಕಳಿಲ್ಲದ ಮನೆಯು ಪಕ್ಕಿ ಇಲ್ಲದ ವನವು.
- ಮಜ್ಜಿಗೂಟಕೆ ಲೇಸು, ಮಜ್ಜನಕೆ ಮಡಿ ಲೇಸು.
- ಮತಿಯಿಲ್ಲ ಮರುಳಂಗೆ, ಗತಿಯಿಲ್ಲ ಬಡವಂಗೆ.
- ಮನವದು ಮನುಜಗೆ, ಮೌನವದು ಯೋಗಿಗೆ.
- ಮುಟ್ಟದಲೆ ಇರಬೇಕು, ಮುಟ್ಟಿ ನೋಡಲುಬೇಕು.
- ಮೊಸರು ಇಲ್ಲದ ಊಟ, ಕೆಸರು ಇಲ್ಲದ ಗದ್ದೆ.
- ಮೇಲು ಕೀಳೆನಬೇಡ ಶೀಲವನು ಬಿಡಬೇಡ.
- ಮಡದಿ ಮಕ್ಕಳ ಮಮತೆ ಒಡಲೊಡವೆ ಇರುವತನಕ.
- ಮನದಲ್ಲಿ ನೆನೆವಂಗೆ ಮನೆಯೇನು, ಮಠವೇನು ?.
- ಮಾತುಬಲ್ಲಹ ತಾನು ಸೋತು ಹೋಹುದು ಲೇಸು.
- ಮನೆಯೇನು, ವನವೇನು ನೆನಹು ಇದ್ದರೆ ಸಾಕು.
- ಮಾತು ಬಂದೆಡೆಯಲ್ಲಿ ಸೋತು ಹೋದವನೇ ಜಾಣ.
- ಮೂರ್ಖಂಗೆ ಬುದ್ಧಿಯನು ನೂರ್ಕಾಲ ಹೇಳಿದರೇನು ?.
- ಮೂರೆಳೆಯ ಹಾಕಿದವ ಹಾರಿದನೆ ಸ್ವರ್ಗಕ್ಕೆ.
- ಮಾನವಳಿಯಬೇಕು, ಮೌನ ತಪ್ಪಸ್ಸಿಗೆ ಬೇಕು.
- ಮೇರುವಿಗೆ ಎಣೆಯಿಲ್ಲ, ಧಾರುಣಿಗೆ ಪಡಿಯಿಲ್ಲ.
- ಮುನಿವಂಗೆ ಮುನಿಯದಿರು, ಕನವಂಗೆ ಕನೆಯದಿರು.
- ಮುತ್ತು ಮುದಿಕಿಗೇಕೆ ? ಗುರುವಿಗೆ ತೊತ್ತೇಕೆ ?.
- ಮಂಡೆ ಬೋಳಾದವರ ಕಂಡಿನ್ನು ನಂಬದಿರು.

## - ಯ -

- ಯಾತರದ ಹೂವೇನು ನಾತರದು ಸಾಲದೆ?.
- ಯೋಗಿಂಗೆ ಕುಲವಿಲ್ಲ ಸಾಗರಕೆ ನೆಲೆಯಿಲ್ಲ.
- ಯತಿಗೇಕೆ ಕೋಪ, ದುರ್ಮತಿಗೇಕೆ ಪರತತ್ವ.
- ಯೋಗಗೈಯ್ಯಲು ಬೇಡ, ಯೋಗಿಯ ನಿಂದಿಸಬೇಡ.
- ಯತಿಯ ತಪವ ಕೆಡಗು, ಸತಿಯ ಸಜ್ಜನ ಕೆಡಗು.

## -ರ-

- ರಾಗವಿಲ್ಲದ ಹಾಡು ಭೋಗವಿಲ್ಲದ ಜನ್ಮ.
- ರಾಗ ಯೋಗಿಗೆ ಹೊಲ್ಲ ಭೋಗ ರೋಗಿಗೆ ಹೊಲ್ಲ.
- ರಾಗವಿಲ್ಲದ ವಿದ್ಯೆ ಭೋಗವಿಲ್ಲದ ನಿದ್ರೆ.
- ರಾತ್ತಿಯೊಳು ಶಿವರಾತ್ರಿ ಜಾತ್ರೆಯೊಳು ಶ್ರೀಶೈಲ.
- ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ.

## -ಲ-

- ಲಕ್ಷ ಬತ್ತಿಯ ಮಾಡಿಯೆತ್ತಿದರೆ ಫಲವೇನು ?.
- ಲಿಂಗವಿಲ್ಲದ ಪೂಜೆ ಕಂಗಳಿಲ್ಲದ ನೋಟ.
- ಲಿಂಗದ ಗುಡಿ ಲೇಸು ಗಂಗೆಯ ತಡಿ ಲೇಸು.
- ಲೋಕವಶ್ಯಕೆ ಮದ್ದು ಏಕ ಮೂಲಿಕೆ ಹೇಮ.
- ಲೋಭದಿಂ ಕೌರವನು ಲಾಭವನು ಪಡೆದಿಹನೆ ?.

## -ವ-

- ವಿದ್ಯೆಯೇ ತಾಯ್ತಂದೆ ಬುದ್ಧಿಯೇ ಸೋದರನು.
- ವದನೆ ರೋಗಿಗೆ ಹೊಲ್ಲ ಬದನೆ ರೋಗಿಗೆ ಹೊಲ್ಲ.
- ವಿದ್ಯೆಗೆ ಕಡೆಯಿಲ್ಲ ಬುದ್ಧಿಗೆ ಬೆಲೆಯಿಲ್ಲ .
- ವ್ಯಸನದಲಿ ದೇಹವು ಮಸಣವನು ಕಾಣುವುದು.

## -ಶ-

- ಶಕ್ತಿಯನು ತೊರೆದಿಹರೆ ಭಕ್ತಿಯಿಂದಿರಬೇಕು.
- ಶ್ವಾನ ಬಾಲವದು ಡೊಂಕು ಊನನ ನಡೆ ಡೊಂಕು.
- ಶಿವ ತೋರಿಸಿದಂತಿಹುದೆ ಲೇಸು.

## -ಸ-

- ಸಂತಿಯ ಮನೆ ಹೊಲ್ಲ ಚಿಂತೆಯ ತನು ಹೊಲ್ಲ.
- ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ.
- ಸತ್ಯಕ್ಕೆ ಸರಿಯಿಲ್ಲ ಮಿಥ್ಯಕ್ಕೆ ನೆಲೆಯಿಲ್ಲ.
- ಸತ್ಯರಾ ಒಡನಾಟ ಮತ್ತೆ ಸಕ್ಕರೆ ತುಪ್ಪ.

- ಸೂಕ್ಷ್ಮವಾದರೂ ಒಂದು ಭಿಕ್ಷೆಯನು ನೀಡಲೇಬೇಕು.
- ಸೋಗೆಯ ರಸ ಹೊಲ್ಲ ಮಾಗಿಯ ಚಳಿ ಹೊಲ್ಲ.
- ಸೋರುವ ಮನೆಯಿಂದ ದಾರಿಯ ಮರ ಲೇಸು .
- ಸಕ್ಕರೆಯ ಹುಡಿ ಚಂದ ಮಕ್ಕಳಾಟವೆ ಚಂದ.
- ಸಮರದಿ ಬಿಲ್ಲು ಮುರಿದಂತೆ.
- ಸಾಧಿಪಗೆ ಬಾರದಿಹುದುಂಟೆ ?.
- ಸಿಟ್ಟೀಲಿ ಶಿವನ ಬೈದು ಫಲವಿಲ್ಲ.
- ಸಿರಿಬಂದ ಕಾಲಕ್ಕೆ ಕರೆದು ದಾನವ ಮಾಡು.
- ಸುಗ್ಗಿಯ ಮೇಲೆ ಮಳೆ.
- ಸುಮ್ಮ ನಿರಬಲ್ಲವನೇ ಜಾಣ.
- ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ ?.
- ಸೊಲ್ಲರಿವ ಶಿವನ ಬೇಡಿದರೆ ಬಯಸಿದುದೆಲ್ಲವನು ಕೊಡುವ.
- ಸುರತರವು ಮರನಲ್ಲ, ಸುರಭಿಯೊಂದಾವಲ್ಲ.
- ಸಂಗವ ತೊರೆದಂಗೆ ಅಂಗನೆಯ ನೆರೆಬೇಡ.
- ಸಂಗದಿಂ ಕೆಳೆಯಿಲ್ಲ, ಬಿಂಗದಿಂ ಹೊರೆಯಿಲ್ಲ.
- ಸುರಗಿಯ ಮೊನೆ ನಂಜು, ಉರಗನ ಹಲ್ನಂಜು.

## -ಹ-

- ಹಸಿವಿಗೆ ಹಂಬಲಿ ಮದ್ದು ಬಿಸಿಲಿಗೆ ಕೊಡೆ ಮದ್ದು.
- ಹಂಗಿನರಮನೆಯಿಂದ ವಿಂಗಡದ ಗುಡಿ ಲೇಸು.
- ಹಂಗಿನ ಹಾಲಿನಿಂದಂಬಲಿಯ ತಿಳಿ ಲೇಸು .
- ಹಂದಿಗಂದಣವೇಕೆ ಅಂಧಕಗೆ ಸೊಡರೇಕೆ ?.
- ಹರಳು ಉಂಗುರಗೆ ಲೇಸು ಹುರಳಿ ಕುದುರೆಗೆ ಲೇಸು.
- ಹಾಲು ಬೋನವು ಲೇಸು ಮಾಲೆಯು ಕೊರಳಿಗೆ ಲೇಸು.
- ಹೋಳಿಗಿಲ್ಲದ ಹಬ್ಬ ಮೇಳವಿಲ್ಲದ ಊಟ.
- ಹೇಳಬಲ್ಲಡೆ ಗುರುವು; ಕೇಳ ಬಲ್ಲಡೆ ಶಿಷ್ಯ.
- ಹುಸಿಯ ಪೇಳ್ವದರಿಂದ ಹಸಿದು ಸಾವುದು ಲೇಸು.
- ಹೊನ್ನಂಬ ತೊರೆಯಲೆಚ್ಚಂತೆ.

- ಹಂಗಿನರಮನೆಯಿಂದ ವಿಂಗಡದ ಗುಡಿಲೇಸು.
- ಹಂದಿಯಾ ಚಂದನದ ಗಂಧವನು ಅರಿವುದೇ?.
- ಹೆಂಡಿರಾ ಕೌತುಕವು ಗಂಡರಿಗೆ ತಿಳಿವುದೇ?.
- ಹರನಿಷ್ಠೆಗಲ್ಲದೆ, ಹರಿದು ಹೋಗದು ಪಾಪ.
- ಹುತ್ತು ಹಾವಿಗೆ ಚಂದ, ಮುತ್ತು ಕೊರಳಿಗೆ ಚೆಂದ.
- ಹೆಣ್ಣ ಬಿಟ್ಟವ ದೈವ ಮಣ್ಣ ಬಿಟ್ಟವ ದೈವ.
- ಹತ್ತಿಗೆ ಹೂವಿಲ್ಲ, ಕತ್ತೆಗೆ ಹೊಲೆಯಿಲ್ಲ.

# - ಗ್ರಂಥಋಣ -

**ಜೀವನ ಮತ್ತು ಕೃತಿಗಳ ಸಮೀಕ್ಷೆ,** ಉತ್ತಂಗಿ ಚೆನ್ನಪ್ಪನವರು ಡಾ॥ ಎಸ್.ಆರ್. ಗುಂಜಾಳ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೧೯೮೨

**ಪರಮಾರ್ಥ,**ಸಂ: ಡಾ॥ ಎಲ್. ಬಸವರಾಜ್,ಪ್ರ: ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೦

**ವೇಮನ ಮತ್ತು ಸರ್ವಜ್ಞ,**ಡಾ॥ ಮಧು ವೆಂಕಾರೆಡ್ಡಿ, ಪ್ರ:ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

**ವೇಮನ ಮತ್ತು ಸರ್ವಜ್ಞ: ತೌಲನಿಕ ಅಧ್ಯಯನ,**ಡಾ॥ ಜಿ. ಅಪ್ಪಾರಾವ್, ಪ್ರ:ಕರ್ನಾಟಕ ವಿಶ್ವವಿದ್ಯಾಲಯ,ಧಾರವಾಡ, ೧೯೭೦

**ಸರ್ವಜ್ಞ,**ಲತಾ ರಾಜಶೇಖರ,ಕನ್ನಡ ಅಧ್ಯಯನ ಸಂಸ್ಥೆ,ಮೈ.ವಿ.ವಿ., ಮೈಸೂರು,೧೯೭೬

**ಸರ್ವಜ್ಞ,**ಹಾ.ಮಾ.ನಾಯಕ, ಕನ್ನಡ ಅಧ್ಯಯನ ಸಂಸ್ಥೆ,ಮೈ.ವಿ.ವಿ., ಮೈಸೂರು, ೧೯೭೬

**ಸರ್ವಜ್ಞ,** ಆರ್. ರೇಣುಕಮ್ಮ, ೧೯೬೪

**ಸರ್ವಜ್ಞ ಕವಿ,**ಎ. ಆರ್.ಕೃಷ್ಣಶಾಸ್ತ್ರಿ, ಮೈ.ವಿ.ವಿ., ಮೈಸೂರು,೧೯೬೯

**ಸರ್ವಜ್ಞ ಕವಿಯ ಜೀವನ ಹಾಗೂ ಕಾವ್ಯ,**ಕ.ವಿ.ವಿ., ಧಾರವಾಡ,೧೯೬೭

**ಸರ್ವಜ್ಞ ಗ್ರಂಥ ಮಾಲೆ,** ಭೂಸರೆಡ್ಡಿ, ೧೯೭೭

**ಸರ್ವಜ್ಞ ವಚನ ಸಂಗ್ರಹ,** ಪ್ರಧಾನ ಸಂಪಾದಕರು: ರಂ.ಶ್ರೀ.ಮುಗಳಿ,ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು, ೧೯೭೪

**ಸರ್ವಜ್ಞನ ವಚನಗಳಲ್ಲಿ ಆರೋಗ್ಯ,** ನಾಗಲೋಟಿಮಠ,ಕ.ವಿ.ವಿ., ಧಾರವಾಡ, ೧೯೯೩

**ಸರ್ವಜ್ಞನ ವಚನಗಳಲ್ಲಿ ರಾಜಕೀಯ ಪ್ರಜ್ಞೆ,**ಎಲ್. ಹೆಚ್. ಕಲ್ಮಠ,ಕ.ವಿ.ವಿ.,ಧಾರವಾಡ, ೧೯೯೪

**ಸರ್ವಜ್ಞನ ವಚನಗಳು,** ಲಿಂಗರಾಜು, ೧೯೯೪

**ಸರ್ವಜ್ಞನ ವಚನಾದಿ**, ಸಂ: ಸಿ.ಜಿ.ಪುರುಷೋತ್ತಮ್

**ಸರ್ವಜ್ಞ ಸಂಪದ,** ಸಂ: ಮಾಗಡಿ ರಂಗ ನರಸಿಂಹಯ್ಯ,ಶ್ರೀ ಸರಸ್ವತಿ ಬುಕ್ ಸೆಂಟರ್, ಉಪ್ಪಾರಹಳ್ಳಿ, ೧೯೯೫

**ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ ,** ಡಾ॥ ಎಂ. ಅಕಬರ ಅಲಿ, ಮೈ.ವಿ.ವಿ., ಮೈಸೂರು, ೧೯೮೩

**ಸರ್ವಜ್ಞನ ಸಚೇತನ ಸಂದೇಶ,**ಮನೋಹರರಾವ್ ದೇಶಪಾಂಡೆ, ಶ್ರೀ ದ್ವೈಪಾಯನ ಟ್ರಸ್ಟ್ ಮುಂಬಯಿ, ೧೯೭೪

**ಸರ್ವಜ್ಞನ ಜೀವನ ಕೃತಿಗಳು ಹಾಗೂ ಸಂದೇಶ,**ಡಾ॥ ಬಿ.ಕೆ. ಹೊಸಮಠ ಕ.ವಿ.ವಿ., ಧಾರವಾಡ, ೧೯೭೦

**ಸರ್ವಜ್ಞ ಕವಿ,** ದ.ರಾ. ಬೇಂದ್ರೆ, ೧೯೮೨

**ಸರ್ವಜ್ಞ ಕವಿಯ ಹಾಗೂ ವಚನಗಳ ಸಂಶೋಧನೆ,** ಡಾ॥ ಎಸ್. ಆರ್.ಗುಂಜಾಳ, ೧೯೮೨

**ಸರ್ವಜ್ಞನ ವಚನಗಳು,** ಉತ್ತಂಗಿ ಚೆನ್ನಪ್ಪ,ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

**ಸರ್ವಜ್ಞನು ವೀರಶೈವನೆ ? ಒಂದು ಸಮೀಕ್ಷೆ**, ಎಸ್. ಎಸ್. ಭೂಸರೆಡ್ಡಿ, ೧೯೭೭
**ಸರ್ವಜ್ಞನ ವಚನಗಳು**, ಸಂ: ಡಾ|| ಎಲ್. ಬಸವರಾಜ್, ಗೀತಾ ಬುಕ್ ಹೌಸ್, ಮೈಸೂರು, ೧೯೯೦
**ಸರ್ವಜ್ಞ ಮೂರ್ತಿಯ ವಚನಗಳು**, ಸಂ: ಜಿ.ಎಂ. ಉಮಾಪತಿ ಶಾಸ್ತ್ರಿ, ಶಾರದ ಭವನ,
ಬಾಗಲಕೋಟೆ, ೧೯೭೩
**ಸರ್ವಜ್ಞ ವೀರಗಣಸ್ತೋತ್ರದ ವಚನಗಳು**, ಸಂ: ಎಸ್. ಭೂಸರೆಡ್ಡಿ
ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕರ ಮಂಡಳಿ, ಮೂರು ಸಾವಿರಮಠ, ಹುಬ್ಬಳ್ಳಿ, ೧೯೮೧
**ಸರ್ವಜ್ಞ ಒಂದು ಅಧ್ಯಯನ**, ದೇ. ಜವರೇಗೌಡ, ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕರ
ಮಂಡಳಿ, ಮೂರು ಸಾವಿರಮಠ, ಮೂರು ಸಾವಿರಮಠ, ಹುಬ್ಬಳ್ಳಿ, ೧೯೮೧
**ಸರ್ವಜ್ಞ ಸಾಹಿತಿ ಉತ್ತಂಗಿಯವರ ಉತ್ತುಂಗ ವಿಚಾರಗಳು**, ಡಾ|| ಎಸ್. ಆರ್. ಗುಂಜಾಳ್
**ಸರ್ವಜ್ಞ ವಚನ ಸಂಗ್ರಹ**, ಸಂ: ಬಿ. ಶಿವಮೂರ್ತಿ ಶಾಸ್ತ್ರಿಗಳು,
ಕರ್ನಾಟಕ ಸರ್ಕಾರದ ಸರ್ವಜ್ಞ ಚತುರ್ಥ ಶತಮಾನೋತ್ಸವ ಸಮಿತಿ, ಬೆಂಗಳೂರು, ೧೯೭೫
**ಸರ್ವಜ್ಞ ಕವಿ: ಜೀವನ ಮತ್ತು ಕಾವ್ಯ**, ಡಾ|| ಆರ್. ಸಿ. ಹಿರೇಮಠ, ಕ. ವಿ. ವಿ., ಧಾರವಾಡ, ೧೯೬೭
**ಸರ್ವಜ್ಞ ಮತ್ತು ಕಬೀರ ಒಂದು ತೌಲನಿಕ ಅಧ್ಯಯನ**, ಮೈ. ವಿ. ವಿ., ಮೈಸೂರು, ೧೯೯೪
**ಸರ್ವಜ್ಞನ ವಚನ**, ಸಂಗ್ರಹ : ಶಿ. ವಿದ್ಯಾ ಶಂಕರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೪
**ಸರ್ವಜ್ಞ ದೃಷ್ಟಿಯಲ್ಲಿ ಹೆಣ್ಣು ಹೆಣ್ಣು ಹೆಣ್ಣು**, ಮಾಗಡಿ ರಂಗ ನರಸಿಂಹಯ್ಯ
ಪಾರು ಪ್ರಕಾಶನ, ಗದಗ, ೨೦೦೦
**ಸರ್ವಜ್ಞ ವಚನಗಳು**, ಚೆನ್ನಪ್ಪ ಉತ್ತಂಗಿ ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೯
**ಸಟೀಕಾ ಸರ್ವಜ್ಞ ವಚನಗಳು**, ಚೆನ್ನಪ್ಪ ಉತ್ತಂಗಿ, ಚನ್ನಪ್ಪ ಉತ್ತಂಗಿ ಮಿಶನ್ ಕಾಂಪೌಂಡ್,
ಧಾರವಾಡ, ೧೯೫೯
**ಸರ್ವಜ್ಞ ಮೂರ್ತಿ**, ವೇದಮೂರ್ತಿ ತೋಟಪ್ಪಯ್ಯ ಶಾಸ್ತ್ರಿಗಳವರು,
ಚನ್ನಪ್ಪ ಉತ್ತಂಗಿ ಮಿಶನ್ ಕಾಂಪೌಂಡ್, ಧಾರವಾಡ, ೧೯೫೦
**ಸರ್ವಜ್ಞನ ವಚನಗಳು**, ಪ್ರಧಾನ ಸಂಪಾದಕರು: ಪ್ರೊ. ಎಂ. ವಿ. ಸೀತಾರಮಯ್ಯ,
ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೨
**ಸರ್ವಜ್ಞನ ಸಂದೇಶ**, ಸಂ: ಸಂಗೋರಾಮ ಕೃಷ್ಣರಾಯರು, ದೇಶಪಾಂಡೆ ಮನೋಹರರಾಯರು.
ಶ್ರೀ ಮನೋಹರ, ಶ್ರೀ ದೇಶಪಾಂಡೆ ಆತ್ಮೋದ್ಧಾರ ಗ್ರಂಥ ಮಾಲ, ಅಥಣಿ, ೧೯೩೪
**ಸರ್ವಜ್ಞ**, ಆರ್. ರೇಣುಕಮ್ಮ, ನಾಗರೇಖಾ ಪ್ರಕಾಶನ ಮಂದಿರ, ಬೆಂಗಳೂರು, ೧೯೬೪
**ಸರ್ವಜ್ಞ ಮೂರ್ತಿಯ ವಚನಗಳು**, ಬಸವಣ್ಣೆಪ್ಪ ಗುರುಲಿಂಗಪ್ಪ ಸಂಕೇಶ್ವರ,
ಬಸವೇಶ್ವರ ಪುಸ್ತಕ ಭಂಡಾರ, ಹುಬ್ಬಳ್ಳಿ
**ಸ್ಪಟಿಕಾ ಸರ್ವಜ್ಞ ವಚನಗಳು**, ಉತ್ತಂಗಿ ಚೆನ್ನಪ್ಪ, ೧೯೫೯
**ಹೆಣ್ಣು ಸರ್ವಜ್ಞನ ದೃಷ್ಟಿಯಲ್ಲಿ**, ಸಂ: ಕೆ. ಆರ್. ಕೆ. ಮೂರ್ತಿ, ವಾಹಿನಿ ಪ್ರಕಾಶನ, ಬೆಂಗಳೂರು, ೧೯೯೨

## ಜಾನಪದ ಮತ್ತು ಇತರೆ ಗ್ರಂಥಗಳು


***ಉತ್ತರ ಕರ್ನಾಟಕದ ಜನಪದ ಸಾಹಿತ್ಯ,*** ಡಾ॥ ಎಂ. ಎಂ. ಕಲಬುರ್ಗಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೮.

***ಐದು ಜಾನಪದ ಪ್ರಬಂಧಗಳು,*** ಜಯಲಕ್ಷ್ಮಿ ಸೀತಾಪುರ, ಪ್ರತಿಭಾ ಪ್ರಕಾಶನ, ಮೈಸೂರು,೧೯೮೭.

***ಕನ್ನಡ ಜಾನಪದ ಗೀತೆಗಳು,*** ಡಾ॥ ಬಿ. ಎಸ್. ಗದ್ದಗಿಮಠ, ಕ.ವಿ.ವಿ., ಧಾರವಾಡ, ೧೯೮೬

***ಕನ್ನಡ ಜಾನಪದ ಪ್ರಜ್ಞೆ,*** ಡಾ॥ ವೀರಣ್ಣ ದಂಡೆ, ಕವಿಮಾರ್ಗ ಪ್ರಕಾಶನ, ಕಲಬುರ್ಗಿ, ೧೯೯೩

***ಕನ್ನಡ ಸಾಹಿತ್ಯದಲ್ಲಿ ಕರ್ಣ,*** ಡಾ॥ ವಿ. ಎಸ್. ಮಾಳಿ, ಸಿರಿಗನ್ನಡ ಪ್ರಕಾಶನ, ಹಾರೂಗೇರಿ, ಜಿಲ್ಲೆ:ಬೆಳಗಾಂ, ೧೯೯೯

***ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ,*** ಡಾ॥ ನಂ. ತಪಸ್ವೀಕುಮಾರ್, ಪ್ರಸಾರಾಂಗ : ಮೈ.ವಿ.ವಿ., ಮೈಸೂರು, ೧೯೮೨

***ಕನ್ನಡ ಸಾಹಿತ್ಯ ಚರಿತ್ರೆ,*** ಡಾ॥ ರಂ.ಶ್ರೀ.ಮುಗಳಿ, ಗೀತಾ ಬುಕ್ ಹೌಸ್, ಮೈಸೂರು, ೧೯೯೩

***ಕನ್ನಡ ಒಗಟುಗಳ ಸಮೀಕ್ಷೆ,*** ಡಾ॥ ನಂ. ತಪಸ್ವೀಕುಮಾರ, ಪ್ರಸಾರಾಂಗ : ಮೈ.ವಿ.ವಿ., ಮೈಸೂರು, ೧೯೭೯

***ಕನ್ನಡ ಗಾದೆಗಳ ಸಮೀಕ್ಷೆ,*** ಡಾ॥ ನಂ. ತಪಸ್ವೀಕುಮಾರ, ಪ್ರಸಾರಾಂಗ : ಮೈ.ವಿ.ವಿ., ಮೈಸೂರು, ೧೯೭೨

***ಕನ್ನಡ ಸಾಹಿತ್ಯ ಹಾಗೂ ಜೀವನ ಮೌಲ್ಯ,*** ಬಸವರಾಜ ಜಗಜಂಪಿ, ಕ.ವಿ.ವಿ., ಧಾರವಾಡ, ೧೯೮೬

***ಕನ್ನಡದಲ್ಲಿ ಅನುಭಾವ ಸಾಹಿತ್ಯ,*** ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ, ಪ್ರಸಾರಾಂಗ: ಮೈ.ವಿ.ವಿ., ಮೈಸೂರು, ೧೯೭೦

***ಕನ್ನಡ ಸಾವಿರದ ಒಗಟುಗಳು,*** ಡಾ॥ ಸೋಮಶೇಖರ ಇಮ್ರಾಂಪುರ, ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೭೬

***ಕರ್ನಾಟಕ ಜಾನಪದ,*** ಡಾ॥ ಜಿ. ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೧

***ಕರಾವಳಿ ಜಾನಪದ,*** ಡಾ॥ ಪುರುಷೋತ್ತಮ ಬಿಳಿಮಲೆ, ಮಂಗಳ ಗಂಗೋತ್ರಿ, ದ.ಕ.:ಜಿಲ್ಲೆ, ೧೯೯೦

***ಕಾವ್ಯಾನುಭವ*** (ವಿಮರ್ಶಾ ಲೇಖನಗಳ ಸಂಗ್ರಹ), ಡಿ. ಲಿಂಗಯ್ಯ, ದಿನಕರ ಪ್ರಕಾಶನ, ಬೆಂಗಳೂರು, ೧೯೯೬

***ಕೂಡುಕಟ್ಟು,*** ಡಾ॥ ಪುರುಷೋತ್ತಮ ಬಿಳಿಮಲೆ, ಆನಂದ ಕಂದ ಗ್ರಂಥ ಮಾಲೆ, ಮಲ್ಲಾಡಿಹಳ್ಳಿ,೧೯೭೭

***ಗರತಿಯ ಹಾಡು,*** ಸಂ: ಹಲಸಂಗಿ ಗೆಳೆಯರು, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೪

***ಗರತಿಯ ಹಾಡು,*** ಸಂ: ಹಲಸಂಗಿ ಗೆಳೆಯರು, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೦

***ಗಾದೆಗಳಲ್ಲಿ ಹಾಸ್ಯ,*** ಡಾ॥ ಸಿ.ಕೆ. ನಾವಲಗಿ, ಕ.ವಿ.ವಿ., ಧಾರವಾಡ, ೧೯೯೫

**ಗಿಳಿ ಕುಂತ ಹೂಗ್ಯಾವ,** ಡಾ॥ ನಿಂಗಣ್ಣ ಸಣ್ಣಕ್ಕಿ, ಕಾಲಗತಿ ಪ್ರಕಾಶನ, ರಾಯಭಾಗ, ೧೯೮೮
**ಗ್ರಂಥಸ್ಥ ಗಾದೆಗಳು,** ಸಂ: ಹೆಚ್. ಎಸ್. ಅಚ್ಚಪ್ಪ, ಮೈಸೂರು, ೧೯೬೯
**ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ,** ಡಾ॥ ಎಂ.ಜಿ. ಈಶ್ವರಪ್ಪ,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫
**ಚುಟುಕು ಮಂದಾರ,** ಪ್ರಧಾನ ಸಂಪಾದಕರು : ಎಲ್. ಆರ್. ನರಸಿಂಹಯ್ಯ,
ಚುಟುಕು ಸಾಹಿತ್ಯ ಪರಿಷತ್ತು ಕೇಂದ್ರ ಸಮಿತಿ, ಮೈಸೂರು, ೨೦೦೦
**ಜನಪದ ಸಂಸ್ಕೃತಿ,** ಡಾ॥ ಮಂಜುನಾಥ ಬೇವಿನಕಟ್ಟಿ,
ತೇಜಸ್ವಿ ಪ್ರಕಾಶನ, ಹ್ಯಾರಡ, ಹಡಗಲಿ:ತಾಲೂಕು, ಬಳ್ಳಾರಿ : ಜಿಲ್ಲೆ, ೧೯೯೪
**ಜನಪದ ಸಮಾಜ ಮತ್ತು ಸಂಸ್ಕೃತಿ,** ಡಾ॥ ಕೆ.ಜಿ. ಗುರುಮೂರ್ತಿ, ಕನ್ನಡ ಅಧ್ಯಯನ ಪೀಠ,
ಕ.ವಿ.ವಿ., ಧಾರವಾಡ, ೧೯೭೯
**ಜನಪದ ಸಾಹಿತ್ಯ ಪ್ರವೇಶಿಕೆ,** ಡಾ॥ ಸಿ.ಪಿ.ಕೆ., ಚಿತ್ರಭಾನು ಪ್ರಕಾಶನ, ಮೈಸೂರು, ೧೯೮೧
**ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು,** ಪ್ರೊ.ಸೂಗಯ್ಯ ಹಿರೇಮಠ,
ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ, ಜಿಲ್ಲೆ : ಬೀದರ್, ೧೯೯೧
**ಜನಪದ ಗೀತೆಗಳು,** ಎನ್. ಪ್ರಭಾ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೧೯೯೮
**ಜನಪದ ಬೆಡಗಿನ ವಚನಗಳು,** ಸಂ: ಸುಧಾಕರ,
ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ಮೈಸೂರು, ೧೯೭೦
**ಜನಪದ ನಂಬಿಕೆಗಳು,** ಡಾ॥ ಮಂಜುನಾಥ ಬೇವಿನಕಟ್ಟಿ, ಕ.ವಿ.ವಿ., ಹಂಪಿ, ೧೯೯೬.
**ಜಾನಪದ ಸಿಂಹಾವಲೋಕನ,** ಡಾ॥ ಆರ್. ಎನ್. ನಾಯಕ್,
ಜಾನಪದ ಪ್ರಕಾಶನ, ಹೊನ್ನಾವರ, ದ.ಕ. :ಜಿಲ್ಲೆ, ೧೯೮೫
**ಜಾನಪದ ಸೌಂದರ್ಯ,** ದೇಜಗೌ.: ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೭.
**ಜಾನಪದ ಸಮಾಲೋಕ,** ಡಿ.ಕೆ. ರಾಜೇಂದ್ರ, ಮಲೆನಾಡು ಪ್ರಕಾಶನ, ಬೆಂಗಳೂರು, ೧೯೮೦.
**ಜಾನಪದ ಸ್ಪಂದನ,** ಡಾ॥ ಸಿ.ಕೆ. ನಾವಲಗಿ : ಭರತ ಪ್ರಕಾಶನ, ಗೋಕಾಕ, ೧೯೮೯.
**ಜಾನಪದ ಸೌರಭ,** ಡಾ॥ ಬಸವರಾಜ ಪೊಲೀಸ್ ಪಾಟೀಲ್, ಅಮರ ಪ್ರಕಾಶನ, ಗುಲ್ಬರ್ಗಾ, ೧೯೯೪
**ಜಾನಪದ ರೀತಿನೀತಿಗಳು,** ಡಾ॥ ಕೆ.ಜಿ. ಗುರುಮೂರ್ತಿ,
ಕರ್ನಾಟಕ ಜಾನಪದ ಪ್ರಸಾರ ನಿಧಿ, ಬೆಂಗಳೂರು, ೧೯೮೧
**ಜಾನಪದ ಸ್ವರೂಪ,** ಡಾ॥ ಹಾ.ಮ.ನಾಯಕ, ತಳುಕ ವೆಂಕಣ್ಣಯ್ಯ ಸ್ಮಾರಕ,
ಗ್ರಂಥಮಾಲೆ, ಮೈಸೂರು, ೧೯೭೧.
**ಜಾನಪದ ಸಾಹಿತ್ಯದಲ್ಲಿ ಶರಣರು,** ಶಾಂತಾದೇವಿ ಮಾಳವಾಡ,
ಕದಳಿ-ಮಹಿಳಾ ವೇದಿಕೆ, ಬೆಂಗಳೂರು. ೨೦೦೦
**ಜಾನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ,** ಎಂ.ಬಿ. ಹೂಗಾರ್,
ಪ್ರಸಾರಾಂಗ : ಕ.ವಿ.ವಿ., ಧಾರವಾಡ, ೧೯೮೩
**ಜಾನಪದ ಸಮಾಲೋಚನ,** ಡಾ॥ ಎಂ.ಜಿ. ಬಿರಾದಾರ್, ಚಿತ್ಕಳ ಪ್ರಕಾಶನ, ಕಲಬುರ್ಗಿ, ೧೯೮೧

**ಜಾನಪದ ಸಾಹಿತ್ಯದ ಪ್ರವೇಶಿಕೆ,** ಸಿ.ಪಿ.ಕೆ., ಚಿತ್ರಭಾನು ಪ್ರಕಾಶನ, ಮೈಸೂರು, ೧೯೮೧
**ಜಾನಪದ ಕೆಲವು ವಿಚಾರಗಳು,** ಡಾ॥ ಅಂಬಳಿಕೆ ಹಿರಿಯಣ್ಣ, ಪ್ರಜ್ವಲ ಪ್ರಕಾಶನ, ಮೈಸೂರು, ೧೯೮೪
**ಜಾನಪದ ದರ್ಶನ,** ಸಂ: ಗೊ.ರು. ಚನ್ನಬಸಪ್ಪ, ಭೈರಮಂಗಳ ರಾಮೇಗೌಡ, ಚಕ್ಕರೆ ಶಿವಶಂಕರ್,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೧
**ಜಾನಪದ ಸಾಹಿತ್ಯ ದರ್ಶನ,** ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ,
ಕ.ವಿ.ವಿ., ಧಾರವಾಡ, ೧೯೮೨.
**ಜಾನಪದ ಸಾಹಿತ್ಯ ದರ್ಶನ ಭಾಗ-೧,** ಜೀ.ಶಂ. ಪರಮಶಿವಯ್ಯ, ಕ.ವಿ.ವಿ., ಧಾರವಾಡ, ೧೯೭೪.
**ಜಾನಪದ ಸಾಹಿತ್ಯ ದರ್ಶನ ಭಾಗ-೨,** ಪ್ರ.ಸಂ: ವಿಲ್ಯಂಮಾಡ್ತಾ, ಕ.ವಿ.ವಿ., ಧಾರವಾಡ, ೧೯೯೩.
**ಜಾನಪದ ಸಾಹಿತ್ಯ ದರ್ಶನ ಭಾಗ-೧೧,** ಜೀ.ಶಂ. ಪರಮಶಿವಯ್ಯ, ಕ.ವಿ.ವಿ., ಧಾರವಾಡ, ೧೯೮೭.
**ಜಾನಪದ ಕೈಪಿಡಿ,** ಪ್ರಧಾನ ಸಂಪಾದಕರು: ಡಾ॥ ಎಚ್.ಜಿ. ಲಕ್ಕಪ್ಪಗೌಡ,
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭
**ಜಾನಪದ ಗೀತೆಗಳು,** ಸಂ: ಡಾ॥ ಸಿ.ಯು. ಮಂಜುನಾಥ, ಬಿ.ಸಿ. ವೀರಪ್ಪ. ಶ್ರೀ ಸರ್ಪಭೂಷಣ
ಶಿವಯೋಗೀಶ್ವರ ಮಠ, ಬೆಂಗಳೂರು, ೧೯೯೩
**ಜಾನಪದ ಸಿರಿ,** ಡಾ॥ ಬಿ.ಬಿ. ಬಿರಾದಾರ್, ಜ್ಯೋತಿ ಪ್ರಕಾಶನ, ಧಾರವಾಡ, ೧೯೯೬
**ಜಾನಪದ ೧೯೯೧,** ಸಂ: ಜಿ. ಎಸ್. ಭಟ್,
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩
**ಜಾನಪದ ೧೯೯೨,** ಸಂ: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫
**ಜಾನಪದ ೧೯೯೩,** ಸಂ: ರಂಗಾರೆಡ್ಡಿ ಕೋಡಿರಾಮಪುರ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ
ಅಕಾಡೆಮಿ, ಬೆಂಗಳೂರು, ೧೯೯೫
**ಜಾನಪದ ೧೯೯೪,** ಸಂ: ನೀಲಗಿರಿ ತಳವಾರ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ,
ಬೆಂಗಳೂರು, ೧೯೯೬
**ಜಾನಪದ ಸಾಹಿತ್ಯ ಮತ್ತು ಸ್ವರೂಪ,** ಪ್ರೊ. ಡಿ. ಲಿಂಗಯ್ಯ-ಡಾ॥ ಕೆ. ಆರ್. ಸಂಧ್ಯಾರೆಡ್ಡಿ,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭
**ಜಾನಪದ : ಕೆಲವು ವಿಚಾರಗಳು,** ಡಾ॥ ಅಂಬಳಿಕೆ ಹಿರಿಯಣ್ಣ,
ಪ್ರಜ್ವಲ ಪ್ರಕಾಶನ, ಮೈಸೂರು, ೧೯೮೪
**ಜಾನಪದ ಸಾಹಿತ್ಯ ದರ್ಶನ,** ಡಾ॥ ಆರ್.ಸಿ. ಹಿರೇಮಠ, ಪ್ರಸಾರಾಂಗ: ಕ.ವಿ.ವಿ., ಧಾರವಾಡ, ೧೯೭೪
**ಜಾನಪದ ಸಾಹಿತ್ಯದಲ್ಲಿ ಮೂಲಭೂತ ತತ್ವಗಳು,** ಡಾ॥ ದೇವೇಂದ್ರ ಕುಮಾರ್ ಹಕಾರಿ,
ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೩
**ಜಾನಪದ ಸರಸ್ವತಿ,** ಡಾ॥ ಸಿ.ಪಿ.ಕೆ., ತಳಕು ವೆಂಕಣ್ಣ ಸ್ಮಾರಕ ಗ್ರಂಥ ಮಾಲೆ, ಮೈಸೂರು, ೧೯೭೩
**ಜಾನಪದ ಅಧ್ಯಯನ,** ಡಾ॥ದೇಜಗೌ. ಚೇತನ ಬುಕ್ ಹೌಸ್, ಮೈಸೂರು, ೧೯೯೧.
**ಜಾನಪದ ಅಧ್ಯಯನ,** ಸಂ: ಡಾ॥ ದೇ.ಜವರೇಗೌಡರು,
ಮೈಸೂರು ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೭೬

***ಜಾನಪದ ಆಭರಣಗಳು-ಸಂಸ್ಕೃತಿ ಅಧ್ಯಯನ,*** ಕು: ಶಾಂತಾ ಎನ್. ಕಾಲವಾಡ್ (ಅಪ್ರಕಟಿತ), ಕ.ವಿ.ವಿ., ಧಾರವಾಡ, ೧೯೯೮

***ಜೈನ ಸಾಹಿತ್ಯ ಮತ್ತು ಜಾನಪದ,*** ಡಾ॥ ಎಸ್.ಪಿ. ಪದ್ಮ ಪ್ರಸಾದ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

***ತ್ರಿಪದಿ : ಅದರ ಸ್ವರೂಪ ಮತ್ತು ಇತಿಹಾಸ,*** ಡಾ॥ ಎಂ. ಚಿದಾನಂದ ಮೂರ್ತಿ, ೧೯೬೫.

***ತ್ರಿಪದಿ ಚತುರ್ಮುಖ,*** ಪ್ರ.ಸಂ: ಪ್ರೊ. ಎಸ್.ವಿ. ಪರಮೇಶ್ವರ ಭಟ್, ಪಲಚಂವಿ ಪ್ರಕಾಶನ, ಮಂಗಳೂರು-೩, ೧೯೭೦

***ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ,*** ಡಾ॥ಕಾಳೇಗೌಡ ನಾಗವಾರ, ಬೆಂ.ವಿ.ವಿ., ಬೆಂಗಳೂರು, ೧೯೭೫.

***ನಮ್ಮ ಒಗಟುಗಳು,*** ರಾ.ಗೌ., ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೦.

***ನಮ್ಮ ಜನಪದ ನಂಬಿಕೆಗಳು,*** ಜಿ.ವಿ.ದಾಸೇಗೌಡ, ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೈಸೂರು, ೧೯೭೩.

***ನೂರೊಂದು ಚಿಂತನ,*** ಸಂ. ಗೊ.ರು. ಚನ್ನಬಸಪ್ಪ, ಡಾ.॥ ಬಸವರಾಜ ಸಾದರ, ಕ.ಸಾ.ಪ, ಬೆಂಗಳೂರು, ೧೯೯೧.

***ಬಸವಣ್ಣನವರ ವಚನಗಳು,*** ಡಾ॥ ಆರ್.ಸಿ.ಹಿರೇಮಠ, ಕ.ವಿ.ವಿ., ಧಾರವಾಡ, ೧೯೬೮.

***ಬದುಕು ನನ್ನ ದೃಷ್ಟಿಯಲ್ಲಿ,*** ಸಂ: ಡಾ. ಬಸವರಾಜ ಸಾದರ, ಕ.ಸಾ.ಪ., ಬೆಂಗಳೂರು, ೧೯೯೫.

***ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ,*** ಡಾ॥ವಿರೂಪಾಕ್ಷಿ ಪೂಜಾರಳ್ಳಿ, ಕ.ವಿ.ವಿ., ಹಂಪಿ, ೨೦೦೦ (ಅಪ್ರಕಟಿತ).

***ಹೊನ್ನ ಬಿತ್ತೇವು ಹೊಲಕ್ಕೆಲ್ಲ,*** ಸಂ: ದೇಜಗೌ. ಮೈ.ವಿ.ವಿ., ಮೈಸೂರು, ೧೯೬೭.

## ಪುಸ್ತಕ - ಪತ್ರಿಕೆಗಳು

***ಲೇಖನ : ಕನ್ನಡ ಜನಪದ ಗರತಿ,*** ಲೇಖಕರು: ಪಂಡಿತ್ ಜಿ. ನೆಲ್ಲಗಿ, ಸಂಯುಕ್ತ ಕರ್ನಾಟಕ, ೧೯೯೯

***ಲೇಖನ : ಸರ್ವಜ್ಞ ಸಾರಿದ ವೀರಶೈವ ಧರ್ಮದ ಸಾರ,*** ಲೇಖಕರು: ಬಸವರಾಜ ಹೂಗಾರ, **ಪ್ರಸಾದ,** ಸಂಪುಟ : ೧೪, ಸಂಚಿಕೆ :೧, ಶ್ರೀ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾ ವಿದ್ಯಾಪೀಠ, ಬೆಂಗಳೂರು, ೧೯೯೯

***ಲೇಖನ : ಶ್ರೀ ಸರ್ವಜ್ಞ ಮೂರ್ತಿ ಹೇಳಿದ ಕಾಲ ಜ್ಞಾನ ವಚನ,*** ಲೇಖಕರು : ಮೃತ್ಯುಂಜಯ ವ್ಹಿ. ಅಂಗಡಿ ಕಡಕೊಳ, **ಶರಣ,** ಸಂಪುಟ :೨೦, ಸಂಚಿಕೆ :೩, ಡಾ॥ ಹಳಕಟ್ಟಿ ಸಂಶೋಧನಾ ಸಂಸ್ಥೆ, ಸೊಲ್ಲಾಪುರ, ೧೯೯೪.

***ಲೇಖನ : ಸರ್ವಜ್ಞ ಕವಿಯ ದೃಷ್ಟಿಯಲ್ಲಿ ಬಸವಣ್ಣ,*** ಲೇಖಕರು: ಗುರುಬಸವ ಸುತ, **ಬಸವ ಬೆಳಗು,** ಸಂಪುಟ : ೨, ಸಂಚಿಕೆ :೩, ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ, ಇಲಕಲ್ಲ, ೧೯೮೮

**ಲೇಖನ : ಸರ್ವಜ್ಞನ ಸಾಮಾಜಿಕ ದರ್ಶನ,** ಲೇ: ಡಾ॥ ಬಸವರಾಜ ನಾಯ್ಕರ್, **ಬಸವ ಪಥ,** ಸಂಪುಟ:೧೩, ಸಂಚಿಕೆ :೬, ಬಸವ ಸಮಿತಿ, ಬೆಂಗಳೂರು, ೧೯೯೧

**ಲೇಖನ : ಸರ್ವಜ್ಞನ ದೃಷ್ಟಿಯಲ್ಲಿ ಬಸವಣ್ಣ,** ಲೇ: ಸಿದ್ಧಣ್ಣ ಲಂಗೋಟಿ, **ಬಸವ ಬೆಳಗು,** ಸಂಪುಟ:೬, ಸಂಚಿಕೆ :೨, ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ, ಇಲಕಲ್ಲ, ೧೯೯೨

**ಲೇಖನ: ಸರ್ವಜ್ಞ ಮತ್ತು ಶಿವ ಶರಣರು,** ಲೇ: ಎಸ್.ಎಸ್.ಕಟಿಗಿ ಹಳ್ಳಿಮಠ, **ಪರಂಜ್ಯೋತಿ,** ಸಂಪುಟ:೧೯, ಸಂಚಿಕೆ :೫, ಶ್ರೀ ಜಗದ್ಗುರು ಮೂರು ಸಾವಿರ ಮಠ,ಹುಬ್ಬಳ್ಳಿ, ೧೯೮೬

**ಲೇಖನ : ದಾಸ ಸಾಹಿತ್ಯ ಮತ್ತು ಜಾನಪದ,** ಲೇ: ಡಾ॥ ಎಸ್.ಪಿ. ಪದ್ಮಪ್ರಸಾದ್, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ,** ಸಂಪುಟ:೭೦, ಸಂಚಿಕೆ:೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

**ಲೇಖನ: ಸರ್ವಜ್ಞನಿಗೊಬ್ಬನೇ ಒಬ್ಬ ಲೇಖಕ ಶಿಷ್ಯ,** ಲೇ: ಎಲ್. ಬಸವರಾಜು, **ಪ್ರಬುದ್ಧ ಕರ್ನಾಟಕ,** ಸಂಪುಟ : ೫೪, ಸಂಚಿಕೆ :೪, ಮೈ.ವಿ.ವಿ., ಮೈಸೂರು, ೧೯೭೩

**ಲೇಖನ : ವಿಶ್ವಕವಿ ಸರ್ವಜ್ಞ,** ಲೇ: ಎಸ್.ಸಿ. ಭೂದಿಹಾಳ್, **ಶಿವಾನುಭವ,** ಸಂಪುಟ:೨೨, ಸಂಚಿಕೆ:೬,೧೯೪೮

**ಲೇಖನ : ಮಳೆಯನ್ನು ಕುರಿತು ಜನಪದರ ನಂಬಿಕೆಗಳು,** ಲೇ: ಎಮ್. ಎಸ್. ಶೆಟ್ಟರ್, **ಹೊಸತು,** ಸಂಪುಟ:೩, ಸಂಚಿಕೆ:೩, ನವ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೨೦೦೧

## ನಿಘಂಟುಗಳು

**ಜನಪ್ರಿಯ ಗಾದೆಗಳ ನಿಘಂಟು,** ಲೇ: ಶೇಷಾಚಳ ಗ್ರಂಥಮಾಲೆ, ಧಾರವಾಡ, ೧೯೯೩.

**ಕನ್ನಡ ಗಾದೆಗಳ ಮಹಾಕೋಶ ಸಂಪುಟ-೨,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,೧೯೮೨

**ಕನ್ನಡ ರತ್ನಕೋಶ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

**ಕನ್ನಡ-ಕನ್ನಡ- ಇಂಗ್ಲೀಷ್ ನಿಘಂಟು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೯೨

**ಕನ್ನಡ ನಿಘಂಟು ಸಂಪುಟ-೧,೩,೭.,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

**ಜಾನಪದ ಕೈಪಿಡಿ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

